# ಜಕಣಾಚಾರ್ಯ

(ಪಟ್ಟಮಹಾದೇವಿ ಶಾನ್ತಲದೇವಿ ಕಾದಂಬರಿಯಿಂದ ಸಂಗ್ರಹಿತ)

ಮೂಲ :

**ಸಿ. ಕೆ. ನಾಗರಾಜ ರಾವ್**

ಸಂಗ್ರಹ :

**ಸುತಾ ಜ್ಞಾನಾನಂದ**




**ಕರ್ನಾಟಕ ಶಿಲ್ಪಕಲಾ ಅಕಾಡೆಮಿ**

ರವೀಂದ್ರ ಕಲಾಕ್ಷೇತ್ರ, ಬೆಂಗಳೂರು

**JAKANACHARYA** - adopted and abridged by Smt. Saritha Gnanananda from Kannada Novel 'Pattamahadevi Shantala Devi' by C. K. Nagaraja Rao, Published by Sri N. Marishamachar, Registrar, Karnataka Shilpakala Academi, Ravindra Kalakshetra, Bangalore.

Pages : xii + 256

Price : **Rs. 40/-**



ಅಧ್ಯಕ್ಷರು

**ಶಿಲ್ಪಿ ಕೆ. ಶಾಮರಾಯ ಆಚಾರ್ಯ**

ರಿಜಿಸ್ಟ್ರಾರ್

**ಎನ್. ಮರಿಶಾಮಾಚಾರ್ಯ**

ಸಂಪಾದಕರು

**ಜಿ. ಜ್ಞಾನಾನಂದ**

ಸಲಹಾ ಸಮಿತಿ

**ಶ್ರೀಮತಿ ಕನಕಾ ಮೂರ್ತಿ**

**ಕೆ. ವಿ. ಸೋಮಶೇಖರ್**

**ಕೆ. ಕಾಶೀನಾಥ್**

ಬೆಲೆ : **ನಲವತ್ತು ರೂಪಾಯಿಗಳು**

ಮುದ್ರಣ :

**ಲಕ್ಷ್ಮಿ ಮುದ್ರಣಾಲಯ**

ಬೆಂಗಳೂರು – ೫೬೦ ೦೧೮

ದೂರವಾಣಿ : ೬೬೧೩೧೨೩, ೬೬೧೮೭೫೨

# ಅಧ್ಯಕ್ಷರ ಮಾತು

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯು ಕೃತಿಗಳ ಪ್ರಕಟಣೆಗಾಗಿ ಯೋಚಿಸಿದಾಗ ಕುತೂಹಲದಿಂದ ಜಕಣಾಚಾರ್ಯರಿಗೆ ಸಂಬಂಧಿಸಿದ ಕೃತಿಗಳೇನಾದರು ಪ್ರಕಟವಾಗಿದೆಯೋ ಎಂದು ವಿಚಾರಿಸಿದೆ. ಈ ಕುತೂಹಲದ ಹಿಂದೆ ಜಕಣಾಚಾರ್ಯ ಪ್ರಶಸ್ತಿ ಆಯ್ಕೆಯ ಸಮಿತಿಯ ಅಧ್ಯಕ್ಷ ಎಂಬುದು ಮಾತ್ರವಲ್ಲ, ಜಕಣಾಚಾರ್ಯ ಪ್ರಶಸ್ತಿಯ ಬಗ್ಗೆ ಪರ ಮತ್ತು ವಿರೋಧವಾಗಿ ಎದ್ದ ವಾದೋಪವಾದಗಳ ನೆನಪೂ ನನ್ನಲ್ಲಿತ್ತು. ಆಗ ಈ ಸಮಸ್ಯೆಯ ವಿಶ್ಲೇಷಣೆ ನಡೆಸಿದೆ. ಜಕಣಾಚಾರ್ಯ ಇದ್ದ ಎಂಬುದು ಹೇಗೆ ಒಂದು ನಂಬಿಕೆಯೋ ಅದೇ ರೀತಿಯಾಗಿ ಇಲ್ಲ ಎಂಬುದೂ ಕೆಲವರ ನಂಬಿಕೆ ಮಾತ್ರವೇ ಎಂಬುದು ಗೊತ್ತಾಯಿತು. ಜಕಣಾಚಾರ್ಯ ಇದ್ದ ಎಂಬುದನ್ನು ಶಿಲಾಲೇಖವಾಗಲಿ, ವಿಗ್ರಹಗಳ ಮೇಲಿನ ಹೆಸರುಗಳಾಗಲಿ ಹೇಳುವುದಿಲ್ಲ ಎಂಬುದೇ ಅವರ ಬಲವಾದ ವಾದ ಎಂಬುದು ಅರ್ಥವಾಯಿತು.

ನಂತರ ನಮ್ಮಲ್ಲಿ ಜಕಣಾಚಾರ್ಯರ ಇರುವಿಕೆಯ ಬಗ್ಗೆ ನಂಬಿಕೆ ಇರಿಸಿಕೊಂಡು ಆ ಬಗ್ಗೆ ಬರೆದಿರುವ ಸಾಹಿತ್ಯವೇನಾದರೂ ಉಂಟೇ ಎಂದು ಮರುಪರಿಶೀಲನೆ ನಡೆಸಿದೆ. ನನಗೆ ದೊಡ್ಡ ಅಚ್ಚರಿಯೇ ಕಾದಿತ್ತು. ಶ್ರೀ ಸಿ. ಕೆ. ನಾಗರಾಜ ರಾಯರ ಬೃಹತ್ ಕಾದಂಬರಿ **ಪಟ್ಟಮಹಾದೇವಿ ಶಾಂತಲದೇವಿ** ಕಾದಂಬರಿಯಲ್ಲಿ ಜಕಣಾಚಾರ್ಯರ ಪಾತ್ರ–ಕತೆ ಪೂರ್ಣವಾಗಿದೆ ಎಂಬುದು. ಈ ಬೃಹತ್ ಕಾದಂಬರಿ ಆಧುನಿಕ ಕಾದಂಬರಿಗಳಲ್ಲಿ ಬಹು ಪ್ರಖ್ಯಾತವಾದದ್ದು. ಕನ್ನಡಕ್ಕೆ ಮೊದಲಬಾರಿಗೆ ಭಾರತೀಯ ಜ್ಞಾನಪೀಠದವರ ಮೂರ್ತಿ ದೇವಿ ಪ್ರಶಸ್ತಿಯನ್ನು ತಂದುಕೊಟ್ಟ ಕಾದಂಬರಿ. ಎರಡು ಸಾವಿರ ಪುಟಗಳಿಗೂ ಹೆಚ್ಚಾಗಿರುವ ಈ ಕಾದಂಬರಿಯಲ್ಲಿ ಬಹುಸೊಗಸಾಗಿ ಜಕಣಾಚಾರ್ಯರ ಪಾತ್ರವನ್ನು ಲೇಖಕರು ಚಿತ್ರಿಸಿದ್ದಾರೆ. ಆ ಕಾಲದ ಶಿಲ್ಪಿಗಳ ವೈದುಷ್ಯ ಎಷ್ಟಿರಬೇಕೆಂಬುದನ್ನು ಸಹಜವಾಗಿ ಕಾದಂಬರಿಕಾರರು ರೂಪಿಸಿದ್ದಾರೆ. ಜಕಣಾಚಾರ್ಯರ ಪಾತ್ರವಂತು ಬಹು ಗಂಭೀರವಾಗಿ ಮೂಡಿದೆ. ಇತಿಹಾಸದ ಅನೇಕ ಅಂಶಗಳನ್ನು ಈ ಕಾದಂಬರಿ ಮೈಗೂಡಿಸಿಕೊಂಡಿದೆ. ಶ್ರೀ ಸಿ. ಕೆ. ನಾಗರಾಜರಾಯರು ಇತಿಹಾಸದ ಬಗ್ಗೆ ಬಹು ಶ್ರದ್ಧೆ, ನಿಷ್ಠೆ ಇರಿಸಿಕೊಂಡಿರುವ ಅಪರೂಪದ ಬರಹಗಾರರು. ಡಾ. ಕೆ. ಎಂ. ಮುನ್ಷಿ ಅವರು ತಮ್ಮ ಪೃಥ್ವೀವಲ್ಲಭ ಕಾದಂಬರಿಯಲ್ಲಿ ಚಾಲುಕ್ಯ ಚಕ್ರವರ್ತಿ ತೈಲಪ ಮತ್ತು ಚಾಲುಕ್ಯರ ಇತಿಹಾಸಕ್ಕೆ, ಪರಂಪರೆಗೆ ಅನ್ಯಾಯವೆಸಗಿದ್ದಾರೆಂದು, ಕನ್ನಡದವರಿಗೆ ಅಪಮಾನ ಮಾಡಿದ್ದಾರೆಂದು 'ಶ್ರೀ ಪೃಥ್ವೀವಲ್ಲಭ' ಕಾದಂಬರಿಯನ್ನು ಬರೆದು ತಾವೇ ಪ್ರಕಟಿಸಿರುವವರು. 'ಜಕಣಾಚಾರ್ಯ' ಕೃತಿಗೆ ಅವರು ಬರೆದಿರುವ ಮೂಲ ಲೇಖಕರ ಮುನ್ನುಡಿಯಲ್ಲೂ ಸಾಕಷ್ಟು ವಿವರಗಳನ್ನು ಹೇಳಿದ್ದಾರೆ.

ನಾಡಿನ ಸಮಗ್ರ ಇತಿಹಾಸಕ್ಕೆ ಅಪಚಾರವೆಸಗದಂತೆ ಐತಿಹಾಸಿಕ ಕಾದಂಬರಿಗಳನ್ನು ರಚಿಸುವುದೇ ಗುರಿಯಾಗಿ ಸ್ವೀಕರಿಸಿರುವ ಶ್ರೀ ಸಿ. ಕೆ. ನಾಗರಾಜರಾಯರು ಚಿತ್ರಿಸಿರುವ 'ಜಕಣಾಚಾರ್ಯ'ನನ್ನು ಅವರ ಬೃಹತ್ ಕಾದಂಬರಿಯಿಂದ ಸಂಗ್ರಹಿಸಿ ರೂಪಿಸುವ ಕೆಲಸವನ್ನು ಅವರ ಸೂಚನೆಯ ಮೇರೆಗೇ

ಶ್ರೀಮತಿ ಸರಿತಾ ಜ್ಞಾನಾನಂದ ಅವರಿಗೆ ವಹಿಸಲಾಯಿತು. ಆ ಸಂಗ್ರಹವು ಈಗ ತಮ್ಮ ಮುಂದೆ ಇದೆ. ಸ್ವತಃ ಮೂಲ ಲೇಖಕರೇ ಮೆಚ್ಚಿರುವ ಸಂಗ್ರಹ ಎಂದ ಮೇಲೆ ಬೇರೆಯವರು ಇನ್ನೇನು ತಾನೇ ಹೇಳುವುದಿದೆ?

ಈ ಕಾದಂಬರಿಯಲ್ಲಿ ಇತಿಹಾಸ ಸಂಶೋಧಕರೊಬ್ಬರ ಕಣ್ಣಲ್ಲಿ ಪ್ರಾಚೀನ ಸ್ಥಪತಿಯ ಜೀವನ, ರೀತಿ ನೀತಿಗಳ ಚಿತ್ರಣ ದೊರೆಯುತ್ತದೆ.

ತೆಲುಗು ಸಾಹಿತ್ಯದಲ್ಲಿ ಡಾ. ಕೊಂಡೂರು ವೀರರಾಘವಾಚಾರ್ಯುಲು ಅವರು ಶ್ರೇಷ್ಠ ಲೇಖಕರೆಂದು ಪ್ರಖ್ಯಾತರಾಗಿದ್ದರೆ. ಆಚಾರ್ಯರು ಶಾಸ್ತ್ರ ವೈದುಷ್ಯ ಮತ್ತು ಕಾವ್ಯ ಪ್ರತಿಭೆ ಎರಡನ್ನೂ ಮೈಗೂಡಿಸಿಕೊಂಡು ಅನೇಕ ವಿದ್ವತ್ಪೂರ್ಣ ಕೃತಿಗಳನ್ನು ರಚಿಸಿರುವವರು, 'ಕಳಾರಾಧನ' ಅವರ ಬಹು ಪ್ರಖ್ಯಾತ ಕೃತಿ. ಈಗಾಗಲೇ ದಕ್ಷಿಣ ಭಾರತದ ಹನ್ನೆರಡು ವಿಶ್ವವಿದ್ಯಾನಿಲಯಗಳಲ್ಲಿ ಪಠ್ಯಪುಸ್ತಕವಾಗಿದ್ದ ಕೃತಿ. ಇದರಲ್ಲಿ ಇತಿಹಾಸಕ್ಕಿಂತಲೂ ಪ್ರಧಾನವಾದುದು ಸ್ಥಪತಿಯೊಬ್ಬನ ಶಾಸ್ತ್ರೋಕ್ತ ಬದುಕು. ಆತನ ವೈದುಷ್ಯ, ಸೇವಾ ಭಾವ ಮತ್ತು ಧರ್ಮಪರಾಯಣತೆ. ಈ ರೀತಿಯ ಸ್ಥಪತಿಗಳ ಬಗ್ಗೆ ನಾನು ಬಾಲ್ಯದಿಂದ ಕೇಳಿದ್ದೆ. ಈಗ ಆ ರೀತಿಯ ಚಿತ್ರಣವನ್ನು ಓದಿ ಸಂತೋಷಿಸಿದ್ದೇನೆ.

ಪ್ರಸ್ತುತ ಎರಡೂ ಕಾದಂಬರಿಗಳನ್ನು ಅಕಾಡೆಮಿ ಕಲಾಭಿಮಾನಿಗಳ ಮಡಿಲಿನಲ್ಲಿ ಇರಿಸುತ್ತಿದೆ. ಕೇವಲ ಏಕಮುಖದ ಚಿಂತನೆಯು ಸಮಗ್ರತೆ ಕೊಡುವುದಿಲ್ಲ. ಸಮಸ್ಯೆಯ ಇನ್ನೊಂದು ಮುಖವನ್ನು ಅರ್ಥಮಾಡಿಕೊಂಡು ಸಂಸ್ಕೃತಿ, ಇತಿಹಾಸಗಳ ಸಮಗ್ರತೆಯತ್ತ ನಾವು ಗುರಿ ಇರಿಸಿಕೊಂಡಿರುವುದು ಒಳ್ಳೆಯದು ಎಂದು ಸೂಚಿಸಲು ಮಾತ್ರವೇ ಈ ಪ್ರಯತ್ನ. ಆರೋಗ್ಯಕಾರಿಯಾದ ಈ ರೀತಿಯ ಚಿಂತನೆಯಿಂದ ನಮ್ಮ ಕಲೆ ಮತ್ತು ಸಂಸ್ಕೃತಿಗಳ ಸಂವರ್ಧನೆಯು ಸಾಧ್ಯವಾಗುತ್ತದೆ. ಆ ದಿಶೆಯಲ್ಲಿ ಇದು ನಮ್ಮ ಪುಟ್ಟ ಹೆಜ್ಜೆ.

ನಮ್ಮ ಈ ಪ್ರಯತ್ನದಲ್ಲಿ ನೆರವಾಗಿರುವವರು ಶ್ರೀ ಸಿ. ಕೆ. ನಾಗಾರಾಜರಾಯರು, ಡಾ. ಕೊಂಡೂರು ವೀರರಾಘವಾಚಾರ್ಯುಲು ಅವರ ಪುತ್ರರಾದ ಶ್ರೀ ಆನಂದವರ್ಧನ ಮತ್ತು ಶ್ರೀಮತಿ ಸರಿತಾಜ್ಞಾನಾನಂದ ಅವರು. ಇವರೆಲ್ಲರಿಗೂ ಅಕಾಡೆಮಿಯು ಕೃತಜ್ಞವಾಗಿದೆ. ಈ ಕೃತಿಗಳನ್ನು ಸಂಪಾದಿಸಿ, ಕರಡು ತಿದ್ದಿ ಪುಸ್ತಕ ರೂಪಕ್ಕೆ ಬರಲು ಶ್ರಮಿಸಿದವರು ಸಂಪಾದಕರಾದ ಶ್ರೀ ಜಿ. ಜ್ಞಾನಾನಂದ ಅವರು, ಈ ಪ್ರಕಟಣೆಗಳಿಗೆ ಒತ್ತಾಸೆಯಾಗಿ ನಿಂತವರು ಅಕಾಡೆಮಿಯ ಪ್ರಕಟಣಾ ಸಮಿತಿಯವರು, ಕಾರ್ಯ ಸಮಿತಿಯವರು ಮತ್ತು ರಿಜಿಸ್ಟ್ರಾರ್ ಅವರು. ಸುಂದರವಾದ ಮುದ್ರಣ ಮಾಡಿ ಕೊಟ್ಟಿರುವ ಲಕ್ಷ್ಮಿ ಮುದ್ರಣಾಲಯದವರು. ಇವರೆಲ್ಲರಿಗೂ ನಾನು ಆಭಾರಿಯಾಗಿದ್ದೇನೆ.

**ಶಿಲ್ಪಿ ಕೆ. ಶಾಮರಾಯ ಆಚಾರ್ಯ**
ಅಧ್ಯಕ್ಷರು
ಕರ್ನಾಟಕ ಶಿಲ್ಪಕಲಾ ಅಕಾಡೆಮಿ

# ಮೂಲ ಲೇಖಕರ ಮುನ್ನುಡಿ

ಸೋದರಿ ಶ್ರೀಮತಿ ಸರಿತಾ ಜ್ಞಾನಾನಂದ ಅವರು, ಕರ್ನಾಟಕ ಶಿಲ್ಪಕಲಾ ಅಕಾಡೆಮಿಯವರು ಪ್ರಕಟಿಸಲು ನಿರ್ಧರಿಸಿರುವ ಜಕಣಾಚಾರ್ಯ ಕೃತಿಗೆ ಮುನ್ನುಡಿಯೊಂದನ್ನು ಬರೆದುಕೊಡಿ ಎಂದು ಕೇಳಿದರು. ನನ್ನದೇ ಮೂಲಕಥೆಯನ್ನು ಅವರು ಸಂಗ್ರಹಿಸಿರುವುದರಿಂದ ನಾನೇ ಮುನ್ನುಡಿ ಬರೆಯುವುದು ಉಚಿತವಲ್ಲವೇನೋ ಎಂದು ನನಗನ್ನಿಸಿತು. ಆದರೂ ಅವರ ಒತ್ತಡದ ಮನವಿಗೆ ಮರ್ಯಾದೆಕೊಟ್ಟು ನಾಲ್ಕು ಮಾತುಗಳನ್ನು ಬರೆಯಲು ನಾನು ಒಪ್ಪಿದೆ. ಒಪ್ಪಿದ್ದಕ್ಕೆ ಇದು ಮುಖ್ಯ ಕಾರಣವಾದರೂ ಬೇರೆ ಕಾರಣವೂ ಇರುವುದರಿಂದ ಔಚಿತ್ಯದ ಎಲ್ಲೆಯೊಳಗೆ ನನ್ನ ಮಾತನ್ನು ಸಾಗಿಸಿದ್ದೇನೆ.

ಐತಿಹಾಸಿಕ ವಸ್ತುಗಳನ್ನು ಆಯ್ದು ಕಾದಂಬರಿ ರಚಿಸುವವರಿಗೆ ಅನೇಕ ತೊಡಕುಗಳು ಇದಿರಾಗುತ್ತವೆ. ಅವುಗಳಲ್ಲಿ ಪ್ರಧಾನವಾದುದು ಸತ್ಯಾಸತ್ಯತೆಯ ಬಗೆಗಿನ ವಿಚಾರಧಾರೆ. ನಾನು ಭಾರತದ ಹಾಗೂ ಹೊರದೇಶಗಳ ಐತಿಹಾಸಿಕ ಕಾದಂಬರಿಗಳನ್ನು ಸಾಕಷ್ಟು ಓದಿದ್ದೇನೆ. ಅವುಗಳಲ್ಲಿ ಐತಿಹಾಸಿಕ ಸತ್ಯಾಂಶಗಳ ಪ್ರಮಾಣ ಕಡಿಮೆ. ಅನೇಕ ಸಲ ಮನೋರಂಜನೆಯೇ ಪ್ರಧಾನವಾಗಿ ಐತಿಹಾಸಿಕ ಸತ್ಯವು ಕಾದಂಬರಿಯಲ್ಲಿ ಸತ್ಯಕ್ಕೆ ದೂರವಾದ ರೂಪವನ್ನು ಧರಿಸಿ ಮೂಡಿ ಬಂದಿರುತ್ತದೆ. ಅದು ಇತಿಹಾಸದ ತಪ್ಪು ಗ್ರಹಿಕೆಗೆ ಕಾರಣವಾಗುತ್ತದೆಯಾದ್ದರಿಂದ, ಇತಿಹಾಸಕ್ಕೆ ಲೋಪ ಬರದಂತೆ ಸತ್ಯವನ್ನು ಸತ್ಯವಾಗಿಯೇ ಉಳಿಸಿ ಐತಿಹಾಸಿಕ ಕಾದಂಬರಿಗಳನ್ನು ಬರೆಯ ಬೇಕೆಂದು ಸಂಕಲ್ಪಿಸಿ ನನ್ನ ಐತಿಹಾಸಿಕ ಕಾದಂಬರಿಗಳನ್ನು ರಚಿಸಿದ್ದೇನೆ. ಈ ಮಾತನ್ನು ಹೇಳುವುದಕ್ಕೆ ಕಾರಣ ಇಷ್ಟೆ. ಜಕ್ಕಣ ಎಂಬ ಹೆಸರಿನ ಶಿಲ್ಪಿಯೇ ಇರಲಿಲ್ಲ, ಆ ಹೆಸರೇ ಕಪೋಲಕಲ್ಪಿತ – ಮುಂತಾದ ವಾದಸರಣಿ ಎದ್ದಿದೆ ಎನ್ನುವುದು ನನಗೆ ಗೊತ್ತು. ಶತಮಾನ ಶತಮಾನಗಳಿಂದ ಜನಜನಿತವಾಗಿ ಜಕ್ಕಣನ ಒಂದು ಕಥೆಯನ್ನಾಧರಿಸಿ ಆ ಹೆಸರಿನ ಶಿಲ್ಪಿ ಇದ್ದ ಎಂದು ಹೇಳುವುದು ಘೋರ ತಪ್ಪು ಎಂದು ವಾದಿಸುವವರೂ ಇದ್ದಾರೆ. ಈ ವಾದವಿವಾದಗಳು ಏನೇ ಇರಲಿ, ತಲೆತಲಾಂತರದಿಂದ ಜನಮನದಲ್ಲಿ ರೂಪಿತವಾಗಿ ಬಂದಿರುವ ಅವನ ಬಾಳ ಘಟನೆಯಲ್ಲಿನ ಮಾನವೀಯ ಮೌಲ್ಯಗಳು ಸದಾಕಾಲಕ್ಕೂ ಅವಶ್ಯಕ ಎಂಬುದನ್ನು ಮಾತ್ರ ಯಾರೂ ಮರೆಯಬಾರದು. ನನ್ನ "ಪಟ್ಟಮಹಾದೇವಿ ಶಾನ್ತಲದೇವಿ" ಕಾದಂಬರಿಯ "ಆತ್ಮಕಥನ"ದಲ್ಲಿ ನಾನು ಈ ಕುರಿತು ಸೂಚ್ಯವಾಗಿ ಹೇಳಿದ್ದೇನೆ.

ನನ್ನ ಐತಿಹಾಸಿಕ ಕಾದಂಬರಿ "ದಾಯಾದ ದಾವನಳ ?"ದ ಮುನ್ನುಡಿಯಲ್ಲಿ ಪ್ರಾಸಂಗಿಕವಾಗಿ ಜಕ್ಕಣನ ಬಗೆಗೆ ಬರೆದಿರುವುದು ಪ್ರಕೃತ ಸಂದರ್ಭಕ್ಕೆ ಹೆಚ್ಚಿನ ವಿವರಣೆ ನೀಡುತ್ತದೆಯಾಗಿ ಅದನ್ನು ಇಲ್ಲಿ ಉಲ್ಲೇಖಿಸಿದ್ದೇನೆ :

"ಐತಿಹಾಸಿಕ ವಸ್ತುವನ್ನು ಆಧರಿಸಿ ಬರೆಯುವವರು ಮೈಯೆಲ್ಲ ಕಣ್ಣಾಗಿರಬೇಕು ಎನ್ನುವುದಕ್ಕೆ

ಮೇಲಿಂದ ಮೇಲೆ ತೂಗು ಕತ್ತಿಯ ಗಾಳಿ ಬೀಸುತ್ತಿರುತ್ತದೆ. ಇತ್ತೀಚೆಗೆ ಅಮರಶಿಲ್ಪಿ ಜಕಣಾಚಾರಿಯ ಹೆಸರಿನಲ್ಲಿ ಒಂದು ರಾಜ್ಯ ಪ್ರಶಸ್ತಿಯನ್ನು ನೀಡಬೇಕೆಂಬ ಯೋಚನೆ ಸರ್ಕಾರಕ್ಕೆ ಇದೆ ಎಂದು ಕರ್ನಾಟಕದ ಮಾನ್ಯ ಮುಖ್ಯಮಂತ್ರಿ ಶ್ರೀ ವೀರಪ್ಪ ಮೊಯಿಲಿ ಅವರು ಹೇಳಿದಾಗ ಅದಕ್ಕೆ ಬಗೆಬಗೆಯ ಪ್ರತಿಕ್ರಿಯೆಗಳು ಹೊರಬಿದ್ದವು. ಈ ಹಿಂದೆಯೂ ಜಕಣಾಚಾರಿಯ ದಂತ ಕಥೆಯ ಬಗೆಗೆ ಜನ ಬಹಳ ಕಟುವಾಗಿ ಮಾತನಾಡಿದ್ದಾರೆ. ಅಂತಹ ಹೆಸರಿನ ವ್ಯಕ್ತಿ ಇದ್ದನೆಂದು ಇತಿಹಾಸೀಕರಣ ಮಾಡುವುದು ತಪ್ಪು, ಹಾಗೆ ಮಾಡುವುದು ಇತಿಹಾಸಕ್ಕೆ ಅಪಚಾರವೆಸಗಿದಂತೆ ಎಂದು ಮುಂತಾಗಿ ಮಾತುಗಳು ಬಂದಿವೆ. ಕರ್ನಾಟಕ ಶಿಲ್ಪಕ್ಕೆ ಮೆರುಗನ್ನೀಯುತ್ತ, ಹೊಸಕಲ್ಪನೆಗಳತ್ತ ಮುನ್ನಡೆಯುತ್ತ ಸಾಗಿದ ಶಿಲ್ಪಿಗಳ ಹೆಸರುಗಳು ನಮ್ಮ ಶಿಲಾಲೇಖನಗಳಲ್ಲಿ ಏಳನೆಯ ಶತಮಾನದಿಂದ ಕಂಡು ಬರುತ್ತವೆ. ಏಳು ಶತಮಾನಗಳ ಅವಧಿಯಲ್ಲಿ ಎಂದರೆ ಏಳನೇ ಶತಮಾನದಿಂದ ಹದಿನಾಲ್ಕನೇ ಶತಮಾನದವರೆಗಿನ ಅವಧಿಯಲ್ಲಿ ನನಗೆ ಒಂದು ನೂರು ಇಪ್ಪತ್ತು ಜನ ಶಿಲ್ಪಿಗಳ ಹೆಸರುಗಳು ಸಿಕ್ಕಿವೆ. ಶಿಲ್ಪಿಗಳ ಹೆಸರಿನಲ್ಲಿ ಜಕ್ಕಣ ಎಂಬ ಹೆಸರೇ ಇಲ್ಲವೆಂದೂ ವಾದ ಮಾಡುವವರಿದ್ದಾರೆ. ಹೀಗೆ ವಾದ ಮಾಡಿದವರಿಗೆ ಸಮಂಜಸವಾದ ಉತ್ತರ ತುರುವೇಕೆರೆಯ ಮೂಲಸಂಕೇಶ್ವರ ದೇವಸ್ಥಾನದಲ್ಲಿ ದೊರೆಯುತ್ತದೆ. ಆ ದೇವಸ್ಥಾನದಲ್ಲಿ ಜಕ್ಕನ್ನ, ಈಶ್ವರ ಎಂಬ ಇಬ್ಬರು ರೂವಾರಿಗಳ ಹೆಸರು ಇದೆ. ದಂತಕತೆಯ ಜಕ್ಕಣ್ಣನ ವಂಶದವನೇ ಈ ಜಕ್ಕನ್ನ ಏಕಾಗಿರಬಾರದು ? ಕ್ರೀಡಾಪುರಕ್ಕೆ (ಈಗಿನ ಕೈದಾಳ) ತುರುವೇಕೆರೆ ಬಹಳ ದೂರವೇನಿಲ್ಲ. ವಿಗ್ರಹಶಿಲ್ಪಕ್ಕೆ ಹೆಸರುವಾಸಿಯಾಗಿದ್ದ ಮೆದುಶಿಲೆಗೆ ಆಗರವಾಗಿದ್ದ ಕೊನೇಹಳ್ಳಿಗೆ ಎರಡು ಗಾವುದ ದೂರ ತುರುವೇಕೆರೆ. ಜಕ್ಕನ್ನ, ಜಕ್ಕಿರಾಜ, ಜಕ್ಕದೇವ, ಜಕ್ಕನಾಯಕ, ಜಕ್ಕಿ, ಜಕ್ಕಲೆ, ಜಕ್ಕಿಯಬ್ಬೆ, ಜಕ್ಕಲದೇವಿ ಎಂಬ ಹೆಸರಿನ ಸ್ತ್ರೀಪುರುಷರು ಬದುಕಿ ಬಾಳಿದ ಕಾಲ ಅದು. ಈ ಹೆಸರುಗಳು ಇಡೀ ಕರ್ನಾಟಕದಲ್ಲಿ ಹೊಯ್ಸಳ ಪೂರ್ವ ಕಾಲದಿಂದಲೂ ರೂಢಿಯಲ್ಲಿತ್ತು ಎಂದಾಗ ಜಕಣಾಚಾರಿ ಎಂಬ ದಂತಕತೆಯ ವ್ಯಕ್ತಿ ಇದ್ದಿರಬಹುದು ಎನ್ನುವುದು ಅರ್ಥಹೀನ ಭಾವನೆಯಾಗುವುದಿಲ್ಲ. ಕತ್ತರಿಸಿಕೊಂಡ ಕೈ ಮತ್ತೆ ಚಿಗುರಿತು ಎಂಬ ದಂತಕಥೆಯ ಭಾಗ ಅವೈಜ್ಞಾನಿಕ. ಆದರೆ ವ್ಯಕ್ತಿಯ ಸತ್ಯನಿಷ್ಠೆಯನ್ನು ಎತ್ತಿತೋರಲು ಇಂತಹ ಅವೈಜ್ಞಾನಿಕ ಯಾ ಅಮಾನುಷ ಚಿತ್ರಣ ಹಿಂದಿನಿಂದ ನಡೆದು ಬಂದಿದೆ. ಇಂತಹ ದಂತ ಕಥೆ ರಾಘವಾಂಕನ ಬಗೆಗೂ ರೂಢಿಯಲ್ಲಿ ಬಂದಿದೆ. ಸತ್ಯಮೇವ ಜಯತೆ ಎಂಬ ಮಾನವೀಯ ಸೂತ್ರಕ್ಕೆ ಒತ್ತು ಕೊಡುವ ಹರಿಶ್ಚಂದ್ರ ಕಾವ್ಯವನ್ನು ರಾಘವಾಂಕ ಬರೆದ. ಸೋದರಳಿಯನ ಈ ರಚನೆಯಿಂದ ಹರಿಹರ ಕೋಪಗೊಂಡು 'ನರಸ್ತುತಿ ಮಾಡಿದೆಯಲ್ಲೋ' ಎಂದು ರಾಘವಾಂಕನ ಕಪಾಳಕ್ಕೆ ಹೊಡೆದನಂತೆ. ರಾಘವಾಂಕನ ಐದು ಹಲ್ಲುಗಳು ಉದುರಿಬಿದ್ದವಂತೆ. ನಂತರ ಪಶ್ಚಾತ್ತಾಪ ಪಟ್ಟು ರಾಘವಾಂಕ ಶ್ರದ್ಧೆಯಿಂದ ಐವರು ಶಿವಶರಣರನ್ನು ಕುರಿತು ಕಾವ್ಯ ರಚನೆ ಮಾಡಿದನಂತೆ. ಉದುರಿದ್ದ ಐದೂ ಹಲ್ಲುಗಳು ಮೂಡಿ ಬಂದವಂತೆ. ಉದುರಿದ ಹಲ್ಲು ಮತ್ತೆ ಮೂಡುವುದು, ಕತ್ತರಿಸಿದ ಕೈ ಮತ್ತೆ ಚಿಗುರುವುದು ಅವೈಜ್ಞಾನಿಕವೆಂಬುದು ನಿಜವಾದರೂ ಆ ಕಾರಣವಾಗಿ ರಾಘವಾಂಕ ಇರಲಿಲ್ಲ ಹರಿಹರ ಇರಲಿಲ್ಲ ಎಂದು ತೀರ್ಮಾನ ಮಾಡುವುದು ಸರಿಯಾದೀತೆ ? ನಮ್ಮ ಪುಣ್ಯ ಅವರ ಕೃತಿಗಳು ಸಿಕ್ಕಿವೆ. ಇವರ ಕೃತಿಗಳು ಸಿಕ್ಕಿರುವ ಹಾಗೆ (ಹೆಸರಿಸಿರುವ ಎಲ್ಲ ಕೃತಿಗಳೂ ಸಿಕ್ಕಿಲ್ಲ) ಸಿಗಬೇಕಾದ ಎಷ್ಟೋ ಜನ ಕವಿಗಳ ಕೃತಿಗಳು ಸಿಕ್ಕೇ ಇಲ್ಲ. ಆ ಕಾರಣವಾಗಿ ಅವರಿರಲೇ ಇಲ್ಲ ಎಂದು ವಾದಿಸುವುದು ಸಮಂಜಸವಾಗಲಾರದು.

ಈ ಮೊದಲೇ ತಿಳಿಸಿದಂತೆ ಆರು ನೂರು–ಏಳು ನೂರು ವರ್ಷಗಳ ಕಾಲಮಾನದಲ್ಲಿ ಕರ್ನಾಟಕದಲ್ಲಿ ನಿರ್ಮಾಣಗೊಂಡಿರುವ ನೂರಾರು ಶಿಲ್ಪ ಚಮತ್ಕಾರದ ದೇವಮಂದಿರಗಳ ನಿರ್ಮಾಣದಲ್ಲಿ

ಸಾವಿರಾರು ರೂವಾರಿಗಳು ದುಡಿದಿರಬೇಕು. ಹೆಸರು ಸಿಕ್ಕಿಲ್ಲ ಎಂದು ರೂವಾರಿಗಳೇ ಇರಲಿಲ್ಲ ಎಂದು ಹೇಳುವುದು ಹೇಗೆ ಸರಿಯಾದೀತು ? ಎಷ್ಟೋ ಜನ ಶಿಲ್ಪಿಗಳು ತಮ್ಮ ಹೆಸರುಗಳನ್ನು ಕೆತ್ತಿಲ್ಲದೆಯೂ ಇರಬಹುದು. ಕೆತ್ತಿರುವುದು ನಮಗೆ ಸಿಕ್ಕಿಲ್ಲದೆಯೂ ಇರಬಹುದು. ಅಥವಾ ಕೆತ್ತಿದವು ಅಳಿಸಿ ಹೋಗಿಯೂ ಇರಬಹುದು. ಜಕಣಾಚಾರಿಯ ಕಥೆ ಮಾನವೀಯ ಮೌಲ್ಯವನ್ನು ಎತ್ತಿ ಹಿಡಿಯುವ ಕಥೆಯಾಗಿದೆ. ಮಾನವೀಯ ಅಂಶಕ್ಕೆ ತುಸು ಅವೈಜ್ಞಾನಿಕ ಅಂಶ ಸೇರಿಸಿದಾಕ್ಷಣ ವ್ಯಕ್ತಿಯ ಅಸ್ತಿತ್ವಕ್ಕೇ ಪೆಟ್ಟು ಕೊಡುವುದು ಸರಿಯೆಂದು ನನಗನಿಸುವುದಿಲ್ಲ.

ಜೊತೆಗೆ ನಮ್ಮ ಬಾಳಿನಲ್ಲಿ ದಂತಕಥೆಗೆ ಒಂದು ವಿಶಿಷ್ಟ ಸ್ಥಾನ ಬೆರೆತುಕೊಂಡು ಬಂದಿದೆ. ನಮ್ಮ ಆಧುನಿಕ ಕನ್ನಡ ಸಾಹಿತ್ಯದ ಪ್ರಮುಖರಲ್ಲಿ ಒಬ್ಬರಾದ ಡಾ. ರಂ. ಶ್ರೀ. ಮುಗುಳಿಯವರು ಈ ವಿಷಯದಲ್ಲಿ, ತಮ್ಮ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ಮಾತನ್ನು ಹೇಳಿದ್ದಾರೆ. 'ಎಲ್ಲ ದಂತ ಕಥೆಗಳಲ್ಲಿಯೂ ಸತ್ಯಾಂಶಗಳು ಇರುತ್ತವೆ ಎಂಬುದನ್ನು ಕೂಲಂಕುಷವಾದ ಶೋಧನೆಗಳು ಸಿದ್ಧಮಾಡಿವೆ' [ಕನ್ನಡ ಸಾಹಿತ್ಯ ಚರಿತ್ರೆ (ರಂ. ಶ್ರೀ. ಮುಗುಳಿ), ಪುಟ ೧೩೦] ಎಂಬ ಅವರ ಮಾತು ಮಾನ್ಯ.''

ಜಕಣಾಚಾರಿ ಹಾಗೂ ಅವನ ಮಗನ ಮುಖಾಮುಖಿಯೇ ಒಂದು ಯೋಗಾಯೋಗ ಎಂದು ಹೇಳಬೇಕು. ಆ ಮುಖಾಮುಖಿಯ ಈ ಕಥಾನಕ ಈ ರೂಪದಲ್ಲಿ ಅನಿರೀಕ್ಷಿತ ಎಂಬಂತೆ ಹೊರಬರುತ್ತಿರುವುದು ಸಹ ಯೋಗಾಯೋಗವೆಂದೇ ಹೇಳಬೇಕು. ಏಕೆಂದರೆ ೧೯೬೧ರಲ್ಲಿ ನನ್ನ ಆತ್ಮೀಯ ಸ್ನೇಹಿತರು ಕರ್ನಾಟಕ ಸರ್ಕಾರದ ವಿದ್ಯಾ ಇಲಾಖೆಯಲ್ಲಿ ಅಧಿಕಾರಿಯಾಗಿದ್ದರು. ಅವರು ಒಂದು ದಿನ ಒಂದು ಸಲಹೆ ಕೊಟ್ಟರು ನನಗೆ, 'ನೀನು ಹೇಗೂ ಹೊಯ್ಸಳರ ಬಗೆಗೆ ಆಳವಾಗಿ ಚಿಂತನೆ ಮಾಡುತ್ತಿದ್ದೀ. ಅವರು ಕಟ್ಟಿಸಿದ ಬೇಲೂರು ದೇವಸ್ಥಾನದ ಶಿಲ್ಪಿ ಜಕಣಾಚಾರಿಯನ್ನು ಕುರಿತು ೧೫೦ ಪುಟಗಳ ಒಂದು ಕಾದಂಬರಿ ಬರಿ. ಅದನ್ನ ಪಠ್ಯಪುಸ್ತಕ ಮಾಡಿಸೋಣ' ಎಂದು. ಕೂಡಲೇ ಒಪ್ಪಿದೆ. ಅದೇ ವರ್ಷದ ಸೆಪ್ಟೆಂಬರ್– ಅಕ್ಟೋಬರ್‌ನಲ್ಲಿ ಜಕಣಾಚಾರ್ಯ ಕಾದಂಬರಿ ಆರಂಭಿಸಿ ದಡದಡಾಂತ ಒಂದು ನೂರು ಪುಟದಷ್ಟು ಬರೆದೆ. ಈ ಬರವಣಿಗೆಯ ನಡುವೆಯೂ ಹೊಯ್ಸಳರನ್ನು ಕುರಿತ ನನ್ನ ಸಂಶೋಧನೆ ಸಾಗಿತ್ತು. ಅದರಲ್ಲಿಯೂ ಪಟ್ಟಮಹಾದೇವಿ ಶಾನ್ತಲದೇವಿ ಬಂಜೆಯಾಗಿರಲಿಲ್ಲ ಮಕ್ಕಳಿದ್ದರು ಎಂಬುದಕ್ಕೆ ಆಧಾರಗಳು ದೊರಕಿದವು. ಬಂಜೆಯಲ್ಲ ಎಂಬ ತೀರ್ಮಾನಕ್ಕೆ ಬಂದುದರ ಫಲವಾಗಿ ನನ್ನ ಸಂಶೋಧನ ಚಟುವಟಿಕೆ ಹೆಚ್ಚಿ ಕಾದಂಬರಿ ರಚನೆ ಅಲ್ಲಿಗೇ ನಿಂತಿತು. ಪಟ್ಟಮಹಾದೇವಿ ಶಾನ್ತಲದೇವಿ ರಚನೆ ಆರಂಭವಾಗಿ ವರುಷಗಳು ಉರುಳಿದವು. ಆರಂಭಿಸಿದ ಜಕಣಾಚಾರ್ಯನನ್ನು ಕುರಿತ ಕಥಾಭಾಗ ಏನೂ ಬದಲಾವಣೆಯಿಲ್ಲದೆ ಹಾಗೆಯೇ ಈ ಬೃಹತ್ ಕಾದಂಬರಿಯಲ್ಲಿ ಸೇರಿಹೋಯಿತು. ಈಗ ಅದೇ ಸ್ವತಂತ್ರವಾಗಿ ಈ ರೂಪದಲ್ಲಿ ಹೊರಬರುತ್ತಿರುವುದು ಸಹ ವಿಶೇಷ ಯೋಗಾಯೋಗ ಎನ್ನಬೇಕು. ಈ ವಿಶೇಷ ಯೋಗಾಯೋಗಕ್ಕೆ ಕಾರಣರಾದ ಶಿಲ್ಪಕಲಾ ಅಕಾಡೆಮಿಯ ಅಧ್ಯಕ್ಷರಾಗಿರುವ ಶಿಲ್ಪಿ ಶ್ರೀ ಕೆ. ಶಾಮರಾಯ ಆಚಾರ್ಯ ಹಾಗೂ ಶ್ರೀ ಜಿ. ಜ್ಞಾನಾನಂದ ಮೊದಲಾದ ಸತ್ಯಾನ್ವೇಷಕ ಸದಸ್ಯರಿಗೆ, ಈ ಪ್ರಕಟಣೆಯ ಬಗ್ಗೆ ಹೆಚ್ಚು ಆಸಕ್ತಿವಹಿಸಿ ಪುಸ್ತಕದ ಸೌಂದರ್ಯಕ್ಕೆ ಮತ್ತು ಶೀಘ್ರ ಪ್ರಕಟಣೆಗೆ ಕಾರಣರಾಗಿರುವ ರಿಜಿಸ್ಟ್ರಾರ್ ಶ್ರೀ ಎನ್. ಮರಿಶಾಮಾಚಾರ್ಯರಿಗೆ ನಾನು ಕೃತಜ್ಞನಾಗಿದ್ದೇನೆ.

ಶ್ರೀಮತಿ ಸರಿತಾ ಅವರು ಬಹಳ ಕಡಿಮೆ ಸಮಯದಲ್ಲಿ ಈ ಸಂಗ್ರಹ ಕಾರ್ಯವನ್ನು ತುಂಬ ಶ್ರದ್ಧೆ

ವಹಿಸಿ ಮಾಡಿದ್ದಾರೆ.ಈ ಕಾದಂಬರಿಯು ಬೇರೊಂದು ಬೃಹತ್ ಕಾದಂಬರಿಯ ಭಾಗ ಎಂದು ಸುಳಿವೇ ದೊರೆಯದಂತೆ, ಮೂಲ ಕಾದಂಬರಿಯಲ್ಲಿ ಮೂಡಿ ಬಂದಿರುವ ಜಕಣಾಚಾರ್ಯನ ಪಾತ್ರಕ್ಕೆ ಯಾವ ಕುಂದೂ ಆಗದಂತೆ, ಕಥೆಯ ಓಟದಲ್ಲಿ ಯಾವುದೇ ಕಂದರಗಳು ನಿರ್ಮಾಣವಾಗದಂತೆ, ಇದು ಸಂಗ್ರಹ ಎಂಬುದರ ಸುಳಿವೇ ಕೊಡದೆ ಸ್ವತಂತ್ರ ಕಾದಂಬರಿ ಇದು ಎಂದು ಓದುಗರು ನಂಬುವಂತೆ ಶ್ರೀಮತಿ ಸರಿತಾ ಅವರು ಅಚ್ಚುಕಟ್ಟಾಗಿ ಸಂಗ್ರಹಿಸಿರುವ ಈ ಕೃತಿಯನ್ನು ಓದಿದವರಿಗೆ ಮೇಲಿನ ನನ್ನ ಮಾತಿನ ಸಾಕ್ಷಾತ್ಕಾರ ಆಗುತ್ತದೆ ಎಂದು ನಾನು ಭಾವಿಸಿದ್ದೇನೆ.

ನಮ್ಮ ರಾಜ್ಯದ ಶಿಲ್ಪಕಲಾ ಅಕಾಡೆಮಿಯು ಈ ಕೆಲಸವನ್ನು ಮಾಡಲು ನಿರ್ಧರಿಸಿದ್ದು ಸಮಯೋಚಿತ ಮತ್ತು ಉಪಯುಕ್ತ. ಅಕಾಡೆಮಿಯು ಕರ್ನಾಟಕ ಶಿಲ್ಪಿಗಳಿಗೆ ಬಹುವಾಗಿ ಅವಶ್ಯಕವಾಗಿರುವ ಮೂಲಶಿಲ್ಪ ಶಾಸ್ತ್ರಗಳನ್ನು, ಕರ್ನಾಟಕದ ಶಿಲ್ಪ ಪರಂಪರೆಯ ವೈಶಿಷ್ಟ್ಯವನ್ನು, ಮಹತ್ವವನ್ನು ಮನದಟ್ಟು ಮಾಡುವ ಕೃತಿಗಳನ್ನು ಹೊರತರಲಿ ಎಂದು ಮನಸಾ ಆಶಿಸುತ್ತೇನೆ.

**ಸಿ. ಕೆ. ನಾಗರಾಜ ರಾವ್**

೭/೬೧/೨, 'ಮಂದಾರ'
೧ನೇ ಮುಖ್ಯ ರಸ್ತೆ
ಪದ್ಮನಾಭನಗರ
ಬೆಂಗಳೂರು–೫೬೦ ೦೭೦
ದೂರವಾಣಿ : ೬೬೯೦೬೪೫

# ಸಂಗ್ರಾಹಕರ ಮಾತು

'ಪಟ್ಟಮಹಾದೇವಿ ಶಾನ್ತಲ ದೇವಿ' ಬೃಹತ್ ಕಾದಂಬರಿಯು ಕನ್ನಡದ ಒಳ್ಳೆಯ ಐತಿಹಾಸಿಕ ಕಾದಂಬರಿಗಳಲ್ಲಿ ಅಗ್ರಮಾನ್ಯವಾದುದು. ಇದರಲ್ಲಿಯ ಪಾತ್ರಗಳು ಬಹುಳವಾಗಿರುಮತೆಯೇ ವೈವಿಧ್ಯಮಯವೂ ಆಗಿವೆ. ಈ ಪಾತ್ರಗಳಲ್ಲಿ ಜಕಣಾಚಾರ್ಯನ ಪಾತ್ರವೂ ಒಂದು. ಸುರಳಿ ಸುರಳಿಯಾಗಿ ಬಿಡಿಸಿಕೊಂಡು ತನ್ನ ಬಹುಮುಖಿ ಪ್ರತಿಭೆಯಿಂದ ವೈದುಷ್ಯ ಮತ್ತು ಸಜ್ಜನಿಕೆಯಿಂದ ಎಲ್ಲರನ್ನೂ ಮೆಚ್ಚಿಸಿ ತನ್ನ ಕಡೆಗೆ ಸೆಳೆದುಕೊಳ್ಳುವ ಸೂಜಿಗಲ್ಲಿನಂತಹ ವ್ಯಕ್ತಿತ್ವ. ಇಂತಹ ಅದ್ಭುತ ಮೇಧಾವಿ ಸ್ಥಪತಿಯನ್ನು ಮೊದಲಿಗೆ ಗುರ್ತಿಸಿದವರು ಆಚಾರ್ಯ ಶ್ರೀರಾಮಾನುಜರು. ನಂತರ ಗುರ್ತಿಸಿದವರು ಪಟ್ಟಮಹಾದೇವಿ. ಜಕಣನಿಗೆ ಆವರಿಸಿದ್ದ ಗ್ರಹಣದ ಕಾರ್ಮೋಡವನ್ನು ದೂರ ಸರಿಸಿ ಆತ ತಮ್ಮ ಕಾಲದ ಶಿಲ್ಪಕ್ಕೆ ಹೊಸದಾದ ಆಯಾಮವನ್ನು ನೀಡುವಂತೆ ಪ್ರಚೋದಿಸಿ ಸಹಕರಿಸಿದ್ದು ಪಟ್ಟಮಹಾದೇವಿಯೇ. ಈ ರೀತಿಯಾಗಿ ಜಕಣಾಚಾರ್ಯರ ಚಿತ್ರಣವನ್ನು ಬಹು ಮಾರ್ಮಿಕವಾಗಿ ಪರಿಣಾಮಕಾರಿಯಾಗಿ ಶ್ರೀ ಸಿ. ಕೆ. ನಾಗರಾಜರಾಯರು ಮೂಡಿಸಿದ್ದಾರೆ. ಅದನ್ನು ಸಂಗ್ರಹಿಸಬೇಕೆಂದು ಅಕಾಡೆಮಿಯವರು ಸೂಚಿಸಿದ್ದ ಪುಟ ಮಿತಿಯಲ್ಲಿಯೇ ನಾನು ಪ್ರಯತ್ನಿಸಿದ್ದೇನೆ. ಈ ಸಂಗ್ರಹಣೆಯ ಕೆಲಸದಲ್ಲಿ ಮೂಲ ಲೇಖಕರ ಸಲಹೆಗಳನ್ನು ಗಮನಿಸಿ ಸಾಧ್ಯವಿರುವಷ್ಟು ಪಾಲಿಸಿದ್ದೇನೆ.

ಈ ಕಾದಂಬರಿಯನ್ನು ಓದುವವರಿಗೆ ತಾವು ದೊಡ್ಡ ಕಾದಂಬರಿಯ ಒಂದು ಭಾಗವನ್ನು ಓದುತ್ತಿದ್ದೇವೆ ಎಂಬ ಭಾವನೆ ಬರದೆ ಸ್ವತಂತ್ರವಾದ ಕಾದಂಬರಿಯನ್ನು ಓದುತ್ತಿದ್ದೇವೆ ಎಂಬ ಭಾವನೆ ಬರುವಂತೆ ಎಲ್ಲಾ ಎಚ್ಚರಿಕೆಯನ್ನು ತೆಗೆದುಕೊಂಡು ನನ್ನ ಕೆಲಸವನ್ನು ನಿರ್ವಹಿಸಿದ್ದೇನೆ. ಮೂಲದ ಪಾತ್ರಗಳಿಗೆ ಎಲ್ಲಿಯೂ ಚ್ಯುತಿ ಒದಗದಂತೆ ಜಾಗರೂಕವಾಗಿ ಗಮನಿಸಿದ್ದೇನೆ. ಹೊಯ್ಸಳರ ಕಾಲದಲ್ಲಿಯ ಸ್ಥಪತಿಗಳ ರೀತಿನೀತಿಗಳನ್ನು, ಆಚಾರವಿಚಾರಗಳನ್ನು ಬಿಂಬಿಸುವ ಚಿತ್ರಣವನ್ನು ಪೂರ್ಣರೂಪದಲ್ಲಿ ಇಲ್ಲಿ ದೊರೆಯುವಂತೆ ಮಾಡಿದ್ದೇನೆ.

ಮೂಲ ಲೇಖಕರಾದ ಶ್ರೀ ಸಿ. ಕೆ. ನಾಗರಾಜರಾಯರೇ ಈ ಸಂಗ್ರಹದ ಕೆಲಸದ ಬಗ್ಗೆ ಮೆಚ್ಚಿಗೆಯ ನುಡಿ ಹೇಳಿರುವುದು ನನ್ನ ಭಾಗ್ಯ ವಿಶೇಷವೆಂದು ಪರಿಗಣಿಸುತ್ತೇನೆ. ಅವರ ಕೃಪಾಶಿರ್ವಾದ ನನ್ನ ಮೇಲೆ ಸದಾ ಇರಲೆಂದು ಪ್ರಾರ್ಥಿಸುತ್ತೇನೆ. ಕರ್ನಾಟಕದ ಇತಿಹಾಸ, ಸಾಹಿತ್ಯ, ಸಂಸ್ಕೃತಿಗಳ ಬಗ್ಗೆ ಬಹುವಾದ ಶ್ರದ್ಧೆ ಆಸ್ಥೆಗಳನ್ನು ಇರಿಸಿಕೊಂಡು ಈಗಲೂ ಚಟುವಟಿಕೆಯಿಂದ ಲೇಖನ ವ್ಯವಸಾಯದಲ್ಲಿ ತೊಡಗಿರುವ ಈ ಹಿರಿಯರು ಸಕಲ ಸಂಪತ್ತು ಆರೋಗ್ಯಭಾಗ್ಯಗಳೊಂದಿಗೆ ನಮ್ಮ ಮಧ್ಯೆ ಇದ್ದು ಅವರು ಬರೆಯಲು ಬಯಸಿರುವ ಇನ್ನೊಂದು ಬೃಹತ್‌ಕಾದಂಬರಿಯನ್ನು ಮುಗಿಸಿ ಕನ್ನಡ ಸಾಹಿತ್ಯವನ್ನು ಮತ್ತಷ್ಟು ಸಮೃದ್ಧಗೊಳಿಸಲಿ ಎಂದು ನಾಡದೇವಿ ಭುವನೇಶ್ವರಿಯನ್ನು ಪ್ರಾರ್ಥಿಸುತ್ತೇನೆ.

'ಜಕಣಾಚಾರ್ಯ'ರ ಬಗ್ಗೆ ಯೋಚಿಸಿ ಈ ರೀತಿಯ ಕೃತಿಗಳ ಅವಶ್ಯಕತೆ ಇದೆ ಎಂದು ಅವುಗಳ ಪ್ರಕಟಣೆಯ ಬಗ್ಗೆ ತೀರ್ಮಾನಕ್ಕೆಗೊಂಡ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯು ನಮ್ಮೆಲ್ಲರ ಅಭಿನಂದನೆಗೆ ಭಾಜನವಾಗಿದೆ. ಈ ಸಾಹಿತ್ಯಪರಿಚಾರಿಕೆಯಲ್ಲಿ ನನಗೆ ಅವಕಾಶ ಮಾಡಿಕೊಟ್ಟಿರುವ ಅಕಾಡೆಮಿಯ ಅಧ್ಯಕ್ಷರಾದ ಶಿಲ್ಪಿ ಶ್ರೀ ಕೆ. ಶಾಮರಾಯ ಆಚಾರ್ಯ ಅವರಿಗೂ, ಅಕಾಡೆಮಿಯ ಕಾರ್ಯಸಮಿತಿ ಸದಸ್ಯರಿಗೂ, ರಿಜಿಸ್ಟ್ರಾರ್ ಶ್ರೀ ಎನ್. ಮರಿಶಾಮಾಚಾರ್ಯ ಅವರಿಗೂ ನನ್ನ ವಂದನೆಗಳು.

ಸುಂದರವಾಗಿ ಮುದ್ರಿಸಿರುವ ಲಕ್ಷ್ಮಿ ಮುದ್ರಣಾಲಯದ ಅವರಿಗೆ ನನ್ನ ಕೃತಜ್ಞತೆಗಳು

**ಸೂತಾ ಜ್ಞಾನಾನಂದ**

'ಜ್ಞಾನ ಭಂಡಾರ', ಭಾರತ್‌ನಗರ
ಬಿ.ಇ.ಎಂ.ಎಲ್ ಅಂಚೆ, ಕೆಜಿಎಫ್ ೫೬೩ ೧೧೫

# ಪರಿವಿಡಿ

# ಜಕಣಾಚಾರ್ಯ

## ೧. ಯಾತ್ರಿಕ ರೂವಾರಿ

ಯಾದವಪುರಿಗೆ ಹೊಸದಾಗಿ ಆಗಮಿಸಿರುವ ಯತಿರಾಜ ರಾಮಾನುಜರು ತಮ್ಮ ಅದ್ಭುತವಾದ ಪವಾಡಶಕ್ತಿಯಿಂದ ಒಂದೇ ಹಗಲಿನಲ್ಲಿ ರಾಜಕುಮಾರಿಯ ವಿಚಿತ್ರ ರೋಗವನ್ನು ಗುಣಪಡಿಸಿದ್ದಾರೆ. ತಿಂಗಳಾರುಗಟ್ಟಲೆಯಾದರೂ ತಿಲಾಂಶವಾದರೂ ಗುಣ ಕಾಣದಿದ್ದ ರೋಗವು ಹೀಗೆ ಒಂದೇ ಹಗಲಿನಲ್ಲಿ ಗುಣವಾಗಬೇಕಾದರೆ ಅದು ಪವಾಡ ಶಕ್ತಿಯಲ್ಲದೆ ಬೇರೇನು ?

ಇಂತಹ ಮಹಾತ್ಮರು ತಾವಾಗಿಯೇ ಯಾದವಪುರಿಗೆ ಬಂದುದು ಪೊಯ್ಸಳ ರಾಜ್ಯದ ಪ್ರಜೆಗಳ ಏಳಿಗೆಯ ಮುನ್ಸೂಚನೆ.

ಚೋಳರಾಜರಿಂದ ಕಿರುಕುಳಗೊಂಡು ಅಪಮಾನಿತರಾದ ಈ ಆಚಾರ್ಯರ ಮಹಿಮೆಯಿಂದ ನಮ್ಮ ಮಹಾರಾಜರೂ ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸಿ ಪೊಯ್ಸಳ ಮಹಾಸಾಮ್ರಾಜ್ಯವನ್ನು ಸ್ಥಾಪಿಸುವರೆಂಬುದರಲ್ಲಿ ಸಂಶಯವೇ ಇಲ್ಲ.

ಹಾಗಿದ್ದರೆ ಇನ್ನು ಮೇಲೆ ನಾಡಿನಲ್ಲೆಲ್ಲ ಇತೋಪ್ಯತಿಶಯವಾದ ಸುಖ ಸಂಪದಗಳು ಎಲ್ಲರಿಗೂ ಸುಲಭವಾಗಿ ದೊರಕುವ ವಸ್ತುಗಳಾಗುತ್ತವೆ.

ಆಶ್ಚರ್ಯವೆಂದರೆ ಇದಕ್ಕಿಂತ ಆಶ್ಚರ್ಯವಿನ್ನಿಲ್ಲ. ಇದೇನು ಇಂದ್ರಜಾಲವೋ ಇಲ್ಲವೆ ಜಾತ್ರೆಗಳಲ್ಲಿ ಜರುಗುವ ಮೋಡಿಯೋ ಆ ದೇವರೇ ಬಲ್ಲ.

ಆದರೂ ಕೇಳಿದರೆ ರೋಮಾಂಚನವಾಗುತ್ತದೆ. ಯಾರಿಗುಂಟು ಯಾರಿಗಿಲ್ಲ. ಎರಡು ಸಹಸ್ರ ಗದ್ಯಾಣಗಳು ! ತೊರೆ ಪಕ್ಕದ ಪ್ರಶಸ್ಥವಾದ ಮೂರು ನೂರು ಗುಂಟೆ ಭೂಮಿ !

ದಾಸಯ್ಯನಾಗಿ ಬಂದವನನ್ನು ಭಾಗ್ಯಲಕ್ಷ್ಮಿಯೇ ಕುಲ ವಧುವಿನಂತೆ ಕೈ ಹಿಡಿದ ಹಾಗಾಯಿತು.

ಈ ಬಗೆಯ ಲೋಕಾಭಿರಾಮವಾದ ಮತ್ತು ಇನ್ನೂ ಅನೇಕ ಬಗೆಯ ಚಿತ್ರ ವಿಚಿತ್ರವಾದ ಮಾತುಗಳು ಕ್ಷಣಾರ್ಧದಲ್ಲಿ ಆಗಲೇ ಯಾದವಪುರದ ಮನೆ ಮನೆಯಲ್ಲಿ, ಬೀದಿ ಬೀದಿಯಲ್ಲಿ ಜರುಗತೊಡಗಿದ್ದವು.

ಹಿಂದಿನ ದಿನ ಆಚಾರ್ಯರು ಯಾದವಪುರಕ್ಕೆ ಬಿಜಯ ಮಾಡಿಸಿದಾಗ ಅವರ ಧೀರ ಗಂಭೀರ ವ್ಯಕ್ತಿತ್ವವನ್ನು ಕಂಡ ಜನ, ಅವರ ಕಡೆ ಆಕರ್ಷಿತರಾಗಿದ್ದರೂ ಯಾವ ಆಸಕ್ತಿಯನ್ನೂ ಅವರ ಬಗೆಗೆ ತೋರಿಸಿರಲಿಲ್ಲ. ಅವರ ಮುಖದಲ್ಲಿನ ಅಲೌಕಿಕವಾದ ತೇಜಸ್ಸನ್ನು ಕಂಡು ಅಂತರಂಗದಲ್ಲಿ ಮೆಚ್ಚಿಕೆ ಮೂಡಿದ್ದರೂ ಯಾರೋ ನಿಷ್ಠಾವಂತರಿರಬೇಕು ಎಂದುಕೊಂಡು, ತಮ್ಮ ಸ್ವಕೀಯ ಕೆಲಸಗಳಲ್ಲಿ ಪ್ರವೃತ್ತರಾಗಿದ್ದರೇ ವಿನಾ, ಏನನ್ನೂ ವಿಚಾರಿಸುವ ಗೊಡವೆಗೇ ಹೋಗಿರಲಿಲ್ಲ.

ಅಂತೂ ಅಂದು ಅರಮನೆಯಿಂದ ಹಿಂತಿರುಗುವ ಆಚಾರ್ಯರನ್ನು ಕಣ್ತುಂಬ ನೋಡಿ ಆನಂದ ಪಡಬೇಕೆಂಬ ಅಭಿಲಾಷೆಯಿಂದ, ಅವರ ಬಗೆಗೆ ತಮ್ಮಲ್ಲಿ ಇದ್ದಕ್ಕಿದ್ದ ಹಾಗೆಯೇ ಉತ್ಪನ್ನವಾಗಿರುವ ಶ್ರದ್ಧಾ ಭಕ್ತಿಗಳ ಸಾಕ್ಷ್ಯವನ್ನು ಅವರು ಬಂದಾಗ ವಂದಿಸಿ, ಬಾಗಿ, ಮುಗುಳ್ನಗೆ ಸೂಸಿ, ಕೆನ್ನೆ ಬಡಿದುಕೊಂಡು, ಚಪ್ಪಾಳೆ ತಟ್ಟಿ ತೋರಿಸಬೇಕೆಂಬ ಅಭಿಲಾಷೆಯಿಂದ ಪ್ರಮುಖ ರಾಜಬೀದಿಯ ಇಕ್ಕೆಲಗಳ ಮನೆಗಳ, ಜಗುಲಿಗಳ ಮೇಲೆಲ್ಲಾ ಜನಸಾಮಾನ್ಯರ ಸಂದಣಿಯಿಂದ ತುಂಬಿತ್ತು.

ಅತ್ತ, ಪುರದ ಪ್ರಮುಖರು, ಗಣ್ಯರು, ಪ್ರತಿಷ್ಠಿತರು, ಹಣವಂತರು, ವಿದ್ಯಾವಂತರು ಆಚಾರ್ಯರನ್ನು ಸಂದರ್ಶಿಸಿ, ಅವರೊಡನೆ ಸಂಪರ್ಕ ಸಂಭಾಷಣೆ ಬೆಳೆಸಬೇಕೆಂಬ ಕುತೂಹಲದಿಂದ, ದೂರದ ಯಾವುದೋ ಆಸೆಯಿಂದ, ನರಸಿಂಹಸ್ವಾಮಿಯ ದೇವಸ್ಥಾನದ ಪ್ರಾಕಾರದಲ್ಲಿ ಸೇರಿದ್ದರು.

ರಾಜಪ್ರಾಸಾದದ ಭಿಕ್ಷೆ ಮುಗಿದ ಮೇಲೆ ಆಚಾರ್ಯರು ಸ್ವಲ್ಪ ವಿಶ್ರಾಂತಿಯನ್ನು ಪಡೆದು ಇಳಿಸಂಜೆಯ ಹೊತ್ತಿನಲ್ಲಿ ಅರಮನೆಯಿಂದ ಪಲ್ಲಕ್ಕಿಯಲ್ಲಿ ಸಕಲ ಮರ್ಯಾದೆಗಳೊಡನೆ ಹೊರಬಿದ್ದರು.

ಯಾವ ಪೂರ್ವಸಿದ್ಧತೆಯೂ ಇಲ್ಲದಿದ್ದರೂ ಆಚಾರ್ಯರಿಗೆ ಮಹತ್ತರವಾದ ಪ್ರಜಾ ಗೌರವ ಸಂದಾಯವಾಯಿತು. ಎಷ್ಟೋ ಮನೆಗಳ ಮುಂದೆ ಸಾರಿಸಿ ಚಿತ್ರವಿಚಿತ್ರವಾದ ರೀತಿಯಲ್ಲಿ ರಂಗೋಲಿಗಳನ್ನು ಹಾಕಿ ಅಲಂಕರಿಸಿದ್ದರು; ಮಾವಿನ ತೋರಣಗಳನ್ನೂ ಸಹ ಕಟ್ಟಿದ್ದರು.

ಜನರಿಂದ ಬಂದ ಹರ್ಷೋದ್ಗಾರವನ್ನು ಕೇಳಿ, ಅವರು ತೋರಿಸುವ ಶ್ರದ್ಧೆಯನ್ನು ನೋಡಿ ಆಚಾರ್ಯರ ಹೃದಯ ತುಂಬಿ ಬಂತು. ಬಹುಶಃ ಅವರ ಇಡೀ ಜೀವಮಾನದಲ್ಲಿ, ಇಂತಹ ಒಂದು ಅನಿರೀಕ್ಷಿತ ರೀತಿಯ, ಕೃತಕೃತ್ಯತೆಯ ಆನಂದವನ್ನು ಪಡೆಯುತ್ತಿರುವುದು ಇದೇ ಮೊದಲನೆಯದೇನೋ ಎನ್ನುವ ರೀತಿಯಲ್ಲಿ, ಆ ಆನಂದವು ಮಹಾಪೂರದ ಹಾಗೆ ಅವರ ಹೃದಯವನ್ನು ತುಂಬಿ ಕಣ್ಣಿಂದ ಆನಂದಬಾಷ್ಪವಾಗಿ ಉಕ್ಕಿಬಂತು. ಅವರು ಮುಗಿದ ಕೈಯನ್ನು ಬಿಚ್ಚಲೇ ಇಲ್ಲ. ಆ ಪ್ರವಾಹವನ್ನು ತಡೆಯಲಾಗದೆ ಕಡೆಗೆ ಮುಚ್ಚಿದ ಚವಲಮ್ಬುವನ್ನು ಅವರು ತೆರೆಯಲೇ ಇಲ್ಲ.

ಊರಿನ ಹೊರವಲಯದಲ್ಲಿ ದೇವಸ್ಥಾನವಿದ್ದುದು ಒಂದು ರೀತಿಯಲ್ಲಿ ಅವರಿಗೆ ಹಿತಕರವಾಗಿತ್ತೆನ್ನಬೇಕು. ಏಕೆಂದರೆ ಅಲ್ಲಿ ಅವರು ಏಕಾಂತವಾಗಿ ಇರಲು ಅನುಕೂಲವಿತ್ತು. ಅಲ್ಲಿಗೆ ಹೋಗಿ ಸೇರಿದ ಮೇಲೆ, ಆನಂದಾನುಭವದ ಈ ಮಹಾಪೂರದ ಒತ್ತಡದಿಂದ ನಿವೃತ್ತಿ ಪಡೆಯಲು ಸಾಧ್ಯವಾದೀತೆಂದು ಅವರು ಭಾವಿಸಿದ್ದರು.

ಆಚಾರ್ಯರ ಅಂತರಂಗ ನಿಜವಾಗಿ ಏಕಾಂತತೆಯನ್ನು ಬಯಸುತ್ತಿತ್ತು. ಎಲ್ಲರೂ ಹೊರಟುಹೋದ ಮೇಲೆ ಅವರು ತಮ್ಮ ವಾಸಕ್ಕೆಂದು ಅನುವಾಗಿಸಿಕೊಂಡು ತೆರೆ ಕಟ್ಟಿ ಮರೆಮಾಡಿದ್ದ ಮಂಟಪಕ್ಕೆ ಹೋಗ ಬೇಕೆಂದು ಹೆಜ್ಜೆ ಹಾಕಿದರು. ಮಂಟಪದ ಮೆಟ್ಟಿಲನ್ನು ಹತ್ತಬೇಕೆಂದು ಅವರು ತಮ್ಮ ಬಲಗಾಲನ್ನು ಎತ್ತಿದ್ದರು. ಆಗ ಪಕ್ಕದಲ್ಲಿದ್ದ ನಡುವಯಸ್ಸಿನ ಒಬ್ಬಾತ ಕೈ ಮುಗಿದ. ಆಚಾರ್ಯರು ಮೌನವಾಗಿ ಅಭಯಹಸ್ತವನ್ನು ತೋರಿಸಿ ಮುಗುಳುನಕ್ಕರು. ಆಮೇಲೆ ಎರಡು ಮೂರು ಮೆಟ್ಟಿಲುಗಳನ್ನು ಹತ್ತಿ ಹೋದರು. ಥಟ್ಟನೆ ಅಲ್ಲಿಯೇ ನಿಂತರು. ಹಿಂತಿರುಗಿ ಕೈ ಮುಗಿದಾತನನ್ನು ನೋಡಿದರು. ಆತ ಹಾಗೆಯೇ ನಿಂತಿದ್ದ. ಮೆಟ್ಟಿಲುಗಳನ್ನು ಇಳಿದು ಮತ್ತೆ ಆತನ ಬಳಿಗೆ ಬಂದರು. ಒಂದು ಕ್ಷಣ ಆತನನ್ನು ದೃಷ್ಟಿಸಿ ನೋಡಿದರು.

ಮಂಟಪದ ಗೋಡೆಯ ಮೂಲೆಯಲ್ಲಿನ ಒಂದು ಗೂಡಿನಲ್ಲಿ ಉರಿಯುತ್ತಿದ್ದ ಪ್ರಣತೆಯ ಮಂದಪ್ರಕಾಶ ಆತನ ಮುಖದ ಮೇಲೆ ತುಸು ಬಿದ್ದಿತ್ತು.

“ನೀವು ಯಾರು ?’’ ಎಂದು ಆಚಾರ್ಯರು ಕೇಳಿದರು.

“ನಾನು ಬಹುವಚನಕ್ಕೆ ಯೋಗ್ಯನಲ್ಲ.’’

“ನಿಮ್ಮ ಮಾತೇ ನಿಮ್ಮ ಯೋಗ್ಯತೆಗೆ ಸಾಕ್ಷಿ. ಇರಲಿ. ನೀವು ಯಾರು ?’’

“ನಾನೊಬ್ಬ ಯಾತ್ರಿಕ.’’

“ಎಲ್ಲರೂ ಯಾತ್ರಿಕರೇ ! ಆ ಪರಮಾತ್ಮನ ಆದೇಶದಂತೆ ಯಾತ್ರೆ ಹೊರಟು, ಈ ಭೂಲೋಕಕ್ಕೆ ಬಂದಿದ್ದೇವೆ.’’

“ಜ್ಞಾನಿಗಳ ಬಾಯಲ್ಲಿ ಬರುವ ಮಾತಿಗೆ ನಮ್ಮಂತಹ ಮರುಳರು ಏನು ತಾನೆ ಉತ್ತರ ಕೊಡಲು ಸಾಧ್ಯ ?’’

“ಹಾಗಾದರೆ ಮರುಳರಿಗೆ–ಜ್ಞಾನಿಗಳಿಗೆ ವ್ಯತ್ಯಾಸವೇನೆಂಬುದನ್ನು ನೀವು ಹೇಳಬಲ್ಲಿರಾ?’’

“ನಾನು ಅಜ್ಞ. ಈ ಜಿಜ್ಞಾಸೆಗೆ ನನ್ನಲ್ಲಿ ಸಾಮರ್ಥ್ಯವಿಲ್ಲ. ಸಾಧಿಸಬೇಕಾದುದಿರುವವರಿಗೆ, ಸಾಧಿಸಬೇಕೆಂದಿರುವವರಿಗೆ ಅದು ಪ್ರಕೃತ. ನಮ್ಮಂತಹವರಿಗೆ.....’’

“ಮಾನವರೆಲ್ಲರೂ ಒಂದೇ ! ನಿಮ್ಮಂತಹವರು, ನಮ್ಮಂತಹವರು, ಇವರಂತಹವರು ಎಂಬ ಭೇದ ಸಲ್ಲದು. ಎಲ್ಲರೂ ಆ ಪರಮಾತ್ಮನ ದೃಷ್ಟಿಯಲ್ಲಿ ಒಂದೇ. ಅವನ ಸೃಷ್ಟಿಜಾಲದಲ್ಲಿ ಈ ಭೂಮಿಯ ಮೇಲಿರುವ ಎಲ್ಲ ಜೀವರಾಶಿಗಳೂ ಕರ್ತವ್ಯ ಪರವಾಗಿರಬೇಕು. ಕರ್ತವ್ಯ ವಿಮುಖರಾದವರು ಪರಮಾತ್ಮನ ಆಗ್ರಹಕ್ಕೆ ಪಾತ್ರರಾಗುತ್ತಾರೆ.’’

“ಅಂದರೆ ?’’

“ಹಿಂಜರಿಯುವವರೆಲ್ಲ ಕರ್ತವ್ಯವಿಮುಖರು.’’

“ಸತ್ಯವನ್ನು ಹೇಳಿದರೆ ಹಿಂಜರಿದಂತೇನು ?’’

“ಇದೀಗ ಧೀರ ಪ್ರಶ್ನೆ. ಈ ಪ್ರಶ್ನೆಯನ್ನು ಹಾಕುವ ಕೆಚ್ಚು ನಿಮ್ಮಲ್ಲಿ ತಲೆ ಎತ್ತಿರುವುದರಿಂದ ಇನ್ನು ಮುಂದೆ ನಿಮ್ಮ ಮನಸ್ಸು ಸರಿಯಾದ ದಾರಿಯನ್ನು ಹಿಡಿಯುತ್ತದೆ. ಇದುವರೆಗೆ ದುಃಖದ ಅಥವಾ ಜಿಹಾಸೆಯ ಕಾರಣವಾಗಿ ಯಾವುದೋ ಮಂಕು ನಿಮ್ಮನ್ನು ಕವಿದಿತ್ತು. ಈಗ ಅದು ಚದುರಿತು. ಈ ಸಂದರ್ಭದಲ್ಲಿ ನೀವು ಒಂದು ಮಾತನ್ನು ನೆನಪಿನಲ್ಲಿಟ್ಟುಕೊಳ್ಳಬೇಕಾದುದು ಅವಶ್ಯಕ. ಅದು ಸತ್ಯವನ್ನು ಮುಚ್ಚಿಟ್ಟರೆ ಅಥವಾ ಸತ್ಯದ ತಿಳಿವಿಲ್ಲದಿದ್ದರೆ, ನಾವು ಈಗ ಹೇಳಿದುದೆಲ್ಲ ಅನುಭವವಾಗುತ್ತದೆ ಎಂಬುದು. ಅದರ ತಾಪ ನೋವುಗಳು ಮಂಕು ಕವಿಸುತ್ತವೆ. ಮರುಳರೆಂಬಂತೆ ಆಡಿಸುತ್ತವೆ. ಆದರೆ ಸತ್ಯದ ನೆಲೆ, ಗಟ್ಟಿಯಾದಾಗ ತನ್ನ ಸಾಮರ್ಥ್ಯದ ತಿಳಿವು ತನಗೆ ಉಂಟಾಗುತ್ತದೆ. ಆ ತನ್ನತನದ ಸಂಪೂರ್ಣ ತಿಳಿವು ಬಂದಾಗ ಅವನನ್ನು ಜ್ಞಾನಿ ಎನ್ನುತ್ತಾರೆ. ಇದೊಂದು ವಿಪರೀತಾರ್ಥವೆನ್ನಿಸಬಹುದು. ಆದರೂ ಇದು ಅನುಭವ ಸಿದ್ಧಾಂತ. ನಮ್ಮ ಈ ಮಾತುಗಳನ್ನು ನೀವು ನಿಮ್ಮ ಸ್ವಂತ ಜೀವನದಲ್ಲಿ ಅನುಭವಿಸಿದುದಕ್ಕೆ ಅನ್ವಯಿಸಿಕೊಂಡು, ವಿಚಾರಶೀಲವಾದ ವಿಮರ್ಶೆ ಮಾಡಿಕೊಳ್ಳಿ. ಆಗ ಜ್ಞಾನಿಯಾದವನೂ ಈ ಕಾರಣಗಳಿಂದ, ಸತ್ಯದ ನೆಲೆ ಕಾಣದೆ, ಮರುಳನಂತೆ ಆಡಬಹುದು–ಆಡುತ್ತಾನೆ ಎಂಬುದು ನಿಮಗೆ ಗೋಚರವಾಗುತ್ತದೆ. ಆದರೆ ಆ ಮರುಳತನ ಹೋಗಬೇಕಾದರೆ ಮತ್ತೆ ಅದೇ ಸತ್ಯದ ಅವಲಂಬನ ಬೇಕು. ತಿಳಿಯಿತೆ ?’’

“ಬೆಳಕು ಮೂಡಿದಂತಾಯಿತು. ಹೆಚ್ಚು ತಿಳಿಯಲು ಇದರಿಂದ ಪ್ರಯತ್ನಿಸಬಹುದೆಂದು ತೋರುತ್ತದೆ.”

“ಆ ಪ್ರಯತ್ನಶೀಲತೆಯೇ ಗುರಿ ಮುಟ್ಟಲು ಮುಖ್ಯವಾದ ಸಾಧನಮಾರ್ಗ. ಈಗ ಹೇಳಿ ನೀವು ಯಾರು ?”

“ಒಬ್ಬ ಯಾತ್ರಿಕ.”

“ಇನ್ನೂ ಆ ಮನಸ್ಸಿನ ತುಯ್ಯಲಾಟ ಹೋಗಿಲ್ಲ. ಹೋಗುತ್ತದೆ. ಅದಿರಲಿ ನಿಮ್ಮ ವೃತ್ತಿ?”

“ರೂವಾರಿ.”

“ದೇವರನ್ನೇ ಸೃಷ್ಟಿಸುವವರು.”

“ತುಂಬ ದೊಡ್ಡಮಾತು. ದೊಡ್ಡವರ ಬಾಯಿಂದ ಸಣ್ಣಮಾತು ಎಂದಾದರೂ ಬಂದೀತೆ?”

“ಇಲ್ಲಿಗೆ ಎಂದು ಬಂದಿರಿ ?”

“ಇಂದೇ. ಈಗ ಕೆಲವು ಗಳಿಗೆಗಳ ಮುಂಚೆ.”

“ಎಲ್ಲಿಂದ ?”

“ದೊಡ್ಡ ಗದ್ದುವಳ್ಳಿಯಿಂದ.”

“ನೀವು ಅಲ್ಲಿಯವರೆ ?”

“ಅಲ್ಲ.”

“ಮತ್ತೆ?”

“ಅಲ್ಲಿಯೇ ಸ್ವಲ್ಪ ದಿವಸ ಇರಬೇಕಾಗಿ ಬಂತು.”

“ದೇವಸ್ಥಾನದ ಕೆಲಸದಲ್ಲಿಯೇ ?”

“ಹೌದು.”

“ಮುಗಿಯಿತೇ ?”

“ಮುಗಿಯಿತು.”

“ಯಾವ ದೇವಸ್ಥಾನ ?”

“ಲಕ್ಷ್ಮೀದೇವಿಯದು.”

“ಆ ದೇವಸ್ಥಾನದ ಸ್ಥಪತಿ ನೀವೇ ಏನು ?”

“ಅಲ್ಲ. ‘ವಿಶ್ವಕರ್ಮ ನಿರ್ಮಿತ ಸುಭಾಸಿತ’ರೆಂದು ಬಿರುದು ಪಡೆದ ಮಲ್ಲೋಜರ ಮಾಣಿಯೋಜರು ಅದರ ಸ್ಥಪತಿಗಳು. ನಾನೊಬ್ಬ ಸಣ್ಣ ರೂವಾರಿ. ಮಹಾದ್ವಾರದ ಕೆಲಸವನ್ನು ನನಗೆ ವಹಿಸಲಾಗಿತ್ತು.”

“ಅಷ್ಟೇಯೋ ?”

“ಎಂಟು ಕೈಗಳ ಕಾಳಿಯ ವಿಗ್ರಹ ಮತ್ತು ಆ ದೇವಿಯ ಗರ್ಭಗೃಹದ ಮುಂದಿನ ಬೇತಾಳ ಸಮೂಹದ ಸುಕನಾಸಿಯ ಕೆಲಸವನ್ನೂ ನನಗೆ ವಹಿಸಿದ್ದರು.”

“ಇವುಗಳಲ್ಲಿ ಯಾವ ಕೆಲಸ ಮಾಡಿದಾಗ ನಿಮ್ಮ ಮನಸ್ಸಿಗೆ ಹೆಚ್ಚು ಪ್ರೀತಿಯೆನಿಸಿತು.”

“ದ್ವಾರಸ್ತಂಭದಲ್ಲಿನ ನಗ್ನತೆ, ಬೇತಾಳಗಳಲ್ಲಿನ ಆಸ್ತಿಪಂಜರದ ಬೀಭತ್ಸತೆ, ಕಾಳಿಯಲ್ಲಿಯ ಭಯಾನಕ ಉಗ್ರತ್ವ, ಈ ಮೂರರಲ್ಲಿ ಯಾವುದೂ ಪ್ರಿಯವೆನಿಸುವುದಿಲ್ಲ.”

“ಹಾಗಾದರೆ ಅಪ್ರಿಯವೆನಿಸಿದ ಕೆಲಸವನ್ನು ಮಾಡಿದಿರಾ ?”

ಯಾತ್ರಿಕನು ತುಸು ಅಪ್ರತಿಭನಾದ. ಉತ್ತರ ಕೊಡಲು ಅವನು ಸಮಂಜಸವಾದ ಮಾತನ್ನು ಹುಡುಕಬೇಕಾಗಿತ್ತೇನೋ. ಜೊತೆಗೆ ತನ್ನ ಮನಸ್ಸನ್ನು ಸಹ ಅವನು ಅಂಕೆಯಲ್ಲಿಟ್ಟುಕೊಳ್ಳಬೇಕಾದ ಅವಶ್ಯಕತೆಯಿತ್ತೇನೋ. ಕ್ಷಣ ಕಾಲ ಮೌನವಾಗಿ ಆಚಾರ್ಯರನ್ನು ನೋಡಿದ. ಆಮೇಲೆ, “ಛೇ, ಛೆ. ಹಾಗಲ್ಲ. ಕುಸುರಿಯ ಕೆಲಸವೆಲ್ಲ ಒಂದೇ. ಕಲೆಯಲ್ಲಿ ಇದು ಪ್ರಿಯ, ಅದು ಅಪ್ರಿಯ, ಇದು ಹೆಚ್ಚು ಪ್ರಿಯ, ಅದು ಕಡಿಮೆ ಪ್ರಿಯ ಎಂಬ ಭೇದವಿಲ್ಲ. ಭಾವ ಏನೇ ಇರಲಿ, ಕಲೆಯಲ್ಲಿ ಶಾಶ್ವತಾನಂದವನ್ನು ರೂಪಿಸಬೇಕು. ಅದೂ ಅಲ್ಲದೆ, ಕಲಾಕೃತಿಯಲ್ಲಿ ಹೊಮ್ಮಬೇಕಾದ ಭಾವವು ಕಲೆಗಾರನನ್ನು ಆವರಿಸಬಾರದು. ಆವರಿಸದಿದ್ದರೆ ವಾಸಿ.”

“ಅಂದರೆ ನಿಮ್ಮನ್ನು ಅದು ಆವರಿಸಿತ್ತೆ ?” ಯಾತ್ರಿಕ ಮೌನವಾಗಿ ತಲೆ ಬಾಗಿಸಿ ನಿಂತಿದ್ದ. ಯಾವ ಉತ್ತರವನ್ನೂ ಕೊಡುವ ಪ್ರಯತ್ನವನ್ನು ಅವನು ಮಾಡುವಂತೆ ತೋರಲಿಲ್ಲ. ಆಚಾರ್ಯರು ಅವನನ್ನು ನೋಡಿದರು. “ಅದಿರಲಿ ನೋಡುವವರು ಇದು ಅದಕ್ಕಿಂತ ಚೆನ್ನ ಎನ್ನುತ್ತಾರೆಯಲ್ಲ.”

“ನೋಡುವುದು ಕಣ್ಣು. ಅದು ಸ್ವಭಾವತಃ ಚಂಚಲವಾದುದು. ಅದೂ ಅಲ್ಲದೆ ನೋಡುವ ವ್ಯಕ್ತಿಯ ರುಚಿಯೂ ಸಹ, ವೈಯಕ್ತಿಕ ಚಾಪಲ್ಯಕ್ಕೆ ಶರಣಾಗಿರುತ್ತದೆ. ಆದರೆ ಮಾಡುವುದು ಕೈಯಿ. ಅದು ಸ್ಥಿರವಾಗಿಲ್ಲದೆ ವೈಯಕ್ತಿಕ ಚಾಪಲ್ಯಕ್ಕೆ ಶರಣಾಗಿ ಚಂಚಲವಾದರೆ, ಕೆತ್ತನೆಯ ಕೆಲಸ ಸಾಧ್ಯವೇ ಇಲ್ಲ. ಕಲೆಯನ್ನು ಸಾಧಿಸುವವನಿಗೆ ಸ್ಥಿರತೆ ಇರಬೇಕು; ಏಕಾಗ್ರತೆ ಇರಬೇಕು; ನಿರ್ಭಯತೆ ಇರಬೇಕು. ಆದರೆ ಕಲೆಯ ಸವಿಯನ್ನು ಅನುಭವಿಸುವ ವೀಕ್ಷಕನೊಂದು ವೇಳೆ ಚಂಚಲನಾದರೂ ತಡೆಯುತ್ತದೆ. ಏಕೆಂದರೆ ಅಂತಹ ಚಂಚಲತೆಯಿಂದ ಅವನ ಸ್ವಂತ ಕಲಾಸ್ವಾದನೆ ರುಚಿಗೆಡುತ್ತದೆಯೇ ವಿನಾ, ಅದರಿಂದ ಕಲೆಗೆ ಏನೂ ಕುಂದಾಗುವುದಿಲ್ಲ. ಆದರೆ ಕಲಾವಿದನ ಕೈ ಭಯಕಂಪಿತವಾದರೆ, ಚಂಚಲವಾದರೆ ಮಾತ್ರ ಖಂಡಿತವಾಗಿ ಕಲೆಯು ಕೆಡುತ್ತದೆ.”

“ಕಲೆಯ ವಿಷಯದಲ್ಲಿ ನೀವು ಅನೇಕ ಸಿದ್ಧಾಂತಗಳನ್ನು ಅನುಭವದಿಂದ ತಿಳಿದ ಹಾಗೆ ಕಾಣುತ್ತದೆ.”

“ಸಿದ್ಧಾಂತಗಳು ಏನೇ ಇರಲಿ ಅನುಭವ ಮಾತ್ರ ಕಟುವಾದುದು.” ಆ ಯಾತ್ರಿಕ ಈ ಮಾತನ್ನೇನೋ ಆಡಿಬಿಟ್ಟಿದ್ದ. ಮತ್ತು ಒಡನೆಯೇ ಸ್ತಬ್ಧನಾಗಿ ಬಿಟ್ಟಿದ್ದ. ಅವನ ಕಣ್ಣಲ್ಲಿ ಇದ್ದಕ್ಕಿದ್ದ ಹಾಗೆಯೇ ನೀರು ಚಿಮ್ಮಿತು. ಅದನ್ನು ತಡೆಯಲು ಅವನಿಂದ ಸಾಧ್ಯವಾಗಲಿಲ್ಲ. ಹಾಗೆಯೇ ತಲೆ ತಗ್ಗಿಸಿದ.

ಆಚಾರ್ಯರು ಅದನ್ನು ಗಮನಿಸಿದರು. ಈಗ ಹೆಚ್ಚು ಕೆದಕಿದರೆ ಅಂತರಂಗದೊಳಗಿನ ಕಹಿ ನೆನಪಿನ ಜ್ವಾಲಾಮುಖಿ ಭುಗಿಲ್ಲೆಂದೀತೆಂದು ಭಾವಿಸಿದರು. ಮಾತಿನ ಧಾಟಿಯನ್ನೇ ತಿರುಗಿಸಿದರು. "ಹೇಗೂ ನೀವು ಯಾತ್ರಿಕರಲ್ಲವೆ ? ಅಂದಮೇಲೆ ಈ ರಾತ್ರಿಯನ್ನು ನೀವು ಇಲ್ಲಿಯೇ ಕಳೆಯಬಹುದಲ್ಲ. ನಮ್ಮ ಶಿಷ್ಯರು ನಿಮ್ಮ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಾರೆ. ನಿಮ್ಮನ್ನು ಯಾವುದೋ ಸಂಕಟ ನುಂಗುತ್ತಿದೆ. ಅದಕ್ಕೆ ಉಪಶಾಂತಿ ಆಗಬೇಕು. ನಾಳೆ ವಿಷಯವೇನೆಂದು ತಿಳಿದು ವಿಚಾರ ಮಾಡೋಣ. ಬನ್ನಿ, ಮೇಲಕ್ಕೆ ಬನ್ನಿ'' ಎಂದು ಹೇಳಿ ಆಚಾರ್ಯರು ಮೆಟ್ಟಿಲುಗಳನ್ನು ಹತ್ತಿ ಮಂಟಪದ ತೆರೆಯ ಬಳಿಗೆ ಸಾರಿದರು.

ಯಾತ್ರಿಕನೂ ಯಾಂತ್ರಿಕವಾಗಿ ಅವರನ್ನು ಹಿಂಬಾಲಿಸಿದ.

ತೆರೆಯ ಬದಿಯಲ್ಲಿ ನಿಂತು ಆಚಾರ್ಯರು ಒಂದು ಬದಿಗೆ ಕೈ ಮಾಡಿ ತೋರಿಸಿ, "ನೀವು ಇಲ್ಲಿ ಮಾರ್ಗಾಯಾಸವನ್ನು ಪರಿಹರಿಸಿಕೊಳ್ಳಿ. ಬೇಗಲೆ ನಮ್ಮ ಶಿಷ್ಯರನ್ನು ನಿಮ್ಮ ಬಳಿಗೆ ಕಳಿಸುತ್ತೇವೆ'' ಎಂದು ಹೇಳಿ ತಾವು ತೆರೆಯ ಒಳಕ್ಕೆ ಹೋದರು.

ಯಾತ್ರಿಕ ಬಗಲಿನ ಮಂಟಪದಲ್ಲಿ ಹೆಗಲ ಮೇಲಿದ್ದ ಕೈ ಚೀಲವನ್ನು ಇಳಿಸಿ ಕಂಭಕ್ಕೆ ಒರಗಿಕೊಂಡು ಕಾಲುಚಾಚಿ ಕುಳಿತುಕೊಂಡ.

ಒಳಕ್ಕೆ ಬಂದ ಆಚಾರ್ಯರು ತಮ್ಮಿಬ್ಬರು ಪ್ರಧಾನ ಶಿಷ್ಯರನ್ನು ಕರೆದು ಮೆದುವಾಗಿ ಹೇಳಿದರು:

"ಎಂಬಾರ್, ಅಚ್ಚಾನ್, ಬದಿಯ ಮಂಟಪದಲ್ಲಿ ವಿಶ್ರಾಂತಿಯನ್ನು ಪಡೆಯುತ್ತಿರುವವರು ಬಹಳ ಉತ್ತಮ ರೂವಾರಿಗಳು. ಕಲಾವಿದರು. ಏನೋ ನೋವನ್ನುಂಡು ಸುಮ್ಮನೆ ಗೊತ್ತುಗುರಿಯಿಲ್ಲದೆ ಸಂಚಾರ ಮಾಡುತ್ತಿರುವ ಹಾಗೆ ಕಾಣುತ್ತಿದೆ. ಅವರನ್ನು ನೀವು ಎಚ್ಚರಿಕೆಯಿಂದ ನೋಡಿಕೊಳ್ಳಿ. ಅವರ ನೋವಿನ ವಿಷಯವನ್ನು ನೀವು ಕೆದಕಿ ಕೇಳಲು ಹೋಗಬೇಡಿ. ಆಮೇಲೆ ಅದರಿಂದ ಅದೆಂತಹ ಪ್ರತಿಕ್ರಿಯೆಯಾದೀತೆಂದು ಹೇಳಲು ಸಾಧ್ಯವಿಲ್ಲ. ಅವರ ಮನಸ್ಸನ್ನು ನಾವು ಈಗ ಒಂದು ರೀತಿಯಲ್ಲಿ ಅರ್ಥ ಮಾಡಿಕೊಂಡಿದ್ದೇವೆ. ಅದು ನಿಜವಾದರೆ ಅವರ ಚಿತ್ತವೃತ್ತಿ ಅತಿ ಸೂಕ್ಷ್ಮವಾದುದು. ಒಂದು ತರಹ ಎಟ್ಟತನ ಅವರಲ್ಲಿ ಮನೆ ಮಾಡಿಕೊಂಡಿರುವಂತೆಯೂ ನಮಗೆ ತೋರಿಬಂತು. ಅದರಲ್ಲಿಯೂ ಅವರು ತಮ್ಮ ವ್ಯಕ್ತಿಗತ ಪರಿಚಯವನ್ನು ಮಾಡಿಕೊಡಲು ಹಿಂಜರಿಯುತ್ತಾರೆ. ಮೈಮರೆವಿನಿಂದ ಸಹ ಅವರು ಈ ವಿಷಯದಲ್ಲಿ ಬಾಯಿ ಬಿಡದಷ್ಟರ ಮಟ್ಟಿನ ಎಚ್ಚರಿಕೆಯನ್ನು ವಹಿಸುತ್ತಾರೆಯೆಂದು ನಮಗನ್ನಿಸಿದೆ. ಅಂತಹವರನ್ನು ತೀರ ಕೆಣಕಬಾರದು. ಅವರ ಈಗಿನ ಬಾಹ್ಯ ರೂಪ ವಸ್ತ್ರಾದಿಗಳು ಮನಸ್ಸಿಗೆ ಆಕರ್ಷಣೆಯನ್ನು ತಾರದೆ ಹೋದರೂ ಅವರ ಕಣ್ಣುಗಳನ್ನು ಸೂಕ್ಷ್ಮವಾಗಿ ನೋಡಿದ ಯಾರಿಗೇ ಆಗಲಿ ನಿಜ ಕಲಾವಿದನಲ್ಲಿ ಹೊಳೆವ ಆ ಕಲ್ಪನಾಪೂರ್ಣ ತೇಜಸ್ಸಿನ ಹೊಳವು ಕಾಣದಿರುವುದಿಲ್ಲ. ಆತನ ತೇಜಸ್ಸು ಈಗ ಆತ ಅನುಭವಿಸುತ್ತಿರುವ ನೋವಿನಿಂದ ಕುಡಿ ಕಟ್ಟಿದ ಬತ್ತಿಯ ಪ್ರಕಾಶದಂತೆ ಆಗಿದೆ. ನಾಳೆ ಬೆಳಗ್ಗೆ ನಾವೇ ಅವರನ್ನು ಸ್ವತಃ ಆ ಕುರಿತು ಪ್ರಶ್ನೆ ಮಾಡುತ್ತೇವೆ. ತಿಳಿಯಿತೆ ? ಈಗ ಅವರಿಗೆ ಏನಾದರೂ ಆಹಾರವನ್ನು ಕೊಡಿ. ಸ್ನಾನ, ಆಹ್ನಿಕಾದಿಗಳನ್ನು ಮಾಡಬಯಸಿದರೆ ಅನುಕೂಲವನ್ನು ಕಲ್ಪಿಸಿಕೊಡಿ. ಅರಮನೆಯ ಇಂದಿನ ಅಕ್ಕರೆ, ಅಲ್ಲಿಯ ಅತಿ ಯಾಂತ್ರಿಕ ಸಂಪ್ರದಾಯ, ಪಲ್ಲಕ್ಕಿಯ ಸುದೀರ್ಘ ಪ್ರಯಾಣ ಇವುಗಳ ಕಾರಣದಿಂದಾಗಿ ನಮಗೆ ಇಂದು ಹೆಚ್ಚಿನ ವಿಶ್ರಾಂತಿಯ ಅವಶ್ಯಕತೆ ಇದೆ. ನಮ್ಮ ಸಾಯಂ ಪೂಜಾದಿಗಳನ್ನು ಏಕಾಂತದಲ್ಲಿ ಮುಗಿಸಿ ನಾವು ಹಾಗೆಯೇ ವಿಶ್ರಾಂತಿಯನ್ನು ಪಡೆಯುತ್ತೇವೆ. ನಮ್ಮ ವಿಶ್ರಾಂತಿಗೆ ಯಾವ ರೀತಿಯಿಂದಲೂ ಭಂಗವಾಗದಂತೆ ನೋಡಿಕೊಳ್ಳಿ.''

ಅಚ್ಚಾನ್ ಅಗ್ರಸಾಲೆಯ ಕಡೆಗೆ ಹೋದ. ಎಂಬಾರ್ ಯಾತ್ರಿಕನ ಬಳಿಗೆ ಬಂದ.

"ಗುರುಗಳ ಅಪ್ಪಣೆಯಾಗಿದೆ. ತಾವು ಸ್ನಾನ, ಆಹ್ನಿಕಾದಿಗಳನ್ನು ಮಾಡಿ ಆಹಾರ ತೆಗೆದುಕೊಳ್ಳಬೇಕಂತೆ. ಅವರಿಗೆ ಆಯಾಸವಾಗಿರುವುದರಿಂದ ಬೆಳಿಗ್ಗೆ ಮತ್ತೆ ನೀವು ಅವರನ್ನು ಕಾಣಬಹುದು. ಈಗ ಏಳಿ."

ಏನೋ ಯಾಚನೆಯಲ್ಲಿದ್ದ ಯಾತ್ರಿಕ ಎಂಬಾರ್‌ನ ಕಡೆ ನೋಡಿದ. ಒಡನೆಯೇ ಉತ್ತರ ಕೊಡಲಿಲ್ಲ.

"ಏಕೆ ? ಏನು ಯೋಚನೆ ?" ಎಂಬಾರ್ ಪ್ರಶ್ನಿಸಿದ.

ಕ್ಷಣಕಾಲ ಸುಮ್ಮನಿದ್ದ ಯಾತ್ರಿಕ. "ಸ್ನಾನವಾಗಿದೆ" ಎಂದ.

"ಎಲ್ಲಿ ?" ಎಂದು ಎಂಬಾರ್ ಒಡನೆಯೇ ಕೇಳಿಬಿಟ್ಟ

ಯಾತ್ರಿಕ ಕ್ಷಣ ಕಾಲ ಅವನನ್ನೇ ನೋಡುತ್ತಿದ್ದ. ಬಾಯಿಂದ ಯಾವ ಮಾತನ್ನೂ ಆಡಲಿಲ್ಲ.

ಎಂಬಾರ್‌ಗೆ ಗುರುಗಳ ಮಾತು ಸ್ಮರಣೆಗೆ ಬಂತು. ತಾನು ಆ ಪ್ರಶ್ನೆಯನ್ನು ಕೇಳಬಾರದಾಗಿತ್ತೆನಿಸಿತು. ಆದರೆ ಈ ಕೆಲಸವನ್ನಾಗಲೆ ಮಾಡಿಯಾಗಿತ್ತು. ಆಗಿದ್ದ ತಪ್ಪನ್ನು ತಿದ್ದಬೇಕೆಂಬ ಅಭಿಲಾಷೆಯಿಂದ, "ನನಗೆ ಅದು ತಿಳಿದು ಏನಾಗಬೇಕಾಗಿದೆ. ಏನೋ ಸಹಜವಾಗಿ ಕೇಳಿಬಿಟ್ಟೆ ಇದು ಅಧಿಕ ಪ್ರಸಂಗ ಎಂದು ತೋರಿದರೆ ಕ್ಷಮಿಸಿಬಿಡಿ" ಎಂದ ಎಂಬಾರ್.

"ಛೇ, ಛೆ, ಇದೆಂತಹ ಮಾತು ? ಹಾಗೇನಿಲ್ಲ."

"ಸರಿ ಹಾಗಾದರೆ ಇನ್ನು ತಡವೇಕೆ. ಏಳಿ. ಅಗ್ರಸಾಲೆಗೆ ಹೋಗೋಣ."

"ಆಹಾರ ತೆಗೆದುಕೊಳ್ಳಲೇ ಬೇಕೇ ?"

"ಗುರುಗಳು ನನಗೆ ಆ ರೀತಿ ಅಪ್ಪಣೆ ಮಾಡಿದ್ದಾರೆ."

"ಸರಿ. ನಡೆಯಿರಿ."

ಇಬ್ಬರೂ ಅಗ್ರಸಾಲೆಗೆ ಹೋದರು.

ಅಚ್ಚಾನ್ ಆಗಲೆ ಮಣೆ ಹಾಕಿ ಬಾಳೆಲೆಯನ್ನು ಹರವಿ, ಕುಡಿವ ನೀರಿಟ್ಟು ಬಡಿಸಲು ಎಲ್ಲ ಸಿದ್ಧತೆಗಳನ್ನು ಮಾಡಿದ್ದ. ಆಗಂತುಕ ಕೈ–ಕಾಲುಗಳನ್ನು ತೊಳೆದುಕೊಂಡು ಮಡಿಯಲ್ಲಿ ಬಂದು ಮಣೆಯ ಮೇಲೆ ಕುಳಿತ.

ಎಂಬಾರ್ ಅಲ್ಲೇ ತುಸುದೂರದಲ್ಲಿ ಕಲ್ಲು ಕಂಭಕ್ಕೊರಗಿ ಕುಳಿತ.

"ನಿಧಾನವಾಗಿ ಆಗಲಿ. ಎಷ್ಟುದೂರದಿಂದ ಬಂದಿದ್ದೀರೋ ಏನೋ. ತುಂಬಾ ಆಯಾಸವಾಗಿರಬೇಕು. ಪಾಪ." ಎಂದ ಅಚ್ಚಾನ್ ಅನ್ನವನ್ನು ಬಡಿಸುತ್ತಾ.

"ನಿತ್ಯ ಸುತ್ತುವವರಿಗೆ ಆಯಾಸವೇನು ಬಂತು ಹೇಳಿ ?"

"ಅಂದರೆ ಸುತ್ತುವುದೇ ನಿಮ್ಮ ವೃತ್ತಿಯೆ ?"

"ಅಲ್ಲ. ಅದರೂ ಸುತ್ತುತ್ತಿದ್ದೇನೆ. ಸುತ್ತ ಬೇಕಾಗಿದೆ. ಸಧ್ಯಕ್ಕೆ ನಾನೊಬ್ಬ ಯಾತ್ರಿಕ."

ಬಡಿಸಿದ್ದು ಮುಗಿದ ನಂತರ ಪರಿಷೇಚನೆ ಮುಗಿಸಿ ಕ್ರಮವಾಗಿ ಊಟವನ್ನು ಪ್ರಾರಂಭಿಸಿದ.

“ನಿಮ್ಮ ಊರು ಯಾವುದು ?'' ತುತ್ತು ಎತ್ತಿದ ಯಾತ್ರಿಕನ ಕೈ ಹಾಗೆಯೇ ನಿಂತಿತು. ಪ್ರಶ್ನೆ ಕೇಳಿದ ಅಚ್ಚಾನ್ ಕಡೆ ಅವನು ಒಂದು ಬಗೆಯಾಗಿ ನೋಡಿದ. “ಯಾಕೆ ? ಏನಾಯಿತು ?'' ಎಂದು ಗಾಬರಿಯಿಂದ ಅಚ್ಚಾನ್ ಕೇಳಿದ.

“ಏನೂ ಇಲ್ಲ. ಏನೋ ನೆನಪಾಯಿತು. ಅಷ್ಟೆ'' ಎಂದು ಯಾತ್ರಿಕ ತುತ್ತನ್ನು ಬಾಯಲ್ಲಿಟ್ಟುಕೊಂಡ.

“ನೆನಪು ಕಹಿಯಲ್ಲ ತಾನೆ ?''

“ಅದರ ರುಚಿ ಬೇರೊಬ್ಬರಿಗೆ ಗೊತ್ತಾಗಲು ಸಾಧ್ಯವೇ ಇಲ್ಲ'' ಎಂದು ಗಡುಸಾಗಿ ಹೇಳಿದ ಯಾತ್ರಿಕ. ಗಬಗಬನೆ ಎಲೆಯಲ್ಲಿದ್ದುದನ್ನು ತಿಂದು ಮುಗಿಸಿದ.

ಆಗ ಅಚ್ಚಾನ್‌ಗೆ ಗುರುಗಳ ಮಾತು ಸ್ಮರಣೆಗೆ ಬಂತು. ತಾನು ಆಡಿದ ಮಾತು ಸರಿಯಾಯಿತೋ ಇಲ್ಲವೋ ಎಂಬ ಅನುಮಾನ ಅವನಲ್ಲಿ ಮೂಡಿತು.

ಏನು ಬಡಿಸಲಿ ? ಏನು ಬೇಕು ? ಇನ್ನು ಸ್ವಲ್ಪ ಬಡಿಸಲೆ ? ಸಂಕೋಚ ಮಾಡಿಕೊಳ್ಳಬೇಡಿ. ಅಡಿಗೆ ರುಚಿಯಾಗಿದೆ ತಾನೆ ? ಉಪ್ಪುಹುಳಿಕಾರ ಹೊಂದಿಕೊಂಡಿದೆಯೇ ? ಖಾರ ಹೆಚ್ಚಾಯಿತೂಂತ ಕಾಣಿಸುತ್ತೆ. ಎರಡು ಖಜಿಕೆ ತುಪ್ಪ ಬಿದ್ದರೆ ಸರಿಹೋಗುತ್ತದೆ. ಎಂದು ಮೊದಲಾಗಿ ಸಮಯವರಿತು ಉಪಚಾರದ ಮಾತುಗಳನ್ನು ಆಡುತ್ತಾ, ಒತ್ತಾಯದ ಹೊರೆಯನ್ನು ಉಂಬುವವರು ಅರಿಯದಿರುವಂತೆ, ಅವರ ಮನವೊಲಿಸಿಕೊಂಡು ಹೊಟ್ಟೆ ತುಂಬ ಆಹಾರವನ್ನು ಸೇವಿಸುವಂತೆ ಮಾಡುವ ಜಾಣತನ ಅಚ್ಚಾನ್‌ಗೆ ಇತ್ತು.

ಆದರೆ ಅವನು ಇದ್ದಕ್ಕಿದ್ದ ಹಾಗೆಯೆ ಮಂಕಾಗಿ ನಿಂತುಬಿಟ್ಟ

ಅಲ್ಲಿ ಕುಳಿತು ಇದನ್ನು ಕೇಳಿ ನೋಡುತ್ತಿದ್ದ ಎಂಬಾರ್, “ನೋಡು ಅಚ್ಚಾನ್, ಎಲೆ ಬರಿದಾಗಿದೆ. ಏನು ಬೇಕೋ ಕೇಳಿ ಬಡಿಸು'' ಎಂದು ಪ್ರಚೋದಿಸಿದ ಮೇಲೆ, ಅವನು ಮತ್ತೆ ತನ್ನ ಕೆಲಸದಲ್ಲಿ ತೊಡಗಿದ.

ಊಟ ಮುಗಿದ ಮೇಲೆ ಮೂವರು ಯಾತ್ರಿಕನ ಚೀಲವಿದ್ದ ಆ ಮಂಟಪಕ್ಕೆ ಬಂದು ಕುಳಿತರು. ಆಚಾರ್ಯರ ಶಿಷ್ಯರಿಬ್ಬರಿಗೂ ಯಾತ್ರಿಕನ ವಿಷಯವನ್ನು ತಿಳಿದುಕೊಳ್ಳಬೇಕೆಂಬ ಕುತೂಹಲವುಂಟಾಗಿತ್ತು. ಆದರೆ ಅದನ್ನು ತಿಳಿದುಕೊಳ್ಳುವ ಪ್ರಯತ್ನದಲ್ಲಿ ಏನಾದರೂ ಅನಾಹುತ ಪ್ರಕರಣ ಜರುಗಿಬಿಟ್ಟರೆ ಆಮೇಲೇನು ಗತಿಯೆಂಬ ಭಯವೂ ಇತ್ತು. ಏಕೆಂದರೆ ಗುರುಗಳು ಹೇಳಿದ್ದ ಎಚ್ಚರಿಕೆಯ ಮಾತುಗಳನ್ನು ಅವರು ಎಂದಿಗೂ ಮರೆಯುವಂತಿರಲಿಲ್ಲ. ಆದರೂ ತಿಳಿಯುವ ಪ್ರಯತ್ನ ಮಾಡೋಣವೇ ಬೇಡವೇ ಎಂಬ ಜಿಜ್ಞಾಸೆ ಅವರ ಮನಸ್ಸಿನಲ್ಲಿ ನಡೆದಿತ್ತು.

ಅಂತೂ ಕಡೆಗೆ ಕುತೂಹಲವೇ ಮೇಲುಗೈಯಾಯಿತು.

“ನೀವು ಬಹಳ ದೊಡ್ಡ ರೂವಾರಿಗಳಂತೆ'' ಎಂದು ರಾಗ ಎಳೆದ ಎಂಬಾರ್, ಮುಂದಿನ ಮಾತುಗಳಿಗೆ ಎಳೆ ಸಿಕ್ಕೀತೆಂಬ ಆಸಕ್ತಿಯಿಂದ.

“ರೂವಾರಿಯೆಂಬುದು ನಿಜ.''

“ಇಲ್ಲಿ ಏನಾದರೂ ದೇವಸ್ಥಾನ ಕಟ್ಟುವ ಕೆಲಸದ ಸಲುವಾಗಿ ಬಂದಿದ್ದೀರಾ ?''

“ನನ್ನನ್ನು ಕರೆಯುವವರು ಯಾರು ?''

"ಅದೇಕೆ ಹಾಗೆ ಹೇಳುತ್ತೀರಿ ?''

"ನಾನು ಯಾರೆಂಬುದು ಯಾರಿಗೂ ಗೊತ್ತೇ ಇಲ್ಲ.''

ಈ ಮಾತನ್ನು ಕೇಳಿದ ಎಂಬಾರ್‌ನ ಕಣ್ಣು ಮಿಂಚಿತು. ತನಗೆ ಬೇಕಾದ ವಿಷಯವನ್ನು ತಿಳಿಯಲು ಇದು ಭದ್ರವಾದ ಎಳೆ ಎಂದುಕೊಂಡು, "ಯಾರೆಂಬುದನ್ನು ಹೇಳಿ'' ಎಂದ.

"ಹೇಳಿ ಪ್ರಯೋಜನವೇನು ?''

"ಹೇಳಿ ನೋಡಿ. ಆಮೇಲೆ ಪ್ರಯೋಜನ ಗೊತ್ತಾಗುತ್ತದೆ.''

"ಏನು ಪ್ರಯೋಜನವೋ ಆ ದೇವರಿಗೇ ಗೊತ್ತು.''

"ಅವನ ಮೇಲೆ ಭಾರ ಹಾಕಿದರೆ ಎಲ್ಲವೂ ಸುಸೂತ್ರವಾಗಿ ನಡೆಯುತ್ತದೆ ಎಂದು ನಮ್ಮ ಗುರುಗಳು ಹೇಳುತ್ತಲೇ ಇರುತ್ತಾರೆ.''

"ಈ ಗುರುಗಳು ಯಾರು ?''

"ಅದೂ ಗೊತ್ತಿಲ್ಲವೆ ? ಗೊತ್ತಿಲ್ಲದೆ ಬಂದು ಅವರನ್ನು ಆಶ್ರಯಿಸಿದಿರಾ ?''

"ಆಶ್ರಯಿಸಿದೆ ? ನಿಮ್ಮ ಮಾತು ನನಗೆ ತಿಳಿಯಲಿಲ್ಲ''

"ಇಲ್ಲದಿದ್ದರೆ ನಿಮ್ಮ ಮೇಲೆ ಅವರಿಗೆ ಇಷ್ಟೊಂದು ಅಭಿಮಾನ ಬರಲು ಕಾರಣವೇನು?''

"ಅದೊಂದೂ ನನಗೆ ತಿಳಿಯದು. ಈ ಊರಿಗೆ ಅಕಸ್ಮಾತ್ ಬಂದೆ. ಏನೋ ಊರಿನಲ್ಲೆಲ್ಲ ಉತ್ಸಾಹ ತುಂಬಿ ತುಳುಕುತ್ತಿತ್ತು. ಯಾರೋ ಗುರುಗಳು ಬಂದಿದ್ದಾರೆಯಂತೆ, ದೇವಸ್ಥಾನದಲ್ಲಿ ಬಿಡಾರ ಮಾಡಿದ್ದಾರೆಯಂತೆ ಎಂಬ ಮಾತುಗಳು ಕಿವಿಗೆ ಬಿದ್ದವು. ಯಾರಾದರೇನು ? ಮಹಾತ್ಮರ ದರ್ಶನ ಮಾಡೋಣ ಎಂದು ಬಂದು ನಿಂತಿದ್ದೆ. ದರ್ಶನ ಸಿಕ್ಕಿತು. ಅವರಾಗಿಯೇ ನನ್ನನ್ನು ವಿಚಾರಿಸಿದರು. ಅದೇ ನನ್ನ ಪುಣ್ಯವೆಂದು ಭಾವಿಸಿದ್ದೇನೆ. ನಾನು ಬಯಸದೇ ಇದ್ದರೂ ಅವರೇ ಆಶ್ರಯ ನೀಡಿದ್ದಾರೆ. ದೊಡ್ಡವರ ರೀತಿಯೇ ಹಾಗೆ.''

"ಹಾಗಾದರೆ ನೀವು ಯಾರು ಎಂಬುದನ್ನು ಅವರಿಗೆ ತಿಳಿಸಿದ್ದೀರಾ ?''

"ತಿಳಿಸಿದರೆ ಅದರಿಂದ ಅವರಿಗಾಗುವ ಪ್ರಯೋಜನವೇನು ? ಲೋಕ ಕಲ್ಯಾಣಕ್ಕಾಗಿ ಜನ್ಮಧಾರಣೆ ಮಾಡಿದ ವಿಭೂತಿಪುರುಷರಿಗೆ ನಾವು ನಮ್ಮ ಸ್ವಕೀಯ ನೋವು ಸಂಕಟಗಳ ಕಾವನ್ನು ತಾಕಿಸಬಾರದು.''

"ನೀವು ತಿಳಿಸದಿದ್ದರೆ ಅವರೆಲ್ಲಿ ಬಿಡುತ್ತಾರೆ ? ಅಳಿಯನ ಕುರುಡು ಬೆಳಗಾದರೆ ಎಂಬ ಗಾದೆಯಂತೆ, ನಾಳೆ ಎಲ್ಲಾ ತಾನೇ ಬಯಲಿಗೆ ಬರುತ್ತದೆ. ಪ್ರೇಮದಿಂದಲೇ ಎಲ್ಲವನ್ನೂ ಬಾಯಿಬಿಡಿಸುವ ಅವರ ಜಾಣ್ಮೆ ಮಹತ್ತರವಾದುದು.''

"ಅಂದರೆ ?''

"ಅಂದರೆ ನಾಳೆ ಬೆಳಗ್ಗೆ ಅವರೇ ಎಲ್ಲಾ ಕೇಳುತ್ತಾರೆ. ಆಗ ಹೇಳದೆ ಇರುವುದಕ್ಕೆ ನಿಮಗೆ ಆಗುತ್ತದೆಯೇ ? ಅದಕ್ಕೇ ಅವರು ನಿಮ್ಮನ್ನು ಬಹು ಎಚ್ಚರಿಕೆಯಿಂದ ನೋಡಿಕೊಳ್ಳಿ ಎಂದು ನಮಗೆ ಹೇಳಿದ್ದಾರೆ.''

ಯಾತ್ರಿಕನ ಮುಖದ ಮೇಲೆ ಅದಾವುದೋ ಚಿಂತೆ ಆವರಿಸಿತು. ತುಸು ಹೊತ್ತು ಮೌನವಾಗಿದ್ದ.

ಆಮೇಲೆ, "ಅವರಿಗೆ ತಡೆಯೆ ? ಆದರೆ ಅವರು ಯಾರೆಂಬುದನ್ನು ನೀವು ಹೇಳಲೇ ಇಲ್ಲ" ಎಂದು ಕೇಳಿದ.

"ಹೇಳುತ್ತೇನೆ. ಅಚ್ಚಾನ್ ಗುಡಾರವನ್ನು ತಂದು ಹಾಕಿಕೊಂಡು ನಾವೂ ಇವರ ಜೊತೆಗೆ ಈ ರಾತ್ರಿಯನ್ನು ಇಲ್ಲಿಯೇ ಕಳೆಯೋಣ. ನಿದ್ದೆ ಬರುವವರೆಗೂ ಇವರಿಗೆ ನಮ್ಮ ಗುರುಗಳ ಚರಿತ್ರೆಯನ್ನು ಹೇಳೋಣ" ಎಂದ ಎಂಬಾರ್.

ಅಚ್ಚಾನ್ ಗುಡಾರವನ್ನು ತರಲು ಎದ್ದು ಹೋದ.

ಎಂಬಾರ್ ಹೇಳಿದ ಕಡೆಯ ಮಾತುಗಳು ಯಾತ್ರಿಕನ ಮನಸ್ಸಿನ ಮೇಲೆ ವಿಪರೀತ ಪರಿಣಾಮ ಮಾಡಿತು. ಅದೇ ಗುಂಗಿನಲ್ಲಿ ಅವನು ಆಲೋಚನಾಪರನಾಗಿ ಇದ್ದ. ಅಲ್ಲೆಲ್ಲ ಮೌನವಾವರಿಸಿತು.

ಗುಡಾರವನ್ನು ತಂದು ಹಾಸಿದ್ದೇ ತಡ, ಅಚ್ಚಾನ್ ಮಲಗಿಬಿಟ್ಟ. ಅಗ್ರಸಾಲೆಯ ಈ ಅಗ್ರಾಧ್ಯಕ್ಷನಿಗೆ ಅಸಾಧ್ಯ ಆಯಾಸವಾಗಿದ್ದಿರಬೇಕು. ಇಲ್ಲವೇ ಅಂದು ಹೆಚ್ಚಿನ ದುಡಿತವಿಲ್ಲವೆಂಬ ಅಲಸಿಕೆ ಇದ್ದಿರಬೇಕು. ಮೇಲಾಗಿ ತನಗೆ ಗೊತ್ತಿಲ್ಲದ ಆಚಾರ್ಯರ ಯಾವ ಕಥೆಯನ್ನು ಎಂಬಾರ್ ಹೇಳಿಯಾನೆಂಬ ಸ್ವಯಂ ಪ್ರಜ್ಞೆ ಸಹ ಇದಕ್ಕೆ ಪುಷ್ಟಿಕೊಟ್ಟಿರಬೇಕು. ಎಂತಲೇ ಬಹು ಬೇಗ ಅವನಿಗೆ ನಿದ್ದೆ ಬಂದುಬಿಟ್ಟಿತು.

ತುಸು ಹೊತ್ತಾದ ಮೇಲೆ ಎಂಬಾರ್ ಮೌನ ಮುರಿದ. "ಎಚ್ಚರವಾಗಿದ್ದೀರಾ ?"

"ಹು."

"ಆಚಾರ್ಯರ ಕತೆಯನ್ನು ಹೇಳಲೆ ?"

"ಹು."

ಎಂಬಾರ್ ಆಚಾರ್ಯರ ಜೀವನದ ಕಥೆಯನ್ನು ಹೇಳಲು ತೊಡಗಿದ. ಯಾತ್ರಿಕ ಮೊದಮೊದಲು ವಿಶೇಷ ಆಸಕ್ತಿಯಿಂದ ಹುಗುಟ್ಟುತ್ತ ಕೇಳುತ್ತಿದ್ದ. ಕಥೆಯಲ್ಲಿ ಯಾತ್ರಿಕನಿಗೆ ಉತ್ಸಾಹ ಹುಟ್ಟಿದೆಯೆಂಬುದನ್ನು ಗ್ರಹಿಸಿದ ಎಂಬಾರ್‌ನ ಉತ್ಸಾಹ ಇಮ್ಮಡಿಯಾಯಿತು. ಆಚಾರ್ಯರ ಗುಣಗಾನ ಮಾಡುವ ಸಂದರ್ಭವೊದಗಿದರೆ ಅವನು ಸಾವಿರ ನಾಲಗೆಯ ಆದಿಶೇಷನಾಗುತ್ತಿದ್ದ. ಈಗ ಕೇಳಬೇಕೆ ? ಆಚಾರ್ಯರ ಗಮನವನ್ನು ಸೆಳೆದಿರುವ ಒಬ್ಬ ಕಲೆಗಾರನಿಗೆ ಅವರ ಕಥೆ ಹೇಳುವುದು ಅವನಿಗೆ ದೊರೆತ ಮಹತ್ವದ ಸನ್ನಿವೇಶ ಎಂದ ಮೇಲೆ ಅವನ ಉತ್ಸಾಹ ಎಷ್ಟಿರಬೇಡ ? ಅವನ ಮಾತಿನ ಧಾಟಿ, ರಸಭಾವಪೂರಿತವಾದ ಅವನ ಧ್ವನಿವಿನ್ಯಾಸ, ಕಣ್ಣಿಗೆ ಕಟ್ಟುವಂತೆ ಜೀವನ ಚಿತ್ರ ರೂಪಿಸುವ ಅವನ ಕಥನ ಶೈಲಿ, ಇವು ಕ್ರಮೇಣ ಹೆಚ್ಚು ಹೆಚ್ಚು ಮೆರುಗಿನಿಂದ ಕೂಡಿದಂತೆ ತೋರಿಬರತೊಡಗಿತು.

ಬೆಳಗಾದರೂ ಈ ಕಥಾವಾಹಿನಿ ನಿಲ್ಲುವಹಾಗಿಲ್ಲವೆಂಬುದು ಯಾತ್ರಿಕನ ಮನಸ್ಸಿಗೆ ಹೊಳೆಯದೆ ಹೋಗಲಿಲ್ಲ. ಆದರೂ ಕಥೆಯೊಡನೆ ತಾನೂ ಒಂದಾಗಿ ಸಾಗುತ್ತಿದ್ದ. ಆಚಾರ್ಯರ ತಪಸ್ಸಿನ ರೀತಿ, ಅವರ ಸಾಧನ ಮಾರ್ಗ, ಎಲ್ಲಕ್ಕಿಂತ ಹೆಚ್ಚಾಗಿ ಅವರ ನಿಷ್ಕಲ್ಮಶವಾದ ದೇವಹೃದಯ, ಇವುಗಳ ಸ್ಪಷ್ಟ ಕಲ್ಪನೆಯಾಯಿತು ಯಾತ್ರಿಕನಿಗೆ. ಎಂತಹ ತೇಜೋಮಯವಾದ ವ್ಯಕ್ತಿತ್ವ ? ಎಂತಹ ಘನತರವಾದ ಬಾಳುವೆ ? ಎಂತಹ ಅದ್ಭುತವಾದ ಸಾಧನೆ ? ಆ ಸಾಧನೆಯಲ್ಲಿ ಅದೆಂತಹ ಅಗಾಧವಾದ ನಿಷ್ಠೆ ? ಎಲ್ಲವನ್ನೂ ಕೇಳಿದ ಯಾತ್ರಿಕನ ಹೃದಯವು ತುಂಬಿ ಬಂತು. 'ಹುಟ್ಟು ಸಿಕ್ಕರೆ ಇಂತಹ ಹುಟ್ಟು ಸಿಗಬೇಕು! ಬಾಳಿದರೆ ಇಂತಹ ಬಾಳು ಬಾಳಬೇಕು !' ಎಂದೆನಿಸಿತು ಯಾತ್ರಿಕನಿಗೆ.

ಆದರೆ ?

ತನ್ನ ಬಾಳಿನ ಕಥೆಯೇ ಕಣ್ಣೆದುರಿಗೆ ಮತ್ತೆ ದೃಶ್ಯ, ದೃಶ್ಯವಾಗಿ ಸರಿದು ಹೋಗುತ್ತಿದ್ದಂತೆ ಭಾಸವಾಯಿತು. ತನ್ನನ್ನು ತಾನೇ ನೋಡಿಕೊಳ್ಳುತ್ತಿರುವಂತೆ ಅವನಿಗನ್ನಿಸಿತು. ಆದರೆ ಅದು ದರ್ಪಣದಲ್ಲಿ ನೋಡಿಕೊಂಡಂತೆ ಅಲ್ಲ. ತಾನು ಕಂಡುದು ಎರಡು ಬೇರೆ ಬೇರೆ ವ್ಯಕ್ತಿತ್ವವೆಂದೆನ್ನಿಸಿತು. ಜಗತ್ತಿನ ದ್ವಂದ್ವದ ಬಗೆಗೆ ಅವನಲ್ಲಿ ಒಂದು ಹೊಸ ಹೊಳಹು ಮೂಡಿದಂತಾಯಿತು. ಅದೇ ಯೋಚನೆಯಲ್ಲಿ ಮುಳುಗಿದ ಅವನ ಹೂಗುಟ್ಟುವಿಕೆ ಕಡಿಮೆಯಾಯಿತು. ಕಡೆಗೆ ನಿಂತೇ ಹೋಯಿತು. ಏಕೆಂದರೆ ಆಗಲೇ ಅವನ ಮನಸ್ಸು ಬೇರೆಯ ದಾರಿಯನ್ನು ಹಿಡಿದಿತ್ತು.

ಎಂಬಾರ್ ಅದನ್ನು ಗಮನಿಸಿದ. "ಏಕೆ ಬೇಸರ ಬಂತೆ ?"

ಬಡಿದೆಬ್ಬಿಸಿದಂತೆ ಆಯಿತು ಯಾತ್ರಿಕನಿಗೆ, ಎಂಬಾರ್‌ನ ಆ ಪ್ರಶ್ನೆ ಕೇಳಿ. "ಇಲ್ಲವಲ್ಲ" ಎಂಬ ಮಾತೇನೋ ಬಾಯಿಂದ ಹೊರಬಿತ್ತು. ಆದರೆ ಅದು ಅಷ್ಟು ಸತ್ಯವಾದ ಮಾತಾಗಿರಲಿಲ್ಲವೆಂಬುದು ಅವನಿಗೆ ಗೊತ್ತಿತ್ತು. ಆ ಮಾತನ್ನು ಆಡಿದಾಗ ಯಾತ್ರಿಕನ ಧ್ವನಿಯಲ್ಲಡಗಿದ್ದ ಗಾಬರಿಯನ್ನು ಎಂಬಾರ್‌ಗೆ ಗುರುತಿಸದೆ ಹೋಗಲಿಲ್ಲ.

ಒಡನೆಯೇ ಅವನ ಮನಸ್ಸಿಗೆ ಒಂದು ವಿಚಾರ ಹೊಳೆಯಿತು. 'ಪಾಪ, ಎಷ್ಟು ದಣಿದು ಬಂದಿದ್ದಾರೆಯೋ ಏನೋ ? ವಿಶ್ರಾಂತಿಗೆ ಅವಕಾಶವಿಲ್ಲದಂತೆ ತನ್ನ ಉತ್ಸಾಹದಲ್ಲಿ ಹೀಗೆಯೇ ಸಾಗುವುದು ಸರಿಯಾಗಲಾರದು. ಇನ್ನು ವಿಶ್ರಾಂತಿ ತೆಗೆದುಕೊಳ್ಳಲಿ. ನಾಳೆ ಹೇಗೂ ಇರುತ್ತಾರೆಯಲ್ಲ. ಉಳಿದುದನ್ನು ಆಗ ಹೇಳಿದರಾಯಿತು' ಎಂದು ಎಂಬಾರ್ ಯೋಚಿಸಿದ. ಕಡೆಗೆ, "ಈಗ ನಿಮಗೆ ವಿಶ್ರಾಂತಿಯು ಅತ್ಯಾವಶ್ಯಕ. ಮಲಗಿ" ಎಂದ.

"ವಿಶ್ರಾಂತಿಯೇ ? ಅದೂ ನನಗೆ ?"

"ಏಕೆ ಹಾಗೆ ಹೇಳುತ್ತೀರಿ ?"

"ಈ ಜನ್ಮದಲ್ಲಿ ಸಾಧ್ಯವಿಲ್ಲ."

"ಇಷ್ಟು ನಿರಾಶರಾಗಬೇಕಾಗಿಲ್ಲ. ನಾಳೆ ನೀವೇ ನೋಡುತ್ತೀರಿ. ನಮ್ಮ ಗುರುಗಳು ನಿಮ್ಮ ಮೇಲೆ ಎಂತಹ ಮೋಡಿ ಮಾಡುತ್ತಾರೆಂದು. ಆಗ ನಿಮಗೆ ಗೊತ್ತಾಗುತ್ತದೆ. ನಾಳೆ ಆಚಾರ್ಯರನ್ನು ಅತೀವ ದುಃಖಕ್ಕೆ ಈಡು ಮಾಡಿದ ಅವರ ದಾಂಪತ್ಯದ ಕಥೆಯನ್ನು ಹೇಳುತ್ತೇನೆ. ಈಗ ಮಲಗಿಕೊಳ್ಳಿ."

ಯಾತ್ರಿಕನ ಬಾಯಿಂದ ಯಾವ ಮಾತೂ ಬರಲಿಲ್ಲ. ಅವನ ಮೌನವನ್ನೇ ತನ್ನ ಸಲಹೆಗೆ ಒಪ್ಪಿಗೆಯೆಂದು ಭಾವಿಸಿ ಎಂಬಾರ್ ಕಣ್ಮುಚ್ಚಿ, ಕೈ ಮುಗಿದು ಆಮೇಲೆ ಗುಡಾರದ ಮೇಲೆ ಮಗ್ಗುಲಾದ. ಅವನಿಗೆ ಬಹು ಬೇಗ ನಿದ್ದೆ ಬಂತು.

ಇಂತಹ ಮಹನೀಯರನ್ನೂ ಆತೀವ ದುಃಖಕ್ಕೆ, ಯಾತನೆಗೆ ಈಡು ಮಾಡಿತೆ ಹಾಳು ದಾಂಪತ್ಯ?

ಯಾತ್ರಿಕನ ತಲೆಯಲ್ಲಿ ಈ ವಿಚಾರ, ಹಾಗೂ ಎಂಬಾರ್‌ನ ಇನ್ನೂ ಅನೇಕ ಮಾತುಗಳು, ಆ ಕಾರಣವಾಗಿ ಹುಟ್ಟಿದ ಏನೇನೂ ಯೋಚನೆಗಳು ಸುತ್ತಾಡುತ್ತಿದ್ದವು; ಹೊಯ್ದಾಡುತ್ತಿದ್ದವು. ಅವನಿಗೆ ನಿದ್ದೆ ಬರುವ ಸೂಚನೆಗಳು ಯಾವುವೂ ಕಾಣಲಿಲ್ಲ. ಬರೀ ಹಳೆಯ ಕಹಿ ನೆನಪುಗಳೇ ಅವನನ್ನು ಸುತ್ತಿ ಕಾಡತೊಡಗಿದವು.

# ೨. ದೇವಾಲಯ ನಿರ್ಮಾಣದ ಸಂಕಲ್ಪ

ಬ್ರಾಹ್ಮೀ ಮುಹೂರ್ತದಲ್ಲಿಯೇ ಎದ್ದು ಸ್ನಾನವನ್ನು ಮಾಡಿ ಮಡಿಯುಟ್ಟು ಆಚಾರ್ಯರ ಸ್ನಾನಾರ್ಚನಾದಿಗಳಿಗೆ ಸಿದ್ಧ ಮಾಡುವುದು ಆ ಶಿಷ್ಯರುಗಳ ದಿನನಿತ್ಯದ ಮುಂಜಾವಿನ ಕೆಲಸ.

ಅಚ್ಚಾನ್ ಸಹಜವಾಗಿ ಹೊತ್ತಿಗೆ ಸರಿಯಾಗಿ ಮಲಗಿದ್ದ. ಸಹಜವಾಗಿ ಹೊತ್ತಿಗೆ ಸರಿಯಾಗಿ ಎದ್ದು ತನ್ನ ಕೆಲಸಗಳಲ್ಲಿ ನಿರತನಾಗಿದ್ದ.

ಎಂಬಾರ್ ಮಲಗಿ ನಿದ್ರಿಸಲು ಸಾಕಷ್ಟು ತಡವಾಗಿತ್ತು. ಜೊತೆಗೆ ಅರಮನೆಗೆ ಹೋಗಿ ಬಂದುದರ ಆಯಾಸ ಅವನಿಗೂ ಸ್ವಲ್ಪ ಇತ್ತು. ಅದರಿಂದ ಅವನು ದಿನನಿತ್ಯ ಏಳುವಂತೆ ಹೊತ್ತಿಗೆ ಸರಿಯಾಗಿ ಏಳಲಿಲ್ಲ.

ಅತ್ತ ಅಚ್ಚಾನ್ ತನ್ನ ಸ್ನಾನವನ್ನು ಮುಗಿಸಿ ಸ್ನಾನದ ಹಂಡೆಗೆ ಮಡಿ ನೀರನ್ನು ಹಾಕಿ, ಒಲೆಗೆ ಉರಿ ಹಾಕಿ ಆಚಾರ್ಯರ ಸ್ನಾನಕ್ಕೆ ಸಿದ್ಧ ಮಾಡಿದ. ಅಷ್ಟರಲ್ಲಿ ಎಂಬಾರ್ ಸ್ನಾನ ಮುಗಿಸಿ ಮಡಿಯುಟ್ಟು ಬರಬೇಕಾಗಿತ್ತು. ಅವನಿನ್ನೂ ಬಾರದೆ ಹೋದುದರಿಂದ ಅಚ್ಚಾನ್ ಚಕಿತನಾದ.

ಆ ವೇಳೆಗಾಗಲೇ ಮೂಡಣದಿಶೆಯು ರಕ್ತ ಕಾಂತಿಯಿಂದ ಕೊಂಚ ಕೊಂಚ ಬೆಳಗತೊಡಿಗತ್ತು. ಹಕ್ಕಿಗಳು ಚಿಲಿಪಿಲಿಗುಟ್ಟುತ್ತಾ ತಮ್ಮ ಗೂಡುಗಳಿಂದ ಈಚೆಗೆ ಬಂದು ಗರಿಗೆದರಿ ಗಗನಕ್ಕೆ ಹಾರತೊಡಗಿದ್ದವು. ದಿನನಿತ್ಯ ಆಚಾರ್ಯರು ತಮ್ಮ ಪ್ರಾತಃಸಂಧ್ಯೆಯನ್ನು ಉಪಕ್ರಮ ಮಾಡುವ ಸಮಯ ಅದು.

ಆದರೂ ಎಂಬಾರ್‌ನ ಸುಳಿವಿಲ್ಲವೆಂದರೆ ಮುಂದೇನು ಮಾಡಬೇಕು ?

ಎಂಬಾರ್ ಎಂದೂ ಕರ್ತವ್ಯಚ್ಯುತಿಯನ್ನು ಮಾಡಿದವನಲ್ಲ. ಅಚ್ಚಾನ್ ಸಹ ಹಾಗೆಯೇ! ಕಾಲಾತೀತವಾದ ವರ್ತನೆ ಅವರಿಗೆ ಗೊತ್ತೇ ಇಲ್ಲ. ಅದರಿಂದ ಅವರಿಬ್ಬರೂ ತಮ್ಮ ತಮ್ಮಲ್ಲಿ ಹಂಚಿಕೊಂಡ ಕೆಲಸದ ರೀತಿಯಲ್ಲಿ ಅಚಾರ್ಯರ ಸೇವೆ ಅಚ್ಚುಕಟ್ಟಾಗಿಯೂ ಸಾಂಗವಾಗಿಯೂ ನೆರವೇರುತ್ತಿತ್ತು.

ಎಂಬಾರ್ ಇನ್ನೂ ಎದ್ದೇ ಇರಲಿಕ್ಕಿಲ್ಲವೆಂದು ಆಗ ಅಚ್ಚಾನ್‌ಗೆ ಹೊಳೆಯಿತು. ಕತೆ ಹೇಳುವ ತನ್ನ ಗುಂಗಿನಲ್ಲಿ ಆರೆಂಟು ಗಳಿಗೆಗಳನ್ನು ನಿದ್ದೆಯಿಲ್ಲದೆ ಕಳೆದಿದ್ದರೆ ಅದರಲ್ಲಿ ಆಶ್ಚರ್ಯವೇನಿರಲಿಲ್ಲ ಎಂಬಾರ್‌ನ ಆ ಸ್ವಭಾವ ಅಚ್ಚಾನ್‌ಗೆ ಗೊತ್ತಿಲ್ಲದೆ ಇರಲಿಲ್ಲ. ಎಂತಲೇ ಎಂಬಾರ್‌ನನ್ನು ಎಬ್ಬಿಸಲು ಹೋದ.

ಎಂಬಾರ್ ಬಡಬಡಿಸುತ್ತಿದ್ದ : "ಹೆಂಡತಿಯ ಕೈಯಲ್ಲಿ ಆಚಾರ್ಯರ ಜೀವ ಹಣ್ಣುಗಾಯಿ, ನೀರುಗಾಯಿ ಆಯಿತು."

"ಅಲ್ಲ ಅಲ್ಲ ನಿನ್ನ ಕೈಯಲ್ಲಿ ನನ್ನ ಜೀವ. ಏಳು, ಏಳು. ಇದೇನಿದು ಈ ಕುಂಭಕರ್ಣನ ನಿದ್ದೆ" ಎಂದು ಅಚ್ಚಾನ್ ಎಂಬಾರ್‌ನ ಭುಜ ತಿವಿದು ಎಬ್ಬಿಸಿದ. ಭುಜ ತಿವಿದಿದ್ದು ಅಚ್ಚಾನ್‌ನ ಕೈಯಲ್ಲ ಅವನ ಕೈಯಲ್ಲಿದ್ದ ದಾಣಿ.

ಥಟಕ್ಕನೆ ಕನಸೊಡೆದ ಎಂಬಾರ್ ಎದ್ದು ಕುಳಿತ. ಏನೋ ಗಾಬರಿಗೊಂಡಿದ್ದಂತೆ ಭಾಸವಾಯಿತು. ನಾಲ್ಕು ಕಡೆಯೂ ನೋಡಿದ. ಅಚ್ಚಾನ್‌ನನ್ನು ನೋಡಿದ. ಧಿಡಂಗನೆ ಎದ್ದು ನಿಂತ. "ಎಂತಹ ಕೆಲಸ ಆಯಿತು ? ಎಂತಹ ಕೆಲಸ ಆಯಿತು ?" ಎಂದು ಕೈ ಕೈ ಹಿಸುಕಿಕೊಂಡು. ಹಾಗೆಯೇ ಪಕ್ಕದಲ್ಲಿ ನೋಡಿದ. ಯಾತ್ರಿಕ ಅಲ್ಲಿರಲಿಲ್ಲ. ಗಾಬರಿಯಾದ. "ಆತ ಎಲ್ಲಿ ?" ಎಂದು ಅಚ್ಚಾನ್‌ನನ್ನು ಕೇಳಿದ.

"ಎಲ್ಲೋ ಬಯಲು ಕಡೆ ಹೋಗಿರಬಹುದು. ಬರುತ್ತಾನೆ ನಡಿ. ಹೊತ್ತಾಯಿತು. ನಿನ್ನದೆಲ್ಲಾ ಇವತ್ತು ಚುಟುಕದಲ್ಲಿ ಮುಗಿಯಬೇಕು" ಎಂದು ಅಚ್ಚಾನ್ ಬದಲು ಮಾತಿಗೆ ಕಾಯದೆ ನೀರು ಮನೆಯ ಕಡೆ ಹೋದ.

ಅವನ ಮಾತಿನಿಂದ ಎಂಬಾರ್‌ಗೆ ತುಸು ಸಮಾಧಾನವಾಯಿತು. ಆದರೂ ಏನೋ ಸಂಶಯದಿಂದ ಮತ್ತೆ ಯಾತ್ರಿಕ ಮಲಗಿದ್ದ ತಾಣದತ್ತ ನೋಡಿದ. ನೆಲ ಹಾಸಿನ ಆ ಕಲ್ಲು ಚಪ್ಪಡಿ ಬಿಕೋ ಎಂಬ ಸ್ವಾಗತವನ್ನು ಕೊಟ್ಟಿತು.

"ಎಲ್ಲೋ ಬಯಲು ಕಡೆ ಹೋಗಿರಬಹುದು" ಎಂಬ ಅಚ್ಚಾನ್‌ನ ಮಾತನ್ನೇ ಧೇನಿಸುತ್ತಾ ಅವನು ಗುಡಾರ ಎತ್ತಿಕೊಂಡು ಅಲ್ಲಿಂದ ಸರಸರನೆ ಹೊರಟುಹೋದ.

ಕಾಲ ಕಾಲಕ್ಕೆ ನಡೆವ ಕೆಲಸಗಳು ತುಸು ಹೆಚ್ಚು ಕಡಿಮೆಯಾದರೂ ಶಿಸ್ತಿನಿಂದ ಬೆಳೆದ ಮನಸ್ಸು ತಳಮಳಕ್ಕೆ ಸಿಕ್ಕುತ್ತದೆ. ಅತೀತವಾದ ಕಾಲವನ್ನು ಸರಿದೂಗಿಸುವ ಆತುರದಲ್ಲಿ ಕೆಲಸದ ಅಚ್ಚುಕಟ್ಟುತನ, ಬೆಹಣಿತನ ಅದೇ ಪ್ರಮಾಣದಲ್ಲಿ ಕುಂಠಿತವಾಗುತ್ತದೆ. ಬಚ್ಚಲಿಗೆ ಇಳಿದಿದ್ದ ಆಚಾರ್ಯರು ಇನ್ನೂ ಸರಿಯಾಗಿ ಕುಳಿತಿರಲಿಲ್ಲ. ಅಚ್ಚಾನ್‌ನ ಕೈಯಲ್ಲಿದ್ದ ಚರಿಗೆಯ ಬಿಸಿ ನೀರು ಅವರ ಮೇಲೆ ಸುರಿದಿತ್ತು. ಇನ್ನೂ ಸರಿಯಾಗಿ ಕೂತಿರದಿದ್ದ ಆಚಾರ್ಯರ ಕಿವಿಯೊಳಕ್ಕೆ ನೀರು ನುಗ್ಗಿತು. ನೀರು ಸಹ ಎಂದಿಗಿಂತ ಚುರುಕಾಗಿತ್ತು. ಆ ಬಿಸಿಯನ್ನು ತಡೆಯಲು ಅವರಿಗೆ ಅಸಾಧ್ಯವಾಗಿತ್ತು ಒಡನೆಯೇ ನೋವಿನ ಒಂದು ಲೊಚಕೆ ಅವರ ಬಾಯಿಂದ ಹೊರಬಿತ್ತು.

ಅಚ್ಚಾನ್ ಪೆಚ್ಚಾದ. ಚರಿಗೆ ಹಾಗೆಯೇ ಕೈಯಲ್ಲಿ ಇತ್ತು.

ಆಚಾರ್ಯರು ಇದನ್ನೆಲ್ಲ ನೋಡಿದರು. ಇದೇನು ಇಂದಿನ ಇವನ ರೀತಿ ಎಂದುಕೊಂಡರು. ಬಿಸಿನೀರು ಬಿದ್ದ ಮೈಗೆ, ಮೇಲಿಂದ ಮೇಲೆ ಬೀಸಿನೀರು ಬೀಳುತ್ತಿದ್ದರೆ ಸರಿಹೋಗುತ್ತದೆ. ಈಗ ಆದ ವಿಲಂಬದಿಂದ ಆಚಾರ್ಯರ ಶರೀರದಲ್ಲಿ ತುಸು ನಡುಕ ಬಂದ ಹಾಗೆ ಆಯಿತು. ಆ ವೇಳೆಗೆ ತುಂಬಿದ ಚರಿಗೆ ಹಿಡಿದ ಅಚ್ಚಾನ್‌ನ ಕೈ ಮುಂದೆ ಬಂತು.

"ಈಗ ನೀರು ಹದವಾಗಿದೆ" ಎಂದೂ ಅವನ ಬಾಯಿಂದ ಹೊರಬಿತ್ತು.

"ಸರಿ, ಹಾಕು" ಎಂದು ಆಚಾರ್ಯರು ಸಜ್ಜಾದರು.

ಸ್ನಾನ ಮುಗಿಯಲು ಆಚಾರ್ಯರು ಮೌನವಾಗಿ ತಮ್ಮ ಆಹ್ನಿಕಾದಿಗಳ ಸಲುವಾಗಿ ಹೊರಟುಹೋದರು.

ಇತ್ತ ಎಂಬಾರ್ ತನ್ನ ಕೆಲಸವನ್ನು ಸಾಗಿಸಿದ್ದ. ಅದರೂ ಅವನ ಮನಸ್ಸು ಆ ಯಾತ್ರಿಕನತ್ತ ಸಾಗಿತ್ತು. ದಿನನಿತ್ಯ ಮೊದಲ ಕೋಳಿಯ ಕೂಗಿಗೆ ಏಳಬೇಕಾಗಿದ್ದ ತಾನು ಹಾಲೆ ಕುಡಿದವನ ಹಾಗೆ ಮಲಗಿದ್ದುದು, ಏಳದಿದ್ದುದು, ಅವನಿಗೆ ಆಶ್ಚರ್ಯವೆನಿಸಿತು. ನಿಜ. ಮಲಗಿದಾಗ ರಾತ್ರಿ ಬಹಳವಾಗಿತ್ತು. ದೂರ ಪ್ರಯಾಣ ಮಾಡಿ ಬಂದಿದ್ದ ಆತನೂ ರಾತ್ರಿ ತನ್ನೊಡನೆ ಅಷ್ಟು ರಾತ್ರಿ ಕಳೆಯುವವರೆಗೂ ಎದ್ದು ಕುಳಿತಿರಲಿಲ್ಲವೆ ? ಈಗ ತನಗಿಂತ ಮುಂಚೆ ಎದ್ದಿಲ್ಲವೆ ? ಅಥವಾ ಮಲಗಲೇ ಇಲ್ಲವೋ ? ಹಾಗೆಂದರೇನು? ಮಗ್ಗುಲಾದುದೇ ತಡ ತನಗೇ ಎಚ್ಚರಿಕೆಯಿಲ್ಲದ ಹಾಗೆ ನಿದ್ರೆ ಬಂತು. ಇನ್ನು ನಡೆದು, ನಡೆದು, ದಣಿದು ಬಂದಿದ್ದ ಆತನಿಗೆ ನಿದ್ದೆ ಬರಲಿಲ್ಲವೆಂದರೆ ಸಾಧ್ಯವೆ ? ಅದರಿಂದ ಬೇಗ ಎದ್ದು ಅಚ್ಚಾನ್ ಹೇಳಿದಂತೆ ಬಯಲು ಕಡೆ ಹೋಗಿರಬಹುದು. ಆದರೂ ಎದ್ದ ಮೇಲೆ ಒಮ್ಮೆ ಕಣ್ಣಿಗೆ ಬಿದ್ದಿದ್ದರೆ ಎಷ್ಟೋ ಚೆನ್ನಾಗಿರುತ್ತಿತ್ತು ಎಂದು ಅವನ ಮನಸ್ಸು ಮೊರೆಯತೊಡಗಿತು.

ಯೋಚನೆಗಳು ತಿಗುರಿಯಂತೆ ತಲೆಯಲ್ಲಿ ತಿರುಗುತ್ತಿದ್ದರೂ ಅವನ ಸಿದ್ಧತೆಯ ಕೆಲಸ ಯಂತ್ರದಂತೆ ಸಾಗಿದ್ದಿತು. ಆದರೆ ಮನಸ್ಸು ಮಾತ್ರ ಯಾತ್ರಿಕ ಮಲಗಿದ್ದ ಮಂಟಪಕ್ಕೂ ತಾನಿದ್ದಲ್ಲಿಗೂ ಶತಪಥ ತಿರುಗುತ್ತಿತ್ತು. ಒಮ್ಮೆ ಇದ್ದಕ್ಕಿದ್ದ ಹಾಗೆಯೇ ಅವನ ಅಂತರಂಗದಲ್ಲಿ ಚುರ್ ಎಂದಿತು. ಕೈಯಲ್ಲಿ ಹಿಡಿದು ಒರೆಸುತ್ತಿದ್ದ ಗಂಟೆ ಕೈ ಜಾರಿ ಢಣಾರೆಂದು ಕೆಳಕ್ಕೆ ಬಿತ್ತು. ಆ ನಾದದಲ್ಲಿ ಏನೋ ಒಂದು ಚೀತ್ಕಾರ ಹೊರಹೊಮ್ಮಿದಂತೆ ಅವನಿಗೆ ಭಾಸವಾಯಿತು. ಅಪ್ರತಿಭನಾದವನಂತೆ ಅತ್ತ ಇತ್ತ ನೋಡಿದ. ಕೆಳಗೆ ಬಿದ್ದಿದ್ದ ಗಂಟೆಯನ್ನು ತೆಗೆದು ಸರಿಯಾಗಿ ಇಟ್ಟು ಧಿಡಂಗನೆ ಎದ್ದು ಯಾತ್ರಿಕ ಮಲಗಿದ್ದ ಮಂಟಪಕ್ಕೆ ಬಂದ.

ಅಲ್ಲೆಲ್ಲ ಹುಡುಕಿದ. ಮೂಲೆ ಮೂಲೆಯಲ್ಲಿಯೂ ನೋಡಿದ. ಕಂಭಗಳ ಮೇಲಿನ ಬದುವುಗಳಲ್ಲೆಲ್ಲ ನೋಡಿದ. ನಿಟ್ಟುಸಿರು ಬಿಟ್ಟ ಉಳಿಚಾಣಗಳ ಯಾತ್ರಿಕನ ಚೀಲ ಅಲ್ಲಿ ಇಲ್ಲವೆಂದ ಮೇಲೆ, ಆ ವ್ಯಕ್ತಿ ಅಲ್ಲಿಂದ ಜಾರಿಕೊಂಡು ಹೋಗಿರಬೇಕು ಎಂದು ಅವನು ಭಾವಿಸಿದ. ಒಂದು ವೇಳೆ ಇದು ನಿಜವಾದರೆ? 'ಬಹಳ ಸೂಕ್ಷ್ಮ ಪ್ರಕೃತಿಯ ವ್ಯಕ್ತಿ ಆತ. ಎಚ್ಚರಿಕೆಯಿಂದ ನೋಡಿಕೊಳ್ಳಿ' ಎಂದು ಗುರುಗಳು ಹೇಳಿದ್ದರಲ್ಲ! ಈಗ ಅವರಿಗೆ ಏನು ಹೇಳಬೇಕು ? ಈ ಪ್ರಶ್ನೆ ಅವನನ್ನು ಬಾಧಿಸತೊಡಗಿತು.

ಅಚ್ಚಾನ್‌ನ ಆ ಮಾತು ಈಗ ಮತ್ತೆ ನೆರವಿಗೆ ಬಂತು. ಆತನಲ್ಲಿ ಇದ್ದುದೇ ಒಂದು ಚೀಲ. ಆತನ ಆಸ್ತಿ, ಬಟ್ಟೆ ಬರೆ ಎಲ್ಲಾ ಅದರಲ್ಲಿಯೇ ಇದ್ದಿರಬೇಕು. ಬಯಲು ಕಡೆ ಹೋದವನು ಹಾಗೆಯೇ ಯಾವುದೋ ತೋಟದ ಭಾವಿಯಲ್ಲಿ ಸ್ನಾನವನ್ನು ತೀರಿಸಿಕೊಂಡು ಬರುವುದೊಳಿತೆಂಬ ಭಾವನೆಯಿಂದ ಅದನ್ನ ತನ್ನೊಡನೆ ಒಯ್ದಿರಬಾರದೇಕೆ ಎಂಬ ಆಶೆ ಅವನಲ್ಲಿ ಮೊಳೆಯಿತು. ಅದರಿಂದ ಮನಸ್ಸಿಗೆ ಸ್ವಲ್ಪ ಸಮಾಧಾನವೆನಿಸಿತು. ಒಡನೆಯೇ ಅರ್ಚನೆಗೆ ಅಣಿ ಮಾಡುತ್ತಿದ್ದ ಸ್ಥಳಕ್ಕೆ ಬಂದ.

ಆಚಾರ್ಯರು ಆಗಲೇ ಬಂದು ತಮ್ಮ ಆಸನದ ಮೇಲೆ ಕುಳಿತು ನಾಮಧಾರಣೆಯ ಸಿದ್ಧತೆಯನ್ನು ಮಾಡಿಕೊಳ್ಳುತ್ತಿದ್ದರು.

ಎಂಬಾರ್‌ಗೆ ಅದನ್ನು ನೋಡಿ ಅಳುಕಾಯಿತು. ತಾನು ಹೋಗಬಾರದಾಗಿತ್ತೆನ್ನಿಸಿತು.

ಆಚಾರ್ಯರ ನಾಮಧಾರಣೆ, ಪ್ರಾತಃಸಂಧ್ಯಾವಂದನೆ ಮುಗಿಯಿತು. ತದನಂತರದ ಷೋಡಶೋಪಚಾರ ಪೂಜೆಗೆ ಪ್ರಾರಂಭವಾಗಬೇಕು. ಒಂದೊಂದನ್ನೂ ಅಣಿ ಮಾಡಿ ಕೈಗೆ ಕೊಡುವುದು ಎಂಬಾರ್‌ನ ಕೆಲಸ. ಗಂಟೆ, ಶಂಖ, ಕಲಶೋದಕ, ಕ್ಷೀರ, ದಧಿ, ಮಧುಪರ್ಕ, ಶುದ್ಧೋದಕ, ಧೂಪ, ದೀಪ, ಫಲ, ಪುಷ್ಪ,

ವಸ್ತ್ರ, ಅಕ್ಷತೆ, ಇವುಗಳನ್ನು ಕೊಡುವಾಗ ಅಂದೇಕೋ ಎಂಬಾರ್‌ನ ಕೈ ತಪ್ಪುತ್ತಿತ್ತು. ಒಂದರ ಬದಲು ಮತ್ತೊಂದನ್ನು ಕೊಡುತ್ತಿದ್ದ. ಅದನ್ನು ಗಮನಿಸಿದ ಆಚಾರ್ಯರು ಒಂದು ಸಲ, ಎರಡು, ನಾಲ್ಕು ಸಲ ನೋಡಿದರು. ಕಡೆಗೆ "ಎಂಬಾರ್, ನಿನಗೆ ಆರೋಗ್ಯ ನೆಟ್ಟಗಿಲ್ಲವೆ ?'' ಎಂದು ಕೇಳಿದರು. ಅರ್ಚನೆಯ ಸಮಯದಲ್ಲಿ ಅವರು ಎಂದೂ ಮಾತನಾಡಿದವರಲ್ಲ.

"ನೆಟ್ಟಗಿದೆ'' ಎಂದು ಹೇಳಿ ಇದ್ದುದರಲ್ಲಿ ಎಂಬಾರ್ ಎಚ್ಚೆತ್ತುಗೊಂಡ. ಮುಂದೆ ಅವರ ಅರ್ಚನೆ ಯಥಾವಿಧಿ ಸಾಗಿತ್ತು. ಎಬಾರ್‌ನ ಕೈ ಎಂದಿನಂತೆ ಚುರುಕಾಗಿರಲಿಲ್ಲ. ಹತೋಟಿ ಮೀರುತ್ತಿತ್ತು. ಪ್ರಯತ್ನ ಪೂರ್ವಕವಾಗಿ ಪ್ರಯಾಸದಿಂದ ಕೆಲಸ ಸಾಗಿಸುತ್ತಿದ್ದ. ದಿನನಿತ್ಯದ ಸರಳತೆ, ಅವನ ಕೆಲಸದಲ್ಲಿ ಇಲ್ಲವೆಂದು ಆಚಾರ್ಯರಿಗೆ ಅನ್ನಿಸಿತು.

ವೇದೋಕ್ತವಾದ ಪೂಜಾವಿಧಿಗಳೆಲ್ಲ ಮುಗಿದ ಮೇಲೆ ಪ್ರತಿ ದಿನ ಎರಡು ಮೂರು ಕೆಲವು ವೇಳೆ ನಾಲ್ಕೈದು ಗಳಿಗೆಗಳವರೆಗೆ ಏಕಾಂತ ಚಿಂತನದಲ್ಲಿ ಇದ್ದು ಬಿಡುವುದು ಅವರ ರೂಢಿ. ಆ ಸಮಯದಲ್ಲಿ ಎಂಬಾರ್ ಸಹ ಅಲ್ಲಿರುವಂತಿರಲಿಲ್ಲ. ಅದು ಮುಗಿದ ಮೇಲೆ ಅವರು ಬಹಿರ್ಮುಖರಾಗಿ ಹೊರಗೆ ಕಾಣಿಸಿಕೊಳ್ಳುತ್ತಿದ್ದರು.

ಆಮೇಲೆ ಅವರು ದೈನಂದಿನದ ಇತರ ಕಾರ್ಯಗಳಲ್ಲಿ ತೊಡಗುತ್ತಿದ್ದರು.

ಬೆಳಗಿನ ಕಲಾಪಗಳೆಲ್ಲ ಮುಗಿದು ಬಹಿರ್ಮುಖರಾಗಿ ಹೊರಗೆ ಬರುವವರೆಗೂ ಅವರು ಯಾರೊಡನೆಯೂ ಮಾತನಾಡುತ್ತಿರಲಿಲ್ಲ. ಇಂದು ಮಾತ್ರ ಅವರು ನಡು ನಡುವೆ ಮಾತನಾಡಿದ್ದರು. ಮಾತನಾಡಬೇಕಾಗಿ ಬಂದಿತ್ತು. ಅದು ಅವರ ಮೇಲೂ ಪರಿಣಾಮವನ್ನು ಮಾಡಿತ್ತು. ಎಂದೂ ಇಲ್ಲದೆ ಇಂದು ತಾವು ಹಾಗೆ ಮಾತನಾಡಿದುದೇಕೆ ಎಂಬ ವಿಚಾರ ಅವರ ಅಂತರಂಗದಲ್ಲಿ ತಲೆಮರೆಸಿಕೊಂಡಂತೆ ಸುಳಿಯುತ್ತಿತ್ತು. ಅದರಿಂದ ಅವರ ಅರ್ಚನೆಗೆ ಬಾಧಕವಾಗದಿದ್ದರೂ ನಿತ್ಯದಲ್ಲಿನ ತೃಪ್ತಿ ಅವರಿಗೆ ಇಂದು ಸಿಗಲಿಲ್ಲ.

ಅರ್ಚನೆಯನ್ನು ಮುಗಿಸಿ ಅವರು ಏಕಾಂತ ಚಿಂತನಕ್ಕೆ ಕುಳಿತರು. ಎಂಬಾರ್ ಎದ್ದು ಈಚೆಗೆ ಬಂದ.

ಅಡಿಗೆಗೆ ಎಸರಿಟ್ಟು ಬಂದಿದ್ದ ಅಚ್ಚಾನ್ ಎಂಬಾರ್‌ನ ಬರವನ್ನೇ ಕಾಯುತ್ತಿದ್ದ. ತನ್ನ ಇಂದಿನ ರೀತಿಗೆ ಸಮಾಧಾನ ಪಡೆಯಬೇಕೆಂಬ ಅವನ ಕಾತರ, ಸಮಯ ಕಳೆದಂತೆಲ್ಲ ಹೆಚ್ಚಾಗ ತೊಡಗಿತ್ತು.

ಎಂಬಾರ್ ತನ್ನ ಬಗೆಗೆ ತಾನೇ ಚಿಂತಿಸುತ್ತ ಹೊರಕ್ಕೆ ಬಂದಿದ್ದ. ಆಚೆ ಈಚೆ ಸಹ ನೋಡದೆ ಇರುವ ಅವನನ್ನು ನೋಡಿದ ಅಚ್ಚಾನ್‌ಗೆ ಅವನೂ ಯಾವುದೋ ಗಾಢವಾದ ಆಲೋಚನೆಯಲ್ಲಿ ಮುಳುಗಿದ್ದಾನೆಂಬುದು ಹೊಳೆಯಿತು. ಎಂಬಾರ್ ಈ ರೀತಿಯಲ್ಲಿ ಚಿಂತಿತನಾಗಿದ್ದುದನ್ನು ಅಚ್ಚಾನ್ ಎಂದೂ ನೋಡಿಯೇ ಇರಲಿಲ್ಲ. ಅಷ್ಟೇಕೆ ಎಂಬಾರ್‌ಗೆ ಸಹ ತಾನೆಂದಾದರೂ ಈ ರೀತಿಯಲ್ಲಿ ಆಲೋಚನೆಗೊಳಗಾಗಿದ್ದೆನೆ ಎಂಬುದರಲ್ಲಿ ಸಂಶಯವಿತ್ತು.

ತಲೆ ತಗ್ಗಿಸಿಕೊಂಡು ಹೊರಗೆ ಬಂದು ಹಾಗೆಯೇ ನೇರವಾಗಿ ತಾವು ರಾತ್ರಿ ಮಲಗಿದ್ದ ಮಂಟಪದ ಕಡೆಗೆ ನಡೆದ. ಅಚ್ಚಾನ್ ಅಲ್ಲಿದ್ದುದು ಅವನ ಗಮನಕ್ಕೆ ಬರಲಿಲ್ಲ ಅಲ್ಲಿ ಅವನು ಬಂದಿರಬಹುದೆಂದು ಊಹಿಸಲೂ ಸಾಧ್ಯವಿರಲಿಲ್ಲ. ಏನು ಮಾಡಬೇಕೆಂಬುದನ್ನು ತಿಳಿಯದ, ಸ್ವಲ್ಪ ಮಟ್ಟಿಗೆ ಉತ್ಸಾಹ ಭಂಗಿತನಾಗಿದ್ದ ಅಚ್ಚಾನ್ ಕಡೆಗೆ ಎಂಬಾರ್‌ನನ್ನು ಹಿಂಬಾಲಿಸಿದ.



2

ಅಲ್ಲಿ, ಅದೇ ಆ ಹಿಂದಿನದೇ ಬಿಕೋ ಎನ್ನುವ ಸ್ವಾಗತ. ಮಂಕಾಗಿ ಎರಡು ಕ್ಷಣ ಅಲ್ಲಿ ನಿಂತು ಎಂಬಾರ್ ಹಿಂತಿರುಗಲೆಳಸಿದ.

ಇದಿರಿಗೆ ಅಚ್ಚಾನ್ !

ಅವನೂ ಪೆಚ್ಚಾಗಿದ್ದ. ಒಬ್ಬರ ಮುಖವನ್ನೊಬ್ಬರು ನೋಡಿದರು. ಆ ನೋಟಗಳಲ್ಲಿ ದುಗುಡ, ಚಿಂತೆಗಳು ಎದ್ದೆದ್ದು ತಾಂಡವಾಡುತ್ತಿದ್ದರೂ ಪರಸ್ಪರ ಅನುಕಂಪ ಸೂಚಿಸುತ್ತಿತ್ತು.

"ಇದೇನು ಅಚ್ಚಾನ್, ಅಗ್ರಸಾಲೆ ಬಿಟ್ಟು ಈ ವೇಳೆಯಲ್ಲಿ ಇಲ್ಲಿಯವರೆಗೆ ?"

"ಈ ವೇಳೆಯಲ್ಲಿ ನೀನೇಕೆ ಇಲ್ಲಿಯವರೆಗೆ ?"

ಇಬ್ಬರೂ ಒಬ್ಬರನ್ನೊಬ್ಬರು ಪ್ರಶ್ನಿಸಿದರು. ಆದರೆ ಒಬ್ಬರೂ ಅದಕ್ಕೆ ಉತ್ತರ ಕೊಡಲಿಲ್ಲ. ಒಬ್ಬರನ್ನೊಬ್ಬರು ತೀರ ಹೊಸಬರೆಂಬಂತೆ ನೋಡತೊಡಗಿದರು. ಇಬ್ಬರ ಅಂತರಂಗದಲ್ಲಿಯೂ ಏನೋ ಬಾಧೆಯಾಗುತ್ತಿತ್ತು. ಬಾಧೆಯಾಗುತ್ತಿತ್ತೆಂಬುದು ಇಬ್ಬರಿಗೂ ಗೊತ್ತಿತ್ತು. ಅದಕ್ಕೆ ಕಾರಣವೇನೆಂಬುದು ಇಬ್ಬರಿಗೂ ಅರಿವಾಗಲಿಲ್ಲ. ಆ ಬಾಧೆಯನ್ನು ಅದುಮಿ ಹಿಡಿಯುವ ಪ್ರಯತ್ನದಲ್ಲಿ ಇಬ್ಬರೂ ಕೊಂಚ ಕಾಲ ಮೌನವಾಗಿದ್ದರು.

ಇದ್ದಕ್ಕಿದ್ದ ಹಾಗೆಯೇ, "ಎಂಬಾರ್, ಇವತ್ತು ಏತಕ್ಕೆ ಹೀಗಾಯಿತು ?" ಎಂದು ಕೇಳಿದ ಅಚ್ಚಾನ್.

"ಹೌದು, ಇವತ್ತು ಏತಕ್ಕೆ ಹೀಗಾಯಿತು ?" ಎಂದು ಎಂಬಾರ್‌ನ ಅಂತರಂಗವೂ ಪ್ರತಿಧ್ವನಿ ಕೊಟ್ಟಿತು. ಉತ್ತರ ಮಾತ್ರ ಸಿಗಲಿಲ್ಲ. ಮತ್ತೆ ಹಿಂತಿರುಗಿ ಬಿಕೋ ಎನ್ನುವ ಆ ತಾಣದತ್ತ ನೋಡಿದ.

"ಅಚ್ಚಾನ್, ಗುರುಗಳು ಕೇಳಿದರೆ ಏನು ಹೇಳುವುದು ?"

"ಇನ್ನೂ ಬಂದಿಲ್ಲವೇ ? ಬಂದಾನು. ಬಯಲು ಕಡೆಗೆ ಹೋಗಿ ಹಾಗೆಯೇ ಯಾವುದಾದರೂ ತೋಟದ ಭಾವಿಯಲ್ಲಿ ಸ್ನಾನವನ್ನು ತೀರಿಸಿಕೊಂಡು ನಿಧಾನವಾಗಿ ಬಂದಾನು."

"ಅವನು ಬರದೆ ಹೋದರೆ ?"

"ಹೌದು, ಬರದೇ ಹೋದರೆ ?" ಅಚ್ಚಾನ್‌ನ ಅಂತರಂಗವೂ ಪ್ರಶ್ನಿಸಿತು. ಯಾತ್ರಿಕನ ಬಗೆಗೆ ಅವನಲ್ಲಿದ್ದ ದೃಢ ನಿಶ್ಚಯ ಎಂಬಾರ್‌ನ ಪ್ರಶ್ನೆಯಿಂದ ಚದುರಿ ಚೆಲ್ಲಾಪಿಲ್ಲಿಯಾಗಿ ಹೋಯಿತು.

"ಹೌದು, ಬರದೆ ಹೋದರೆ ? ಗುರುಗಳು ಕೇಳಿದರೆ ಏನು ಹೇಳುವುದು ?"

ಇಬ್ಬರ ಅಂತರಂಗಗಳಲ್ಲಿಯೂ ಅದೇ ಪ್ರಶ್ನೆಗಳು ಪುಟಿದೆದ್ದು ಕುಣಿಯುತ್ತಿದ್ದವು. ಇಬ್ಬರೂ ಯೋಚಿಸಿಯೇ ಯೋಚಿಸಿದರು. ಅವರಿಗೆ ತಮ್ಮ ಯಾವ ತಪ್ಪೂ ಕಾಣಿಸಲಿಲ್ಲ. ಮನುಷ್ಯರ ಸ್ವಭಾವವೇ ಹೇಗೆ ಅಲ್ಲವೆ ? ಎಂದೂ ತಮ್ಮ ತಪ್ಪನ್ನು ತಾವು ಬೇಗ ಗುರುತಿಸಲಾರರರು. ಗುರುತಿಸಿದರೂ ಹೌದೆಂದುಕೊಳ್ಳಲಾರರು. ಹೌದೆಂದುಕೊಂಡರೂ ಪರರೆದುರಿಗೆ ಅದನ್ನು ಒಪ್ಪಿಕೊಳ್ಳಲಾರರು. ಯೋಚಿಸುತ್ತ ಇಬ್ಬರೂ ಹೆಜ್ಜೆಯನ್ನು ಮುಂದಕ್ಕೆ ಹಾಕತೊಡಗಿದರು. ಅಗ್ರ ಸಾಲೆಯನ್ನು ಸೇರಿದರು. ಅಡಿಗೆಯ ಒಲೆಯ ಕೊಳ್ಳಿಗಳು ಕಳಲಿ ಆರಿಹೋಗುವ ಸ್ಥಿತಿಗೆ ಬಂದಿದ್ದವು. ಅಚ್ಚಾನ್‌ನ ಗಮನ ಅತ್ತ ಹೋಯಿತು.

ಎಂಬಾರ್ ಅಲ್ಲಿಯೇ ಮಣೆಯೊಂದರ ಮೇಲೆ ಕುಳಿತು ಚಿಂತಿಸುತ್ತಿದ್ದ. ಇಂದೇಕೆ ಪೂಜೆಯ ಸಮಯದಲ್ಲಿ ನನ್ನ ಕೈ ಎಡಚೆಡಚಾಯಿತು ? ಎಂದೂ ಹೀಗೆ ಆಗಿರಲಿಲ್ಲವಲ್ಲ. ನನ್ನ ತಪ್ಪಿನಿಂದ, ಆಚಾರ್ಯರು ಸಹ ಎಂದೂ ಅರ್ಚನೆಯ ಸಮಯದಲ್ಲಿ ಮಾತನಾಡದವರು ಇಂದು ಮಾತನಾಡು

ವಂತಾಯಿತಲ್ಲ? ನಾನು ಅವರ ಪ್ರತಭಂಗಕ್ಕೆ ಕಾರಣನಾದೆನಲ್ಲ ? ಸಾಲದುದಕ್ಕೆ ಯಾತ್ರಿಕನೂ ಸಹ ಬರದೆ ಹೋಗಿಬಿಟ್ಟರೆ ಗುರುಗಳಿಗೆ ಏನು ಹೇಳಬೇಕು ? ರಾತ್ರಿ ಕಳೆದು ಬೆಳಗಾಗುವಷ್ಟರಲ್ಲಿ ಹದಿನೈದಿಪ್ಪತ್ತು ಗಳಿಗೆಗಳಲ್ಲಿ ಎಷ್ಟು ಸಿಕ್ಕು ? ಎಷ್ಟು ಪೇಚು ? ಎಷ್ಟು ಮನಸ್ಸಿನ ತುಮುಲ ? ಹಿಂದಿನ ದಿವಸದ ಆ ಆನಂದದ ರುಚಿಯೆಲ್ಲ ಅದೆಷ್ಟು ಬೇಗ ಮಂಗಮಾಯವಾಗಿಬಿಟ್ಟಿತು ? ಯೋಚನಧಾರೆ ನಿಲುಗಡೆಯೇ ಇಲ್ಲವೆಂಬಂತೆ ಸಾಗಿತು.

ಇದ್ದಕ್ಕಿದ್ದಹಾಗೆಯೇ, "ಎಂಬಾರ್, ಅಚ್ಚಾನ್'' ಎಂಬ ಚಿರಪರಿಚಿತವಾದ ಆಚಾರ್ಯರ ಧ್ವನಿ ಕಿವಿಗೆ ಬಿತ್ತು.

ಇಬ್ಬರಿಗೂ ಏಕಕಾಲದಲ್ಲಿ ತಾವು ಕುಳಿತಲ್ಲೆ ಫುಟನೆಗೆದು ಮತ್ತೆ ಕುಕ್ಕರಿಸಿದಂತೆ ಭಾಸವಾಯಿತು. ಇಬ್ಬರೂ ಏಳಲು ಪ್ರಯತ್ನ ಪಟ್ಟರು. ಕಾಲೇ ಬರಲಿಲ್ಲ. ತಮ್ಮ ಶಕ್ತಿಯೆಲ್ಲ ಉಡುಗಿ ಹೋಗಿದೆಯೇನೋ ಅನ್ನಿಸಿತು. ಓಗೊಡಬೇಕೆಂದು ಬಾಯಿ ತೆರೆದರು. ಧ್ವನಿಯೇ ಹೊರ ಬರಲಿಲ್ಲ. ಏನು ಮಾಡುವುದೆಂದು ಪ್ರಶ್ನಿಸುವಂತೆ ಒಬ್ಬರನ್ನೊಬ್ಬರು ನೋಡಿದರು. ಅವರಿಗೆ ಉತ್ತರ ಸಿಕ್ಕುವಷ್ಟರಲ್ಲಿಯಾಗಲೇ ಆಚಾರ್ಯರು ಅಗ್ರಸಾಲೆಯೊಳಗೆ ಉಪಸ್ಥಿತರಾಗಿದ್ದರು.

ಶಿಷ್ಯರಿಬ್ಬರನ್ನೂ ನೋಡಿದರು. ಕ್ಷಣಾರ್ಧದಲ್ಲಿ ಅವರಿಗೆ ಶಿಷ್ಯರು ಆತಂಕಗೊಂಡಿದ್ದಾರೆಂಬುದು ಗೋಚರವಾಯಿತು.

"ಆ ರೂವಾರಿಗಳೆಲ್ಲಿ ?''

ಮರಿ ಪಿಶಾಚಿಯಂತೆ ಅಂತರಂಗದಲ್ಲೇ ಕುಟುಕುತ್ತಿದ್ದ ಈ ಪ್ರಶ್ನೆ ಹೊರಗೆ ಬಂದು ಮಹಾಮಾರಿಯಂತೆ ಬೃಹದಾಕಾರ ತಾಳಿ ಕಣ್ಣೆದುರಿಗೇ ನಿಂತಿತು. ಇಬ್ಬರೂ ಬೆಚ್ಚಿದವರಂತೆ ಸಿಟಮ್ಮನೆ ಎದ್ದುನಿಂತರು. ಕಳೆದುಹೋಗಿದ್ದ ತಮ್ಮ ಶಕ್ತಿ ತಿರುಗಿ ಬಂತೆಂದು ಅವರು ಭಾವಿಸಿದರು. ಅಚ್ಚಾನ್, ಎಂಬಾರ್ ಕಡೆ ನೋಡಿದ. ಎಂಬಾರ್ ಆಚಾರ್ಯರ ಕಡೆ ನೋಡಿದ.

"ನಾವೂ ಅದನ್ನೇ ಯೋಚಿಸುತ್ತಿದ್ದೇವೆ ಗುರುಗಳೆ.'' ಎಂಬಾರ್‌ನ ಬಾಯಿಯಲ್ಲಿ ಮಾತಂತೂ ಹೊರಬಿತ್ತು, ಕೇಳಿಯೂ ಕೇಳಿಸದಂತೆ.

ಆಚಾರ್ಯರು ಮರು ಮಾತನಾಡದೆ ಹಿಂತಿರುಗಿಬಿಟ್ಟರು. ಎಂಬಾರ್ ಅವರನ್ನು ಹಿಂಬಾಲಿಸಿದ. ಆಚಾರ್ಯರು ತೆರೆಮರೆ ಮಾಡಿದ್ದ ತಮ್ಮ ವಿಶ್ರಾಂತಿ ಸ್ಥಾನಕ್ಕೆ ಹೋದರು. ಕುಳಿತು ಏನನ್ನೋ ಯೋಚಿಸತೊಡಗಿದರು. ಎಂಬಾರ್ ನಿಂತೇ ಇದ್ದ. ಅದನ್ನು ಸಹ ಅವರು ಗಮನಿಸಿದಂತೆ ಕಾಣಲಿಲ್ಲ. ತನ್ನಲ್ಲಿ ಈ ಕಾರಣವಾಗಿ ಉದ್ಭವವಾಗಿದ್ದ ವಿಚಾರಗಳನ್ನೆಲ್ಲ ಸಮ್ಮುಖದಲ್ಲಿ ಹೇಳಿಬಿಡಬೇಕೆಂದು ಎಂಬಾರ್ ತವಕಿಸುತ್ತಿದ್ದ.

ಅತ್ತ ಅಚ್ಚಾನ್ ಸಹ ಅಗ್ರಸಾಲೆಯಲ್ಲಿ ಚಿಂತಿಸುತ್ತ ಕುಳಿತಿದ್ದ. ಅರಮನೆಯ ಊಳಿಗದವರ ಒಂದು ಗುಂಪೇ ಬಂತು. ಎರಡೂ ಭಾರಿ ಜಲ್ಲಿಗಳು, ಅವರೊಂದಿಗೆ ಬಂದುವು. ಅದಲ್ಲದೆ ಊಳಿಗದವರು ಆಹಾರ ಪದಾರ್ಥಗಳಿಂದ, ತರಕಾರಿಗಳಿಂದ ತುಂಬಿದ ಗೂಡೆಗಳನ್ನೂ ಹಾಲು ಮೊಸರು ಎಣ್ಣೆ ಬೆಣ್ಣೆಗಳಿಂದ ತುಂಬಿದ ಮಗೆಗಳನ್ನೂ ತಂದಿದ್ದರು. ಅವನ್ನೆಲ್ಲ ಪಾಂಗಿತವಾಗಿ, ಅಗ್ರಸಾಲೆಗೆ ಹೊಂದಿಕೊಂಡಿದ್ದ ಉಗ್ರಾಣದಲ್ಲಿ ಇಟ್ಟರು. ಆಮೇಲೆ ಅವರ ಪೈಕಿ ಒಬ್ಬ, "ಬುದ್ಧಿ, ಇನ್ನೆರಡು ಗಳಿಗೆ ಬಿಟ್ಟುಕೊಂಡು ಸಚಿವ ಮಾಸ್ವಾಮಿಯೋರು ಬರ್ತಾರೆ. ಸ್ವಾಮಿಗೋಳಿಗೆ ತಿಳಿಸಬೇಕಂತೆ. ಅವರ ಅಪ್ಪಣೆಯ ಪ್ರಕಾರ ಈ

ಸಾಮಗ್ರಿಗಳನ್ನು ತಮ್ಮ ವಶಕ್ಕೆ ಒಪ್ಪಿಸಿದ್ದೀವಿ. ಅಪ್ಪಣೆ ಕೊಡಿ ಬುದ್ಧಿ'' ಎಂದು ವಂದಿಸಿ ಹೊರಟು ಹೋದರು.

ತಾನು ಆ ಸುದ್ದಿಯನ್ನು ಆಚಾರ್ಯರಿಗೆ ಮುಟ್ಟಿಸುವುದಾಗಿ ತಿಳಿಸಿ ಅಚ್ಚಾನ್‌ನನ್ನು ಕಳುಹಿಸಿಕೊಟ್ಟು ಎಂಬಾರ್ ಮತ್ತೆ ತೆರೆಯ ಒಳಕ್ಕೆ ಹೋದ. ''ಗುರುಗಳೆ.''

ಆಚಾರ್ಯರು ತಲೆಯೆತ್ತಿದರು. ಎಂಬಾರ್‌ನನ್ನು ನೋಡಿದರು. ಅವನು ಹೆದರಿ ಬಾಗಿ ನಿಂತಿದ್ದ. ಅವನ ಮುಖ ಕಂದಿ ಹೋಗಿತ್ತು.

''ಏನು ಎಂಬಾರ್ ?'' ಮೆದುವಾಗಿ ಆಚಾರ್ಯರು ಕೇಳಿದರು.

''ಸಚಿವ ನಾಗಿದೇವಣ್ಣನವರು ಸ್ವಲ್ಪ ಹೊತ್ತಿನಲ್ಲಿಯೇ ಇಲ್ಲಿಗೆ ಬಿಜಯ ಮಾಡಿಸುತ್ತಾರಂತೆ.''

''ಒಳ್ಳೆಯದು.''

''ಗುರುಗಳೆ, ಅದೇ ಆ ಯಾತ್ರಿಕ..........''

''ಆತ ಬರುವುದಿಲ್ಲ. ನಾವು ನಿಮ್ಮನ್ನು ಎಚ್ಚರಿಸಿದ್ದರೂ ನೀವುಗಳು ಏನೋ ಕೆಣಕು ಮಾತುಗಳನ್ನು ಆಡಿದ್ದೀರಿ. ಅದರಿಂದಲೇ ಹೊರಟು ಹೋಗಿದ್ದಾರೆ.'' ಆಚಾರ್ಯರು ತೀರ್ಪನ್ನೇ ಕೊಟ್ಟ ಹಾಗೆ ಹೇಳಿದರು.

''ಅಂತಹ ಮಾತನ್ನು ಆಡಿದುದು ನೆನಪಿಲ್ಲ ಗುರುಗಳೆ.''

''ನೆನಪಿಲ್ಲದಿರಬಹುದು. ಮಾತಿನ ಉತ್ಸಾಹದಲ್ಲಿ ತುಟಿ ಮೀರಿ ಬಂದ ಮಾತುಗಳೆಲ್ಲ ನೆನಪಿನಲ್ಲಿ ಉಳಿಯುವುದಿಲ್ಲ ಅದೂ ಅಲ್ಲದೆ ನಮಗೆ ತೀರ ಸ್ವಾಭಾವಿಕವೆನಿಸುವ ಮಾತೂ ಸಹ, ಸೂಕ್ಷ್ಮ ಮನಸ್ಸಿನವರ ಮೇಲೆ ವಿಪರೀತ ಪರಿಣಾಮ ಮಾಡುತ್ತದೆ.''

''ಏನೋ ಅದು ನನಗೆ ಹೊಳೆದಿಲ್ಲ ಗುರುಗಳೆ. ಆದರೆ ಎದ್ದಾಗಿನಿಂದ ಆತ ಕಣ್ಣಿಗೆ ಕಾಣದೆ ಮನಸ್ಸಿನಲ್ಲಿ ಅಳುಕುತ್ತಿದ್ದೆ. ಇಷ್ಟು ಮಾತ್ರ ನಿಜ.''

''ಅದರಿಂದಲೇ ನಿನ್ನ ಕೆಲಸ ಅಚ್ಚಾನ್‌ನ ಕೆಲಸ ಇಂದು ಎಡಚೆಡಚು. ಹೋಗಲಿ ಬಿಡಿ. ನೀವೇನು ಮಾಡಬಲ್ಲಿರಿ ? ಎಲ್ಲರಿಗೂ ಎಲ್ಲರ ಅಂತರಂಗವನ್ನು ತಿಳಿಯುವ ಶಕ್ತಿ ಇರುವುದಿಲ್ಲ.''

''ಅಂತರಂಗ ತಿಳಿಯುವ ಶಕ್ತಿ ಇಲ್ಲದಿದ್ದರೂ ನೋವುಂಟು ಮಾಡಬಾರದ ರೀತಿಯಲ್ಲಿ ನಡೆದುಕೊಳ್ಳುವುದು ಹೇಗೆಂಬುದು ತಮ್ಮ ಸೇವೆಯಿಂದ ತುಸು ಅರಿವಾಗಿದೆ.'' ಎಂಬಾರ್‌ನ ಈ ಮಾತಿನಲ್ಲಿ ತನ್ನ ನಡವಳಿಕೆಯ ರೀತಿಯ ಬಗೆಗೆ ಸಮರ್ಥನೆಯ ಧ್ವನಿಯಿತ್ತು.

''ಹಾಗಿದ್ದರೆ ರಾತ್ರಿ ಏನೆಲ್ಲ ನಡೆಯಿತೆಂದು ನೆನಪಿದ್ದರೆ ಒಂದನ್ನೂ ಬಿಡದಂತೆ ಹೇಳು.''

ಎಂಬಾರ್ ಎಲ್ಲವನ್ನೂ ಹೇಳಿದ.

ಮೌನವಾಗಿ ಆಚಾರ್ಯರು ಆಲಿಸಿದರು.

''ನಿಮ್ಮ ನಡವಳಿಕೆ ಸಹಜವಾದುದೆ. ಆದರೂ ಆತನ ಸ್ವವಿಷಯವನ್ನು ಅರಿತು ಕೊಳ್ಳಬೇಕೆಂಬ ನಿಮ್ಮ ತೀವ್ರಾಸಕ್ತಿ ನಡೆದ ಮಾತುಗಳಲ್ಲಿ ನಮಗೆ ತೋರಿ ಬರುತ್ತದೆ. ನಿಮ್ಮ ನೋಟ ಒಪ್ಪರ ಹಾಕಿದ ನೋಟವಾಯಿತು. ಈಗ ಕೈ ಮೀರಿದೆಯೆಂದ ಮೇಲೆ ಅದನ್ನೇ ಪುನಃಚಿಂತಿಸಿ ಫಲವಿಲ್ಲ. ಅದನ್ನೆಲ್ಲ ಮರೆತುಬಿಡಿ. ಆತ ಇಲ್ಲಿಗೆ ಬಂದ ಮೇಲೆ ನಮ್ಮಲ್ಲಿ ಏನೋ ಒಂದು ಆಶೆ ತಲೆದೋರಿತ್ತು. ಆತನಿಲ್ಲದೆ ಅದು ಹಾಗೆಯೇ ಮುರುಟಿಕೊಂಡಿತು. ಬಹುಶಃ ನಮ್ಮ ಆಶೆಯಲ್ಲಿ ಸ್ವಾರ್ಥದ ನೆಲೆಯಿದ್ದಿರಬೇಕು. ಎಂತಲೇ ಹೀಗಾಗಿದೆ'' ಎಂದು ಆಚಾರ್ಯರು ಮೇಲೆ ನೋಡಿದರು. ಮತ್ತೆ ಮೌನತಾಳಿದರು.

ಆಚಾರ್ಯರೊಡನೆ ಇಷ್ಟೆಲ್ಲ ಮಾತಾದ ಮೇಲೆ ಬೆಳಗಿನಿಂದ ಇದ್ದ ಆ ತುಮುಲ ಇರಲಿಲ್ಲ. ಈ ಕಾರಣವಾಗಿ ಅವನ ಮನಸ್ಸು ಸಹ ಒಂದು ಬಗೆಯ ಸ್ಥಿಮಿತಕ್ಕೆ ಬಂದಿತ್ತು. ಒಂದೊಂದು ಮಾತನ್ನೇ, ಒಂದೊಂದು ಸನ್ನಿವೇಶವನ್ನೇ ಅವನು ತೂಗಿ ಸುರಿದು ನೋಡಿದ. ಆಚಾರ್ಯರ ನಿರ್ಣಯ ಅವನಿಗೆ ಸರಿಯೆನಿಸಿತು. ಆತನ ವಿಷಯವನ್ನು ತಿಳಿಯುವ ಬಗೆಗೆ ತಮ್ಮಲ್ಲಿ ಆವಿರ್ಭಾವವಾದ ಆ ತೀವ್ರಾಸಕ್ತಿಯು ಹೇಗೆ ಅಗೋಚರವಾಗಿ ಮಾಡಬಾರದ ಕೆಲಸವನ್ನು ಮಾಡಿತ್ತೆಂಬುದು ಅವನಿಗೆ ಅರಿವಾಯಿತು.

ಒಡನೆಯೇ ಆಚಾರ್ಯರ ಪಾದಗಳ ಮೇಲೆ ತನ್ನ ಶರೀರವನ್ನು ಹರಹಿಕೊಂಡು, "ಗುರುಗಳೆ ಕ್ಷಮಿಸಬೇಕು. ನಾಲಿಗೆಯನ್ನು ಬಹಳ ಹದ್ದಿನಲ್ಲಿಡಬೇಕು ಎಂಬ ಇನ್ನೊಂದು ಮಹತ್ತರ ಪಾಠವನ್ನು ಇದರಿಂದ ಕಲಿತಂತಾಯಿತು'' ಎಂದ ಎಂಬಾರ್.

ಎಂಬಾರ್‌ನ ಬೆನ್ನಿನ ಮೇಲೆ ಕೈಯಾಡಿಸಿ, "ಏಳು, ಏಳು ಎಂಬಾರ್. ಅವನ್ನೆಲ್ಲ ಮರೆತುಬಿಡು. ಅನುಭವವೇ ನಮಗೆ ಹೆಜ್ಜೆ ಹೆಜ್ಜೆಗೂ ಗುರು. ತನ್ನ ತಪ್ಪನ್ನು ತಾನು ತಿಳಿದುಕೊಂಡು, ಒಪ್ಪಿಕೊಂಡು, ತನ್ನನ್ನು ತಾನೇ ತಿದ್ದಿಕೊಳ್ಳುವ ಜ್ಞಾನ ಬಂದರೆ ನಿಜಮಾನವನಾಗುವ ದಾರಿಯನ್ನು ಅವನು ಹಿಡಿದಿದ್ದಾನೆಂಬ ಭರವಸೆ ಬರುತ್ತದೆ. ಸಚಿವರು ಇಂದು ಬಂದರೆ ಅವರನ್ನು ಇಲ್ಲಿಯೇ ಪ್ರಸಾದಕ್ಕೆ ನಿಲ್ಲಿಸಿಕೊಳ್ಳೋಣ. ಅಚ್ಚಾನ್‌ಗೆ ಹೋಗಿ ಹೇಳು. ಅವನ ಮನಸ್ಸೂ ಸಮಾಧಾನಗೊಳ್ಳಲಿ. ಇಲ್ಲದಿದ್ದರೆ ಅಡಿಗೆಯ ರುಚಿ ಕೆಟ್ಟಿತು. ಸಚಿವರು ಊಟದಲ್ಲಿ ರಸಿಕರು. ನಿನ್ನೆ ನಾವೇ ಸ್ವತಃ ಅವರ ರಸಿಕತೆಯನ್ನು ರಾಜಪ್ರಾಸಾದದಲ್ಲಿ ಕಂಡಿದ್ದೇವೆ. ಹೋಗು ಸಚಿವರ ಜೊತೆಗೆ ಯಾರು ಯಾರು ಬರುತ್ತಾರೊ ಗೊತ್ತಿಲ್ಲ. ಆರೆಂಟು ಹೆಚ್ಚಿನ ಜನಕ್ಕೂ ಪ್ರಸಾದ ಸಿದ್ಧವಿರಲಿ.''

ಎಂಬಾರ್ ಎದ್ದು ಸಮಾಧಾನದಿಂದ ಅಗ್ರಸಾಲೆಯತ್ತ ನಡೆದ.

ಸಚಿವರ ಅಂದಳ ದೇವಸ್ಥಾನದ ಬಾಗಿಲಲ್ಲಿ ಇಳಿಯಿತು. ಈ ಸುದ್ದಿಯನ್ನು ಎಂಬಾರ್ ಆಚಾರ್ಯರಿಗೆ ಮುಟ್ಟಿಸಿ, ಸಚವರನ್ನು ಇದಿರುಗೊಳ್ಳಲು ಉತ್ತರೀಯವನ್ನು ಸೊಂಟಕ್ಕೆ ಬಿಗಿಯುತ್ತಾ ಸರಸರನೆ ಬಂದ. ಕೈ ಮುಗಿದು ವಂದಿಸಿ ಮುಗುಳ್ನಗೆಯ ಸ್ವಾಗತವನ್ನೂ ಕೋರಿದ. ನಾಗಿದೇವಣ್ಣ ಹಸನ್ಮುಖನಾಗಿಯೇ ಇದ್ದ. ಪ್ರತಿ ವಂದನೆಗೈದ.

"ಆಚಾರ್ಯರ ಆಹ್ನಿಕ ಆರ್ಚನಾದಿಗಳೆಲ್ಲವೂ ಮುಗಿದಿವೆ ತಾನೆ ?''

"ಆಗಲೇ ಮುಗಿದವು. ತಮ್ಮ ಆಗಮನವನ್ನೇ ನಿರೀಕ್ಷಿಸುತ್ತಿದ್ದಾರೆ.''

"ನನ್ನ ಭಾಗ್ಯ.''

ಇಬ್ಬರೂ ತೆರೆಯೊಳಕ್ಕೆ ಹೋದರು. ಹಸನ್ಮುಖರಾಗಿ ಸ್ವಾಗತವಿತ್ತ ಆಚಾರ್ಯರಿಗೆ ನಾಗಿದೇವಣ್ಣ ದೀರ್ಘದಂಡ ಪ್ರಣಾಮವನ್ನು ಮಾಡಿದ. ನಂತರ ಬದಿಯ ಆಸನದ ಮೇಲೆ ಮಂಡಿಸಿದ.

"ಎಂಬಾರ್, ನಾಗಿದೇವಣ್ಣನವರಿಗೆ ಕುಡಿಯಲು ಕೊಂಚ ಬಿಸಿ ಬಿಸಿ ಹಾಲನ್ನು ತಾ.''

ಅಷ್ಟರಲ್ಲಿ ಎಂಬಾರ್ ಹಾಲನ್ನು ತಂದು ಸಚಿವರ ಮುಂದೆ ಇಟ್ಟು "ಸ್ವೀಕರಿಸಬೇಕು'' ಎಂದ.

"ಸ್ವೀಕರಿಸಿ'' ಎಂದು ಆಚಾರ್ಯರೂ ಹೇಳಿದರು.

ನಾಗಿದೇವಣ್ಣ ಹಾಲನ್ನು ಕುಡಿದು ಕೋಶಿಕೆಯನ್ನು ಪಕ್ಕದಲ್ಲಿ ಇಟ್ಟ

“ನಿನ್ನೆಯ ದಿವಸ ಆಕಸ್ಮಾತ್ ಒಂದು ಬಹು ನೊಂದ ಜೀವದ ಭೇಟಿಯಾಯಿತು. ಆ ವ್ಯಕ್ತಿಯಲ್ಲಿ ಅದ್ಭುತವಾದ ಶಿಲ್ಪಕಲೆ ಇದೆಯೆಂದು ನಮ್ಮ ಮನಸ್ಸಿಗೆ ಏಕೋ ಹೊಳೆದು ಬಂತು. ಆ ಜೀವದ ನೋವೇನೆಂಬುದನ್ನು ಅರಿತುಕೊಂಡು, ಅದರ ಉಪಶಮನವನ್ನು ಮಾಡಬೇಕೆಂದಿದ್ದೆವು'' ಎಂದು ಹೇಳಿ ಯಾತ್ರಿಕನ ಎಲ್ಲ ವಿವರವನ್ನು ಹೇಳಿ ಕಡೆಗೆ, “ಭಗವಂತನಿಗೆ ಇಂದು ನಮ್ಮ ಮೇಲೆ ದಯೆ ಬರಲಿಲ್ಲ. ನಿನ್ನೆಯ ದಿವಸ ಇದ್ದ ದಯೆ ಇವತ್ತು ಇಲ್ಲದಾಯಿತಲ್ಲ ಎಂದು ತಾಪವಾಗಿದೆ.''

“ಎಲ್ಲಿ ಹೋಗಿರುತ್ತಾನೆ ? ಹತ್ತೂ ಕಡೆ ಬೇಹಿನವರನ್ನು ಅಟ್ಟಿ ಅವನು ಎಲ್ಲಿಯೇ ಇರಲಿ ಹುಡುಕಿಸಿ ಹೆಡೆಮುರಿಗೆ ಕಟ್ಟಿಸಿ ತರಿಸುತ್ತೇನೆ. ಚಿಂತಿಸಬೇಡಿ.''

“ಕೂಡದು, ಕೂಡದು. ಹಾಗೆಂದಿಗೂ ಮಾಡಕೂಡದು. ನೊಂದ ಜೀವ ಸ್ವೇಚ್ಛೆಯನ್ನು ಬಯಸುತ್ತದೆ. ಆತನ ಆ ಸ್ವೇಚ್ಛೆಯಲ್ಲಿ ಒಂದು ಬಗೆಯ ಎಟ್ಟಿತನವಿದೆ. ಕಾಲಕ್ರಮೇಣ ಅದು ಹಣ್ಣಾಗಬೇಕು. ಆಗ ಅದು ತನಗೆ ತಾನೇ ಸರಿಹೋಗುತ್ತದೆ. ಅಥವಾ ಹೀಗಿದ್ದರೂ ಇರಬಹುದು. ಆ ಜೀವಕ್ಕೆ ಉಪಶಾಂತಿಯನ್ನು ದೊರಕಿಸಿ ಕೊಟ್ಟು ತನ್ಮೂಲಕ ಪುಣ್ಯವನ್ನು ಪಡೆಯುವ ಕೆಲಸಕ್ಕೆ ಭಗವಂತನು ಬೇರೆ ಯಾರನ್ನಾದರೂ ನಿಯೋಜಿಸಿರಬಹುದು. ಅದರಿಂದಲೇ ಆ ಶಿಲ್ಪಿಯು ನಮ್ಮ ಕೈಯಿಂದ ಜಾರಿರಬಹುದೇನೋ ! ಇನ್ನೊಬ್ಬರಿಗೆ ಲಭ್ಯವಾಗುವ ಪುಣ್ಯ ನಮ್ಮದಾಗಬೇಕೆಂದು ಬಯಸುವುದು ತಪ್ಪು ಎಂದು ತಿಳಿದಾದರೂ ನಾವು ಸಮಾಧಾನ ಪಡಬೇಕಾಗಿದೆ. ಆದರೆ ಆತನನ್ನು ಮಾತನಾಡಿಸುತ್ತಿದ್ದಾಗ ನಮಗೆ ಒಂದು ವಿಷಯ ಹೊಳೆಯಿತು. ಪೊಯ್ಸಳ ಚಕ್ರವರ್ತಿಗಳು ಕರುಣಿಸಿರುವ ಸಂಪತ್ತನ್ನು ಯಾದವಪುರದಲ್ಲಿಯೇ ಒಂದು ದೇವಸ್ಥಾನ ನಿರ್ಮಾಣದ ಸಲುವಾಗಿ ಏಕೆ ಉಪಯೋಗಿಸಬಾರದೆಂದು. ನಿಮ್ಮ ಅಭಿಪ್ರಾಯವೇನು ?''

“ತಮ್ಮ ಚಿತ್ತ. ನಾನು ಹೇಳುವುದೇನಿದೆ. ಇದರಲ್ಲಿ ನನ್ನ ಸೇವೆಯನ್ನು ಸೇರಿಸಲು ಸಿದ್ಧನಿದ್ದೇನೆ.''

“ಆದರೆ ಶಿಲ್ಪಿಯೇ ಇಲ್ಲ.''

“ಹಿಡಿದು ತರಿಸುತ್ತೇನೆಂದರೆ ಕೂಡದೆಂದು ಅಪ್ಪಣೆಯಾಯಿತು.''

“ಹೌದು. ಏಕೆಂದರೆ ಅಧಿಕಾರದಿಂದ, ಬಲಪ್ರಯೋಗದಿಂದ, ಮಾಡಿಸಬಹುದಾದ ಕೃತಿನಿರ್ಮಾಣದಲ್ಲಿ ಜೀವವಿರುವುದಿಲ್ಲ. ಅದರಿಂದ ಈಗ ಅದರ ಯೋಚನೆ ಏಕೆ ?''

“ರಾಜ್ಯಕ್ಕೆಲ್ಲ ಒಬ್ಬನೇ ಶಿಲ್ಪಿಯೇ ? ಅಂತಹ ನೂರಾರು ಜನರನ್ನು ಪಡೆದಿದೆ ನಮ್ಮ ಪೊಯ್ಸಳ ರಾಜ್ಯ. ತಲೆಮಾರು ತಲೆಮಾರುಗಳಿಂದ ರೂವಾರಿ ಮನೆತನಗಳು, ಪಾಂಚಾಲರ ಮನೆತನಗಳು ನಮ್ಮಲ್ಲಿ ಪ್ರಸಿದ್ಧಿಯನ್ನು ಪಡೆದಿವೆ. ತಾವು ಅಪ್ಪಣೆ ಮಾಡಿದರೆ ನಾಳೆಯೇ ಅವರಲ್ಲಿ ಅಗ್ರಗಣ್ಯರಾದವರನ್ನು ಕರೆಕಳಿಸುತ್ತೇನೆ.''

“ಇರಲಿ. ಯೋಚಿಸಿ ನಿರ್ಧರಿಸೋಣ. ಇಂದು ತಮ್ಮ ಪ್ರಸಾದ ಸ್ವೀಕಾರ ಇಲ್ಲಿಯೇ ಆಗಬೇಕು.''

ಬದಲು ಹೇಳಲು ನಾಗಿದೇವಣ್ಣನವರಿಗೆ ಸಾಧ್ಯವೇ ಇರಲಿಲ್ಲ. ಮನೆಗೆ ಹೇಳಿ ಕಳುಹಿಸಿ ತಾವು ಅಲ್ಲಿಯೇ ನಿಂತರು.

ಪ್ರಸಾದ ಸ್ವೀಕಾರವಾದ ಮೇಲೆ ಅದೂ ಇದೂ ಮಾತನಾಡುತ್ತ ನಾಗಿದೇವಣ್ಣ ಮೆಲ್ಲಗೆ ದೇವಸ್ಥಾನ ನಿರ್ಮಾಣದ ಮಾತನ್ನು ಮತ್ತೆ ತೆಗೆದ. ಅವನ ತಲೆಯಲ್ಲಿ ಆಗಲೇ ಆ ವಿಷಯ ಗುಂಗಿಯಂತೆ ಹೊಕ್ಕು

ಝೇಂಕರಿಸುತ್ತಿತ್ತು. ಇವತ್ತು ನಾಳೆಯಲ್ಲಿಯೇ ಅದರ ಇತ್ಯರ್ಥವಾಗಿ ಬಿಡುವುದು ಒಳಿತೆಂದು ಅವನಿಗೆ ತೋರಿತ್ತು. ಏಕೆಂದರೆ ಹಿಂದಿನ ರಾತ್ರಿ ಮನ್ತ್ರಣಸಾಲೆಯಲ್ಲಿ ಮನ್ತ್ರಣಕ್ಕೆ ಸೇರಿದಾಗ ಸನ್ನಿಧಾನ ಇನ್ನು ಮುಂದೆ ವೇಲಾಪುರಿಯನ್ನು ತಮ್ಮ ಮುಖ್ಯ ಬಿಡಾರ ಸ್ಥಾನವನ್ನಾಗಿ ಮಾಡಿಕೊಳ್ಳಬೇಕೆಂಬ ತಮ್ಮ ಆಶಯುವನ್ನು ವ್ಯಕ್ತಪಡಿಸಿದ್ದರು. ಬಹುಶಃ ರಾಜಕುಮಾರಿಯ ಬಯಕೆಯ ಕಾರಣವಾಗಿ ಅದು ಅಷ್ಟು ಬೇಗ ಖಚಿತ ಪಟ್ಟಿತ್ತೋ ಏನೋ. ಏನೇ ಇರಲಿ, ಸನ್ನಿಧಾನ ವೇಲಾಪುರಿಯಲ್ಲಿ ವಾಸಿಸುವುದಾದರೆ ಆಡಳಿತ ಕೇಂದ್ರವೂ ಅದೇ ಆಗುತ್ತದೆ. ಆಗ ಯಾದವಪುರದ ಪ್ರಾಶಸ್ತ್ಯವು ಕಡಿಮೆಯಾಗುತ್ತದೆ ಎಂಬುದು ಅವನ ಮನವರಿಕೆ. ಯಾದವಪುರದ ಮೇಲೆ ಅವನಿಗೆ ಹೆಚ್ಚಿನ ವಾಂಛಲ್ಯ. ಆಚಾರ್ಯರ ಆಲೋಚನೆ ಕಾರ್ಯರೂಪ ತಾಳಿದರೆ ಅಲ್ಲಿ ಒಂದು ಸುಂದರ ದೇವಸ್ಥಾನವಾದರೂ ಶಾಶ್ವತವಾಗಿ ನಿಲ್ಲಬಹುದು. ತನ್ನದೇ ಸ್ವಂತ ನೇತೃತ್ವದಲ್ಲಿ ಅದನ್ನು ಮಾಡಿಸುವ ಭರವಸೆಯನ್ನು ತಾನು ಸನ್ನಿಧಾನಕ್ಕೆ ಕೊಟ್ಟು ಒಪ್ಪಿಸಬಹುದು. ಎಂದು ಮೊದಲಾಗಿ ಆಲೋಚಿಸಿ ನಾಗಿದೇವಣ್ಣ ಆ ಮಾತನ್ನು ತೆಗೆದಿದ್ದ.

"ಹಾಗಾದರೆ ಇಲ್ಲಿ ಯಾವ ದೇವಸ್ಥಾನವನ್ನು ಕಟ್ಟಿಸಬೇಕೆಂದು ತಮ್ಮ ಆಶಯ ?"

"ದೇವಸ್ಥಾನ ನಿರ್ಮಾಣವಾಗಬೇಕೆಂಬ ಬಗೆಗೆ ಇನ್ನೂ ನಾವೇನು ತೀರ್ಮಾನ ಮಾಡಿಲ್ಲ."

"ಇರಲಿ. ಒಂದು ವೇಳೆ ಹಾಗೆಂದು ತೀರ್ಮಾನಿಸಿದರೆ"

"ನಾವು ಮಹಾಲಕ್ಷ್ಮಿಯನ್ನು ಸಾಕ್ಷಾತ್ತಾಗಿ ಕಂಡ ಸ್ಥಳ ಇದು. ಮಹಾಲಕ್ಷ್ಮಿಯ ದೇವಸ್ಥಾನದ ಕೆಲಸವನ್ನು ಪೂರೈಸಿ ಬಂದಿದ್ದ ರೂವಾರಿಯ ಕಾರಣವಾಗಿ ಹುಟ್ಟಿ ಬಂದುದು ದೇವಸ್ಥಾನ ನಿರ್ಮಾಣದ ಆಶಯ. ಜೊತೆಗೆ ನಮ್ಮ ಆರಾಧ್ಯದೈವ ನಾರಾಯಣ. ಆ ಮೂರರ ಮೇಳವನ್ನು ನಾವು ಕಾಣಹೊರಟರೆ ಒಂದು ವಿಚಾರ ನಮಗೆ ಹೊಳೆಯುತ್ತದೆ. ನಮಗೆ ದರ್ಶನವಿತ್ತ ಮಹಾಲಕ್ಷ್ಮಿ ಇಲ್ಲೇ ಇರುವಂತಾಗಲಿ ಎಂದು. ಅದರಿಂದ ಲಕ್ಷ್ಮೀನಾರಾಯಣ ಸ್ವಾಮಿಯ ದೇವಸ್ಥಾನವನ್ನು ಕಟ್ಟಿಸಬಹುದು. ಅದು ನಮ್ಮ ಶ್ರೀವೈಷ್ಣವ ಪಂಥಕ್ಕೂ ಸಾಂಕೇತಿಕವಾದಂತಾಗುತ್ತದೆ."

"ಬಹಳ ಸಾಧುವಾದ ಆಲೋಚನೆ. ಇದನ್ನು ಸನ್ನಿಧಾನದ ಕಿವಿಗೆ ಮುಟ್ಟಿಸುತ್ತೇನೆ."

"ಕೂಡದು, ಕೂಡದು. ಅವರಿಗೆ ತಿಳಿದರೆ ಮತ್ತೆ ಅದಕ್ಕಾಗಿ ಅವರು ತಮ್ಮ ಬೊಕ್ಕಸಕ್ಕೆ ಕೈ ಹಾಕುತ್ತಾರೆ. ಇದು ಕೇವಲ ನಮ್ಮದಾಗಿ ನಡೆಯಬೇಕು ನಿಮ್ಮ ಸಹಕಾರ ಹಸ್ತವೂ ಇದರಲ್ಲಿ ವೈಯಕ್ತಿಕವಾಗಿ ಇದ್ದೇ ಇರುತ್ತದೆ. ಇದರ ನಿರ್ಮಾಣ ಆಗುವುದಿದ್ದರೆ ಈ ನಮ್ಮ ನಿಲುಮೆಗಳಿಗೆ ಮನ್ನಣೆ ಇರಬೇಕು. ಪ್ರಭುಗಳಿಗೆ ತಿಳಿಯಬಾರದೆಂದಲ್ಲ. ಅವರು ದಯಪಾಲಿಸಿರುವ ಹಣವನ್ನು ಉಪಯೋಗಿಸಿ ಅವರ ಪರವಾಗಿ ನಾವು, ನೀವು ನಿಂತೇ ಈ ಕೆಲಸವನ್ನು ಮಾಡಿ ಮುಗಿಸಬೇಕು. ಹಾಗೆ ನಿಮಗೆ ಒಪ್ಪಿಗೆ ಇರುವುದಾದರೆ ಆಲೋಚಿಸೋಣ"

"ದೇವಸ್ಥಾನ ನಿರ್ಮಾಣವಾಗತಕ್ಕದ್ದೆ. ತಮ್ಮ ನಿಲುಮೆಗಳಿಗೆಲ್ಲ ನನ್ನ ಒಪ್ಪಿಗೆಯಿದೆ."

"ಆಗಲಿ ವಿಚಾರ ಮಾಡೋಣ" ಎಂದು ಆಚಾರ್ಯರು ಆ ಮಾತನ್ನು ಆ ಸಮಯದಲ್ಲಿ ಒಂದು ನಿಲುಗಡೆಗೆ ತಂದರು.

ಮುಂದೆ ಬಹಳ ಕೆಲಸಗಳು ಆಗಬೇಕಾದುದಿದ್ದುದರಿಂದ ನಾಗಿದೇವಣ್ಣ ಆಚಾರ್ಯರ ಸಮ್ಮತಿ ಪಡೆದು ಬೀಳ್ಕೊಂಡ.

ಆ ದಿನದ ಸಂಜೆಯ ಸಭೆಯಲ್ಲಿ ಅನುಗ್ರಹ ಭಾಷಣವನ್ನು ಮಾಡಬೇಕೆಂದು ಆಚಾರ್ಯರನ್ನು ಸುರಗಿ ನಾಗಿದೇವಣ್ಣ ಪ್ರಾರ್ಥಿಸಿದ.

"ಈ ಭಕ್ತ ಸಮೂಹದ ಸಮ್ಮುಖದಲ್ಲಿ ನಾವು ಈ ಸಮಯದಲ್ಲಿ ಒಂದು ಮಾತನ್ನು ಒಪ್ಪಿಕೊಳ್ಳಬೇಕಾಗಿದೆ. ನಿಮ್ಮೆಲ್ಲರ ಪ್ರೀತಿಗೆ ಪಾತ್ರರಾದ, ನಿಮ್ಮಗಳಿಗೆ ಆರಾಧ್ಯರೆನಿಸಿದ ರಾಜದಂಪತಿಗಳು ನಮಗೆ ನಿನ್ನೆಯ ದಿವಸ, ನಮ್ಮಲ್ಲಿಯೂ ಲೋಭವನ್ನು ಹುಟ್ಟಿಸಬಹುದಾದಂತಹ ಉದಾರವಾದ ದಾನವನ್ನು ಮಾಡಿದ್ದಾರೆ. ನಾವು **ನಾವಿಷ್ಣುಃ ಪೃಥ್ವೀಪತಿಃ** ಎಂಬುದರಲ್ಲಿ ನಂಬುಗೆಯುಳ್ಳವರು. ಜೊತೆಗೆ ನಮ್ಮ ಪರತತ್ವವೂ ಮಹಾವಿಷ್ಣುವಿನ ರೂಪದಲ್ಲಿ ನಮಗೆ ಆರಾಧ್ಯದೈವವಾಗಿದೆ. ನಿಮ್ಮ ಪ್ರಭುಗಳ ನಾಮಧೇಯ ಏನೇ ಇದ್ದರೂ ನಮಗೆ ಅವರು ವಿಷ್ಣು. ನಾವು ಅವರನ್ನು ಇನ್ನು ಮುಂದೆ ಹಾಗೆಂದೇ ಸಂಬೋಧಿಸುತ್ತೇವೆ. ಇದಕ್ಕೆ ಇನ್ನೂ ಒಂದು ಕಾರಣವಿದೆ. ನಮ್ಮ ಆರಾಧ್ಯದೈವ ಮಹಾವಿಷ್ಣುವಿನಲ್ಲಿ ನಾವು ಸಮರ್ಪಿಸಿರುವ ನಮ್ಮ ಭಕ್ತಿವರ್ಗಕ್ಕೆ ಆಶ್ರಯದಾತರಾಗಿ ಆ ಸಿದ್ಧಾಂತ ಅಂದರೆ ಶ್ರೀವೈಷ್ಣವ ಸಿದ್ಧಾಂತ ವರ್ಧಿಸಲು ಅವರು ನಮ್ಮ ನಿರೀಕ್ಷೆಗೆ ಮೀರಿ ನೆರವಾಗಿದ್ದಾರೆ, ಮುಂದೆಯೂ ನೆರವಾಗುತ್ತಾರೆ. ಅವರಿಗೆ **ವಿಷ್ಣುವರ್ಧನ**ನೆಂಬ ಕೀರ್ತಿಯು ಲಭ್ಯವಾಗಲಿ, ಅದು ಆಚಂದ್ರಾರ್ಕವಾಗಿ ನಿಲ್ಲುತ್ತದೆ. ನಮ್ಮ ಅಂತರಂಗದಲ್ಲಿ ಅಂಕುರವಾಗಿ ಮೊಳೆತು ಈಗ ಬಹಿರಂಗಕ್ಕೆ ಅರಳಿ ಬಂದ ಈ ಭಾವನೆಗೆ ಸಾಕ್ಷಿ ಎಂಬಂತೆ ನಾವು ಒಂದು ನಿರ್ಣಯಕ್ಕೆ ಬಂದಿದ್ದೇವೆ. ಈ ಯಾದವಪುರದಲ್ಲಿಯೇ ವಿಷ್ಣುವರ್ಧನರಾದ ನಿಮ್ಮ ಮಹಾರಾಜರು ದಯಪಾಲಿಸಿರುವ ಧನವನ್ನು ವ್ಯಯಮಾಡಿ, ಅವರ ಹೆಸರಿನಲ್ಲಿ ಲಕ್ಷ್ಮೀನಾರಾಯಣಸ್ವಾಮಿಯ ದೇವಸ್ಥಾನವನ್ನು, ನಿಮ್ಮ ರಾಜದಂಪತಿಗಳ ಮನೋನೈರ್ಮಲ್ಯ ಮತ್ತು ಹೃದಯ ವೈಶಾಲ್ಯದ ಪ್ರತೀಕವಾಗಿರುವಂತೆ ನಿರ್ಮಿಸಲು ಇತ್ಯರ್ಥ ಮಾಡಿದ್ದೇವೆ. ಸಚಿವರು ಸುರಿಗೆಯ ನಾಗಿದೇವಣ್ಣನವರು ಇದರಲ್ಲಿ ನಮಗೆ ನೆರವಾಗುವುದಾಗಿ ಹೇಳಿದ್ದಾರೆ. ಈ ವಿಷಯವನ್ನು ಮಹಾರಾಜರಿಗೆ ತಿಳಿಸಿ ಅವರಿಂದ ಇನ್ನೂ ಹೆಚ್ಚಿನ ಸಹಾಯ ದೊರೆಯುವಂತೆ ಮಾಡುವುದಾಗಿ ಸಹ ಅವರು ಹೇಳಿದರು. ಆದರೆ ಅದಕ್ಕೆ ಮಾತ್ರ ನಾವು ಸಮ್ಮತಿಸಲಿಲ್ಲ. ಕೊಡುಗೈದಾತರಿದ್ದಾರೆಂದು ದೋಚುವುದು ತರವಲ್ಲ. ಅದೂ ಅಲ್ಲದೆ ದೇವಮಂದಿರಗಳು ಜನತೆಯ ಭಕ್ತಿ ಪ್ರತೀಕವಾಗಿರಬೇಕು. ಅದರಿಂದ ನಮ್ಮ ಈ ಸಂಕಲ್ಪವು ಸಿದ್ಧಿಯಾಗಲು ಯಾದವಪುರದ ಜನತೆ ನಮಗೆ ನೆರವಾಗಬೇಕೆಂಬುದು ನಮ್ಮ ವಿನಂತಿ'' ಎಂದು ಹೇಳಿ ಆಚಾರ್ಯರು ತಮ್ಮ ಮಾತನ್ನು ನಿಲ್ಲಿಸಿದರು.

# ೩. ರೂವಾರಿಗಳ ಕೂಡುಹ

ಯಾದವಪುರಿಯಲ್ಲಿ ಮಹಾರಾಜ ಬಿಟ್ಟಿದೇವನಿಂದ ಲಕ್ಷ್ಮೀನಾರಾಯಣ ದೇವಸ್ಥಾನದ ಶಂಕುಸ್ಥಾಪನೆ ನೆರವೇರಿತು. ಶ್ರೀಮದಾಚಾರ್ಯರಿಗೆ ವಾಗ್ದಾನ ಮಾಡಿದಂತೆ ದೇವಸ್ಥಾನ ನಿರ್ಮಾಣಕ್ಕೆ ಜನತೆಯು ಹೃದಯ ತುಂಬಿ ನೆರವಾದರು. ನಾಡಿನ ನಾನಾ ಭಾಗಗಳಿಂದ ರೂವಾರಿಗಳನ್ನು ಬರಮಾಡಲಾಯಿತು. ಪೊಯ್ಸಳ ಲಾಂಛನದ ಶಿಲ್ಪ ಕೆತ್ತಿದ ಹೊಯ್ಸಳಾಚಾರಿಗೆ ದೇವಸ್ಥಾನದ ಪೂರ್ಣ ಹೊಣೆಗಾರಿಕೆಯನ್ನು ವಹಿಸಲಾಯಿತು. ಅಂತಹ ಬೃಹತ್ತೂ ಅಲ್ಲದ ತೀರ ಚಿಕ್ಕದೂ ಅಲ್ಲದ ಒಂದು ದೇವಸ್ಥಾನ–ಪ್ರಾಕಾರಗಳ ನಕ್ಷೆಯನ್ನು ಹೊಯ್ಸಳಾಚಾರಿ ಸಿದ್ಧಮಾಡಿ ತೋರಿಸಿದ. ಅದರ ಆಯ, ಪ್ರಮಾಣಗಳನ್ನು ಅದು ಒಳಗೊಂಡಿತ್ತು. ರೂಢಿಯಲ್ಲಿದ್ದ ಭಿನ್ನಬಾಹುಚತುರಶ್ರ ಮಾದರಿಯಲ್ಲಿ ಅದಕ್ಕೆ ರೂಪರೇಷೆಯನ್ನು ಕೊಡಲಾಗಿತ್ತು. ಆರೆಂಟು ಮಾಸಗಳಲ್ಲಿ ಕೆಲಸ ಮುಗಿಸುವ ಭರವಸೆಯನ್ನು ಹೊಯ್ಸಳಾಚಾರಿ ಶ್ರೀಮದಾಚಾರ್ಯರಿಗೆ ಇತ್ತ. ನಾಗಿದೇವಣ್ಣನನ್ನು ಕರೆಸಿ ಇದರಲ್ಲಿ ನೇರವಾಗಿ ಆಸ್ತೆ ವಹಿಸಿಬೇಕೆಂದು ಅಪ್ಪಣೆ ಮಾಡಿದ್ದರು. ಹಣದ ಕೊರತೆ ಬಂದರೆ ರಾಜ್ಯ ಭಂಡಾರದಿಂದ ಉಪಯೋಗಿಸಬಹುದೆಂದು ಸಹ ಒಪ್ಪಿಗೆ ಕೊಡಲಾಗಿತ್ತು. ದೇವಸ್ಥಾನದ ಕೆಲಸ ಸತತವಾಗಿ ಸಾಗಿತು. ಹೊರಗಿನಿಂದ ರೂವಾರಿಗಳು, ಪಾಂಚಾಲರು ಬಂದು ಬೇಗ ಜೊತೆಗೂಡಿದರು.

ಶ್ರೇಷ್ಠ ರೂವಾರಿಗೆ ಬಿರುದು, ಕೈ ತುಂಬಾ ಸಂಭಾವನೆ ದೊರೆಯುತ್ತವೆ ಎಂಬ ವಿಷಯ ಎಲ್ಲ ಕಡೆ ಪ್ರಸಾರವಾಗಿ ವೇಲಾಪುರಿಗೆ ನಾನಾ ಭಾಗಗಳಿಂದ ರೂವಾರಿಗಳು ಬಂದರು. ಓಡೆಯಗಿರಿ, ಬಲಿಪುರ, ಬಾಡ, ಬೆಳುಗೊಳ, ಲೊಕ್ಕಿಗುಂಡಿ, ಕಲ್ಕಣಿನಾಡುಗಳಿಂದ ಅನೇಕ ರೂವಾರಿಗಳು ಬಂದರು. ಇವರಲ್ಲಿ ಎಷ್ಟೋ ಜನ ಆಗಲೆ ಬಿರುದಾಂಕಿತರೂ ಆಗಿದ್ದರು. ಅವರಲ್ಲಿ ಬೆಳುಗೊಳ, ಬಲಿಪುರದ ರೂವಾರಿಗಳಾದ ಗಂಗಾಚಾರಿ, ಕಾಮ್‌ವಾಚಾರಿ, ಚಿಕ್ಕಹಂಪ, ಮಲ್ಲಿಯಣ್ಣ, ಪದರಿ ಮಲ್ಲೋಜ, ದಾಸೋಜ, ಚಾವುಣ ಮೊದಲಾದವರು ಪಟ್ಟಮಹಾದೇವಿ ಶಾನ್ತಲದೇವಿಗೆ ಗೊತ್ತಿದ್ದವರೇ. ಅವರ ಬಿರುದುಗಳೂ ಸಹ ಅವಳಿಗೆ ಗೊತ್ತಿತ್ತು. ಕಲಿಯುಗ ವಿಶ್ವಕರ್ಮ ಎಂಬ ಬಿರುದನ್ನು ಪಡೆದ ಲೊಕ್ಕಿಗುಂಡಿಯ ಮಾಸನ, ರೂವಾರಿಜಗದಳ ಕಾಟೋಜ, ಅವನ ಮಗ ಸರಸ್ವತಿ ಪಾದಕಮಲ ದುಂಬಿ ನಾಗೋಜ, ರೂವಾರಿಪುಲಿ ಕುಮಾರಮಾಚಾರಿ, ಕಲ್ಕಣಿ ನಾಡಿನ ಮಾಚೋಜ, ಓಡೆಯಗಿರಿ ಹರೀಶ ಮೊದಲಾದ ರೂವಾರಿಗಳನ್ನು ಈ ಮೊದಲು ಪಟ್ಟಮಹಾದೇವಿ ಕಂಡರಿಯಳು.

ಹದಿನೈದು ಇಪ್ಪತ್ತು ಜನ ಪ್ರಸಿದ್ಧ ರೂವಾರಿಗಳು ಬಂದಕೂಡಲೇ ಒಂದು ದಿವಸ ಒಂದು ಕೂಡುಹ ಏರ್ಪಡಿಸಿ, ಅವರುಗಳಿಗೆ ತಮ್ಮಗಳ ಮನಸ್ಸಿನಲ್ಲಿರುವ ಭವ್ಯ ಕಲ್ಪನೆಯನ್ನು ವಿಸ್ತಾರವಾಗಿ ಮನನಾಟುವಂತೆ

ಹೇಳಿ ಎಲ್ಲರಿಗೂ ರೇಖಾ ಚಿತ್ರಗಳನ್ನು ಬರೆಯುವಂತೆ ಆದೇಶವೀಯಲಾಯಿತು. ಈಗ ಅರಮನೆ ಆರಿಸಿರುವ ತಾಣ ಈ ನಿರ್ಮಾಣಕ್ಕೆ ಪ್ರಶಸ್ಥವೆ ಹೇಗೆ ಎಂಬುದನ್ನು ಪರಿಶೀಲಿಸಬೇಕು ಎಂದು ಸಹ ಹೇಳಿ, ಈ ತಾಣದ ವಿಸ್ತಾರಕ್ಕೆ ಹೊಂದುವ ಭವ್ಯ ಮಂದಿರವಾಗಬೇಕು ಎಂಬುದನ್ನೂ ಸೂಚಿಸಲಾಯಿತು. ರೂವಾರಿಗಳ ಸಲಹೆಯ ಮೇಲೆ ಅವರುಗಳಿಗೆ ಒಂದು ವಾರ ಕಾಲಾವಕಾಶವನ್ನು ಕೊಡಲಾಯಿತು.

ಒಂದು ವಾರದ ನಂತರ ಎಲ್ಲ ರೂವಾರಿಗಳೂ ಕಲ್ಪಿತ ದೇವಮಂದಿರದ ರೇಖಾ ಚಿತ್ರವನ್ನು ತಂದೊಪ್ಪಿಸಿದರು. ಬಹುಮಟ್ಟಿಗೆ ಅವು ಚಾಲುಕ್ಯ ಶಿಲ್ಪದ ಮಾದರಿ ಇದ್ದವು, ಇಲ್ಲವೆ ಚೋಳ ಶಿಲ್ಪದ ಮಾದರಿ ಇದ್ದವು. ಅವುಗಳಲ್ಲೆಲ್ಲ ಕಡಿಮೆ ಅನುಕರಣೆಯ ಚಿತ್ರ ಒಡೆಯಗಿರಿ ಹರೀಶನಿಂದ ಬಂದಿತ್ತು. ಅದರಲ್ಲಿ ಒಂದು ಹೊಸತನವಿದೆ ಎಂದು ಶಾನ್ತಲದೇವಿ ಭಾವಿಸಿದಳು. ಒಳಗಿನ ಸೌಂದರ್ಯದ ಜೊತೆಗೆ ಹೊರಗಿನ ಸೌಂದರ್ಯಕ್ಕೂ ಅವನು ಅವಕಾಶಕೊಟ್ಟು ಚಿತ್ರ ಮೂಡಿಸಿದ್ದ. ಉದಯಾದಿತ್ಯ ಸಹ ಶಾನ್ತಲದೇವಿಯೊಂದಿಗೆ ಸಹಮತ ತಾಳಿದ. ಆ ಚಿತ್ರದಂತೆಯೇ ದೇವಸ್ಥಾನ ರೂಪಿತವಾಗಬೇಕೆಂದೂ ಅವನನ್ನೇ ಸ್ಥಪತಿ ಮಾಡಬೇಕು ಎಂದೂ ನಿಶ್ಚಯವಾಯಿತು. ಅವಳು ತನ್ನ ಗುರುಗಳಾರಿಗೂ ಸ್ಥಪತಿ ಪಟ್ಟವನ್ನು ಕಟ್ಟಲಿಲ್ಲ. ನಿರ್ಣಯಿಸುವವಳು ಅವಳಾದುದರಿಂದ ದಾಸೋಜನನ್ನೋ, ಗಂಗಾಚಾರಿಯನ್ನೊ ಸ್ಥಪತಿ ಮಾಡಬಹುದಾಗಿತ್ತು. ಅವಳು ಗುರು ಎಂಬ ಅಭಿಮಾನಕ್ಕೆ ಬಾಗಿ ನಿರ್ಣಯವನ್ನು ಕೈಕೊಳ್ಳದೆ ತನ್ನ ಕಲ್ಪನೆಗೆ ಆದಷ್ಟು ಹತ್ತಿರ ಬರುವ ಚಿತ್ರ ಕೊಟ್ಟ ರೂವಾರಿ ಅಪರಿಚಿತನಾದರೂ ಅವನಿಗೇ ಸ್ಥಪತಿ ಪಟ್ಟವನ್ನು ಕಟ್ಟಲಾಯಿತು. ಆದಾದ ಮೇಲೆ ದಾಸೋಜ, ಗಂಗಾಚಾರಿ ಮೊದಲಾದ ಬೆಳುಗೊಳ, ಬಲಿಪುರಗಳ ರೂವಾರಿಗಳನ್ನು ಕರೆಸಿ ಅವರಿಗೆ ವಿಷಯ ತಿಳಿಸಿ ಬೇಸರ ಮಾಡಿಕೊಳ್ಳಬಾರದೆಂದೂ "ಪೊಯ್ಸಳರದೇ ಒಂದು ವಾಸ್ತು, ಒಂದು ಶಿಲ್ಪ ರೂಪಿತವಾಗಬೇಕು. ಅದರಲ್ಲಿಯೂ ವಾಸ್ತುವಿಗೆ ವೈವಿಧ್ಯ ಮೈಗೂಡಿಸಿಕೊಳ್ಳುವ ಅವಕಾಶವಿದೆ. ಒಡೆಯಗಿರಿಯ ರೂವಾರಿಗಳು ನಮ್ಮ ಕಲ್ಪನೆಯನ್ನು ಚೆನ್ನಾಗಿ ಗ್ರಹಿಸಿದ್ದಾರೆ. ಈ ದೇವಸ್ಥಾನ ಶ್ರೀವೈಷ್ಣವ ಮತ ಪ್ರವರ್ತಕರಾದ ಶ್ರೀ ಶ್ರೀ ರಾಮಾನುಜಾಚಾರ್ಯರ ಆದೇಶದ ಮೇಲೆ ನಿರ್ಮಿಸುತ್ತಿರುವುದರಿಂದ ಅವರ ಆಸೆಗನುಣವಾಗಿ ಈ ಮಂದಿರ ಕಲ್ಪಿತವಾಗಿದೆ. ಎಲ್ಲ ಕಲೆಗಾರರಿಗೂ ಅವರವರ ಕೈಚಳಕ ತೋರಿಸಲು ಅವರ ನಕ್ಷೆಯಲ್ಲಿ ಅವಕಾಶವಿದೆ. ಎಲ್ಲರೂ ಅವರೊಂದಿಗೆ ಸಹಕರಿಸಬೇಕು. ಅವರ ನಕ್ಷೆ ಒಪ್ಪಿತವಾದ್ದರಿಂದ ಅವರು ಸ್ಥಪತಿ. ಎಲ್ಲ ರೂವಾರಿಗಳೂ ಅರಮನೆಗೆ ಒಂದೇ. ಒಬ್ಬರಿಗಿನ್ನೊಬ್ಬರಿಗೆ ಯಾವ ಭೇದವೂ ಇಲ್ಲ. ಈ ಮಂದಿರದಲ್ಲಿ ನೀವು ತೋರುವ ಜಾಣ್ಮೆ ಶತಶತಮಾನ ಕಾಲ ಉಳಿಯಬೇಕು. ನಿಮ್ಮಗಳ ಹೆಸರೂ ಉಳಿಯಬೇಕು. ಮುಂದಿನ ಪೀಳಿಗೆಗಳಿಗೆ ನಿಮ್ಮಗಳ ಕೆಲಸದಿಂದ ತೃಪ್ತಿಸಿಗಬೇಕು. ನಿಮ್ಮ ಕಲೆಯು ಅವರಿಗೆ ಆದರ್ಶಯುತವೂ, ಮಾರ್ಗದರ್ಶಕವೂ ಆಗಬೇಕು. ಹಾಗೆ ಮಾಡಿ ಎಂದು ವಿಶೇಷವಾಗಿ ಬಿನ್ನವಿಸುತ್ತೇನೆ'' ಎಂದು ಮನದೆರೆದು ಮಾತನಾಡಿ ಅವರ ಒಲವನ್ನು ಸಂಪಾದಿಸಿದಳು. ಬೇಗಲೇ ಬೇಕಾಗುವ ಶಿಲೆಗಳಿಗೆ ವ್ಯವಸ್ಥೆ ಆಯಿತು. ಸಾವಿರಾರು ಜನ ಈ ಕೆಲಸದಲ್ಲಿ ನಿರತರಾದರು. ಇಲ್ಲಿಯೂ ದೇವಸ್ಥಾನದ ಶಂಕು ಸ್ಥಾಪನೆ ಮಹಾರಾಜ ವಿಷ್ಣುವರ್ಧನನಿಂದ ನೆರವೇರಿತು.

ರಾಶಿ ರಾಶಿ, ಅದರಲ್ಲಿಯೂ ಕೋನೇಹಳ್ಳಿಯ ಮೆದುಶಿಲೆ ಬಂದು ವೇಲಾಪುರಿಯಲ್ಲಿ ಬಿದ್ದಿತ್ತು. ಕೋನೇಹಳ್ಳಿಯ ಮೆದುಶಿಲೆ ಶಿಲ್ಪಿಗೆ ಹೊನ್ನಿನಂತೆ. ಸ್ಥಪತಿ ಒಡೆಯಗಿರಿ ಹರೀಶ, ರೂವಾರಿಗಳ ಸಾಮರ್ಥ್ಯವನ್ನು ನೋಡಿ ಕೆಲಸ ಹಂಚಿದ. ಶಿಲ್ಪಿಗಳು ಬಿಸಿಲಿನ ತಾಪಕ್ಕೆ ಕಂದಬಾರದೆಂದು ಕೆಲಸ ಮಾಡುವ ಸ್ಥಗಳಲ್ಲಿ ಎಲ್ಲಾ ಭದ್ರವಾದ ಹಂದರಗಳನ್ನು ಹಾಕಿಸಲಾಯಿತು. ದೇವಮಂದಿರದ ಕೆಲಸಗಾರರಿಗಾಗಿಯೇ ಒಂದು ಪ್ರತ್ಯೇಕ ಅಗ್ರಸಾಲೆ ಆರಂಭವಾಯಿತು.

ಎಡೆಬಿಡದೆ ಕೆಲಸ ಹೆಚ್ಚು ಕಡಿಮೆ ಸೂರ್ಯೋದಯದಿಂದ ಸೂರ್ಯಾಸ್ತಮಾನದವರೆಗೆ ನಡೆಯತೊಡಗಿತು. ಮಧ್ಯಾಹ್ನದ ಆರೋಗಣೆಗೆ ಮಾತ್ರ ಅರ್ಧ ಪ್ರಹರಕಾಲವನ್ನು ವಿನಿಯೋಗಿಸುತ್ತಿದ್ದರು.

ಸಾವಿರಾರು ದುಡಿಮೆಗಾರರು ಸಮಯ ದಂಡಮಾಡದೆ ತಾದಾತ್ಮ್ಯಭಾವದಿಂದ ಕೆಲಸ ಮಾಡುವುದನ್ನು ನೋಡುವುದೇ ಒಂದು ಆನಂದ. ರೂವಾರಿಗಳ ಕುಸುರಿ ಕೆಲಸವನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಬೇಕು. ಅಂತಹ ಕೋಮಲ ಕೆಲಸಗಾರಿಕೆ ಅದು.

ಹರೀಶನ ನಕ್ಷೆಯಂತೆ ಪಾಯ ಅಗೆದಾಯಿತು. ಪಾಯ ಕಟ್ಟುವ ಕೆಲಸ ಸಹ ಆರಂಭವಾಯಿತು. ಶಾನ್ತಲದೇವಿ, ಉದಯಾದಿತ್ಯರು ಅದರ ಮೇಲ್ವಿಚಾರಣೆಯನ್ನು ಬಹಳ ಚೆನ್ನಾಗಿ ನೋಡಿಕೊಳ್ಳುತ್ತಿದ್ದರು.

ಒಂದು ದಿವಸ ಹಗಲಿನ ಆರೋಗಣೆಯ ಸಮಯದಲ್ಲಿ ಕೆಲಸಗಾರರು ಆರೋಗಣೆಗೆ ಹೋಗಿದ್ದಾಗ ಶಾನ್ತಲದೇವಿ ಉದಯಾದಿತ್ಯರು ಶಿಲ್ಪದ ಹಂದರದ ಬಳಿ ಬಂದರು. ಅಂದು ಅವರು ಮುಂಜಾವಿನಿಂದ ಬಂದಿರಲಿಲ್ಲ. ಅವರು ಬರುವ ಮುಂಚೆಯೇ ಒಂದು ವ್ಯಕ್ತಿ ಅಲ್ಲಿ ಶೇಖರವಾಗಿದ್ದ ಕಲ್ಲುಗಳನ್ನೆಲ್ಲ ಮುಟ್ಟಿ ಕುಟ್ಟಿ ನೋಡುತ್ತಿದ್ದ. ವಿಗ್ರಹಗಳನ್ನು ಗೇಣು ಚೋಟುಅಳೆದು ನೋಡುತ್ತಿದ್ದ. ಅವನ ಈ ಬಗೆಯ ಆಸಕ್ತಿ ನೋಡಿ ಶಾನ್ತಲದೇವಿಗೆ ಆಚಾರ್ಯರು ಹೇಳಿದ ರೂವಾರಿಯ ನೆನಪು ಥಟ್ಟನೆ ಬಂದು ಬಿಟ್ಟಿತು. ಅವಳು ಒಡನೆಯೇ ಉದಯಾದಿತ್ಯನಿಗೆ ಸ್ಪಷ್ಟ ಸೂಚನೆ ಕೊಟ್ಟು "ಅವನನ್ನು ಅರಮನೆಯೊಳಕ್ಕೆ ಕರೆದುಕೊಂಡು ಬಾ. ಹೊರಗಿನ ಮೊಗಸಾಲೆಯಲ್ಲಿ ನಾನಿರುತ್ತೇನೆ'' ಎಂದು ತಿಳಿಸಿ ಅರಮನೆಗೆ ಹೊರಟುಹೋದಳು.

ಉದಯಾದಿತ್ಯ ಅವನ ಬಳಿ ಸಾರಿ, "ನೀವು ಯಾವ ನಾಡಿನ ರೂವಾರಿಗಳು?'' ಎಂದು ಪ್ರಶ್ನಿಸಿದ.

"ನಾನೆಲ್ಲಿ ರೂವಾರಿಯೆಂದು ಹೇಳಿದೆ ?''

"ಹೇಳಬೇಕಾಗಿಲ್ಲ. ನಮಗೆ ಅರ್ಥವಾಗುತ್ತದೆ. ಯಾವ ನಾಡಿನವರು ?''

"ಈಗ ಅದು ಪ್ರಯೋಜನಕ್ಕೆ ಬರುವುದಿಲ್ಲ. ನಾನು ಯಾರಾದರೇನು ? ನನ್ನ ನಾಡು ಯಾವುದಾದರೇನು ? ಇಷ್ಟಕ್ಕೂ ಅದನ್ನು ಕಟ್ಟಿಕೊಂಡು ನಿಮಗೇನು ?''

"ನನಗೆ ಏನೂ ಆಗಬೇಕಾಗಿಲ್ಲ. ಇಲ್ಲಿ ಬಹಳ ದೊಡ್ಡ ಕೆಲಸ ನಡೆದಿದೆ. ದೇಶದೇಶಾಂತರಗಳಿಂದ ರೂವಾರಿಗಳನ್ನು ಕರೆಸಲು ಪ್ರಸಾರಕರನ್ನು ನಮ್ಮ ಅರಮನೆ ಕಳಿಸಿತ್ತು. ಅದನ್ನು ಕೇಳಿ ತಾವು ಬಂದಿದ್ದರೆ ತಮಗೆ ಕೆಲಸ ಒದಗಿಸಬೇಕಾದುದು ನಮ್ಮ ಧರ್ಮ. ಅದರಿಂದ ನೀವು ಎಲ್ಲ ವಿವರ ಕೊಟ್ಟರೆ ಪಟ್ಟಮಹಾದೇವಿಯವರಿಗೆ ತಿಳಿಸಿ ನಿಮಗೆ ಅವರ ಸಂದರ್ಶನ ಮಾಡಿಸುತ್ತೇನೆ. ನಂತರ ಅವರು ನಿಮಗೆ ಸ್ಥಪತಿಯ ಪರಿಚಯ ಮಾಡಿಸುತ್ತಾರೆ. ಅದರಿಂದ.....''

"ನಾನು ರೂವಾರಿ. ಕೆಲಸ ಬಲ್ಲೆ. ಕೆಲಸ ಕೊಟ್ಟರೆ ಮಾಡುತ್ತೇನೆ. ಉಳಿದ ವಿಷಯ ನನಗೆ ಹೇಳಲು ಇಚ್ಛೆಯಿಲ್ಲ. ಅವೆಲ್ಲ ಹೇಳು ಎಂದು ಒತ್ತಾಯ ಮಾಡುವುದಾದರೆ ನನಗೆ ಕೆಲಸವೇ ಬೇಡ. ಇಷ್ಟಕ್ಕೂ ನಾನು ಕೆಲಸ ಹುಡುಕಿಕೊಂಡು ಬಂದವನಲ್ಲ.''

"ನಿಮಗೆ ಇಷ್ಟವಿದ್ದರೆ ಹೇಳಿ. ಇಲ್ಲದಿದ್ದರೆ ಒತ್ತಾಯವೇನಿಲ್ಲ. ರೂವಾರಿ ಎಂದು ತಿಳಿಸಿದಿರಲ್ಲ. ನಮಗೆ ಅಷ್ಟು ಸಾಕು. ನಿಮ್ಮದು ಆರೋಗಣೆ ಆಗಿದೆಯೆ ?''

"ಆಗಿದೆ.''

"ಎಲ್ಲಿ ಎಂದು ಕೇಳಬಹುದೆ ?"

"ಯಗಚಿಯ ದಂಡೆಯಲ್ಲಿ. ಒಂದು ಮದುವೆ ದಿಬ್ಬಣ ಸ್ನಾನಕ್ಕೆ ಬೀಡು ಬಿಟ್ಟಿತ್ತು, ನದಿಯಲ್ಲಿ ಮಿಂದು ಉಣಲೆಂದು. ನಾನೂ ಪಾಲ್ಗೊಂಡೆ."

"ಹಾಗಾದರೆ ಬನ್ನಿ."

"ಎಲ್ಲಿಗೆ ?"

"ಅರಮನೆಗೆ. ಪಟ್ಟಮಹಾದೇವಿಯವರ ಸಂದರ್ಶನಕ್ಕೆ."

"ತಾವು......" ಎಂದು ಅವನು ರಾಗ ಎಳೆದ.

"ಅಲ್ಲೇ ತಿಳಿಯುತ್ತದೆ. ಬನ್ನಿ" ಎಂದು ಉದಯಾದಿತ್ಯ ಹೆಜ್ಜೆ ಹಾಕತೊಡಗಿದ.

ಮೆಲ್ಲನೆ ಹಿಂಬಾಲಿಸಿದ ರೂವಾರಿ. ನಾಲ್ಕು ಹೆಜ್ಜೆ ಇಟ್ಟು ಮತ್ತೆ ಅನುಮಾನಿಸುತ್ತಾ ನಿಂತ. ರೂವಾರಿ ಹಿಂಬಾಲಿಸುತ್ತಿರಬಹುದೆಂದು ಹತ್ತೆಂಟು ಮಾರು ಮುಂದುವರಿದಿದ್ದ ಉದಯಾದಿತ್ಯ ಏನೋ ಅನುಮಾನದಿಂದ ಹಿಂತಿರುಗಿ ನೋಡಿದ. ಅಲ್ಲೇ ನಿಂತಿದ್ದ ರೂವಾರಿಯನ್ನು ನೋಡಿ ಮತ್ತೆ ಅವನತ್ತ ಸಾರಿದ.

ಬಳಿ ಸಾರಿ, "ಏಕೆ ಅನುಮಾನಿಸುತ್ತಿದ್ದೀರಿ ? ನಿಮಗೆ ಏನೂ ತೊಂದರೆಯಾಗುವುದಿಲ್ಲವೆಂದು ಭರವಸೆ ಕೊಡುತ್ತೇನೆ. ಬನ್ನಿ" ಎಂದು ಉದಯಾದಿತ್ಯ ಆವನನ್ನು ಮತ್ತೆ ಪ್ರೋತ್ಸಾಹಿಸಿದ.

"ನನಗೆ ಅರಮನೆಯಲ್ಲೇನು ಕೆಲಸ ? ನಿಮಗೆ ಕೆಲಸ ಕೊಡಿಸುವ ಅಧಿಕಾರವಿದ್ದರೆ ಸ್ಥಪತಿಗೆ ಹೇಳಿ. ಬೇಕಾದರೆ ನಾನೇ ಅವರನ್ನು ಕೆಲಸ ಕೊಡಿ ಎಂದು ಕೇಳಿಯೇನು. ಅರಮನೆ, ಪಟ್ಟಮಹಾದೇವಿಯವರು ಎಂದರೆ ನಮಗೆ ದೂರ."

"ಅರಮನೆಯವರೂ ನಿಮ್ಮ ಹಾಗೆ ಮನುಷ್ಯರೆ. ಅವರು ಹುಲಿ ಕರಡಿ ಅಲ್ಲ. ಬನ್ನಿ."

"ಪಟ್ಟಮಹಾದೇವಿಯವರನ್ನು ನೋಡದಿದ್ದರೆ ನನಗೆ ಕೆಲಸ ಸಿಗುವುದಿಲ್ಲವೆ ?"

"ಒಂದಕ್ಕೊಂದನ್ನು ಗಂಟು ಹಾಕುವುದು ಆತುರದ ಕಾರಣದಿಂದ. ನಿಮಗೆ ಪೊಯ್ಸಳ ಅರಮನೆ, ಸನ್ನಿಧಾನ, ಪಟ್ಟಮಹಾದೇವಿಯವರ ವಿಷಯ ಗೊತ್ತಿಲ್ಲವೆಂದು ಕಾಣುತ್ತದೆ."

"ಅಷ್ಟೋ ಇಷ್ಟೋ ಗೊತ್ತಿದೆ. ಯಾದವಪುರಿಯಲ್ಲಿ ಜನರು ಅವರ ಬಗೆಗೆ ಆಡುತ್ತಿದ್ದ ಮೆಚ್ಚಿನ ಮಾತುಗಳನ್ನು ಕೇಳಿದ್ದೇನೆ. ಬೇರೆ ಕಡೆಯೂ ಕೇಳಿದ್ದೇನೆ. ಅಷ್ಟು ದೊಡ್ಡವರ ಬಳಿ ನಮ್ಮಂತಹ ತೀರ ಸಣ್ಣವರಿಗೆ ಏನು ಕೆಲಸ ? ನನ್ನನ್ನು ನೋಡಿ ನನಗೇ ಬೇಸರ. ಈ ನನ್ನ ವೇಷದಲ್ಲಿ ಅವರನ್ನು ನೋಡುವುದು ಘನತೆಯಲ್ಲ. ನನಗೆ ಅರಮನೆಯ ಸಂದರ್ಶನ ತಪ್ಪಿಸಿ ನೀವೇ ಸ್ಥಪತಿಗೆ ಹೇಳಿ ಕೆಲಸ ಕೊಡಿಸಿ. ನಿಮ್ಮ ಸ್ಥಪತಿಗೆ ನನ್ನ ಕೆಲಸ ಸಮರ್ಪಕವೆನಿಸಿದರೆ ನಾನಿಲ್ಲಿ ಇರುತ್ತೇನೆ. ಅವರಿಗೆ ಸರಿ ಎನಿಸದಿದ್ದರೆ ನಾನು ಇಲ್ಲಿಂದ ಹೊರಟುಹೋಗುತ್ತೇನೆ."

"ಪಟ್ಟಮಹಾದೇವಿಯವರು ನಿಮ್ಮನ್ನು ನೋಡದೆ ಇದ್ದಿದ್ದರೆ ಅದು ಸಾಧ್ಯವಾಗುತ್ತಿತ್ತೇನೋ. ಅವರು ಈಗಾಗಲೇ ನಿಮ್ಮನ್ನು ಈ ವೇಷದಲ್ಲಿ ನೋಡಿಬಿಟ್ಟಿದ್ದಾರೆ. ಅವರ ಅಪ್ಪಣೆಯಂತೆ ನಿಮ್ಮನ್ನು ಒಲಿಸಿ ಅವರ ಬಳಿಗೆ ಕರೆದುಕೊಂಡು ಹೋಗಲು ನಾನು ಬಂದಿದ್ದೇನೆ."

"ಛೇ, ಎಂತಹ ದೊಡ್ಡ ಮಾತು ? ನನ್ನಂತಹ ಅಲ್ಪನನ್ನು ಒಲಿಸಿಕೊಳ್ಳಲು ಏನಿದೆ ಅಲ್ಲಿ? ನಾನು ಬರಲೇ ಬೇಕೆ ?"

"ನಮ್ಮ ಪಟ್ಟಮಹಾದೇವಿಯವರ ಕರೆಯನ್ನು ನಿರಾಕರಿಸಿದವರು ಈವರೆಗೆ ಯಾರೂ ಇಲ್ಲ. ಅವರ ದರ್ಶನ ಸಿಕ್ಕರೆ ತಮ್ಮ ಸೌಭಾಗ್ಯವೆಂದು ಭಾವಿಸುವವರೇ ಎಲ್ಲರೂ ಏಂದಾಗ ನಿಮ್ಮ ಸಂಕೋಚಕ್ಕೆ ಕಾರಣವಿಲ್ಲ."

"ಸಂಕೋಚ ಪಡಬೇಕಾದುದೇ. ಯಾವು ಯಾವುದು ಎಲ್ಲೆಲ್ಲಿರಬೇಕೋ ಅಲ್ಲಲ್ಲೇ ಇರಬೇಕು. ಈ ಪ್ರಪಂಚದಲ್ಲಿ ನನಗೆ ಈಗ ಯಾವ ಆಸಕ್ತಿಯೂ ಇಲ್ಲ. ಅದರಿಂದ ಹೇಗೆ ಆದರೆ ಅದೇ ಸರಿ. ಹುಟ್ಟಿಯಾಯಿತು. ಮರಣದವರೆಗೆ ಬದುಕಿರಬೇಕು. ಮರಣೋತ್ತರದ ಆಸೆಯೂ ನನಗೆ ಇಲ್ಲ ಅದರಿಂದ ಅಂದಂದಿನ ದಂದುಗ ಅಂದಂದಿಗಷ್ಟೇ ಎಂಬುದು ನನ್ನ ರೀತಿ. ನಾನು ಈ ಪ್ರಪಂಚದ ಬಹುಮಟ್ಟಿನ ಎಲ್ಲ ಕಕಲಾತಿಯನ್ನೂ ಬಿಟ್ಟು ಬಿಟ್ಟಿದ್ದೇನೆ. ಆದರೂ ರಕ್ತಗತವಾದ ವಂಶಪಾರಂಪರ್ಯ ಪ್ರವೃತ್ತಿಯ ಕಕಲಾತಿ ಪೂರ್ಣವಾಗಿ ದೂರವಾಗಿಲ್ಲ. ಕಲ್ಲಿನೊಡನೆ ಸರಸವಾಡಬೇಕೆಂಬ, ಅಲ್ಲಿ ಸೌಂದರ್ಯ ಸಾಧಿಸಬೇಕೆಂಬ, ಜಡದಲ್ಲಿ ಚೇತನ ತುಂಬಬೇಕೆಂಬ, ಆ ಪ್ರವೃತ್ತಿ ಇನ್ನೂ ಇರುವುದರಿಂದ ಮನಃಶಾಂತಿಗೆ ಅದು ಸಾಧನವಾಗಿ ಆಗೊಮ್ಮೆ ಈಗೊಮ್ಮೆ ಒದಗಿ ಬಂದು ನನ್ನನ್ನು ಆತ್ಮಾಘಾತದಿಂದ ಹಿಡಿದಿಟ್ಟಿದೆ. ಆದರೂ ನನ್ನ ಸ್ವಭಾವವೂ ಒಂದು ರೀತಿ ಪೆಡಸು, ವಕ್ರ ಎಂದೆನ್ನಬಹುದು. ಅಂತಹ ದೊಡ್ಡ ಸ್ಥಳಕ್ಕೆ ಹೋಗಿ ಏನಾದರೂ ದುಡುಸಿನ ಮಾತು ನನ್ನಿಂದ ಹೊರಬಿದ್ದರೆ ಅದು ಮಹಾ ಪಾಪವಾಗುತ್ತದೆ. ನನ್ನನ್ನು ನಾನು ಚೆನ್ನಾಗಿ ಬಲ್ಲೆ. ಅದರಿಂದ ನನ್ನನ್ನ ಕ್ಷಮಿಸಿದರೆ ಉಪಕಾರವಾಗುತ್ತದೆ."

"ನಿಮ್ಮನ್ನು ನಿಮಗಿಂತ ಚೆನ್ನಾಗಿ ನಮ್ಮ ಪಟ್ಟಮಹಾದೇವಿಯವರು ಬಲ್ಲರು."

"ಅದು ಹೇಗೆ ಸಾಧ್ಯ ?"

"ಅಲ್ಲಿ ಬನ್ನಿ ಅದು ಗೊತ್ತಾಗುತ್ತದೆ. ಜೊತೆಗೆ ಅವರ ದರ್ಶನ ಮಾಡುವುದರಿಂದ ನಿಮಗೆ ಅಖಂಡ ಲಾಭವಿದೆ."

"ನನಗೆ ಹಾಗೆಲ್ಲ ಹಣದ ಅವಶ್ಯಕತೆ ಇಲ್ಲ."

"ಲಾಭ ಎಂದರೆ ಬರೀ ಹಣವಷ್ಟೇ ಅಲ್ಲ."

"ಆಶೆಯೇ ಇಲ್ಲದವರನಿಗೆ ಲಾಭದತ್ತ ಗಮನವೇ ಇರುವುದಿಲ್ಲ."

"ನಾನು ಶ್ರೇಷ್ಠ, ನಾನು ನಂಬಿಕಸ್ಥ, ನಾನು ಜಾಣ, ನನಗೆ ಆಶೆಯಿಲ್ಲ, ನಾನು ಸತ್ಯವಂತ, ಹೀಗೆಲ್ಲ ಹೇಳಿಕೊಂಡರೆ ಅವುಗಳಿಗೆ ಬೆಲೆ ಬರುವುದಿಲ್ಲ. ಅದೇ ಮಾತನ್ನು ಬೇರೊಬ್ಬರು ನಮ್ಮ ಬಗೆಗೆ ಹೇಳಿದಾಗ ಅವುಗಳಿಗೆ ಬೆಲೆ ಬರುತ್ತದೆ. ಅದರಿಂದ ನಿಮಗೆ ಆಶೆಯೇ ಇಲ್ಲ ಎಂಬುದು ಪಟ್ಟಮಹಾದೇವಿಯವರ ಬಾಯಲ್ಲಿ ಬರುವಂತೆ ಮಾಡಿ ಅದೇ ನಿಮಗೆ ದೊರೆಯುವ ಲಾಭ. ಅವರು ನಮಗಾಗಿ ಕಾಯುತ್ತಿರುತ್ತಾರೆ. ನಾವು ಇಲ್ಲಿ ಜಿಜ್ಞಾಸೆ ಮಾಡುತ್ತ ನಿಂತರೆ ಅವರ ಕಾಲ ದಂಡವಾಗುತ್ತದೆ. ಬನ್ನಿ. ನನ್ನ ಬಳಿಗಿಂತ ಇನ್ನೂ ಸರಾಗವಾಗಿ ನೀವು ಪಟ್ಟಮಹಾದೇವಿಯವರೊಂದಿಗೆ ಯಾವ ವಿಷಯವನ್ನು ಬೇಕಾದರೂ ಚರ್ಚಿಸಬಹುದು. ಬನ್ನಿ, ಬನ್ನಿ" ಎಂದು ಅವನನ್ನೇ ನೋಡುತ್ತಾ ಹೆಜ್ಜೆ ಮುಂದಕ್ಕೆ ಇಟ್ಟ ಉದಯಾದಿತ್ಯ.

"ಹು" ಎಂದು ರೂವಾರಿ ಅವನನ್ನು ಹಿಂಬಾಲಿಸಿದ.

ಅರಮನೆಯ ಮಹಾದ್ವಾರದಲ್ಲಿನ ಪಡೆಯಿಲರು ಉದಯಾದಿತ್ಯನಿಗೆ ತೋರಿದ ಗೌರವವನ್ನು ಕಂಡು ರೂವಾರಿ ಬೆರಗಾದ. ಹಾಗೆಯೇ ತನ್ನತ್ತ ಅವರುಗಳು ಬೀರಿದ ಕುತೂಹಲ ಭರಿತ ನೋಟವನ್ನೂ ಅವನು ಗಮನಿಸಿದ. ಅನಪೇಕ್ಷಿತವಾಗಿ ಇದ್ದುದರಲ್ಲಿ ತನ್ನ ಕೆದರಿದ ತಲೆಗೂದಲನ್ನು ಸರಿಮಾಡಿಕೊಂಡ. ಅಂಗವಸ್ತ್ರವನ್ನು ಮೈ ಮುಚ್ಚ ಹೊದೆದ. ಕಾಲಿಗೆ ತೊಡರೀತೆಂದು ಮೇಲೆತ್ತಿ ಸಿಕ್ಕಿಸಿದ್ದ ನಿರಿಯನ್ನು ಕೆಳಕ್ಕೆ ಇಳಿಸಿದ. ಅರಮನೆಯ ಭವ್ಯ ಮುಖದ್ವಾರದತ್ತ ಸೋಪಾನವೇರಿ ಹೋಗುತ್ತಿದ್ದಾಗ ದ್ವಾರದ ಮೇಲೆ ಇತ್ತೀಚೆಗೆ ಜೋಡಿಸಿದ್ದ ಪೊಯ್ಸಳ ಲಾಂಛನದತ್ತ ರೂವಾರಿಯ ದೃಷ್ಟಿ ಥಟ್ಟನೆ ಹೋಯಿತು. ಅಲ್ಲೇ ನಿಂತು ನೋಡಿದ. ಅಷ್ಟರಲ್ಲಿ ಉದಯಾದಿತ್ಯ ಮಹಾದ್ವಾರದ ಹೊಸ್ತಿಲಿನ ಬಳಿಸಾರಿದ್ದ.

ಕಂಸಾಳ ಬಾಜಿಸಿತು.

ರೂವಾರಿ ಮೈ ಕೊಡವಿದ. ಉದಯಾದಿತ್ಯನತ್ತ ಬೆರಗುಗಣ್ಣಿಂದ ನೋಡಿದ.

"ಬನ್ನಿ, ಬನ್ನಿ" ಎಂದು ಉದಯಾದಿತ್ಯ ಮುಗುಳ್ನಗೆಯಿಂದ ಸ್ವಾಗತಿಸಿದ.

ರೂವಾರಿ ಮೆಲ್ಲನೆ ಸೋಪಾನವೇರಿ ಮಹಾದ್ವಾರವನ್ನು ಉದಯಾದಿತ್ಯನೊಂದಿಗೆ ಪ್ರವೇಶಿಸಿದ. ಉದಯಾದಿತ್ಯ ಅವನನ್ನು ಪಟ್ಟಮಹಾದೇವಿ ಮಂಡಿಸಿದ್ದ ಮೊಗಸಾಲೆಗೆ ಕರೆದೊಯ್ದು, "ಇವರೇ ಆ ರೂವಾರಿಗಳು" ಎಂದ.

"ಸಂತೋಷ. ಕೂಡಿ" ಎಂದು ಶಾನ್ತಲದೇವಿ ಕಂಭದ ಬದಿಗಿದ್ದ ಆಸನವನ್ನು ಸೂಚಿಸಿದಳು.

ದಂಗು ಬಡಿದವನಂತೆ ರೂವಾರಿ ನಿಂತಿದ್ದ ಅಷ್ಟೆ. ವಂದನೆ ಮಾಡಲೂ ತೋಚದೆ ಅವನು ಹಾಗೆಯೇ ಪಿಳಿಪಿಳಿ ಕಣ್ಣು ಬಿಟ್ಟು ನಿಂತಿದ್ದ.

"ನಿಮಗೇ ಹೇಳಿದ್ದು. ಕೂಡಿ" ಎಂದು ಉದಯಾದಿತ್ಯ ರೂವಾರಿಗೆ ಮತ್ತೆ ಸೂಚಿಸಿದ.

ಅವನು, 'ನೀವು' ಎಂಬಂತೆ ಉದಯಾದಿತ್ಯನತ್ತ ನೋಡಿದ. ಅಲ್ಲಿದ್ದುದು ಒಂದೇ ಆಸನ.

ಉದಯಾದಿತ್ಯ, "ಅದು ನಿಮಗಾಗಿ ಹಾಕಿಸಿರುವ ಆಸನ ಕೂಡಿ. ನಾನು ಕೂಡವಂತಿಲ್ಲ. ಬೇರೆ ಕೆಲಸವಿದೆ" ಎಂದು ಉದಯಾದಿತ್ಯ ಹೇಳಿದ.

ರೂವಾರಿ ಮೆಲ್ಲನೆ ಆಸನದತ್ತ ಸಾರಿದ. ಇತ್ತ ಉದಯಾದಿತ್ಯ ಅಲ್ಲಿಂದ ಹೊರಟುಹೋದ.

ಆಸನದ ಮೇಲೆ ಕುಳಿತ ರೂವಾರಿ ವಿಶಾಲವಾದ ಆ ಮೊಗಸಾಲೆಯಲ್ಲಿ ಸುತ್ತಲೂ ಕಣ್ಣು ಹಾಯಿಸಿದ. ದ್ವಾರದ ಬಳಿ ಇದ್ದ ಹಡಿಯಾರ ಬಿಟ್ಟರೆ ತಾನು, ಪಟ್ಟಮಹಾದೇವಿಯವರ ಹೊರತು ಬೇರಾರೂ ಅಲ್ಲಿ ಇರುವಂತೆ ಅವನಿಗೆ ಕಾಣಲಿಲ್ಲ. ಸುಮ್ಮನೆ ಕುಳಿತ.

ಶಾನ್ತಲದೇವಿ ಯಾವ ರೀತಿ ಅವನನ್ನು ಮಾತನಾಡಿಸಬೇಕೆಂದು ಯೋಚಿಸುತ್ತಿದ್ದಳು. ಈ ರೂವಾರಿ ಯಾರೆಂಬುದು ಅವಳಿಗೆ ಖಚಿತವಾಗಿ ತಿಳಿಯದಿದ್ದರೂ ಅವಳೆಣಿಸಿದಂತೆ ಇವನು ಅಂದು ಶ್ರೀಮದಾಚಾರ್ಯರಿಗೆ ಸಿಕ್ಕಿದ್ದ ರೂವಾರಿಯೇ ಆಗಿದ್ದರೆ ಸ್ವಲ್ಪ ಎಚ್ಚರಿಕೆಯಿಂದಲೇ ಮಾತನಾಡಬೇಕೆಂಬುದು ಅವಳಿಗೆ ಗೊತ್ತಿದ್ದ ವಿಷಯ ತಾನೆ. ಅದರಿಂದ ಮನಸ್ಸಿನಲ್ಲಿ ತನ್ನದೇ ಒಂದು ಮಾರ್ಗವನ್ನು ರೂಪಿಸಿಕೊಂಡಳು. ಅದರಂತೆ, "ರೂವಾರಿಗಳೆ, ನಮ್ಮ ಉದಯಾದಿತ್ಯರಸರು ನಿಮ್ಮನ್ನು ಸರಿಯಾಗಿ ಕಂಡುಕೊಂಡರು ತಾನೆ ?" ಎಂದು ಮಾತನ್ನು ಪ್ರಾರಂಭಿಸಿದಳು.

"ಅರಸರು ? ಯಾರು ?"

“ಅವರೆ ! ನಿಮ್ಮನ್ನು ಇಲ್ಲಿಗೆ ಕರೆದುತಂದವರು.”

“ಅವರು......”

“ಅವರು ಪೊಯಿಸಳೇಶ್ವರ ಮಹಾಸನ್ನಿಧಾನದ ಸೋದರರು.”

ರೂವಾರಿ, “ಛೇ, ಛೆ. ಎಂತಹ ಕೆಲಸವಾಯಿತು” ಎಂದು ತನಗೆ ತಾನೆ ಎಂಬಂತೆ ಅಂದುಕೊಂಡ. ಮಾತು ಶಾನ್ತಲದೇವಿಯ ಕಿವಿಗೂ ಬಿದ್ದಿತ್ತು.

“ಏನಾಯಿತು ಈಗ ?”

“ಅವರು ಇಂತಹವರು ಎಂಬುದು ತಿಳಿಯಬಾರದಿತ್ತೆ ?”

“ಅದು ತಿಳಿದಿದ್ದರೆ ನಿಮಗೆ ಆಗುತ್ತಿದ್ದ ಲಾಭವೇನು ?”

“ನಾನು ಒಬ್ಬ ಸಾಮಾನ್ಯ ಪ್ರಜೆ. ಅವರು ಆಳರಸರ ಸೋದರರು. ಅವರನ್ನು ನಾನು ಒಬ್ಬ ಸಾಮಾನ್ಯರಂತೆ ಕಂಡೆನಲ್ಲಾ ಎಂತಹ ಕೆಲಸ ಆಯಿತು ಎಂದುಕೊಂಡೆ.”

“ಅಂದರೆ ನಿಮಗೂ ಅರಸರಿಗೂ ಸಾಕಷ್ಟು ಮಾತಾಗಿರಬೇಕು ಅಲ್ಲವೆ ?”

“ಆಯಿತು. ಈಗ ಅದೇಕೆ ? ಅಪ್ಪಣೆಯಾಯಿತಂತೆ. ಬಂದಿದ್ದೇನೆ. ನನ್ನಿಂದ ಏನಾದರೂ ಆಗುವುದಿದ್ದರೆ......”

“ಮಾಡುತ್ತೀರಾ ?”

“ಆಗುವುದಿದ್ದರೆ ಮಾಡುತ್ತೇನೆ. ಆಗದುದಕ್ಕೆ ಕೈ ಹಾಕುವುದಿಲ್ಲ.”

“ನೀವು ದೇವಮಂದಿರದ ಕೆಲಸಕ್ಕೆ ಬಂದಿರುವ ಶಿಲೆಗಳನ್ನು ಪರೀಕ್ಷಿಸುತ್ತಿದ್ದಿರಿ. ಅಲ್ಲವೆ?”

“ಹೌದು.”

“ಅಂದರೆ ನಿಮಗೆ ಕಲ್ಲಿನ ಪರೀಕ್ಷೆ ಗೊತ್ತಿದೆ ಎಂದಾಯಿತು.”

“ಅಲ್ಪಸ್ವಲ್ಪ ಗೊತ್ತಿದೆ. ನಮ್ಮದು ಅನೇಕ ಪೀಳಿಗೆಗಳ ರೂವಾರಿ ಮನೆತನ.”

“ತಮ್ಮ ಹಿರಿಯರ ಹೆಸರು ಹೇಳಬಹುದಾದರೆ ತಿಳಿಯಲು ಆಸೆ.”

“ನಾನಾರೆಂಬುದನ್ನೇ ತಿಳಿಸಲು ನನಗೆ ಇಷ್ಟವಿಲ್ಲ. ಈ ಮಾತನ್ನು ಹೇಳುತ್ತೇನೆಂದು ಪಟ್ಟಮಹಾದೇವಿಯವರು ನನ್ನ ಮೇಲೆ ಕುಪಿತರಾಗಬಾರದು.”

“ಏಕೆ ? ನಿಮಗೆ ಯಾರದಾದರೂ ಭಯವಿದೆಯೆ ? ಈ ಪೊಯ್ಸಳ ರಾಜ್ಯದಲ್ಲಿ ಅಂತಹ ಭಯಕ್ಕೆ ಕಾರಣವಿಲ್ಲ.”

“ನನಗೆ ಭಯವಿಲ್ಲ. ಅದನ್ನು ಹೇಳಲು ಹೇಸಿಕೆ. ಅದರ ಸ್ಮರಣೆಯೇ ನನ್ನನ್ನು ತುಂಬ ಕಲಕಿಬಿಡುತ್ತದೆ. ಅದರಿಂದ ದಯವಿಟ್ಟು ಈ ಬಗೆಗೆ ಕೇಳಬೇಡಿ. ಸನ್ನಿಧಾನಕ್ಕೆ ಇಷ್ಟವಾದರೆ ಏನಾದರೂ ಕೆಲಸ ವಹಿಸಿ. ನನ್ನ ಶಕ್ತಿ ಮೀರಿ ಮಾಡುತ್ತೇನೆ. ನೇಮಿಸಿದವರಿಗೂ ತೃಪ್ತಿ ಕೊಡಲು ಪ್ರಯತ್ನಿಸುತ್ತೇನೆ. ನನ್ನ ವೈಯಕ್ತಿಕ ವಿಷಯ ತಿಳಿಯಲು ಪ್ರಯತ್ನಿಸಿದರೆ ನಾನು ಇಲ್ಲಿಂದ ಜಾರಿಕೊಳ್ಳುವುದು ಅನಿವಾರ್ಯವಾದೀತು. ಅರಮನೆಯ ಕೆಲಸ ಒಪ್ಪಿಕೊಂಡು ಅಂತಹ ಪರಿಸ್ಥಿತಿ ಒದಗಿದರೆ ನಾನು ತುಂಬ ಇಕ್ಕಟ್ಟಿಗೆ

ಸಿಕ್ಕಿಕೊಂಡ ಹಾಗೆ ಆಗುತ್ತದೆ. ನನಗೆ ಬೇಸರ ಬಂದರೆ, ನನ್ನ ವಿಷಯ ತಿಳಿದೇ ತೀರುವುದೆಂದು ನನಗನ್ನಿಸಿದರೆ ನಾನು ಕಾಲ್ತೆಗೆಯುವವನೆ.''

"ನಾವು ಬಿಟ್ಟರೆ ತಾನೆ ನೀವು ಕಾಲ್ತೆಗೆಯುವುದು.''

"ನನ್ನ ಮೇಲೆ ಕಾಪಿನವರನ್ನು ಹಾಕುತ್ತೀರೇನು ?''

"ಕಲೆ ವಿಕಸಿತವಾಗಬೇಕಾದರೆ, ಕಲೆಗಾರನಿಗೆ ಸಂಪೂರ್ಣ ಸ್ವಾತಂತ್ರವಿರಬೇಕು ಎಂಬುದು ನಮಗೆ ಗೊತ್ತು. ಈ ಅರಸುಮನೆತನದ ವಿಷಯ ನಿಮಗೆ ತಿಳಿದಿರುವುದು ಒಳಿತು. ಅರಮನೆ ಇತರರ ವೈಯಕ್ತಿಕ ವಿಷಯದಲ್ಲಿ ಅನಾವಶ್ಯಕವಾಗಿ ಪ್ರವೇಶಿಸುವುದಿಲ್ಲ. ಇಲ್ಲಿನ ಪ್ರಜೆಗೆ ಏನಾದರೂ ಅನುಸಂಕಟಗಳಿದ್ದರೆ ಅದರ ಮೂಲ ತಿಳಿದು ಪರಿಹಾರ ಕಂಡು ಹಿಡಿದು, ನೆಮ್ಮದಿ ತರುವುದಷ್ಟಕ್ಕೆ ಮಾತ್ರ ಪ್ರವೇಶಿಸುವುದುಂಟು. ಯಾರ ನೆಮ್ಮದಿಯನ್ನು ಕದಡಲೂ ಅರಮನೆ ಪ್ರವೇಶಿಸುವುದಿಲ್ಲ. ಅದರಿಂದ ನಿಮಗೆ ಇಷ್ಟವಿಲ್ಲದ ಯಾವುದೇ ವಿಚಾರವನ್ನು ಹೇಳುವಂತೆ ನಿಮಗೆ ನಿರ್ಬಂಧವನ್ನು ಎಂದೂ ಹಾಕುವುದಿಲ್ಲ. ಈಗ ಅರಮನೆ ಒಂದು ಬೃಹತ್ ನಿರ್ಮಾಣ ಕಾರ್ಯವನ್ನು ಕೈಕೊಂಡಿದೆ. ಅದು ಆಚಂದ್ರಾರ್ಕವಾಗಿ ಕೀರ್ತಿ ತರುವ ಮಾದರಿ ಕೆಲಸವಾಗಿ, ಸುಂದರವಾಗಿ ರೂಪಿತವಾಗಬೇಕಾಗಿದೆ. ಕೆಲಸ ಹಾಗೆ ಆಗಬೇಕಾದರೆ ಕೆಲಸ ಮಾಡುವ ರೂವಾರಿಯ ಮನಸ್ಸು ಹರ್ಷಮಯವಾಗಿರಬೇಕು. ಅವನಲ್ಲಿ ತೃಪ್ತಿ ಇರಬೇಕು. ಅತೃಪ್ತ ಕಲೆಗಾರನಿಂದ ಒಳ್ಳೆಯ ಕಲೆ ಹೊಮ್ಮುವುದಿಲ್ಲ. ಏಕೆಂದರೆ ಅತೃಪ್ತಿ ಇದ್ದಲ್ಲಿ ತಾದಾತ್ಮ್ಯವಿರುವುದಿಲ್ಲ. ನನ್ನ ಅಭಿಪ್ರಾಯ ಸರಿ ತಾನೆ ?''

"ಭಾಗಶಃ ಅದು ಸರಿ. ಆದರೆ ಕಲೆಗಾರನಿಗೆ ಎರಡು ವ್ಯಕ್ತಿತ್ವವಿರುತ್ತದೆ. ಒಂದು ಭೌತಿಕ ಶರೀರ ಹೊತ್ತ ಎಂಟು ಗೇಣಿನ ಮನುಷ್ಯ. ಇನ್ನೊಂದು ಆ ಶರೀರವಿದ್ದರೂ ಅದರ ಗೊಡವೆಯನ್ನೇ ಇಟ್ಟುಕೊಳ್ಳದೆ ಕಲಾಕಲ್ಪನೆಯಲ್ಲಿ ತನ್ಮಯನಾಗಿ ತನ್ನನ್ನು ತಾನು ಮರೆತು ಬೇರೊಂದನ್ನು ಸೃಷ್ಟಿಸಿ ತೋರುವ ವ್ಯಕ್ತಿತ್ವ. ಒಂದರದು ಇನ್ನೊಂದಕ್ಕೆ ಅಂಟುವುದಿಲ್ಲ. ಅದು ಅಂಟಿದರೆ ಕಲೆಗಾರಿಕೆ ಅಪರಿಪಕ್ವ ಎಂದೆನ್ನಬೇಕಾಗುತ್ತದೆ.''

"ಎಂದರೆ ಕಲಾಪ್ರಪೂರ್ಣನಾದ ವ್ಯಕ್ತಿ ಕಲೆಯಲ್ಲಿ ತೊಡಗಿದಾಗ ತನ್ನದಾದ ಎಲ್ಲ ಭೌತಿಕ ವಿಚಾರವನ್ನೂ, ನೋವು ನಲಿವುಗಳನ್ನೂ ಮರೆಯುತ್ತಾನೆಯೆಂದೋ ನಿಮ್ಮ ಭಾವ.''

"ಹೌದು. ಹಾಗಿಲ್ಲದಿದ್ದರೆ ನಾನು ಕಲಿತ ಕಲೆ ನನ್ನ ನೋವಿನ ಉರಿಯಲ್ಲಿ ಬೆಂದು ಬೂದಿಯಾಗಿಬಿಡುತ್ತದೆ.''

"ಹೌದೆ ? ನೋವು ಯಾರಿಗೆ ಇಲ್ಲ ರೂವಾರಿಗಳೆ ? ಎಲ್ಲರಿಗೂ ಒಂದಲ್ಲ ಒಂದು ಬಗೆಯ ನೋವಿದ್ದೇ ಇರುತ್ತದೆ. ಕೆಲವು ನೋವು ಅನಪೇಕ್ಷಿತವಾಗಿ ಬಂದವು. ಅಕಸ್ಮಾತ್ ಬಂದವು. ಯಾರೋ ಬೇರೆಯವರ ಕಾರಣವಾಗಿ ಬಂದವು. ಅಂತಹವನ್ನು ಮನುಷ್ಯ ನುಂಗಿಕೊಳ್ಳಬೇಕು. ಇನ್ನು ಕೆಲವು ನೋವುಗಳು ಹುಟ್ಟಿಕೊಳ್ಳುತ್ತವೆ. ಅದಕ್ಕೆ ಹೊರಗಿನವರು ಕಾರಣರಲ್ಲ. ನಾವೇ ಕಾರಣವಾಗಿರುತ್ತೇವೆ. ಅದು ನಮ್ಮ ಅವಿವೇಕದ ಕಾರಣವಾಗಿರಬಹುದು. ಇಲ್ಲದೆ ಆತುರದ, ಅಜ್ಞಾನದ ಕಾರಣವಾಗಿರಬಹುದು. ಅದರಿಂದ ನೋವು ಬಂದರೆ ಅದನ್ನು ಸಜೀವವಾಗಿ ಉಳಿಸಿಕೊಂಡು ಸಿಡಿದೇಳುವುದಕ್ಕಿಂತ ಅದನ್ನು ಅರಗಿಸಿಕೊಂಡು ಬಿಡಬೇಕು. ಇಲ್ಲವೇ ಕಿತ್ತು ಆಚೆಗೆ ಒಗೆಯಬೇಕು.''

"ಇಂತಹ ವಿಷಯದಲ್ಲಿ ಸೂತ್ರ ಮಾಡಿ, ಅದರಂತೆ ನಡೆಸಲು ಸಾಧ್ಯವೆ ? ಒಬ್ಬೊಬ್ಬರ ನೋವಿಗೆ ಒಂದೊಂದು ಕಾರಣವಿರುತ್ತದೆ.''

"ಒಂದು ವಿಷಯ. ನನ್ನ ಅಭಿಪ್ರಾಯದಲ್ಲಿ ಎಂತಹ ನೋವೇ ಆಗಲಿ ಅದು ನಿವಾರಣೆಗೆ ಎಟುಕದ ನೋವಾಗುವುದಿಲ್ಲ"

"ಈ ವಿಷಯದಲ್ಲಿ ನನ್ನದು ಭಿನ್ನಾಬಿಪ್ರಾಯವಿದೆ. ಅದಕ್ಕಾಗಿ ಸನ್ನಿಧಾನ ನನ್ನನ್ನು ಕ್ಷಮಿಸಬೇಕು."

"ಭಿನ್ನಾಭಿಪ್ರಾಯ ಇದ್ದಾಗಲೇ ವಿಚಾರ ಮಂಥನಕ್ಕೆ ಅವಕಾಶ ದೊರೆಯುವುದು. ಅದರಿಂದ ಒಳ್ಳೆಯದೇ ಆಗುತ್ತದೆ. ಇರಲಿ ಆ ವಿಷಯ ಇಲ್ಲಿಗೆ ಸಾಕು. ನಿಮ್ಮನ್ನು ಬರಮಾಡಿದ ಮುಖ್ಯ ವಿಷಯಕ್ಕೆ ಬರೋಣ" ಎಂದು ಕಂಸಾಳ ಬಾಜಿಸಿದಳು. ರೇವಿಮಯ್ಯ ಬಂದು ಬಾಗಿ ವಂದಿಸಿದ.

"ರೇವಿಮಯ್ಯ, ಇಲ್ಲಿಗೆ ಒಂದೆರಡು ಆಸನ ತರಿಸಿ ಹಾಕಿಸು. ಮತ್ತು ಈಗ ನಿರ್ಮಾಣವಾಗಲಿರುವ ಚೆನ್ನಕೇಶವ ಸೌಮ್ಯನಾಯಕಿ ದೇವಸ್ಥಾನದ ರೇಖಾಚಿತ್ರ ನಕ್ಷೆಗಳನ್ನು ತರುವಂತೆ ಉದಯಾದಿತ್ಯರಸರಿಗೆ ಬಿನ್ನವಿಸು" ಎಂದಳು ಶಾನ್ತಲದೇವಿ. ಅವನು ಬಾಗಿ ವಂದಿಸಿ ಹೊರಟುಹೋದ.

"ನಾವು ಈಗಾಗಲೇ ಒಂದು ರೀತಿಯಲ್ಲಿ ಕಾರ್ಯನಿಯೋಜಿಸಿದ್ದೇವೆ. ಇಲ್ಲಿಗೆ ಬಂದ ಪ್ರಸಿದ್ಧ ರೂವಾರಿಗಳೆಲ್ಲರಿಂದ ಅವರವರ ಕಲ್ಪನೆಗೆ ತೋರಿದಂತೆ ರೇಖಾಚಿತ್ರ ನಕ್ಷೆಗಳನ್ನು ಮಾಡಿರೆಂದು ಪ್ರಾರ್ಥಿಸಿ, ನಮಗೆ ನೂತನ ಮಾದರಿ ಎನಿಸುವ ಒಂದು ನಕ್ಷೆಯನ್ನು ಒಪ್ಪಿ, ಅದರ ಕಲ್ಪನೆ ಮಾಡಿದ ಓಡಯಗಿರಿ ರೂವಾರಿ ಹರೀಶರನ್ನು ಸ್ಥಪತಿಯಾಗಿ ಮಾಡಿದ್ದೇವೆ. ಅವರ ಮೇಲ್ವಿಚಾರಣೆಯಲ್ಲಿ ನೀವು ಕೆಲಸ ಮಾಡಬೇಕಾಗುತ್ತದೆ. ಒಪ್ಪಿಗೆ ತಾನೆ."

"ಅಯ್ಯೋ ನಾನೆಷ್ಟರವನು ? ನಾನು ಯಾರ ಕೈ ಕೆಳಗೆ ಬೇಕಾದರೂ ಕೆಲಸ ಮಾಡುತ್ತೇನೆ. ನನ್ನದು ಒಂದೇ ಸೂಚನೆ. ನಾನು ಮಾಡುವ ಎಲ್ಲ ಕೆಲಸದ ಚಿತ್ರ ನಾನು ಮೊದಲು ರೂಪಿಸುತ್ತೇನೆ. ಅದರಲ್ಲಿ ಬದಲಾವಣೆ ಸೂಚಿಸಿದರೆ ಅದನ್ನು ಮರು ರೂಪಿಸುತ್ತೇನೆ. ಒಮ್ಮೆ ಚಿತ್ರ ಒಪ್ಪಿತವಾದ ಮೇಲೆ ನಡುವೆ ನನಗೆ ಮತ್ತೆ ಸಲಹೆ ಬರಬಾರದು. ಶಿಲೆಗೆ ನಾನು ಕೈಯಿಟ್ಟ ಮೇಲೆ ಕಲ್ಪನೆಗೆ ಬದಲಾವಣೆ ಇಲ್ಲ."

"ಈ ಮೊದಲು ನೀವು ಎಲ್ಲಿಯಾದರೂ ಕೆಲಸ ಮಾಡಿರುವಿರಾ ?"

"ಮಾಡಿದ್ದೇನೆ. ಬಹಳ ವರ್ಷ ಬಿಟ್ಟ ಮೇಲೆ ಇತ್ತೀಚೆಗೆ ಕೆಲಸ ಮಾಡಿದ್ದು ಎಂದರೆ ದೊಡ್ಡಗದ್ದುವಳ್ಳಿಯಲ್ಲಿ."

"ಎಂದರೆ ನೀವು ಯಾದವಪುರಿಗೆ ಬಂದಿದ್ದಿರಾ ?"

"ಹೌದು. ಸನ್ನಿಧಾನಕ್ಕೆ ಯಾರು ಹೇಳಿದರು ?"

"ಶ್ರೀರಂಗದಿಂದ ಬಿಜಯ ಮಾಡಿಸಿದ್ದ ಶ್ರೀ ಶ್ರೀ ರಾಮಾನುಜಾಚಾರ್ಯರು."

"ಅವರ ಸಂದರ್ಶನವಾಗಿತ್ತು."

"ಎಲ್ಲವನ್ನೂ ಅವರು ನಮಗೆ ಯಥಾವತ್ ಹೇಳಿದ್ದಾರೆ."

"ತಲೆ ಮರೆಸಿಕೊಂಡು ಹೋಗುವ ಕಳ್ಳ ಎಂದು ಅವರು ಹೇಳಿರಬೇಕು."

"ಸ್ವೇಚ್ಛೆಯಾಗಿ ವಿಹರಿಸಲೆಳಸುವ ಕಲಾವಿಹಗ ಹಾರಿಹೋಯಿತು. ಅವರ ಸೇವೆ ಪಡೆದುಕೊಳ್ಳುವ ಭಾಗ್ಯ ಜನಾರ್ಧನ ನನಗೆ ಕರುಣಿಸಲಿಲ್ಲ ಎಂದು ತುಂಬಾ ಪಶ್ಚಾತ್ತಾಪ ಪಟ್ಟರು. ನಿಮ್ಮದು ನೊಂದ ಜೀವ ಎಂದು ಅವರಿಗರಿವಾಗಿತ್ತು. ಆ ನೋವನ್ನು ತಗ್ಗಿಸಬೇಕೆಂಬುದು ಅವರ ಇಚ್ಛೆಯಾಗಿತ್ತು."

"ಆ ಭಗವಂತನಿಗೇ ಅದನ್ನು ತಗ್ಗಿಸಲು ಸಾಧ್ಯವಿಲ್ಲ. ಆದರೂ ಪೂಜ್ಯರ ಅನುಕಂಪವೂ ನಮಗೆ ಆಶೀರ್ವಾದವೇ ತಾನೆ ?''

"ಅಂತಹ ಸಾನ್ನಿಧ್ಯ ಬಿಟ್ಟು ನೀವು ಹೊರಟುಹೋದುದೇಕೆ ?''

"ನನ್ನ ಜೀವನದ ವಿಷಯ ಯಾರಿಗೂ ತಿಳಿಸಲು ನನಗೆ ಇಚ್ಛೆ ಇಲ್ಲ. ಅದನ್ನು ಬಯಲಿಗೆಳೆಯುವ ಪ್ರಯತ್ನವಿದೆ ಅಲ್ಲಿ ಅನ್ನಿಸಿತು. ಎಂತಲೇ ನಾನು ಅಲ್ಲಿಂದ ಕಾಲ್ತೆಗೆದೆ. ಅದು ನನ್ನ ಸ್ವಭಾವ. ಇಲ್ಲಾದರೂ ಆ ಬಗೆಯಾಗುವುದಾದರೆ......''

"ಹಾಗಾಗುವುದಿಲ್ಲ ಎಂಬ ಭರವಸೆ ಕೊಡಲಾಗಿದೆಯಲ್ಲ''

"ಆದರೂ ಅಂತಹ ಪ್ರಸಂಗ ಒದಗಿ ಬಂದರೆ ನಾನಿರುವವನಲ್ಲ.''

"ನಿಮ್ಮಿಷ್ಟ ಅದು ಹೋಗಲಿ. ಶ್ರೀಮದಾಚಾರ್ಯರ ಆಸೆಗೂ ಒಂದು ಫಲ ದೊರೆತಂತೆ ಆಯಿತು, ನೀವಾಗಿಯೇ ಇಲ್ಲಿಗೆ ಬಂದುದು. ಈ ದೇವಮಂದಿರ ನಿರ್ಮಾಣ ಅವರ ಆಣತಿಯಂತೆಯೇ ಆಗುತ್ತಿರುವುದು. ನೀವು ಬಂದಿರುವ ವಿಷಯ ಅವರಿಗೆ ತಿಳಿದರೆ ಅವರು ನಿಜವಾಗಿ ಸಂತಸಪಡುತ್ತಾರೆ.''

"ನಾನು ಯಾದವಪುರಿಗೆ ಬಂದಿದ್ದ ವಿಷಯ ಅರಮನೆಯವರೆಗೆ ಮುಟ್ಟಿರುತ್ತದೆಯೆಂದು ಭಾವಿಸಿರಲಿಲ್ಲ. ಈಗ ನಾನೇ ಅವನು ಎಂದು ಸನ್ನಿಧಾನಕ್ಕೂ ಅರಸರಿಗೂ ತಿಳಿದಿದೆ. ಈ ವಿಷಯ ಇತರರಿಗೆ ತಿಳಿಯದಂತೆ ನೋಡಿಕೊಳ್ಳುವುದಾಗಿ ಭರವಸೆ ದೊರೆತರೆ ನಾನಿಲ್ಲಿರುತ್ತೇನೆ. ಇಲ್ಲವಾದರೆ ಇಂದೇ ಹೊರಟೆ.''

"ನಿಮಗೆ ಆ ವಿಷಯದಲ್ಲಿ ಭರವಸೆ ಕೊಡುತ್ತೇನೆ. ಅಲ್ಲಿ ನೀವು ಬಂದಿದ್ದಾಗ ನಿಮ್ಮನ್ನು ನೋಡಿ ಈಗಲೂ ಗುರುತಿಸಬಹುದಾದವರು ಶ್ರೀಮದಾಚಾರ್ಯರು ಅವರ ಇಬ್ಬರು ಶಿಷ್ಯರು. ಈಗ ನಾನು ಮತ್ತು ಉದಯಾದಿತ್ಯರಸರು ಈ ವಿಚಾರ ಬಲ್ಲೆವು. ಮಹಾಸನ್ನಿಧಾನಕ್ಕೆ ಸಹ ಈ ವಿಷಯ ಗೊತ್ತು. ನಮ್ಮ ರೇವಿಮಯ್ಯನಿಗೆ ಗೊತ್ತು. ಬೇರಾರಿಗೂ ಅದು ಗೊತ್ತಾಗುವುದಿಲ್ಲ. ಸರಿತಾನೆ.''

"ಅಷ್ಟು ಕೃಪೆ ತೋರಿದರೆ ನಾನು ಕೃತಾರ್ಥನಾಗುತ್ತೇನೆ.''

ಉದಯಾದಿತ್ಯ ಬರುವ ಸೂಚನೆ, ಬಂದ ಆಸನದಿಂದ ತಿಳಿಯಿತು. ಹೆಚ್ಚು ಕಡಿಮೆ ಹಿಂದೆಯೇ ಉದಯಾದಿತ್ಯರಸ ಬಂದ. ಊಳಿಗದವನೊಬ್ಬ ರೇಖಾಚಿತ್ರ, ನಕ್ಷೆಗಳನ್ನು ಹರಿವಾಣದಲ್ಲಿಟ್ಟುಕೊಂಡು ಬಂದು ಬದಿಯ ಅಡ್ಡಣಿಗೆಯ ಮೇಲೆ ಇಟ್ಟು ಹೋದ. ಉದಯಾದಿತ್ಯ ತನಗಾಗಿ ಹಾಕಿದ್ದ ಆಸನದ ಮೇಲೆ ಕುಳಿತ.

"ರೂವಾರಿಗಳು ಈ ರೇಖಾಚಿತ್ರ, ನಕ್ಷೆಗಳನ್ನೆಲ್ಲ ನೋಡಲಿ. ಅವರಿಗೆ ಯಾವ ಕೆಲಸ ಇಷ್ಟವಾಗುತ್ತದೆಯೋ ಅದು ತೆರವಾಗಿದ್ದರೆ ಇವರಿಗೆ ವಹಿಸುವಂತೆ ಸ್ಥಪತಿಗಳಿಗೆ ಹೇಳೋಣ.''

"ಅಪ್ಪಣೆ'' ಎಂದು ಉದಯಾದಿತ್ಯ ಅವನ್ನೆಲ್ಲ ತೋರಿಸಿದ.

ಎಲ್ಲವನ್ನೂ ತುಂಬಾ ಶ್ರದ್ಧಾಸಕ್ತಿಗಳಿಂದ ರೂವಾರಿ ನೋಡಿದ

"ಪೊಯ್ಸಳ ವಂಶ ಈಗ ಭದ್ರವಾದ ಅಡಿಪಾಯ ಹೊಂದಿದೆ. ಕನ್ನಡಗಿರು ಸುಸಂಸ್ಕೃತರು. ಅವರ ಕಲಾಕಲ್ಪನೆ ವಿಶ್ವದಲ್ಲೇ ಸಾಟಿಯಿಲ್ಲದ ಕಲ್ಪನೆ. ಬೆಟ್ಟದ ಮೇಲೆ ಬೃಹತ್ ವಿಗ್ರಹವನ್ನು ಕಡೆಸಿದರು. ಬೆಟ್ಟವನ್ನೇ ಕಡಿದು ದೇವಮಂದಿರ ಮಾಡಿದರು. ಅವರದೆಷ್ಟು ಬೃಹತ್ ಕಲ್ಪನೆಯಿದೆಯೋ ಅದರಲ್ಲಿ ಅಣು

ಅಣುವಿನಲ್ಲೂ ಕಲಾವಿಲಾಸ ರೂಪಿಸಿ ಅದಕ್ಕೆ ಪೊಯ್ಸಳರ ಕಾಲದಲ್ಲಿ ರೂಪಿತವಾದ ವಾಸ್ತುಶಿಲ್ಪ ಎಂಬ ಹೆಸರು ಬರುವಂತೆ, ಈ ರಾಜ್ಯದಲ್ಲಿ ಕಲಾವಂತಿಕೆ ಬೆಳೆಯಬೇಕೆಂಬುದು ಸನ್ನಿಧಾನದ ಆಸೆ; ನಮ್ಮೆಲ್ಲರ ಆಸೆ. ಎಂತಲೇ ಅನುಕರಣೆಗೆ ತುಂಬ ದೂರವಾದ ಈ ನಕ್ಷೆಯನ್ನು ನಾವು ಒಪ್ಪಿರುವುದು. ಈ ವಿಚಾರದಲ್ಲಿ ನಿಮ್ಮ ಅಭಿಪ್ರಾಯ'' ಎಂದು ಉದಯಾದಿತ್ಯ ಕೇಳಿದ.

''ಒಬ್ಬೊಬ್ಬ ರೂವಾರಿಯ ಕಲ್ಪನೆ ಒಂದೊಂದು ಬಗೆಯಿರುತ್ತದೆ. ಪಟ್ಟ ಮಹಾದೇವಿಯವರು ಹೇಳುತ್ತಿದ್ದಾಗ ನನ್ನ ಮನಸ್ಸಿನಲ್ಲಿಯೂ ಸಹ ಯಾವುದೋ ಒಂದು ಹೊಳವು ಮೂಡಿತು. ಅಪ್ಪಣೆಯಾದರೆ ನನ್ನ ಹೊಳವನ್ನು ಚಿತ್ರವಾಗಿ ರೂಪಿಸಿತರುತ್ತೇನೆ.''

''ಎಷ್ಟು ದಿವಸ ಬೇಕಾಗುತ್ತದೆ ?''

''ನನಗೆ ಬೇರೇನು ಕೆಲಸ ? ಅವಶ್ಯಕವಾದ ತುಸು ವಿಶ್ರಾಂತಿ ಮತ್ತು ನಿತ್ಯಾನುಷ್ಠಾನಗಳಿಗಷ್ಟು ಕಾಲಬಿಟ್ಟರೆ ಉಳಿದ ಕಾಲ ಅದಕ್ಕೇ ವಿನಿಯೋಗವಾಗುತ್ತದೆ. ಎರಡು ಮೂರು ದಿವಸ ಸಾಕಾದೀತು.''

''ಅಲ್ಲಿಯವರೆಗೆ ದೇವಸ್ಥಾನದ ಕೆಲಸ ಸ್ಥಗಿತವಾಗಬೇಕೆ ?''

''ಈಗ ಆಗಿರುವುದೇನು ? ಬರೀ ಅಗೆತ. ಮತ್ತು ಶಿಲೆಗಳ ಓರೆಕೋರೆಗಳನ್ನು ಸರಿಪಡಿಸುವಿಕೆ, ಯಾವ ಕೆಲಸಕ್ಕೆ ಯಾವ ಶಿಲೆ ಎಂಬ ಶಿಲಾವಿತರಣೆ. ನನ್ನ ಮನದಲ್ಲಿ ಮೂಡಿದ ಹೊಳವು ನಾಳೆ ಮಾನ್ಯವಾಗದಿರಬಹುದು. ಅದರಿಂದ ಈ ಕೆಲಸ ಸಾಗುತ್ತಿರಲಿ. ನನಗೆ ಅಪ್ಪಣೆಕೊಟ್ಟರೆ.''

''ಬಿಡಾರ ಎಲ್ಲಿ ?''

''ಯಗಚಿಯ ದಂಡೆಯ ಮೇಲಿನ ಮಧುವನಕ್ಕೆ ಆತು ನಿಂತಿರುವ ಮಂಟಪ.''

''ಛೇ, ಛೆ. ಅಲ್ಲೇಕೆ. ಅರಸರು ಬೇರೆ ಬಿಡಾರ ಮಾಡಿಕೊಡುತ್ತಾರೆ.''

''ಬೇಡ, ಅಲ್ಲೇ ಪ್ರಶಾಂತವಾಗಿದೆ'' ಎಂದು ರೂವಾರಿ ಎದ್ದುನಿಂತ.

''ಈ ಕೆಲಸಕ್ಕಾಗಿ ಮೀಸಲಾಗಿರುವ ಭೂಮಿಯ ಆಯಕಟ್ಟು, ವಿಸ್ತಾರ ಮೊದಲಾದವನ್ನೆಲ್ಲ ಅರಸರು ನಿಮಗೊದಗಿಸುತ್ತಾರೆ. ರೂವಾರಿಗಳ ಇತರ ಸೌಕರ್ಯಗಳನ್ನು ಅವರಿಚ್ಛೆಯರಿತು ಅರಸರು ಒದಗಿಸುತ್ತೀರಿ ತಾನೆ ?''

''ಅಪ್ಪಣೆ'' ಎಂದು ಉದಯಾದಿತ್ಯ ಎದ್ದು ನಿಂತ.

''ಒಳ್ಳೆಯದು ರೂವಾರಿಗಳೆ'' ಎಂದು ಶಾನ್ತಲದೇವಿ ಎದ್ದು ನಿಂತಳು.

''ಬನ್ನಿ'' ಎಂದು ಉದಯಾದಿತ್ಯ ಮುಂದಡಿಯಿಟ್ಟ

''ರೂವಾರಿಗಳು ಯಾದವಪುರಿಗೆ ಬಂದಿದ್ದರೆಂಬ ವಿಷಯ ಯಾರಿಗೂ ತಿಳಿಯಬಾರದು'' ಎಂದಳು ಶಾನ್ತಲದೇವಿ.

''ಇತರರಿಗೆ ತಿಳಿದರೆ ಆಗುವ ಮುಕ್ಕೇನು ?''

''ಅದು ಅವರ ಇಚ್ಛೆ. ನಾನು ವಾಗ್ದಾನ ಮಾಡಿದ್ದೇನೆ.''

''ಅದು ಪರಿಪಾಲಿತವಾಗುತ್ತದೆ. ಬನ್ನಿ'' ಎಂದು ಉದಯಾದಿತ್ಯ ಮುಂದುವರಿದ.

ಹಿಂದೆ ವಿನಯದಿಂದ ಬರುತ್ತಿದ್ದ ರೂವಾರಿ, "ಮಹಾಸನ್ನಿಧಾನದ ಸೋದರರು ತಾವು ಎಂದು ಹೇಳಬಾರದಾಗಿತ್ತೆ ?" ಎಂದು ಮೆಲ್ಲನೆ ಉಸುರಿದ.

"ಅರಮನೆಯಲ್ಲಿ ನಾನಾರೆಂಬುದು ತಿಳಿಯುತ್ತದೆ ಎಂದು ಹೇಳಿದೆನಲ್ಲ. ಪರಸ್ಪರ ನಂಬಿಕೆ ಮೂಡಿದಲ್ಲದೆ ತೆರೆದ ಮನದ ವಿಚಾರ ಹೇಗೆ ಸಾಗೀತು ? ಇದು ಒಮ್ಮುಖ ವ್ಯಾಪಾರವಾಗಲಾರದು. ನೀವು, ನಿಮ್ಮ ಮನಸ್ಸನ್ನು ಆತ್ಮೀಯತೆಯಿಂದ ತೆರೆದಿಟ್ಟರೆ ನಾವೂ ಹಾಗೆಯೇ ಮಾಡುತ್ತೇವೆ. ನೀವು ನಿಮ್ಮ ಬಾಗಿಲು ಮುಚ್ಚಿ, ನಮ್ಮನ್ನು ಮಾತ್ರ ಬಾಗಿಲು ತೆರಿದಿಟ್ಟಿರಿ ಎಂದರೆ ಹೇಗೆ ?"

"ಅಂತೂ ನಾನು ತಪ್ಪಿತಸ್ಥನೆಂದು ಅರಸರು ನಿರ್ಣಯಕೊಟ್ಟ ಹಾಗಾಯಿತು. ಅದಕ್ಕೆ ಶಿಕ್ಷೆಯನ್ನು ಅನುಭವಿಸುತ್ತೇನೆ."

"ಈಗ ಪಟ್ಟಮಹಾದೇವಿಯವರು ಹೇಳಿದ ಕೆಲಸ ಮುಖ್ಯ. ಉಳಿದುದೆಲ್ಲ ನಮಗೆ ಗೌಣ."

ಅಷ್ಟರಲ್ಲಿ ಅರಮನೆಯ ದ್ವಾರಕ್ಕೆ ಅವರು ಬಂದಿದ್ದರು.

"ನಾನು ನಾಳಿದ್ದು ಬರಲೆ ?" ಎಂದು ಉದಯಾದಿತ್ಯ ಕೇಳಿದ.

"ಹಾಗೆಯೇ ಮಾಡಿ" ಎಂದು ರೂವಾರಿ ಹೊರಟುಹೋದ.

# ೪. ಹೊಸ ನಕ್ಷೆ : ಹೊಸ ಸ್ಥಪತಿ

ಸ್ಥಪತಿ ಹರೀಶನಿಗಾಗಲಿ, ಇತರ ಯಾವುದೇ ರೂವಾರಿಗಳಿಗಾಲಿ ಈ ವಿಚಾರ ಗೊತ್ತಿರಲಿಲ್ಲ ಒಬ್ಬ ನಿರ್ಗತಿಕನಂತಹವನ್ನು ಅರಮನೆಯೊಳಕ್ಕೆ ಕರೆದೊಯ್ದುದೂ ಅವನು ಸ್ವಲ್ಪ ಕಾಲಾನಂತರ ಅಲ್ಲಿಂದ ಹೊರಬಿದ್ದುದೂ ಬಾಯಿಂದ ಬಾಯಿಗೆ ಬಂತು. ಅವನು ಯಾರು ? ಅವನನ್ನು ಅರಮನೆಯೊಳಕ್ಕೆ ಏಕೆ ಕರೆಸಲಾಯಿತು ಎಂದು ಪರಿಸ್ಥಿತಿಯೇನೋ ಕುತಹೂಲವನ್ನು ಕೆರಳಿಸಿತು. ನಿಜ. ಆದರೆ ಮಾರನೆಯ ದಿನ ಮತ್ತೆ ಆ ವ್ಯಕ್ತಿ ಕಾಣದೆ, ಕುತೂಹಲ ಹಾಗೆಯೇ ಮುದುಡಿಕೊಂಡಿತು.

ಈ ವಿಷಯವೂ ಶಾನ್ತಲದೇವಿಯ ಗಮನಕ್ಕೆ ಬಂತು. ಉದಯಾದಿತ್ಯನೊಂದಿಗೆ ದಿನದಿನವೂ ಆಗುತ್ತಿರುವ ಪ್ರಗತಿಯನ್ನು ಶಾನ್ತಲದೇವಿ ಚರ್ಚಿಸುತ್ತಿದ್ದಳು. ಯಾತ್ರಿಕ ರೂವಾರಿಯನ್ನು ಕಂಡ ಮಾರನೆಯ ದಿವಸ ಸಹ ಅವರಿಬ್ಬರೂ ಈ ಪ್ರಗತಿಯ ಬಗೆಗೆ ಮಾತನಾಡುತ್ತಾ ಇದ್ದಾಗ, ''ಆ ರೂವಾರಿ ಎಷ್ಟು ಪ್ರಗತಿಮಾಡಿದ್ದಾನೆಂದು ಏಕೆ ನೋಡಿ ಬರಬಾರದು'' ಎಂದು ಉದಯಾದಿತ್ಯ ಸೂಚಿಸಿದ.

''ನೋಡಿ ಬರಬಹುದು ಆದರೆ ಅದನ್ನೇ ಆ ವ್ಯಕ್ತಿ ಅಪಾರ್ಥಮಾಡಿಕೊಂಡರೆ ?''

''ಮಾಡಿಕೊಳ್ಳಲಿ. ನಾವೇನು ಅವನಿಂದ ಧರ್ಮದ ಕೆಲಸ ಮಾಡಿಸುತ್ತಿಲ್ಲವಲ್ಲ.''

''ನಿಜ. ನಾವು ಅವನಿಗೆ ಸಂಭಾವನೆ ಕೊಡಬಹುದು. ಆದರೆ ಅವನು ಸಂಭಾವನೆಯ ಗುರಿಯಿಟ್ಟುಕೊಂಡು ಕೆಲಸ ಮಾಡುತ್ತಿಲ್ಲ ಎಂಬುದನ್ನು ಮರೆಯಬೇಡ.''

''ಅದೇನೋ ಸರಿಯೆ. ಆದರೂ ನಾವು ಅವನ ವಿಷಯಕ್ಕೆ ವಿಶೇಷ ಶ್ರದ್ಧೆ ಕೊಡುತ್ತಿದ್ದೇವೇನೋ ಎನ್ನಿಸಿದೆ. ಇದು ಸರಿಯೆ ? ಪ್ರಸಿದ್ಧ ರೂವಾರಿಗಳು, ಬಿರುದಾಂಕಿತರು ಸಹ ವಿಧೇಯರಾಗಿ ನಡೆದುಕೊಂಡು ಹೋಗುತ್ತಿದ್ದಾರೆ. ಆದರೆ ಇವನದು ವಿಚಿತ್ರವಾದರೂ ಇವನತ್ತ ವಿಶೇಷ ಗಮನವೇಕೆ ?''

''ಶ್ರೀಮದಾಚಾರ್ಯರು ಆತನ ಬಗೆಗೆ ಹೇಳಿದ್ದ ಎಲ್ಲ ಮಾತನ್ನೂ ನೆನಪು ಮಾಡಿಕೋ. ಅವರ ಅಂತರಂಗಕ್ಕೆ ಏನೋ ಒಂದು ಹೊಳವು ಮೂಡಿ, ಈ ರೂವಾರಿಯ ಕೈಯಲ್ಲಿ ಉತ್ಕೃಷ್ಟವಾದ ಕೆಲಸ ಮಾಡಿಸಿಕೊಳ್ಳಬಹುದೆನ್ನಿಸಿತು. ಅವರ ಅಂತರಂಗಿಕ ಹೊಳವಿಗೆ ಬೆಲೆ ಇದೆ ಎಂದು ನಾನು ಭಾವಿಸಿದ್ದೇನೆ.''

''ಹಾಗಾದರೆ ಪಟ್ಟಮಹಾದೇವಿಯವರು ಮತಾಂತರದ ಬಗೆಗೆ ಪಟ್ಟು ಹಿಡಿದುದೇಕೆ ?''

''ಅದಕ್ಕೂ ಇದಕ್ಕೂ ಸಂಬಂಧವೇನಿದೆ ಉದಯ ? ಮತ ನನ್ನ ಸ್ವಂತದ್ದು. ಅದು ನನ್ನ ನಂಬಿಕೆಯ ಮೇಲೆ ಸ್ಥಿರವಾಗಿ ನೆಲೆನಿಂತ ಸ್ವವಿಷಯ. ಇದು ಒಬ್ಬ ಮಹಾತ್ಮರ ಮನಸ್ಸಿಗೆ ಸೂಚಿತವಾದ ಒಂದು ಮಹತ್ವದ ವಿಷಯ. ನಾನು ಮತಾಂತರದ ವಿರೋಧಿಯೇ ವಿನಾ ಮಹತ್ವದ ವಿರೋಧಿಯಲ್ಲ. ಅವರು

ಸಿದ್ಧಪುರುಷರೆಂಬುದರಲ್ಲಿ ನನಗೆ ಅನುಮಾನವಿಲ್ಲ. ಅವರ ಆಳವಾದ ನಿಷ್ಠೆ ಅಚಲವಾದ ನಿಲುವು, ಅವರ ಚಿಂತನದ, ತಪಸ್ಸಿನ ಫಲ. ಅವರ ಈ ಸಾಧನೆ ಸರ್ವಜನ ಮಾನ್ಯತೆಗೆ ಯೋಗ್ಯವಾದುದು. ಅದರಿಂದ ಆ ರೂವಾರಿಯ ಬಗೆಗೆ ನನಗೆ ವಿಶೇಷ ಆಸ್ಥೆ.''

''ಅವನೊಂದಿಗೆ ನೀವು ಮಾತನಾಡಿದಿರಲ್ಲ, ಏನೆನ್ನಿಸಿತು ?''

''ಅವನಿಗೆ ಸ್ಪಷ್ಟ ಕಲ್ಪನೆಗಳು ಇವೆ. ಭವ್ಯಾತಿ ಭವ್ಯದತ್ತ ಅವನ ಮನಸ್ಸು ಒಲವುಗೊಳ್ಳುತ್ತದೆ. ಒಂದು ರೀತಿಯಲ್ಲಿ ಕನಸುಗಾರನೆನ್ನಬಹುದು. ಅಂತಹವರಲ್ಲಿ ಅದ್ಭುತ ಕಲ್ಪನೆ ಮೂಡಲು ಸಾಧ್ಯ. ಆದರೆ ಆ ಕನಸುಗಾರತನವೇ ಅವನ ಜೀವನದಲ್ಲಿ ಅವನಿಗೆ ಎಡರಾಗಿದೆ ಎನ್ನಿಸುತ್ತದೆ. ಅವನ ಯಾವುದೋ ಭವ್ಯ ಸ್ಥಿರ ಕಲ್ಪನೆ, ಬರೀ ಕನಸಿನ ಅರಮನೆಯಾಗಿ, ಅವನು ತೀವ್ರ ನಿರಾಶೆಗೊಳಗಾಗಿರಬೇಕು. ಅವನಲ್ಲಿ ಈಗ ಭಾವುಕತನವನ್ನು ಪುನಃ ತುಂಬಬೇಕು''

''ಇವೆಲ್ಲ ಸಾರ್ಥಕವಾಗಬೇಕಾದರೆ ನಿಜವಾಗಿ ಅವನಲ್ಲಿ ಶ್ರೇಷ್ಠ ಕಲೆಗಾರಿಕೆ ಇರಬೇಕಲ್ಲ.''

''ಆತುರಪಟ್ಟರೆ ಹೇಗೆ ? ಕಲೆಗಾರಿಕೆಯ ಶ್ರೇಷ್ಠತೆ ಕಂಡ ಮೇಲೆ ತಾನೇ ನಾವಾದರೂ ಮುಂದಡಿಯಿಡುವುದು.''

''ಆದರೂ ಅಪಾತ್ರರಲ್ಲಿ ನಂಬಿಕೆಯಿಟ್ಟು ನಿರಾಶರಾಗುವುದು ಏಕೆ ?''

''ನಿನ್ನಿನ ನಿನ್ನ ಮಾತಿಗೂ ಇಂದಿನ ಮಾತಿಗೂ ವ್ಯತ್ಯಾಸ ಇರುವುದನ್ನು ನೋಡಿದರೆ ಏನೋ ವಿಶೇಷ ಇದೆ ಎಂದು ನನಗನ್ನಿಸುತ್ತದೆ.''

''ಇದೆ. ಆದರೆ ಹೇಗೆ ಹೇಳಲಿ ?''

''ಹೇಳಬಾರದಂತಹ ವಿಷಯವೇನು ?''

''ಹಾಗಲ್ಲ. ಪಟ್ಟಮಹಾದೇವಿಯವರ ಒಪ್ಪಿಗೆ ಪಡೆಯಲಾರದ ಒಂದು ಕೆಲಸವನ್ನು ನಾನು ಮಾಡಿಬಿಟ್ಟಿದ್ದೇನೆ. ನನ್ನನ್ನು ಕ್ಷಮಿಸುವುದಾದರೆ ಹೇಳುತ್ತೇನೆ.''

''ನೀನು ಶ್ರೀಮದಾಚಾರ್ಯರ ಶಿಷ್ಯರಂತೆ ಏನಾದರೂ ಮಾಡಿ ಕೂತಿರುವೆಯೇನು ?''

''ನಾನೇನೂ ಹಾಗೆ ಮಾಡಲಿಲ್ಲ. ಅವನನ್ನು ವಾಸ್ತವವಾಗಿ ನೋಡಬೇಕಾಗಿರುವುದು ನಾಳೆ. ಎಷ್ಟು ಕೆಲಸವಾಗಿದೆ, ಯಾವ ರೀತಿ ಅವನು ಕೆಲಸ ಮಾಡುತ್ತಾನೆ ಎಂಬ ಕುತೂಹಲವು ನನ್ನನ್ನು ಅವನು ಇರುತ್ತೇನೆಂದು ಹೇಳಿದ ನದೀ ದಂಡೆಯ ಮಂಟಪದತ್ತ ಕರೆದೊಯ್ಯಿತು.''

''ಹೀಗೆಯೇ ಹೋಗಿದ್ದೆಯಾ ?''

''ಇಲ್ಲ. ವೇಷಾಂತರದಲ್ಲಿ ಹೋಗಿದ್ದೆ. ಆದರೆ ಆ ರೂವಾರಿ ಅಲ್ಲಿರಲಿಲ್ಲ. ಅಲ್ಲಿ ಯಾರೂ ಇದ್ದಂತೆ ಕಾಣಲಿಲ್ಲ. ಯಾರಾದರೂ ಇದ್ದು ಹೋಗಿರಬಹುದೆಂಬುದಕ್ಕೆ ಸಹ ಯಾವುದೇ ಸಾಕ್ಷಿ ಸಿಗಲಿಲ್ಲ. ಅದರಿಂದಲೇ ಹೋಗಿ ಬರಲೇ ಎಂದು ಅಪ್ಪಣೆ ಕೇಳಿದೆ. ಒಪ್ಪಿದರೆ ನಂತರ ವಿಷಯ ತಿಳಿಸೋಣವೆಂದು.''

''ನೀನು ಹೋಗಿದ್ದಾಗ ನೀರು ಕಡೆಗೋ ಆರೋಗಣೆಗೋ ಹೋಗಿರಬಹುದು.''

''ಅಂದರೆ ಅವನು ಹಿಂದಿನ ಹಾಗೆ ಓಡಿಹೋಗಿಲ್ಲ ಎಂಬುದು ನಿಮ್ಮ ಭಾವನೆಯೇ ?''

''ಓಡಿಹೋಗಲು ಕಾರಣಬೇಕು. ಇಲ್ಲವೇ ಓಡಿಹೋಗಿದ್ದಾನೆಂಬುದಕ್ಕೆ ಸಾಕ್ಷಿ ಬೇಕು. ಎರಡೂ ಇಲ್ಲದೆ ನಾನು ಏನೂ ಹೇಳಲು ಇಚ್ಛಿಸುವುದಿಲ್ಲ.''

"ಅವನು ಬರುತ್ತಾನೆಂದು ನಿಮಗೆ ಧೈರ್ಯವೆ ?"

"ಆ ವಿಷಯ ಯೋಚಿಸುವುದಕ್ಕೆ ಈ ಆತುರವೇಕೆ ಉದಯ ? ನಾಳೆ ಬೆಳಿಗ್ಗೆ ನೀನವನನ್ನು ನೋಡಬೇಕಲ್ಲವೆ ?"

"ಬೆಳಿಗ್ಗೆ ಎಂದೇನು ಹೇಳಿಲ್ಲ. ನಾಳೆ ಬರಲೇ ಎಂದು ಕೇಳಿದೆ. ಆತ ಹೂ ಎಂದ."

"ಹಾಗಾದರೆ ನಾಳೆ ಮಧ್ಯಾಹ್ನತ್ಪರ ನೀನು ಅಲ್ಲಿಗೆ ಹೋಗು."

"ನಿಮಗೆ ಇನ್ನೂ ನಂಬಿಕೆ ಇದೆಯೇ ?"

"ಇದು ನಂಬಿಕೆ ಅಪನಂಬಿಕೆ ಪ್ರಶ್ನೆ ಅಲ್ಲ. ನಮ್ಮ ಕರ್ತವ್ಯ. ಆತ ನೇರವಾಗಿ ನಮ್ಮ ಬಳಿಗೆ ಬರಲು ವ್ಯವಸ್ಥೆ ಮಾಡಲಾಗಿದೆಯೆ ?"

"ಇಲ್ಲ."

"ಎಂದರೆ ಆತ ಬರುವುದು ಹೇಗೆ ? ನಮ್ಮನ್ನು ಕಾಣುವುದು ಹೇಗೆ ? ಒಂದು ವೇಳೆ ಬರಬೇಕೆಂದು ಆಲೋಚಿಸಿದರೂ ಒಳಗೆ ಬಿಡದೆ ಹೋದರೇನು ಗತಿ ಎಂಬ ಅನುಮಾನ ಆತನಲ್ಲಿ ಬಂದರೆ, ಆತ ಇತ್ತ ಬರದಿರುವ ಸಂಭವವೇ ಹೆಚ್ಚು. ನಾಳೆಯೂ ಆತ ಸಿಗದಿದ್ದರೆ, ಆಮೇಲೆ ಮುಂದಿನ ವಿಚಾರ ನೋಡೋಣ."

"ಸರಿ."

"ಸ್ಥಪತಿಗಳು ಹೇಗಿದ್ದಾರೆ ?"

"ತುಂಬಾ ಉತ್ಸಾಹವಾಗಿದ್ದಾರೆ."

"ಉತ್ಸಾಹ ಉಕ್ಕಿ ಹರಿಯುವ ವಯಸ್ಸು ಆತನದು. ಮಹತ್ವಾಕಾಂಕ್ಷೆಯೂ ಇದೆ."

"ಆದರೆ ಅದು ಅಹಂಗೆಲ್ಲಿ ತಿರುಗುವುದೋ ಎಂಬ ಭಯ ನನಗೆ."

"ಅಹಂಗೆ ತಿರುಗಿದರೆ ಅದು ಅವನತಿಗೆ ದಾರಿಯಾಗುತ್ತದೆ. "

"ಆದರೆ ಸಂದರ್ಭ ಹಾಗಿದೆ. ಏನು ಮಾಡುವುದು ? ಮಹಾ ಮಾಹಾ ಪ್ರಚಂಡ ರೂವಾರಿಗಳ ನಕ್ಷೆ ಪಟ್ಟ ಮಹಾದೇವಿಯವರಿಗೆ ಒಪ್ಪಿತವಾಗಲಿಲ್ಲ. ನನ್ನದು ಒಪ್ಪಿತವಾಗಿ ಬಿಟ್ಟಿತು. ಅವರಿಗಿಂತ ನಾನು ಶ್ರೇಷ್ಠನಾದುದರಿಂದಲೇ ನನ್ನ ನಕ್ಷೆಗೆ ಮನ್ನಣೆ ಸಿಕ್ಕಿತು ಎಂದು ಮೊನ್ನೆ ಕಲ್ಕಣಿನಾಡಿನ ಮಾಚೋಜನ ಹತ್ತಿರ ಹೇಳುತ್ತಿದ್ದರಂತೆ."

"ಹೇಳಿಕೊಳ್ಳಲಿ, ಚಿಕ್ಕವಯಸ್ಸು. ಇಂತಹ ಬೃಹತ್ ಕೆಲಸಕ್ಕೆ ತಾನು ಸ್ಥಪತಿ ಆಗಬಹುದೆಂದು ಸಹ ಕಲ್ಪಿಸಿಕೊಂಡಿರಲಾರದ ಸಂದರ್ಭದಲ್ಲಿ ಅದು ದೊರೆತರೆ ಆಗುವುದು ಹೀಗೆಯೆ ! ನನಗೂ ಸಹ ಒಂದೆರಡು ಸಲ ಆ ಅಹಂ ಬಂದಿದೆ ಉದಯ."

"ಹಾಗೆಂದು ಹೇಳಿ ನನ್ನನ್ನು ರೇಗಿಸಬೇಕೆಂದು ಇಚ್ಛೆಯೆ ?"

"ನಿನ್ನನ್ನು ರೇಗಿಸಿದರೆ ನನಗೇನು ಲಾಭ ? ಉಳಿಯ ಪೆಟ್ಟು ತಾಕಿದಲ್ಲದೆ ವಿಗ್ರಹವಾಗುವುದಿಲ್ಲ ಉದಯ. ಎಲ್ಲ ಮಾನವರೂ ಎಲ್ಲ ಅವಸ್ಥಾ ವಿಶೇಷಗಳನ್ನೂ ಒಂದಲ್ಲ ಒಂದು ಕಾಲದಲ್ಲಿ, ಕ್ಷಣಿಕವಾಗಿಯಾದರೂ ದಾಟಲೇಬೇಕು. ಮಾನವ ಪರಿಪೂರ್ಣನಾಗಬೇಕಾದರೆ ಈ ದಾಟುವಿಕೆ ಆಗಲೇಬೇಕು. ಅದು ಅನಿವಾರ್ಯ.

"ನೀವೇಕೆ ಅಹಂಕಾರ ತಳೆಯಬೇಕು. ಇನ್ನೂ ನಿಮ್ಮ ಯೋಗ್ಯತೆಗೆ ಸಾಟಿಯಾದ ಸ್ಥಾನ ನಿಮಗೆ ಸಿಕ್ಕಿಲ್ಲವೆಂದೇ ನನ್ನ ಭಾವನೆ.''

"ನೀನೊಬ್ಬ ಮುಗ್ಧ. ನೀನು ಹೀಗೆ ಮೈದುನ, ಹಾಗೆ ತಮ್ಮ. ನಿನ್ನ ಮೆಚ್ಚಿಕೆಗೆ ಮಿತಿಯೇ ಇಲ್ಲ. ಸ್ವಲ್ಪ ಯೋಚಿಸು ಉದಯ. ನಾನು ಒಬ್ಬ ಸಾಮಾನ್ಯ ಹೆಗ್ಗಡೆಯ ಮಗಳು. ಕನಸು ಮನಸ್ಸಿನಲ್ಲಿಯೂ ಒಂದು ರಾಜ್ಯದ ಪಟ್ಟಮಹಾದೇವಿ ಆಗುತ್ತೇನೆಂದು ಭಾವಿಸಿರಲಿಲ್ಲ. ಆ ಆಸೆ ಕೂಡ ನನ್ನಲ್ಲಿರಲಿಲ್ಲ. ಆದರೆ ಅದು ದೊರೆತಾಗ ನನ್ನ ಅಂತರಂಗದಲ್ಲಿಯೂ ಅಹಂಕಾರ ಅಂಕುರಿಸಿತು. ಅದನ್ನು ಪ್ರದರ್ಶಿಸಲು ಅವಕಾಶ ಸಿಕ್ಕಲಿಲ್ಲ. ಮಹಾಮಾತೃಶ್ರೀ ಅವರ ವ್ಯಕ್ತಿತ್ವ ನನ್ನ ಅಹಂಅನ್ನು ಅಲ್ಲಿಯೇ ಕರಗಿಸಿ ಬಿಟ್ಟಿತು. ಎಂದಾಗ ಅವನಿಗೆ ಅಹಂ ಬಂದಿರುವುದು ಸಹಜವೇ. ಸಾಮಾನ್ಯವಾಗಿ ಕಲೆಗಾರರಲ್ಲಿ ಆ ಸ್ವಪ್ರತಿಷ್ಠೆ ಇರುತ್ತದೆ. ನಾವೇ ಅದನ್ನು ಗಮನಿಸದೆ ಕಲೆಗೆ ಬೆಲೆ ಕೊಡಬೇಕಾಗುತ್ತದೆ.''

"ಅವರನ್ನು ಸ್ಥಪತಿ ಮಾಡಿದ್ದರಿಂದ ಮಹತ್ವದ ಬೆಲೆಕೊಟ್ಟಂತೆ ಆಗಲಿಲ್ಲವೆ ? ಬೆಲೆ ಸಿಕ್ಕಾಗಲೂ ಸ್ವಲ್ಪ ಸಂಯಮದಿಂದ ಇರಬಾರದೆ ?''

"ಏನಾದರೂ ದುಡುಕು ಕೆಲಸವನ್ನು ಮಾಡಿಕೊಂಡಿರುವರೇನು ?''

"ಹಿರಿಯರಾದ ದಾಸೋಜರು, ಪಟ್ಟಮಹಾದೇವಿಯವರ ಗುರುಗಳಾಗಿದ್ದರೆ ತಾನೇ ತನ್ನ ಮುಂದೆ ಯಾವ ಲೆಕ್ಕ ಎನ್ನುತ್ತಾರಂತೆ.''

"ಅವರಿದಿರಿಗೆ ಅಂದರಂತೇನು ?''

"ಇಲ್ಲ. ಹಿಂದೆ ಯಾರ ಬಳಿಯೋ, ತನ್ನ ವಯಸ್ಸಿನವರೊಂದಿಗೆ ಅಂದರಂತೆ. ಅವರೆಲ್ಲ ಅಪ್ಪ ಹಾಕಿದ ಆಲದಮರವೇ ಶ್ರೇಷ್ಠ ಎನ್ನುವ ವರ್ಗಕ್ಕೆ ಸೇರಿದವರಂತೆ. ಪರಂಪರೆಯ ಗೆರೆ ದಾಟುವುದಿಲ್ಲವಂತೆ. ತಾನು ಮಾತ್ರ ನೂತನ ಮಾರ್ಗ ಹಿಡಿದವನಂತೆ. ಯೌವನದ ಕೆಚ್ಚು, ಆಶೋತ್ತರ ಇದ್ದಲ್ಲದೆ ನೂತನ ವಿಚಾರ ಹೊಳೆಯುವುದೇ ಇಲ್ಲವಂತೆ. ತನ್ನ ಈ ನವ್ಯನೂತನ ರೀತಿಗೆ ಈ ನಿರ್ಮಾಣದಿಂದ ಶಾಶ್ವತತ್ವ ಬರುತ್ತದೆಯಂತೆ. ವಿಶ್ವಖ್ಯಾತಿ ಲಭಿಸುತ್ತದೆಯಂತೆ.''

"ಈ ನಾಡಿನ ಕಲೆಗೆ ವಿಶ್ವಖ್ಯಾತಿ ಸಿಗಲಿ ಎಂಬುದೇ ನಮ್ಮ ಆಶೆ.''

"ವಿಶ್ವಖ್ಯಾತಿ ಎಂದರೆ ಏನೆಂದು ನನಗೆ ಮನದಟ್ಟಾಗಿಲ್ಲ. ನಾವು ನೋಡಿರುವ ವಿಶ್ವವೆ ? ಅಥವಾ ನಾವು ಕಲ್ಪಿಸಿರುವ, ಕಣ್ಣಿಂದ ಕಾಣದೆ ಇರುವ ಈರೇಳು ಭುವನಂಗಳೆ ?''

"ಸೂರ್ಯ ಚಂದ್ರರಿರುವವರೆಗೆ ಉಳಿದುಕೊಳ್ಳುವ ಕಲೆ ವಿಶ್ವಖ್ಯಾತಿಯ ಕಲೆ ಎಂಬುದು ನನ್ನ ನಂಬಿಕೆ. ನಾನೂ ಈರೇಳುಭುವನಗಳನ್ನು ಕಂಡವಳಲ್ಲ. ಅಲ್ಲಿಯ ಖ್ಯಾತಿ ದೊರೆವುದು ಹೇಗೆಂದು ಸಹ ನಾನು ಊಹಿಸಲಶಕ್ಯಳು. ನಾನು ಅಶಾಶ್ವತ. ನನ್ನನ್ನು ಗುರುತಿಸುವುದು ಈ ಶರೀರದಿಂದ. ಇದು ಅಶಾಶ್ವತ. ಈ ಗುರುತು ಭದ್ರವಾಗಲು ಇಂತಹವರ ಮಗಳು, ಇಂತಹವರ ಪತ್ನಿ, ಎಂದೆಲ್ಲ ಸೂಚಿಸುತ್ತಾರೆ. ಅವುಗಳೆಲ್ಲಕ್ಕೂ ಬೆಲೆ ಈ ಶರೀರ ಇರುವವರೆಗೆ. ಆದರೆ ಖ್ಯಾತಿ ಎನ್ನುವುದು ಶರೀರಕ್ಕೆ ಬರುವುದಿಲ್ಲ. ಮಾಡುವ ಕೆಲಸಕ್ಕೆ ಬರುತ್ತದೆ. ಜಾಬಾಲಿ ಎಂಬ ಹೆಂಗಸು ಯಾರು ? ಅವಳ ತಂದೆ ಯಾರು ? ತಾಯಿ ಯಾರು ? ಪತಿ ಯಾರು ? ಯಾವುದೂ ಗೊತ್ತಿಲ್ಲ. ಅವಳ ರೂಪ ಹೇಗಿತ್ತು ? ಅದೂ ಗೊತ್ತಿಲ್ಲ. ಆದರೆ ಅವಳ ಹೆಸರು ಶಾಶ್ವತವಾಗಿ ಉಳಿದಿದೆ. ಯಾರು ಗೊತ್ತು ತಾನೇ ?''

"ಗೊತ್ತು. ಸತ್ಯಕಾಮನ ತಾಯಿ."

"ಅವಳ ಹೆಸರು ಶಾಶ್ವತವಾದುದಕ್ಕೆ ಅವಳು ಹೇಳಿದ ಸತ್ಯವೇ ಕಾರಣ. ಬೇರೆ ಯಾವುದೂ ಅಲ್ಲ. ತನ್ನ ಹೆಸರು ಶಾಶ್ವತವಾಗಿರಬೇಕೆಂದು ಅವಳೇನು ಸತ್ಯ ಹೇಳಲಿಲ್ಲ. ಸತ್ಯ ನುಡಿಯುವ ಪ್ರವೃತ್ತಿ ಮಾನವನ ಪರಿಪೂರ್ಣತೆಗೆ ಪರಮ ಸಾಧನ. ಆದರಿಂದ ಈ ಸತ್ಯಕ್ಕೆ ಬೆಲೆ ಬಂತು. ಅದನ್ನು ಆಡಿದವರಿಗೆ ಬೆಲೆ ಬಂತು. ಅವಳು ಸತ್ಯ ಹೇಳಿದಾಗ ಅವಳ ಮನಸ್ಸಿನಲ್ಲಿ ಸಂಕೋಚವಾಗಲಿ, ಕಹಿಯಾಗಲಿ, ಜಿಗುಪ್ಸೆಯಾಗಲಿ ಇರಲಿಲ್ಲ. ಕಾರ್ಯಕಾರಣ ಸಂಯೋಗದಿಂದ ನಡೆವ ಕೆಲವು ಕ್ರಿಯೆಗಳಿಗೆ ಮಹತ್ವಕೊಟ್ಟಾಗ ಮನಸ್ಸು ಭ್ರಮಿತವಾಗುತ್ತದೆ. ಭ್ರಮಿತವಾದಾಗ ಮಾಡಿದ ಕ್ರಿಯೆಗೆ, ಪ್ರತಿಕ್ರಿಯೆ ಶತಸ್ಸಿದ್ಧ. ಕ್ರಿಯೆಯಲ್ಲಿ ನಿರ್ಲಿಪ್ತತೆ ಇದ್ದು, ಭ್ರಮಾರಹಿತವಾದುದಾಗಿದ್ದರೆ ಅವರು ಜಾಬಾಲಿಯಂತೆ ವರ್ತಿಸುತ್ತಾರೆ. ಕೀರ್ತಿಭಾಜನರಾಗುತ್ತಾರೆ. ಇದನ್ನೇ ಅನೇಕ ಮಾತುಗಳಲ್ಲಿ ಭಗವದ್ಗೀತೆಯಲ್ಲಿ ಹೇಳಿ, ಅನಾಸಕ್ತಿಯೋಗವನ್ನು ಕೃಷ್ಣ ನಿರೂಪಿಸಿದ್ದಾನೆ. ಅಂತಹ ಅರ್ಜುನನೇ ಹಿಂಜರಿದ ಪ್ರಸಂಗದಲ್ಲಿ ಅವನನ್ನು ಮುಂದುವರಿಯಲು ಪ್ರಚೋದಿಸಿದರೂ ಬೋಧಿಸಿದುದು ಅನಾಸಕ್ತಿ ಯೋಗವನ್ನು—ಫಲಾಪೇಕ್ಷೆಯಿಲ್ಲದ ಕರ್ತವ್ಯ ಪಾಲನೆಯನ್ನ. ನಮ್ಮ ಸ್ಥಪತಿ ಇಂದು ದುಡುಕಿದರೂ ನಾಳೆ ಕಣ್ಣು ತೆರೆದು ನೋಡಿ ಸರಿಪಡಿಸಿ ಕೊಂಡಾರು. ಬಾಗಿಲವಾಡ ಎತ್ತರಡಿಮೆಯಾಗಿ ತಲೆತಾಕಿದರೆ ಮುಂದೆ ತಲೆತಗ್ಗಿಸಿ ಅದನ್ನು ದಾಟಲು ಅಂತಃಪ್ರೇರಣೆ ಸಹಾಯ ಮಾಡುವಂತೆಯೇ ಇದೂ ಸಹ. ಅದು ಹಾಗಿರಲಿ—ಕೆಲಸ ?"

"ಭರದಿಂದ ಸಾಗಿದೆ. ಆತನಾದರೂ ಒಂದೇ ಒಂದು ಕ್ಷಣವನ್ನೂ ದಂಡ ಮಾಡುವುದಿಲ್ಲ. ಉಳಿದವರೂ ದಂಡ ಮಾಡಲು ಬಿಡುವುದಿಲ್ಲ."

"ಅದೀಗ ಬಹಳ ಮುಖ್ಯವಾದ ವಿಚಾರ. ಹರೀಶರ ನಕ್ಷೆ ಇಲ್ಲೇ ಇದೆಯೋ ಇಲ್ಲವೇ ಯಾತ್ರಿಕ ರೂವಾರಿಗೆ ಕೊಟ್ಟೆಯೋ."

"ಆತ ಕೇಳಲಿಲ್ಲ. ಒಂದು ವೇಳೆ ಕೇಳಿದ್ದರೂ ನಿಮ್ಮ ಅಪ್ಪಣೆಯಿಲ್ಲದೆ ನಾನೆಲ್ಲಿ ಕೊಡುತ್ತಿದ್ದೆ?"

"ಅವನ್ನು ಸ್ವಲ್ಪ ತರಿಸುವೆಯಾ ? ಮತ್ತೊಮ್ಮೆ ಅವನ್ನು ಚೆನ್ನಾಗಿ ನೋಡಬೇಕು. ನಾಳೆ ಯಾತ್ರಿಕ ರೂವಾರಿಯ ಚಿತ್ರ ಬಂದರೆ ಎರಡರಲ್ಲಿ ಏನು ವ್ಯತ್ಯಾಸ ಎಂಬ ಬಗೆಗೆ ಅದು ಸಹಾಯಕವಾಗುತ್ತದೆ."

ಅಂತೆಯೇ ಅದನ್ನು ಉದಯಾದಿತ್ಯ ತರಿಸಿದ.

ಇಬ್ಬರೂ ಒಟ್ಟಿಗೇ ಕುಳಿತು ಹರೀಶನ ರೇಖಾಚಿತ್ರಗಳನ್ನು, ನಕ್ಷೆಗಳನ್ನು ನೋಡಿದರು. ಆವರೆಗೆ ರೂಢಿಯಲ್ಲಿದ್ದ ದೇವಸ್ಥಾನ ಚತುರಸ್ರ ಆಕಾರವೂ ಆದಾಗಿರಲಿಲ್ಲ. ಗಜಪೃಷ್ಠ ಬೆನ್ನುಳ್ಳುದ್ದೂ ಆಗಿರಲಿಲ್ಲ ತೆಂಕ, ಬಡಗ, ಪಡವ, ಕಡೆಗೆ ಮೂರು ಷಟ್‌ಕೋನ ಅಂತರ್ ಗೃಹಗಳನ್ನು ಜೋಡಿಸುವ ವಿಷಮ ಬಾಹು, ಚತುರಸ್ರ ಆಕಾರದ ವಿಶಾಲ ಮುಖ ಮಂಟಪ, ಕಲ್ಯಾಣ ಮಂಟಪಗಳನ್ನು ಒಳಗೊಂಡಿತ್ತು. ಮಂದಿರದ ದ್ವಾರಕ್ಕೆ ಏರಿ ಹೋಗಲು ತೆಂಕ, ಬಡಗ ಹಬ್ಬಿದ ಸೋಪಾನಮಾರ್ಗ, ಮಂದಿರದ ಪಾಯವನ್ನೇ ಆಳೆತ್ತರ ಮೇಲೆತ್ತಿ ನಿಲ್ಲಿಸಿ ಅದರ ಮೇಲಿನ ಮಂದಿರಕ್ಕೆ ಒಂದು ಭವ್ಯ ನಿಲುವನ್ನು ಕೊಟ್ಟಿತ್ತು. ಮೂರು ವಿಮಾನಗಳು ಮತ್ತು ಒಳಮೈನ ಎರಡು ಭುವನೇಶ್ವರಿಗಳು ಕಲಾತ್ಮಕವಾಗಿರುವಂತೆ ಷಟ್ಕೋಣ ಚತುರಸ್ರಗಳಲ್ಲಿಯೇ ಚಿತ್ರಿಸಲಾಗಿತ್ತು. ಒಳಗಿನ ಕಂಭಗಳಲ್ಲಿ ನಾಲ್ಕು ನಾಲ್ಕು ಕಂಬಗಳ ಗುಂಪನ್ನು ಮಾಡಿ, ಒಂದೊಂದು ಗುಂಪಿನ ಕಂಬಗಳಿಗೂ ಬೇರೆ ಬೇರೇ ರೂಪರೇಷೆಯನ್ನು ಅಳವಡಿಸಲಾಗಿತ್ತು. ದೇವಸ್ಥಾನದ ಹೊರಮೈ ಸಹ ಆಕರ್ಷಕವಾಗಿರಲೆಂದು ಮಾರು ಮಾರಿಗೊಂದು ಸ್ತಂಭವನ್ನು ಸೂಚಿಸಿ

ಅದರ ನಡುವೆ ಭಿತ್ತಿಯಲ್ಲಿ ಹೊರಚಾಚಿದ ಗೂಡುಗಳನ್ನು ನಿರ್ಮಿಸಿ, ಅದರಲ್ಲಿ ಸುಂದರ ದೇವದೇವತೆಗಳ ವಿಗ್ರಹವನ್ನು ಇಡುವುದೆಂದು ಅವನು ಕಲ್ಪಿಸಿದ್ದ. ವಾಸ್ತವವಾಗಿ ಅದೊಂದು ಹೊಸ ಕಲ್ಪನೆಯೇ ಆಗಿತ್ತು. ಅದರಿಂದಲೇ ಚಾಲುಕ್ಯ, ಕದಂಬ, ಚೋಳ ಪದ್ಧತಿಗಳ ಅನುಕರಣದತ್ತಲೇ ಹೆಚ್ಚು ವಾಲಿದ್ದ ಇತರ ನಕ್ಷೆಗಳನ್ನು ಕೈ ಬಿಟ್ಟು ಇದನ್ನು ಒಪ್ಪಲಾಗಿತ್ತು.

"ಈ ಹೊಸ ಕಲ್ಪನೆ ಮಾಡಿದ ರೂವಾರಿ ತನಗೆ ಕೋಡು ಮೂಡಿದೆಯೆಂದು ಭಾವಿಸಿದರೆ ಆಶ್ಚರ್ಯವಿಲ್ಲ'' ಎಂದಳು ಶಾನ್ತಲದೇವಿ.

"ಆದರೂ ಆತನದು ಅತಿಯೆಂದು ನನ್ನ ಅಭಿಪ್ರಾಯ.''

"ಯೌವನದ ಬಿಸಿರಕ್ತದಲ್ಲಿಯೇ ಅತಿ ಎನ್ನುವುದು ಬೆರೆತಿರುತ್ತದೆ. ಒಣ ಜಂಭವೇ ಹೆಚ್ಚಾಗಿರುವ ಕಾಲದಲ್ಲಿ, ನಿಜವಾಗಿ ಒಂದು ಭವ್ಯ ಕಲ್ಪನೆ ರೂಪಿತವಾದರೆ ಅದಕ್ಕೆ ಬೆಲೆ ಸಿಗಲೇಬೇಕು. ಅಂತಹ ಸಂದರ್ಭದಲ್ಲಿ ಹಮ್ಮಿಗೆ ಕ್ಷಮೆಯೂ ಸಿಗಬೇಕು.''

"ಪಟ್ಟಮಹಾದೇವಿಯವರ ಮೆಚ್ಚಿಕೆ ಸಿಕ್ಕಿದೆ ಎಂದು ಯಾರೂ ಆತನ ವರ್ತನೆಯ ಬಗೆಗೆ ಮಾತನಾಡುವುದಿಲ್ಲ. ಆತನಿಗೆ ಅಂಜುತ್ತಾರೆ.''

"ಎಂದರೆ ಅವರಲ್ಲಿ ಪಟ್ಟಮಹಾದೇವಿಯ ನಡವಳಿಕೆಯ ಬಗೆಗೇ ತಪ್ಪು ಕಲ್ಪನೆ ಇದೆ ಎಂದು ಭಾವಿಸಬೇಕಾಯಿತು.''

"ಛೇ, ಛೆ. ಹಾಗೇನಿಲ್ಲ. ಎಲ್ಲರಿಗೂ ಪಟ್ಟಮಹಾದೇವಿಯವರನ್ನು ಕಂಡರೆ ತುಂಬಾ ಗೌರವವಿದೆ.''

"ಇರಬಹುದು. ಆದರೆ ನಾನು ಮೆಚ್ಚಿಕೆ ಸೂಚಿಸಿದಾಕ್ಷಣ, ಅಲ್ಲಿ ಇರಬಹುದಾದ ತಪ್ಪುಗಳಿಗೂ ಕಣ್ಣು ಮುಚ್ಚಿ ಕೊಡುತ್ತೇನೆ ಎಂಬ ಭಾವವೂ ಅವರಲ್ಲಿರುವುದರಿಂದ ಅವರು ಅಂಜುತ್ತಾರೆ. ಅಂಜುವುದೇ ಮೊಟ್ಟ ಮೊದಲು ಹೇಡಿತನದ ಕೆಲಸ. ಒಳ್ಳೆಯದನ್ನು ಮೆಚ್ಚುವವರು, ಸದಾ ಒಳ್ಳೆಯದನ್ನು ಮೆಚ್ಚುತ್ತಾರೆ. ಮೆಚ್ಚಿಕೆ ಆಯಾಯ ಕೆಲಸಕ್ಕೆ ಮಾತ್ರ ಸೀಮಿತವಾದುದು. ಎಲ್ಲರ ಎಲ್ಲ ಕೆಲಸಗಳೂ ಯಾವಾಗಲೂ ಮೆಚ್ಚಿಕೆಗೆ ಅರ್ಹವಾಗುವಂತಿರುವುದಿಲ್ಲ. ಅಲ್ಲದೆ ಮಾನವ, ಸಹಜವಾಗಿ ಅಪರಿಪೂರ್ಣ. ಅದರಿಂದಲೇ ಕ್ಷಮೆಯೂ ಉನ್ನತವಾದ ಸ್ಥಾನವನ್ನು ಮೇಲೇರಿಸಲು ಒಂದು ಸಾಧನವಾಗಿದೆ. ಶಿಕ್ಷೆ ಮಾನವನನ್ನು ತಿದ್ದಿ ಅವನನ್ನು ಮೇಲಕ್ಕೆ ಏರಿಸುವುದಕ್ಕಿಂತ ಹೆಚ್ಚು ಪ್ರಭಾವಶಾಲಿಯಾಗಿ, ಕ್ಷಮೆ ಅವನನ್ನು ತಿದ್ದಿ ಮೇಲಕ್ಕೇರಿಸುತ್ತದೆ ಎಂಬುದು ನನ್ನ ಅನುಭವದ ಮಾತು. ಸಮಯ ಅನುಕೂಲವೆನ್ನಿಸಿದಾಗ ನೀನು ರೂವಾರಿಗಳಿಗೆ ತಿಳಿಯ ಹೇಳಬೇಕು. ಈ ದೇವಮಂದಿರದ ರಚನೆಯ ವಿಷಯದಲ್ಲಿ ಯಾರಿಗೆ ಏನು ತೋರಿದರೂ ಅದನ್ನು ಸ್ಥಪತಿಗೆ ಸೂಚಿಸಬಹುದೆಂದೂ, ಸ್ಥಪತಿಯಿಂದ ಸಮಂಜಸವಾದ ಪರಿಶೀಲನೆ ನಡೆಯದಿದ್ದರೆ, ನನ್ನ ಬಳಿಗೆ ನೇರವಾಗಿ ಬರಬಹುದೆಂದೂ, ನೇರವಾಗಿ ಹೇಗೆ ನೋಡುವುದೆಂದು ಅಂಜಬೇಕಾಗಿಲ್ಲವೆಂದೂ ಹೇಳು. ಅವರಲ್ಲಿರಬಹುದಾದ ಅಂಜಿಕೆ ದೂರವಾಗಲು ಇದು ಮೊದಲ ಮಾರ್ಗ.''

"ತನ್ನನ್ನು ಗಣನೆಗೆ ತೆಗೆದುಕೊಳ್ಳದೆ, ತನ್ನ ಅಭಿಪ್ರಾಯಕ್ಕೆ ಮನ್ನಣೆ ಕೊಡದೆ ನೇರವಾಗಿ ರೂವಾರಿಗಳನ್ನು ಪಟ್ಟಮಹಾದೇವಿಯವರು ಬರಮಾಡಿಕೊಳ್ಳುವುದು ಸ್ಥಪತಿಗೆ ಹಿತವೆನಿಸದಿರುವ ಸಂಭವವೂ ಇದೆಯಲ್ಲವೆ ? ಅದು ಒಡಕಿಗೆ ದಾರಿ ಮಾಡಿಕೊಡಲೂ ಬಹುದಲ್ಲವೆ ?''

"ಮಾನವ ಸ್ವಭಾವ ವಿಚಿತ್ರವಾಗಿರುವವರೆಗೆ ಏನೆಲ್ಲವೂ ಸಾಧ್ಯ. ಹಾಗಾದರೆ ಒಂದು ಕೆಲಸ ಮಾಡೋಣ. ಹೇಗೂ ಹೊಸ ರೂವಾರಿ ತಮ್ಮ ನಕ್ಷೆ, ಚಿತ್ರಗಳನ್ನು ತಂದು ಕೊಡುತ್ತಾರೆ. ಎಲ್ಲರನ್ನೂ ಒಟ್ಟಿಗೆ ಸೇರಿಸಿ ತೆರೆದ ಮನಸ್ಸಿನಿಂದ ನಮ್ಮ ಭಾವನೆ ಹೇಳಲು ಈ ಸಂದರ್ಭವನ್ನು ನೆಪವಾಗಿ ಉಪಯೋಗಿಸಬಹುದು."

"ಒಂದು ರೀತಿಯಲ್ಲಿ ಸರಿಯೆಂದು ತೋರುತ್ತದೆ."

ರೇವಿಮಯ್ಯ ಬಂದು ವಂದಿಸಿ, "ಅತ್ಯವಸರದ ಮಂತ್ರಾಲೋಚನ ಸಭೆಯನ್ನು ಸನ್ನಿಧಾನ ಕರೆದಿದ್ದಾರೆ. ಅರಸರೂ, ಪಟ್ಟಮಹಾದೇವಿಯವರೂ, ಮನ್ತ್ರಣಸಾಲೆಗೆ ಬಿಜಯ ಮಾಡಿಸಬೇಕೆಂಬುದು ಸನ್ನಿಧಾನದ ಇಚ್ಛೆ" ಎಂದು ತಿಳಿಸಿದ.

"ಯಾವಾಗ ?" ಎಂದು ಕೇಳಿದಳು ಶಾನ್ತಲದೇವಿ.

"ಈಗ. ಗಂಗರಾಜರೊಬ್ಬರು ಬರಬೇಕು. ಉಳಿದವರೆಲ್ಲ ಬಂದಾಗಿದೆ."

"ಏನು ವಿಷಯ ?"

"ಅಲ್ಲಿ ತಿಳಿಯುತ್ತದೆ. ದಂಡ ಮಾಡಲು ಸಮಯವಿಲ್ಲ ಎಂದು ಸನ್ನಿಧಾನ ಅಪ್ಪಣೆ ಮಾಡಿದರು" ಎಂದ.

ಸರಿ. ಇನ್ನವನು ಬಾಯಿಬಿಡುವುದಿಲ್ಲವೆಂಬುದು ಶಾನ್ತಲದೇವಿಗೆ ಗೊತ್ತಾಯಿತು. ಒಡನೆಯೇ ಉದಯಾದಿತ್ಯನೊಂದಿಗೆ ಮನ್ತ್ರಣಸಾಲೆಗೆ ಹೊರಟಳು.

ಶಾನ್ತಲದೇವಿ ಮನ್ತ್ರಣಸಾಲೆಯನ್ನು ಸೇರುವ ಹೊತ್ತಿಗೆ ಗಂಗರಾಜ ಬಂದಿದ್ದ.

ಪಟ್ಟಮಹಾದೇವಿ ಬರುತ್ತಿದ್ದ ಹಾಗೆಯೇ ಮಹಾರಾಜನ ಹೊರತು ಎಲ್ಲರೂ ಎದ್ದು ವಂದಿಸಿ ಗೌರವ ಸೂಚಿಸಿದರು. ಪ್ರತಿ ಗೌರವ ಸೂಚಿಸಿ ಶಾನ್ತಲದೇವಿ ತನ್ನಾಸನದಲ್ಲಿ ಕುಳಿತಳು. ಉದಯಾದಿತ್ಯನೂ ತನ್ನ ಸ್ಥಾನದಲ್ಲಿ ಕುಳಿತ.

"ಈ ಅವಸರದ ಸಭೆಯನ್ನು ಕರೆಯಲು ಕಾರಣವನ್ನು ಮಾಚಣ ದಂಡನಾಥರು ಸಭೆಗೆ ತಿಳಿಸುತ್ತಾರೆ" ಎಂದು ಬಿಟ್ಟಿದೇವ ಹೇಳಿದ.

"ತಲಕಾಡಿನಲ್ಲಿ ಸುತ್ತಲ ಗಂಗವಾಡಿಯ ಕನ್ನಡ ಜನಕ್ಕೆ ಚೋಳ ಪ್ರತಿನಿಧಿ ಆದಿಯಮನಿಂದ ವಿಪರೀತ ಕಿರುಕುಳ ಆರಂಭವಾಗಿದೆ. ಮತ್ತು ಶ್ರೀರಂಗದ ಆಚಾರ್ಯರಿಗೆ ಪೊಯ್ಸಳರು ಆಶ್ರಯವಿತ್ತುದು ಚೋಳರಾಜರನ್ನು ಕೆರಳಿಸಿದೆಯಂತೆ. ಪೊಯ್ಸಳರ ಹುಟ್ಟಡಗಿಸಲು ಅದಿಯಮನಿಗೆ ಅವರು ಆದೇಶವಿತ್ತಿದ್ದಾರಂತೆ. ಅವನೊಂದಿಗೆ ಚೋಳಸಾಮಂತ ನರಸಿಂಗವರ್ಮ ಮತ್ತು ದಾಮೋದರರು ಸಹ ಈಗ ಜೊತೆಗೂಡಿ ನಮ್ಮ ರಾಜ್ಯದ ಮೇಲೆ ದಾಳಿಮಾಡಲು ಎಲ್ಲ ಸಿದ್ಧತೆಗಳನ್ನೂ ಮಾಡಿಕೊಂಡಿದ್ದಾರೆ, ಅವರು ಮುಂದುವರಿಯುವ ಮೊದಲು ನಾವೇ ಪ್ರತಿದಾಳಿ ಮಾಡಿದರೆ ಒಳಿತೆಂದೂ ಬೇಹುಬಂದಿದೆ. ಏನು ಮಾಡಬೇಕು ? ಯಾವ ರೀತಿಯ ಕಾರ್ಯಾಚರಣೆ ನಡೆಯಬೇಕು ? ಯಾರು ಯಾರು ಈಗ ಅಲ್ಲಿಗೆ ಹೋಗಬೇಕು? ರಾಜ್ಯದ ಇತರ ಭಾಗಗಳಲ್ಲಿ ಏನೇನು ಎಚ್ಚರಿಕೆಯ ಕ್ರಮವನ್ನು ರೂಪಿಸಬೇಕು? ಎಂಬುದನ್ನೆಲ್ಲ ಈ ಸಭೆಯಲ್ಲಿಯೇ ನಿರ್ಣಯಿಸಿ ನಾಳೆಯಿಂದಲೇ ಅದರಂತೆ ಮುಂದಡಿ ಇಡಬೇಕು. ನಾಳೆ ಮುಹೂರ್ತವೂ ಚೆನ್ನಾಗಿದೆ ಎಂಬುದನ್ನು ನಾನು ಅರಮನೆಯ ಜೋಯಿಸರಿಂದ ತಿಳಿದುಕೊಂಡಿದ್ದೇನೆ" ಎಂದು ಮಾಚಣ ದಂಡನಾಥ ವಿವರಿಸಿದ.

ಪ್ರಧಾನಿ ಗಂಗರಾಜ, "ಈ ಸಲ ಪೊಯ್ಸಳ ಸೈನ್ಯದ ನಾಯಕತ್ವವನ್ನು ನಾನು ವಹಿಸಿಕೊಳ್ಳುತ್ತೇನೆ. ನನ್ನೊಂದಿಗೆ ಪುನೀಸಮಯ್ಯನವರೂ ಮಾಚಣ ದಂಡನಾಯಕನೂ ಬರಲಿ. ಬೊಪ್ಪದೇವನನ್ನು ರಾಜಧಾನಿಯ ರಕ್ಷಣೆಗೆ ಬಿಡೋಣ. ಏಚಿರಾಜನೂ ನನ್ನೊಂದಿಗೆ ಬರಲು ಉತ್ಸುಕನಾಗಿದ್ದಾನೆ.''

"ಮಂಚಿ ದಂಡನಾಥರೂ ನೆರವಿಗೆ ಅವರ ಅಶ್ವದಳದೊಂದಿಗೆ ಬಂದರೆ ಒಳಿತು'' ಎಂದು ಶಾನ್ತಲದೇವಿ ಸೂಚಿಸಿದಳು.

"ಅವರು ಇರುವಲ್ಲಿಯೇ ಇರುವುದು ವಾಸಿ. ಇದೇ ವೇಳೆಗೆ ಚಾಲುಕ್ಯ ಚಕ್ರವರ್ತಿಗಳು ಏನಾದರೂ ದುರಾಲೋಚನೆ ಮಾಡಿದರೆ ನಮಗೆ ಉತ್ತರದತ್ತ ಬಲವಾದ ರಕ್ಷಣೆ ಇಲ್ಲದಂತೆ ಆಗುತ್ತದೆ. ಚೋಳರದೊಂದೇ ಕಾಟವಾಗಿದ್ದರೆ ಹಾಗೆ ಮಾಡಬಹುದಾಗಿತ್ತು. ಸಿಂಗಿಮಯ್ಯನವರು ಹೇಗೂ ಯಾದವಪುರಿಯ ರಕ್ಷಣೆಯಲ್ಲಿರುತ್ತಾರೆ. ಅಂತಹ ಅವಶ್ಯಕತೆ ಬಿದ್ದರೆ ಅವರನ್ನೂ ಅವರೊಂದಿಗಿರುವ ರಾಯಣ ದಂಡನಾಥನನ್ನೂ ನಾವು ತಲಕಾಡಿನತ್ತ ಬೇಗ ಕರೆಸಿಕೊಳ್ಳಬಹುದು. ಡಾಕರಸರು ಇಲ್ಲಿ ವೇಲಾಪುರಿಯಲ್ಲಿಯೇ ಇರಲಿ'' ಎಂದ ಬಿಟ್ಟಿದೇವ.

"ಅಂದರೆ ಸನ್ನಿಧಾನ ಪ್ರಯಾಣ ನಿಶ್ಚಯಿಸಿದಂತೆಯೇನು ?'' ಎಂದು ಶಾನ್ತಲದೇವಿ ಕೇಳಿದಳು.

"ಹೌದು. ನಾವೇ ಈ ಯುದ್ಧದಲ್ಲಿ ಉಪಸ್ಥಿತರಿರಬೇಕು. ಅದಕ್ಕೆ ಕಾರಣವಿದೆ. ಕನ್ನಡಿಗರಿಗೆ ಕಿರುಕುಳ ಕೊಡುವ ವಿಷಯಕ್ಕೆ ನಾವು ಓಲೆ ಕಳುಹಿಸಿ, ಸರಿಯಾಗಿ ವರ್ತಿಸಬೇಕೆಂದೂ ಸಂಭಾವಿತತನಕ್ಕೆ ಎಡೆಯಿಲ್ಲದಿದ್ದರೆ ಸುರಿಗೆಯ ಮೊನೆಯಲ್ಲಿ ಸಂಭಾವಿತತನ ಉಳಿಸಬೇಕಾದೀತೆಂದೂ ತಿಳಿಸಿದ್ದೆವು. ಸಾಮರ್ಥ್ಯವಿದ್ದರೆ ಬಂದು ಗೆದ್ದುಕೊಳ್ಳಲಿ. ನಾವು ಪೊಯ್ಸಳರ ಅಡಿಯಾಳಲ್ಲ ಎಂದು ಅವರತ್ತಣಿಂದ ಮಾತು ಬಂದಿದೆ. ಪೊಯ್ಸಳರ ಮಾನ ಎಲ್ಲಕ್ಕಿಂತ ಹಿರಿದು'' ಎಂದ ಬಿಟ್ಟಿದೇವ.

"ಅದು ತಕ್ಕ ಮಾತೇ ಸರಿ. ನನ್ನದೊಂದು ಮನವಿ ಇದೆ. ಸನ್ನಿಧಾನ ಯುದ್ಧಕ್ಕೆ ಹೋಗುವುದಾದರೆ ನಾನು ಜೊತೆಯಲ್ಲಿರುತ್ತೇನೆ'' ಎಂದಳು ಶಾನ್ತಲದೇವಿ.

"ಅದು ಈಗ ಹೇಗೆ ಸಾಧ್ಯ ? ಈ ದೇವಮಂದಿರದ ಕೆಲಸ ಪಾಂಗಿತವಾಗಿ ಆಗಬೇಕಾದರೆ ಪಟ್ಟಮಹಾದೇವಿಯವರು ಇಲ್ಲಿರಲೇಬೇಕು'' ಎಂದ ಬಿಟ್ಟಿದೇವ.

"ಹಾಗಿದ್ದರೆ ಮಂಚಿ ದಂಡನಾಥರನ್ನೂ ರಾಣಿ ಬಮ್ಮಲದೇವಿಯರನ್ನೂ ಜೊತೆಗೆ ಕರೆದೊಯ್ಯಿರಿ'' ಎಂದಳು ಶಾನ್ತಲದೇವಿ.

"ಮಂಚಿ ಅರಸರು ಅಲ್ಲೇ ಇರುವುದು ಪ್ರಕೃತ ಸ್ಥಿತಿಯಲ್ಲಿ ಅವಶ್ಯಕವೆಂದು ಸನ್ನಿಧಾನ ಹೇಳಿದ ಮಾತು ಒಪ್ಪತಕ್ಕ ಮಾತು'' ಎಂದು ಗಂಗರಾಜ ಹೇಳಿದ.

"ಅದು ನಿಮ್ಮ ತೀರ್ಮಾನಕ್ಕೆ ಸೇರಿದ ವಿಷಯ. ಆದರೆ ಸನ್ನಿಧಾನದ ಜೊತೆಗೆ ನಾನಿರಬೇಕು. ಇಲ್ಲವೆ ರಾಣಿ ಬಮ್ಮಲದೇವಿ ಇರಬೇಕು. ಅದು ಹೇಗೆ ಮಾಡುತ್ತೀರೋ ನೋಡಿ. ನಾನಿಲ್ಲಿಲ್ಲದಿದ್ದರೂ ಉದಯಾದಿತ್ಯರಸರು ಇದ್ದು ಈ ದೇವಮಂದಿರದ ಕೆಲಸವನ್ನು ನೋಡಿಕೊಳ್ಳಬಲ್ಲರು. ಅವರಿಗೆ ಅದರ ವಿಷಯದಲ್ಲಿ ಗೊತ್ತಿಲ್ಲದೆ ಇರುವುದು ಯಾವುದೂ ಇಲ್ಲ.''

"ಅವಕಾಶ ಕೊಟ್ಟರೆ ನಾನೊಂದು ಸೂಚನೆ ಮಾಡುತ್ತೇನೆ. ಅದರಿಂದ ಈ ಸಂದರ್ಭದಲ್ಲಿ ಸಮಂಜಸ ಪರಿಹಾರ ಒದಗಿದಂತಾಗುತ್ತದೆ'' ಎಂದು ಉದಯಾದಿತ್ಯ ಬಿಟ್ಟಿದೇವನತ್ತ ನೋಡಿದ.

"ಹೇಳು'' ಎಂದ ಬಿಟ್ಟಿದೇವ.

"ದೇವಮಂದಿರದ ಕೆಲಸ ನನಗೆ ಗೊತ್ತಿದ್ದರೂ ಪಟ್ಟಮಹಾದೇವಿಯವರ ಕಲಾ ಕಲ್ಪನೆ ನನ್ನಲ್ಲಿ ಮೂಡಲು ಸಾಧ್ಯವಿಲ್ಲ. ಅವರು ಇಲ್ಲಿದ್ದರೇ ಈ ಮಂದಿರದ ಕೆಲಸ ಪ್ರಶಸ್ತವಾಗಿ ನಡೆಯುತ್ತದೆ. ಅದರಿಂದ ಅವರು ಇಲ್ಲಿರಬೇಕೆಂದು ಸನ್ನಿಧಾನ ಸೂಚಿಸಿದುದು ಸರಿಯಾಗಿದೆ. ಹಾಗೆಯೇ ಮಂಚಿದಂಡನಾಥರು ಈಗ ಆಸಂದಿನಾಡಿನಲ್ಲಿಯೇ ಇರಬೇಕಾದುದು ಸಹ ಸದ್ಯದ ರಾಜಕೀಯ ಪರಿಸ್ಥಿತಿಯಲ್ಲಿ ಅನಿವಾರ್ಯ. ಆದರೆ ಪಟ್ಟಮಹಾದೇವಿಯವರು ಸೂಚಿಸಿದಂತೆ, ಸನ್ನಿಧಾನದ ಬಳಿ ರಣವ್ಯಾಪಾರ ತಿಳಿದ ಪಟ್ಟಮಹಾದೇವಿಯವರಾಗಲಿ, ರಾಣಿ ಬಮ್ಮಲ ದೇವಿಯವರಾಗಲಿ ಇರುವುದು ತುಂಬಾ ಅವಶ್ಯಕ. ದೇವಮಂದಿರದ ಕೆಲಸದಲ್ಲಿಯಾಗಲಿ, ರಾಷ್ಟ್ರದ ರಕ್ಷಣೆಯ ವಿಷಯದಲ್ಲಿಯಾಗಲಿ, ಸನ್ನಿಧಾನದ ರಕ್ಷಣೆಯ ವಿಷಯದಲ್ಲಿಯಾಗಲಿ, ಅಸಡ್ಡೆ ಮಾಡುವಂತಿಲ್ಲ. ಅದರಿಂದ ಈ ಮೂರೂ ಪರಮೋತ್ಕೃಷ್ಟವಾದ ರೀತಿಯಲ್ಲಿ ಜರುಗಲು ರಾಣಿ ಬಮ್ಮಲದೇವಿಯವರನ್ನು ಕರೆದುಕೊಂಡು ರಣರಂಗಕ್ಕೆ ಬಂದು ಸೇರಲು ನನಗೆ ಸನ್ನಿಧಾನ ಅನುಮತಿ ನೀಡುವುದು ಸರಿಯಾದ ಮಾರ್ಗ'' ಎಂದು ಉದಯಾದಿತ್ಯ ಹೇಳಿದ.

"ನಾನೂ ಯುದ್ಧಕ್ಕೆ ಬರುತ್ತೇನೆ ಎನ್ನುವುದಕ್ಕೆ ಎಷ್ಟೊಂದು ಪೀಠಿಕೆಯಾಯಿತು. ಆದರೂ ಚಿಂತೆಯಿಲ್ಲ. ಉದಯಾದಿತ್ಯರಸರ ಸಲಹೆಗೆ ಸನ್ನಿಧಾನ ಒಪ್ಪಿಗೆ ಕೊಡುವುದು ಎಲ್ಲ ರೀತಿಯಿಂದಲೂ ಒಪ್ಪತಕ್ಕ ಮಾತು'' ಎಂದು ಶಾನ್ತಲದೇವಿ ಹೇಳಿದಳು.

ಹಾಗೆಯೇ ನಿರ್ಣಯವಾಯಿತು. ಸಭೆ ಮುಗಿದು ಮುಂದಿನ ಸಿದ್ಧತೆಗಳತ್ತ ಗಮನ ಕೊಡಲಾಯಿತು.

ಆ ರಾತ್ರಿ ಶಾನ್ತಲದೇವಿ ಬಿಟ್ಟಿದೇವನಿಗೆ ರೂವಾರಿಯ ವಿಷಯವನ್ನು ಹೇಳಿದಳು. "ಆತನ ನಕ್ಷೆಗಳು ಬಂದಾಗ ನಿರ್ಣಯ ತೆಗೆದುಕೊಳ್ಳಲು ಸನ್ನಿಧಾನವೂ ಇದ್ದಿದ್ದರೆ ಚೆನ್ನವಿತ್ತು. ಶ್ರೀಮದಾಚಾರ್ಯರು ಯಾದವಪುರಿಯಲ್ಲಿ ಕಂಡಿದ್ದ ರೂವಾರಿಯೇ ಈತ. ಆತನಿಂದ ಒಳ್ಳೆಯ ಕೆಲಸವನ್ನು ನಿರೀಕ್ಷಿಸಬಹುದೆಂದು ನನ್ನ ಮನಸ್ಸಿಗೆ ಅನ್ನಿಸಿದೆ.''

"ನಾಳೆ ಯಾವಾಗ ಆತ ಬರುವುದು ?''

"ಆತ ಬರುವುದಿಲ್ಲ. ಈಗ ನಡೆದಿರುವ ಮಾತಿನಂತೆ ಉದಯಾದಿತ್ಯರಸರು ಆತನನ್ನು ಯಗಚಿಯ ದಂಡೆಯ ಮೇಲೆ ಮಧುವನದ ಆಚೆ ಇರುವ ಮಂಟಪದಲ್ಲಿ ಕಂಡು ಕರೆದುತರಬೇಕಾಗಿದೆ.''

"ಉದಯ ಬೆಳಿಗ್ಗೆಯೇ ಹೊರಟು ಬಿಡುತ್ತಾನೆ. ರೇವಿಮಯ್ಯನನ್ನು ಕಳಿಸು.''

"ಸನ್ನಿಧಾನದ ಜೊತೆಗೆ.''

"ಮಾಯಣ ಚಟ್ಟಲೆಯರು ಇರುತ್ತಾರಲ್ಲ.''

"ಚಟ್ಟಲೆಗೆ ಕೈ ಮಗುವಿದೆ.''

"ಅದರ ಪೋಷಣೆ ಅರಮನೆ ನೋಡಿಕೊಳ್ಳಬೇಕು.''

"ಅವಳಿರುವುದು ಸರಿಯೆ. ಆದರೂ ಮಗುವಿನ ತಾಯಿ ಅವಳು. ಅವಳನ್ನು ಒಮ್ಮೆ ಕೇಳದೆ ನಾವೇ ನಿರ್ಣಯಿಸುವುದು ಸರಿಯೆ ?''

"ಈಗಾಗಲೇ ಹೇಳಿ ಕಳಿಸಿ ಆಗಿದೆಯಲ್ಲ.''

"ಅಪ್ಪಣೆ ಮಾಡುವುದರ ಬದಲು ಕರೆಸಿ ಕೇಳಿದ್ದರೆ ಚೆನ್ನವಿತ್ತು. ಅವಳ ಬಾಳಿನ ಕಥೆಯೆಲ್ಲ ತಿಳಿದ

ಸನ್ನಿಧಾನ, ಈ ವಿಷಯದಲ್ಲಿ ಆತುರ ಮಾಡಿದಂತಾಯಿತು. ಹೆಣ್ಣಿನ ಬಾಳು ಪರಿಪೂರ್ಣವಾಗುವುದು ತಾನು ಉದರದಲ್ಲಿಟ್ಟು ಪೋಷಿಸಿ, ಪ್ರಪಂಚಕ್ಕೆ ಕೊಟ್ಟ ಸಂತಾನದ ಏಳಿಗೆಯಲ್ಲಿ. ಅದರಲ್ಲಿಯೂ ಈ ಜನ್ಮದಲ್ಲಿ ತನಗೆ ಸಂತಾನ ಲಭ್ಯವಿಲ್ಲವೆಂದು ಭಾವಿಸಿದ್ದ ಅವಳ ಸಂಸಾರ ನೇರವಾಗಿ, ಸಂತಾನ ಭಾಗ್ಯ ಅವಳ ಪಾಲಿಗೆ ಲಭ್ಯವಾಗಿರುವಾಗ, ಅವಳನ್ನು ಈಗ ಮಗುವಿನಿಂದ ಅಗಲಿಸುವುದು ಒಳಿತಲ್ಲವೆಂದು ನನ್ನ ಭಾವನೆ. ಆ ದಂಪತಿಗಳಿಗೆ ಮಿತಿ ಮೀರಿದ ನಿಷ್ಠೆ ಇದೆ. ಸನ್ನಿಧಾನದ ಅಪ್ಪಣೆಯನ್ನು ಅವರು ತುಟಿಪಿಟಕ್ಕೆನ್ನದೆ ಶಿರಸಾ ಮಾನ್ಯ ಮಾಡುತ್ತಾರೆ. ಆದರೆ ಯುದ್ಧ ರಂಗದಲ್ಲಿ ಅವಳು ಕಳೆವ ಪ್ರತಿಕ್ಷಣದಲ್ಲಿಯೂ ಅವಳಿಗೆ ತನ್ನ ಮಗನದೇ ಸ್ಮರಣೆ ಎದ್ದೆದ್ದು ಬರುತ್ತಿರುತ್ತದೆ. ತನ್ನ ಮಗುವನ್ನು ತನಗಿಂತ ಚೆನ್ನಾಗಿ ನೋಡಿಕೊಳ್ಳುವವರು ದುರ್ಲಭವೆಂಬುದು ಪ್ರತಿ ತಾಯಿಯಲ್ಲೂ ಬೇರೂರಿದ ಭಾವನೆ.''

"ನಮಗೆ ಅತ್ತ ಗಮನ ಹೋಗಲಿಲ್ಲ. ಬೆಳಿಗ್ಗೆ ಚಟ್ಟಲೆಯನ್ನು ಬರಮಾಡಿ ಹೇಗೆ ಸೂಕ್ತವೋ ಹಾಗೆ ಮಾಡು. ಅವಳು ಬರದಿದ್ದರೂ ನಮಗೇನು ಆತಂಕವಿಲ್ಲ.''

"ನಾಳೆ ಯುದ್ಧ ಪ್ರಯಾಣವಿರುವುದರಿಂದ ಬ್ರಾಹ್ಮೀ ಮುಹೂರ್ತದಲ್ಲಿಯೇ ಸನ್ನಿಧಾನ ಅಭ್ಯಂಜನ ಮಾಡಿ ದೇವತಾ ಕಾರ್ಯಗಳನ್ನು ಮಾಡಿ ಮುಗಿಸಬೇಕಾಗಿದೆ. ಈಗ ಮಲಗುವುದು ಒಳ್ಳೆಯದು'' ಎಂದು ಶಾನ್ತಲದೇವಿ ಸೂಚಿಸದಳು.

"ಅದೇನೋ ಸರಿ. ಆದರೆ ನಾವು ನಾಳೆ ದಂಡೆತ್ತಿ ಹೊರಟ ಮೇಲೆ ದೇವಿಯ ಸಾನ್ನಿಧ್ಯ ನಮಗೆ ದೊರೆಯುವುದು, ಜಯಮಾಲೆ ಧರಿಸಿ ಹಿಂತಿರುಗಿದ ಮೇಲೆ. ಅದರಿಂದ...''

ನಡುವೆಯೇ ಶಾನ್ತಲದೇವಿ, "ನಾನೊಂದು ವ್ರತ ಕೈಕೊಂಡಿದ್ದೇನೆ. ಸನ್ನಿಧಾನ ಅದನ್ನು ನಡೆಸಿಕೊಡಬೇಕು'' ಎಂದಳು.

"ದೇವಿಯ ಯಾವ ಇಚ್ಛೆಯನ್ನು ನಾವು ಪೂರೈಸಿಲ್ಲ ?''

"ಆದರೆ ಇಂದು ನನ್ನ ಇಚ್ಛೆ ಪೂರೈಸಬೇಕಾದರೆ ಸನ್ನಿಧಾನ ತಮ್ಮ ಇಚ್ಛೆಗೆ ಕಡಿವಾಣ ಹಾಕಬೇಕಾಗುತ್ತದೆ.''

"ಅಂದರೆ ?''

"ಹೌದು. ಈ ದೇವಮಂದಿರ ನಿರ್ಮಾಣವಾಗಿ ಅಲ್ಲಿ ವಿಗ್ರಹ ಸ್ಥಾಪನೆಯಾಗುವವರೆಗೆ ನಾನು ವ್ರತಧಾರಿಣಿ. ಪವಿತ್ರ ಕೆಲಸ ಸನ್ನಿಧಾನ ನನಗೆ ವಹಿಸಿರುವಾಗ, ಅಷ್ಟೇ ಪವಿತ್ರವಾಗಿ ನಾನು ಅದನ್ನು ನಿರ್ವಹಿಸಬೇಕು ಎಂದು ಸಂಕಲ್ಪ ಮಾಡಿದ್ದೇನೆ. ಸನ್ನಿಧಾನ ನನ್ನ ಸಂಕಲ್ಪ ಸಿದ್ಧಿಸಲು ಕರುಣೆದೋರಬೇಕು.''

"ನಮಗೆ ದೇವಿಯ ರೀತಿ ಅರ್ಥವಾಗುತ್ತಿಲ್ಲ. ವಿಷ್ಣು ಭಕ್ತಳಾಗಲು ನಿರಾಕರಿಸಿ. ಈಗ ಮಂದಿರ ನಿರ್ಮಾಣದಲ್ಲಿ ವ್ರತಾಚರಣೆ ಎಂದರೆ, ಎರಡೂ ಪರಸ್ಪರ ವಿರುದ್ಧ ಮಾರ್ಗವಲ್ಲವೆ ?''

"ನನಗೆ ಹಾಗೆನ್ನಿಸುವುದಿಲ್ಲ. ಹೆಗ್ಗಡೆ ದಂಪತಿಗಳ ಕುಮಾರಿಯಾಗಿ ಹುಟ್ಟಿನಿಂದ ನಾನು ತಳೆದ ಧರ್ಮ, ಅದು ವೈಯಕ್ತಿಕವಾದ ಧರ್ಮ. ಅದು ಶಾನ್ತಲೆಯ ಧರ್ಮ. ನಾನು ಪೊಯ್ಸಳೇಶ್ವರರ ಧರ್ಮ ಪತ್ನಿಯಾಗಿ, ಅವರ ಇಚ್ಛೆಗನುಸಾರವಾಗಿ ಕೈಕೊಂಡ ಕೆಲಸ ಪವಿತ್ರ ಕೆಲಸ. ಇಲ್ಲಿ ಸತೀಧರ್ಮ, ಕೆಲಸದ ಪಾವಿತ್ರ್ಯತೆಯನ್ನು ಬಯಸುತ್ತಿದೆ. ಯುದ್ಧರಂಗದಲ್ಲಿ ಕೈಯಲ್ಲಿನ ಶಸ್ತ್ರ ಶತ್ರುಹನನಕ್ಕೆ ಉಪಯೋಗಿಸಲ್ಪಡುತ್ತದೆ.

ಅದರೆ ಅದು ಕೈಯಲ್ಲಿದೆಯೆಂದು ಸದಾಕಾಲದಲ್ಲಿ ಇದಿರಿಗೆ ಸಿಕ್ಕವರನ್ನೆಲ್ಲಾ ಹನನ ಮಾಡುವುದು ಧರ್ಮವೇ ? ಶತ್ರು ಹನನ ಮಾಡಿ ಜಯಗಳಿಸಿ ಕೊಟ್ಟ ಮಾರಕಾಸ್ತ್ರಕ್ಕೆ ನಾವು ಪೂಜೆ ಸಲ್ಲಿಸುತ್ತೇವೆ. ಅದರಿಂದ ಪರಿಸ್ಥಿತಿಯರಿತು ಆಚರಣೆ ಮಾಡುವುದೇ ಉತ್ತಮ ಮಾನವರ ಧರ್ಮ.''

"ನಿನ್ನದೊಂದು ವಿಚಿತ್ರ ಮಾರ್ಗ–ವಿರಸದಲ್ಲಿ ಸಮರಸ ಕೂಡಿಸುವುದು.''

"ವಿರಸವೆಲ್ಲಿದೆ ಸ್ವಾಮಿ ? ವಿರಸವಿರುವುದು ನಮ್ಮ ಕಲ್ಪನೆಯಲ್ಲಿ. ಶೈವರು ಶಿವನೆಂದು ಕರೆಯುತ್ತಾರೆ. ವೇದಾಂತಿಗಳು ಬ್ರಹ್ಮನೆಂದು ಕಲ್ಪಿಸುತ್ತಾರೆ. ಬೌದ್ಧರು ಬುದ್ಧನೆಂದು ಕಲ್ಪಿಸುತ್ತಾರೆ. ಜೈನರಾದ ನಾವು ಅರ್ಹನೆಂದು ಕಲ್ಪಿಸುತ್ತೇವೆ. ಆದರೆ ಈ ಬಗೆಯ ಬೇರೆ ಬೇರೆ ಕಲ್ಪನೆ ನಮ್ಮದೆ ವಿನಾ ಎಲ್ಲವೂ ಒಂದೇ ಆಗಿರುವ ಆ ವಿಭು ಎಷ್ಟಕ್ಕೂ ಕಾರಣವಲ್ಲ. ನಮ್ಮ ಕಲ್ಪನೆಯಿಂದ ನಾವು ತಳೆಯುವ ವಿರಸ ಕಂಡು ಅವನು ಮರುಕ ಪಡುತ್ತಾನೆ. ಅಷ್ಟೆ. ಆಚಾರ್ಯರಿಗೆ ಸನ್ನಿಧಾನ ಆಶ್ರಯ ಕೊಟ್ಟಿತೆಂದು ಚೋಳ ಕುಲೋತ್ತುಂಗರೇಕೆ ರೊಚ್ಚಿಗೇಳಬೇಕು ? ಅವರು ಆರಾಧಿಸುವ ಶಿವ ಬಂದು ಅವರಿಗೆ ಹಾಗೆ ಮಾಡಿರೆಂದು ಹೇಳಿದನೇನು ?''

"ಹೀಗಾಗಬಹುದೆಂದು ನೀನು ಆಗಲೇ ಸೂಚಿಸಿದ್ದೆ.''

"ಮಾನವ ರೀತಿ ಅರಿತ ಯಾರೂ ಅದನ್ನು ಊಹಿಸಬಹುದಾಗಿತ್ತು. ಇನ್ನು ಸನ್ನಿಧಾನ ವಿಶ್ರಾಂತಿ ತೆಗೆದುಕೊಳ್ಳುವುದು ಯುಕ್ತ'' ಎಂದು ಮಾತಿಗೆ ಮುಕ್ತಾಯ ಸೂಚಿಸಿದಳು.

"ಅತೃಪ್ತಿಯಲ್ಲಿ ನಾವು ಯುದ್ಧಕ್ಕೆ ಹೊರಡಬೇಕೆ ?''

"ಹಾಗಲ್ಲ. ಅತಿಶಯ ತೃಪ್ತಿ ಸಿಗುವ ಹೆಬ್ಬಯಕೆಯಿಟ್ಟುಕೊಂಡು ಸನ್ನಿಧಾನ ಪ್ರಯಾಣ ಬೆಳಸಬೇಕು'' ಎಂದು ಅವನ ಕಾಲ ಬಳಿ ಮಡಿಕೆಯಾಗಿ ಓರಣವಾಗಿ ಇದ್ದ ಹೊದ್ದಿಕೆಯನ್ನು ಅವನಿಗೆ ಹೊದ್ದಿಸಿ ಅವನ ಕಪೋಲಗಳ ಮೇಲೆ ತನ್ನ ಅಭಯ ಹಸ್ತದಿಂದ ತಟ್ಟಿ ತನ್ನ ಸೆಜ್ಜವನೆಯತ್ತ ಸಾಗಿ ಹಾಸನ್ನು ಕಣ್ಣಿಗೊತ್ತಿಕೊಂಡು ಎರಡು ಕ್ಷಣ ಕಣ್ಮುಚ್ಚಿ ಕೈ ಮುಗಿದು ನಿಂತು ನಂತರ ಪವಡಿಸಿದಳು.

ಮಾರನೆಯ ದಿವಸ ದಿಗ್ವಿಜಯಕ್ಕೆ ಮಹಾಸನ್ನಿಧಾನವೇ ಪ್ರಯಾಣವೆಸಗಬೇಕಾಗಿದ್ದುದರಿಂದ ಸಂಪ್ರದಾಯದಂತೆ ಬ್ರಾಹ್ಮೀ ಮುಹೂರ್ತದಲ್ಲಿ ರಾಜದಂಪತಿಗಳಿಗೆ ಅಭ್ಯಂಜನಾದಿಗಳು ಮುಗಿದ ನಂತರ ಅರ್ಚನಾದಿಗಳೂ ಪಾಂಗಿತವಾಗಿ ನೇರವೇರಿದವು.

ರೇವಿಮಯ್ಯ ಪಟ್ಟಮಹಾದೇವಿಯ ಆದೇಶದಂತೆ ಯಾತ್ರಿಕ ರೂವಾರಿ ಇರುತ್ತೇನೆಂದು ತಿಳಿಸಿದ್ದ ಮಂಟಪದತ್ತ ಹೊರಟ. ಹೊರಡುವ ಮುನ್ನ ಅವನಿಗೆ, "ಉದಯಾದಿತ್ಯ ಅರಸರು ಅಲ್ಲಿಗೆ ಹೋದಾಗ ಇರಲಿಲ್ಲವಂತೆ. ಅದರಿಂದ ಅವರು ಸಿಕ್ಕದಿರುವ ಸಂಭವವೂ ಉಂಟು. ಸಿಕ್ಕರೆ ಅವರಿಗೆ ಸನ್ನಿಧಾನದ ಸಂದರ್ಶನವುಂಟು. ನೀನು ಹೋದಾಗ ಆತ ಇಲ್ಲದಿದ್ದರೆ ಒಂದು ಗಳಿಗೆ ಕಾದು ಹಿಂತಿರುಗು'' ಎಂದು ಶಾನ್ತಲದೇವಿ ಹೇಳಿದ್ದಳು.

ಅವನು ಯುಗಚಿ ದಂಡೆಯ ಮಂಟಪಕ್ಕೆ ಬರುವ ಹೊತ್ತಿಗೆ ಸರಿಯಾಗಿ ಯಾತ್ರಿಕ ರೂವಾರಿ ನದಿಯಲ್ಲಿ ಮಿಂದು ಪ್ರಾತಃಸಂಧ್ಯಾನುಷ್ಠಾನಗಳನ್ನು ಮುಗಿಸಿಕೊಂಡು ಬರುತ್ತಿದ್ದ ಕುದುರೆಯ ಮೇಲೆ ಬಂದ ರೇವಿಮಯ್ಯನನ್ನ ನೋಡಿ ಮಹಾರಾಜರ ಸೋದರರು ಬರುವುದಕ್ಕೆ ಇದು ಮುನ್ಸೂಚನೆ ಎಂದು ಅವನು ಭಾವಿಸಿದ. ರೇವಿಮಯ್ಯನನ್ನು ಅವನು ಅರಮನೆಯಲ್ಲಿ ನೋಡಿದ್ದ. ಆದರೆ ಅವನ ಹೆಸರಾಗಲಿ,

ಅವನ ಸ್ಥಾನಮಾನವಾಗಲಿ ಏನೂ ಗೊತ್ತಿರಲಿಲ್ಲ. "ಅರಸರು ಯಾವಾಗ ಬರುತ್ತಾರೆ?" ಎಂದು ಕೇಳಿದ.

"ಅರಸು ರಾಜಧಾನಿಯಲ್ಲಿ ಇಲ್ಲ. ಬೇರೆ ರಾಜಕಾರ್ಯ ನಿಮಿತ್ತ ಹೋಗಿದ್ದಾರೆ. ಪಟ್ಟಮಹಾದೇವಿಯವರು ನಿಮ್ಮನ್ನು ಕರೆದುತರುವಂತೆ ನನಗೆ ಆಜ್ಞೆ ಮಾಡಿದ್ದಾರೆ."

"ತಮ್ಮ ಹಿಂದೆಯೇ ಬಂದೆ. ತಾವು ದಯಮಾಡಿಸಿ."

"ಏಕೆ ಕುದುರೆಯ ಮೇಲೆ ಏರಲು ಭಯವೇ?"

"ಸಾವು ಬರಲಿಲ್ಲವಲ್ಲಾ ಎಂದು ಯೋಚಿಸುವ ನನಗೆ ಯಾವ ಭಯವೂ ಇಲ್ಲ. ತಾವು ದಯಮಾಡಿಸಿ. ನಿಮ್ಮ ಹಿಂದೇ ಬಂದೆ."

"ಈಗ ದಂಡಮಾಡಲು ವೇಳೆ ಇಲ್ಲ. ಮಹಾಸನ್ನಿಧಾನ ಸಹ ಇಂದು ಮಧ್ಯಾಹ್ನ ಪ್ರಯಾಣ ಬೆಳಸುವವರಿದ್ದಾರೆ. ಅವರ ಸಂದರ್ಶನ ನಿಮಗೆ ಆಗಬೇಕೆಂಬುದು ಪಟ್ಟಮಹಾದೇವಿಯವರ ಇಚ್ಛೆ. ಅದರಿಂದ ನೀವು ತೆಗೆದುಕೊಳ್ಳಬೇಕಾದುದೆಲ್ಲವನ್ನೂ ತೆಗೆದುಕೊಂಡು ನನ್ನ ಕುದುರೆ ಏರಿ."

ಮಂಟಪದ ಮೂಲೆಯಲ್ಲಿದ್ದ ಒಂದು ಚೀಲವನ್ನು ಭುಜಕ್ಕೆ ತಗಲು ಹಾಕಿಕೊಂಡು ಕೈಯಲ್ಲೊಂದು ದೊಡ್ಡ ಓಲೆಯ ಕಡತ ತೆಗೆದುಕೊಂಡು ಅವನು ಕುದುರೆಯ ಬಳಿಗೆ ಬಂದ. ಅವನನ್ನು ಕುದುರೆಯ ಮೇಲೆ ಕೂಡಿಸಿ, ನಂತರ ತಾನು ಕುಳಿತು, ರೇವಿಮಯ್ಯ ನಾಗಾಲೋಟದಿಂದ ಹೊರಟ. ಅರಮನೆಯ ಬಳಿ ಬರುವ ವೇಳೆಗೆ ಆಗಲೇ ಪೊಯ್ಸಳ ಸೈನ್ಯಸಾಗರ ಸಾಲುಗಟ್ಟಿ ನಿಂತಿತ್ತು. ಅದನ್ನು ನೋಡಿದ ರೂವಾರಿ ತುಸು ಅಪ್ರತಿಭನಾದ. ಮನಸ್ಸು ತಡೆಯಲಾರದೆ, "ಇದೇನು ಸೈನ್ಯ ?" ಎಂದು ಕೇಳಿದ.

"ಸನ್ನಿಧಾನ, ಜೈತ್ರಯಾತ್ರೆಗೆ ಇಂದು ಹೊರಡಲಿದ್ದಾರೆ."

"ಇಂದು ಬಹಳ ಪ್ರಶಸ್ಥವಾದ ನಕ್ಷತ್ರವಿದೆ. ಇಂದು ಪೂರ್ವಾಭಿಮುಖವಾಗಿ ಪ್ರಯಾಣ ಬೆಳಸುವವರಿಗೆ ಅನಂತವಾದ ಫಲ, ಶಾಶ್ವತವಾದ ಕಾರ್ಯ ಸಿದ್ಧಿ ಆಗುವುದಿದೆ. ಧನುರ್ರಾಶಿಯಲ್ಲಿ ಚಂದ್ರನಿರುವುದರಿಂದಲೂ ಗುರುವೀಕ್ಷಣೆ ಇರುವುದರಿಂದಲೂ, ಗುರುಕುಜ ಪರಿವರ್ತನ ವಿರುವುದರಿಂದಲೂ ಮತದ್ವೇಷ ನಿರ್ಮೂಲನವೂ, ಧರ್ಮ ವಿಜಯವೂ ಪೊಯ್ಸಳೇಶ್ವರರಿಗೆ ದೊರಕುವುದರಲ್ಲಿ ಸಂಶಯವಿಲ್ಲ" ಎಂದು ರೂವಾರಿ ಹೇಳಿದ.

"ಅಂದರೆ ನಿಮಗೆ ಜೋತಿಷ್ಯವೂ ಗೊತ್ತೇ ?"

"ಶಿಲ್ಪಶಾಸ್ತ್ರಕ್ಕೆ ಜ್ಯೋತಿಷ್ಯ ಅವಶ್ಯಕ. ಆದ್ದರಿಂದ ಅಷ್ಟರಮಟ್ಟಿಗೆ ಗೊತ್ತು."

ದೂರ ಬಹಳವಿರಲಿಲ್ಲವಾದ್ದರಿಂದ ಅವರು ಬೇಗ ಅರಮನೆಯ ಬಳಿಗೆ ಮುಟ್ಟಿದರು. ಪ್ರಾಕಾರದ ಮಹಾದ್ವಾರದಲ್ಲಿದ್ದ ಪಡೆಯಿಲರು ರೇವಿಮಯ್ಯನ ಕುದುರೆಯ ಮೇಲಿದ್ದ ಹೊಸಬನನ್ನು ಕಂಡು ಆಶ್ಚರ್ಯಚಕಿತರಾದರು, ಯುದ್ಧಕ್ಕೆ ಹೊರಡುವಾಗ, ಇದಾವ ಗಡ್ಡದ ದಾಸಯ್ಯನನ್ನು ಹಿಡಿದು ತಂದಿದ್ದಾನೆ ರೇವಿಮಯ್ಯ ಎಂದು. ಆದರೂ ಮಾತನಾಡುವಂತಿಲ್ಲ. ಕುದುರೆ ಇಳಿದ ರೇವಿಮಯ್ಯ ರೂವಾರಿಯನ್ನು ಇಳಿಸಿ ಅರಮನೆಯೊಳಕ್ಕೆ ಕರೆದೊಯ್ದು ಅವನನ್ನು ಮೊಗಸಾಲೆಯಲ್ಲಿ ಕೂಡ ಹೇಳಿ, ತಾನು ಒಳಗೆ ಹೋಗಿ ಕ್ಷಣದಲ್ಲಿ ಹಿಂತಿರುಗಿ, "ಬನ್ನಿ" ಎಂದು ಮತ್ತೆ ಬಂದ ದಾರಿಯತ್ತ ತಿರುಗಿದ. ರೂವಾರಿ ಅವನನ್ನು ಹಿಂಬಾಲಿಸಿದ.

ಮನ್ತ್ರಣಸಾಲೆಯಲ್ಲಿ ಸನ್ನಿಧಾನ ಮತ್ತು ಪಟ್ಟಮಹಾದೇವಿಯವರು ಆಸನಗಳ ಮೇಲೆ ಮಂಡಿಸಿದ್ದರು.

ಒಳಗೆ ಪ್ರವೇಶಿಸಿದ ರೇವಿಮಯ್ಯ ಬಾಗಿವಂದಿಸಿ, "ರೂವಾರಿಗಳು ಬಂದಿದ್ದಾರೆ" ಎಂದು ಭಿತ್ತಿಯ ಬದಿಗೆ ಸರಿದು ನಿಂತ.

ರೂವಾರಿ ಅಪ್ರತಿಭನಾಗಿ ನಿಂತುಬಿಟ್ಟ ನಾನು ಮೊನ್ನೆ ನೋಡಿದುದು ಇದೇ ಪಟ್ಟಮಹಾದೇವಿಯನ್ನೇ ಹೌದೆ ಎಂದು ಅನುಮಾನ ಬಂತು. ಅಂದು ನಿರಾಭರಣ ಸುಂದರಿಯಾಗಿದ್ದ ಪಟ್ಟಮಹಾದೇವಿ, ಇಂದು ಸರ್ವಾಲಂಕಾರ ಭೂಷಿತೆಯಾದ ಸಾಕ್ಷಾತ್ ಲಕ್ಷ್ಮಿದೇವಿಯಂತೆ ಕಂಗೊಳಿಸುತ್ತಿದ್ದಳು. ತೇಜಸ್ಸಿನಿಂದ ತುಂಬಿ ತುಳುಕುವ ಪೊಯ್ಸಳೇಶ್ವರ ಬಿಟ್ಟಿದೇವನನ್ನು ನೋಡಿ ಅವನು ತುಂಬ ವಿನೀತನಂತೆ ಆದ. ಕೆಲವು ಕ್ಷಣಗಳ ನಂತರ ಬಾಗಿ ವಂದಿಸಿದ.

"ಕೂಡಿ" ಎಂದು ಶಾನ್ತಲದೇವಿ ತುಸು ದೂರದಲ್ಲಿದ್ದ ಆಸನವನ್ನು ತೋರಿಸಿದಳು.

"ಪರವಾಗಿಲ್ಲ" ಎಂದು ಅವನು ನಿಂತೇ ಇದ್ದ.

"ಸಂಕೋಚಪಟ್ಟುಕೊಳ್ಳುವ ಕಾರಣವಿಲ್ಲ. ಕೂಡಿ. ಸನ್ನಿಧಾನದ ಇಚ್ಛೆಯನ್ನೇ ನಾನು ಹೇಳುತ್ತಿದ್ದೇನೆ" ಎಂದಳು ಶಾನ್ತಲದೇವಿ ಮತ್ತೆ.

ಅವನು ಸುತ್ತಲೂ ನೋಡಿದ. ತನ್ನನ್ನು ತಾನು ನೋಡಿಕೊಂಡ. ಅವನ ಒಳಗೆಲ್ಲ ಒಂದು ಬಗೆಯ ಕಂಪನವಾಯಿತು. ಅವನು ಅದನ್ನು ತಡೆಹಿಡಿದು ಜಡ ಸದೃಶ್ಯನಂತೆ ನಿಂತೇ ಇದ್ದ.

"ನಿಮ್ಮ ಕಲ್ಪನೆಯನ್ನು ಚಿತ್ರದಲ್ಲಿ, ನಕ್ಷೆಯಲ್ಲಿ ಮೂಡಿಸಿದಿರಾ ?" ಎಂದು ಶಾನ್ತಲದೇವಿ ಕೇಳಿದಳು.

"ಇದೋ" ಎಂದು ವಿನಯದಿಂದ ಮುಂಬರಿದು ಓಲೆಯ ಕಡತವನ್ನು ಅವರ ಬದಿಯ ಆಸನದ ಮೇಲೆ ಇಟ್ಟು, ಹಿಂದೆ ಸರಿದು ನಿಂತ.

ಶಾನ್ತಲದೇವಿ ಕಡತ ಬಿಚ್ಚಿದಳು, ಒಂದೊಂದೇ ಹಾಳೆ ತಿರುವುತ್ತ ಹೋದಳು. ಬಿಟ್ಟಿದೇವನೂ ಅದರಲ್ಲಿ ತನ್ಮಯನಾದ. ಒಂದೊಂದು ಹಾಳೆಯನ್ನು ಸೂಕ್ಷ್ಮವಾಗಿ ಪರಿಶೀಲಿಸದಿದ್ದರೂ ಅವನು ಸಿದ್ಧಗೊಳಿಸಿದ್ದುದನ್ನು ನೋಡಲು ಸಾಕಷ್ಟು ಸಮಯ ಹಿಡಿಯಿತು.

"ದೇವಿ, ಇದು ರೂಪಗೊಂಡರೆ ಲೋಕ ಇದಕ್ಕೆ ಪೊಯ್ಸಳ ಮುದ್ರೆ ಒತ್ತುತ್ತದೆ. ಈ ಬಗೆಯ ಆಯಕಟ್ಟು, ರೂಪರೇಖೆ, ವೈವಿಧ್ಯ, ನಿಲುವು, ಕಲಾವಂತಿಕೆ, ಭವ್ಯತೆ, ವೈಶಾಲ್ಯ, ಈವರೆಗೆ ನಾವು ಕಂಡಿಲ್ಲ. ನಾವು ವಿವರವಾಗಿ ಇದನ್ನೆಲ್ಲ ನೋಡಲು ಅನುವಿಲ್ಲ" ಎಂದು ರೂವಾರಿಯತ್ತ ತಿರುಗಿ, "ಪಟ್ಟಮಹಾದೇವಿಯವರು ನೋಡಿ ನಿರ್ಣಯಿಸುತ್ತಾರೆ. ಶ್ರೀಮದಾಚಾರ್ಯರ ಕೃಪಾದೃಷ್ಟಿ ನಿಮ್ಮ ಮೇಲೆ ಬಿದ್ದಿದೆಯಾಗಿ ನಿಮ್ಮ ಕಲೆಗೆ ಕಾಂತಿ, ಕೀರ್ತಿ ಎರಡೂ ಬರುತ್ತವೆ" ಎಂದು ಶಾನ್ತಲೆಯತ್ತ ತಿರುಗಿ, "ನಮಗಿನ್ನು ವೇಳೆ ಇಲ್ಲ. ಈ ರೂವಾರಿಗೆ ಯೋಗ್ಯವಾದ ವಸತಿ, ವಸ್ತ್ರ ಸೌಕರ್ಯಗಳನ್ನು ಪಟ್ಟಮಹಾದೇವಿಯವರು ಇಂದೇ ವ್ಯವಸ್ಥೆ ಮಾಡುವುದೊಳಿತು. ಅವರು ತಮ್ಮನ್ನು ತಾವು ನೋಡಿಕೊಂಡು ಈ ಆವರಣದಲ್ಲಿ ತುಂಬಾ ಸಂಕೋಚ ಪಟ್ಟುಕೊಂಡರು. ಕಲೆಗಾರರ ಕಲ್ಪನೆಯಷ್ಟೇ ಸುಂದರವಾಗಿದ್ದರೆ ಸಾಲದು. ಅವರ ನಡವಳಿಕೆ, ವೈಯಕ್ತಿಕ ಬಾಹ್ಯಾಲಂಕಾರಗಳು ಸಹ ಅಂತರಂಗವನ್ನು ಪ್ರತಿಬಿಂಬಿಸುವಂತಿರಬೇಕು. ನಾವೂ ಯುದ್ಧದಿಂದ ಜಯಮಾಲೆ ಧರಿಸಿ ಬರುವಾಗ ಇಲ್ಲಿನ ಕೆಲಸ ಹೇಗೆ ರೂಪಿತವಾಗಿರುತ್ತದೆ

ಎಂಬುದನ್ನು ನೋಡುವ ಉತ್ಸಾಹದಲ್ಲಿ ಬರುತ್ತೇವೆ. ಅಷ್ಟರಲ್ಲಿ ಅದಕ್ಕೊಂದು ಪರಿಪೂರ್ಣ ಸ್ವರೂಪವನ್ನು ಕೊಟ್ಟಿದ್ದರೆ ಒಳಿತು'' ಎಂದು ನಿರ್ಣಯ ಹೇಳಿದ ಬಿಟ್ಟಿದೇವ.

''ಹತ್ತಾರು ಜನ ಪ್ರಸಿದ್ಧ ರೂವಾರಿಗಳು ಅವರ ಅನೇಕಾನೇಕ ಶಿಷ್ಯರು ಈಗಾಗಲೇ ಕೆಲಸದಲ್ಲಿ ತೊಡಗಿದ್ದಾರೆ. ನಾನೂ ನಿಯೋಜಿತ ಕೆಲಸ ಮಾಡುತ್ತೇನೆ. ನನಗೆ ಸ್ಥಾನ, ಸುಖ ಯಾವುದರ ಆಸೆಯೂ ಇಲ್ಲ. ಒಳಗಿರುವ ಜೀವ ತಾನಾಗಿಯೇ ಆ ವಿಶ್ವಕರ್ಮ ವಿಭುವಿನ ಪಾದಾರವಿಂದಕ್ಕೆ ಹೋಗಿ ಸೇರುವವರೆಗೆ, ಅವಕಾಶ ಸಿಕ್ಕಲ್ಲಿ ದುಡಿಯುವುದಷ್ಟೇ ನನ್ನ ಕೆಲಸ. ಅಂತರಂಗ ಸುಖಬೇಕಾದರೆ ಬಾಹ್ಯಕ್ಕೂ ಅದು ಬೇಕಾಗುತ್ತದೆ. ಅಂತರಂಗದ ಸುಖವೇ ನನ್ನ ಪಾಲಿಗೆ ಇಲ್ಲವಾದಾಗ, ಬಾಹ್ಯದ ಬಗೆಗೆ ಗಮನ ಕೊಡಲು ಮನಸ್ಸೇ ಓಡುವುದಿಲ್ಲ'' ಎಂದು ರೂವಾರಿ ಬಿನ್ನವಿಸಿದ.

''ನಮ್ಮ ಪಟ್ಟಮಹಾದೇವಿಯವರ ನೇತೃತ್ವದಲ್ಲಿ ನಿಮ್ಮಲ್ಲಿಯೂ ಪರಿವರ್ತನೆ ಆಗುತ್ತದೆ. ನಮಗೀಗ ವೇಳೆ ಇಲ್ಲ. ರೇವಿಮಯ್ಯ ಇವರು ಈಗ ಅರಮನೆಯ ಅತಿಥಿ, ಉಳಿದ ರೂವಾರಿಗಳಂತೆ. ಅವರ ಮನಸ್ಸಿಗೆ ಹಿತವಾದ ಎಡೆಯಲ್ಲಿ ವಸತಿ ಕಲ್ಪಿಸಿ ಕೊಡು. ಮತ್ತು ಅವರು ಬಯಸುವ ಸೌಕರ್ಯವನ್ನು ಕಲ್ಪಿಸಿಕೊಡು.''

ರೇವಿಮಯ್ಯ, ''ಬನ್ನಿ'' ಎಂದು ಬಾಗಿಲಿನತ್ತ ಹೆಜ್ಜೆ ಹಾಕಿದ.

ರೂವಾರಿ ಹಾಗೆಯೇ ನಿಂತಿದ್ದ.

''ಏನಾದರೂ ಹೇಳುವುದಿದೆಯೆ ?'' ಎಂದು ಶಾನ್ತಲದೇವಿ ಕೇಳಿದಳು.

''ಆ ಕಡತ.''

''ಅದು ಇಲ್ಲೇ ಇರಲಿ. ನಾನು ಅದನ್ನು ನಿಧಾನವಾಗಿ, ಸಮಗ್ರವಾಗಿ ನೋಡಬೇಕು. ನಾನು ಮತ್ತೆ ಎರಡು ದಿವಸಗಳಲ್ಲಿ ನಿಮ್ಮನ್ನು ಬರಮಾಡಿಕೊಳ್ಳುತ್ತೇನೆ. ಅವರೆಗೆ ನೀವು ನಿಮ್ಮ ಪಾಡಿಗೆ ನಮ್ಮ ರೇವಿಮಯ್ಯನ ಅತಿಥಿಗಳಾಗಿರಿ. ನಿಮಗೆ ಏಕಾಂತವೇ ಬೇಕಾದರೆ ಅದನ್ನು ಅವನು ವ್ಯವಸ್ಥೆ ಮಾಡುತ್ತಾನೆ.''

''ಎರಡು ದಿವಸ ನಾನು ಸುಮ್ಮನೆ ಕುಳಿತು ಉಣ್ಣಬೇಕೆ ?''

''ಕೆಲಸ ಯಾವ ರೀತಿ ಆಗಬೇಕು ಎಂದು ನಿಶ್ಚಯಿಸುವವರೆಗೆ ಇರಬೇಕಾಗುತ್ತದೆ.''

''ಅಪ್ಪಣೆ ಮಾಡಿದ ಸಮಯಕ್ಕೆ ನಾನು ಬಂದು ಕಾಣಿಸಿಕೊಳ್ಳುತ್ತೇನೆ. ನನಗೆ ಅವರೆಗೆ ಸ್ವಾತಂತ್ರ್ಯ ಕೊಡಿ.''

''ನಿಮ್ಮಿಷ್ಟ. ಇವತ್ತು ದಶಮಿ ಗುರುವಾರ. ನೀವು ತ್ರಯೋದಶಿ ಆದಿತ್ಯವಾರ ಇದೇ ಸಮಯಕ್ಕೆ ಬರಬಲ್ಲಿರಾ ?''

''ಚಿತ್ತ.''

''ಹಾಗಿದ್ದರೆ ನೀವು ಹೊರಡಬಹುದು.''

ರೂವಾರಿ ರೇವಿಮಯ್ಯನನ್ನು ಹಿಂಬಾಲಿಸಿದ.

''ಸನ್ನಿಧಾನಕ್ಕೆ ಏನೆನ್ನಿಸಿತು ?'' ಎಂದು ಶಾನ್ತಲದೇವಿ ಕೇಳಿದಳು.

"ಈ ರೂಪಾರಿಯದೊಂದು ನವ ಸೃಷ್ಟಿ ನಮ್ಮೆಲ್ಲ ಪ್ರೋತ್ಸಾಹ ಆತನಿಗೆ ದೊರೆಯಬೇಕು. ಶಾಸ್ತ್ರ ಚೆನ್ನಾಗಿ ತಿಳಿದ ನಿನಗೆ ನಾವೇನು ಆ ವಿಷಯ ವಿವರಿಸಬೇಕಾಗಿಲ್ಲ."

"ಈಗ ಈ ಕುರಿತು ಸನ್ನಿಧಾನ ಏನು ನಿರ್ಣಯ ಕೊಟ್ಟರೆ, ನಾನು ಹಾಗೆ ಮುಂದುವರಿಯುತ್ತೇನೆ."

"ಆಲೋಚಿಸಲು, ನಿರ್ಣಯಿಸಲು ಈಗ ಬಿಡುವಿಲ್ಲ. ಮನಸ್ಸೆಲ್ಲ ರಣರಂಗದತ್ತ ಸರಿದಿದೆ. ನಮಗಿಂತ ಪ್ರಾಜ್ಞಳಾದ ಪಟ್ಟಮಹಾದೇವಿಗೆ ಈ ವಿಷಯದಲ್ಲಿ ಸರ್ವಾಧಿಕಾರವನ್ನು ನೀಡಿದ್ದೇವೆ. ನಾವೇನಿದ್ದರೂ ಹಿಂತಿರುಗಿದಾಗ ನೋಡಿ ಸಂತಸ ಪಡುವವರು."

"ಹೆಗ್ಗಡೆ ಮಾಯಣ ಮತ್ತು ಹೆಗ್ಗಡಿತಿ ಚಟ್ಟಲದೇವಿ ಬಂದಿದ್ದಾರೆ" ಎಂದು ಊಳಿಗದವಳು ಬಂದು ಅರಿಕೆ ಮಾಡಿದಳು.

"ಒಳಕ್ಕೆ ಕಳುಹಿಸು" ಎಂದು ಬಿಟ್ಟಿದೇವ ಹೇಳಿ ಶಾನ್ತಲದೇವಿಯತ್ತ ತಿರುಗಿ, "ಓಹ್, ನಮಗೆ ಆ ವಿಷಯ ಮರೆತೇ ಹೋಗಿತ್ತು" ಎಂದ.

"ಕರವಾಳದ ಮಸೆತ, ಬಿಲ್ಲ ಸಿಂಜಿನಿಯ ಟೇಂಕಾರವೇ ತಲೆ ತುಂಬಿರುವಾಗ ಉಳಿದ ವಿಷಯ ನೆನಪಿನಲ್ಲಿರುವುದು ಹೇಗೆ ಸಾಧ್ಯ ?" ಎಂದು ಶಾನ್ತಲದೇವಿ ಹೇಳಿದಳು.

ಅವಳ ಮಾತು ಮುಗಿಯುತ್ತಿದ್ದ ಹಾಗೆಯೇ ತಮ್ಮ ಪ್ರೀತಿಯ ಫಲ, 'ಬಲ್ಲು'ವನ್ನು ಎತ್ತಿಕೊಂಡು ಚಟ್ಟಲೆ, ಮಾಯಣರು ಒಳಗೆ ಬಂದು ಬಾಗಿ ವಂದಿಸಿದರು.

ನಂತರ ಚಟ್ಟಲೆ ಪಟ್ಟಮಹಾದೇವಿಯ ಬಳಿಸಾರಿ ಅವಳಾಸನದ ಮುಂದಿನ ರತ್ನಗಂಬಳಿಯ ಮೇಲೆ ಮಗುವನ್ನು ಮಲಗಿಸಿ, "ನಾವಿಬ್ಬರೂ ಸನ್ನಿಧಾನದ ಜೊತೆಗೆ ರಣರಂಗಕ್ಕೆ ಹೋಗಲು ನಿರ್ಣಯಿಸಿದ್ದೇವೆ. ಈ ಸಂದರ್ಭದಲ್ಲಿ ನಮಗೆ ಮೊದಲು ಬಂದ ಆದೇಶ, ನಂತರದ ಸಲಹೆ ಎಲ್ಲವೂ ಮನದಟ್ಟಾಗಿದೆ. ನಾನು ನಿಮಿತ್ತಕ್ಕೆ 'ಬಲ್ಲು'ವನ್ನು ಹೆತ್ತೆ. ಪಟ್ಟಮಹಾದೇವಿಯವರು, ಈ ಅರಮನೆ, ನಮ್ಮ ಬಾಳಿನಲ್ಲಿ ಹಬ್ಬಿದ್ದ ವಿಷವನ್ನು ದೂರ ಮಾಡಿ, ಅಲ್ಲಿ ಪ್ರೇಮವನ್ನು ನೆಲೆಗೊಳಿಸಿದ ಪ್ರೇರಕ ಶಕ್ತಿಗಳು. ತಾಯಿಯಾಗಿ ನಾನು ತೋರುವ ಪ್ರೇಮಕ್ಕಿಂತ ಸಾವಿರ ಮಡಿ ಹೆಚ್ಚು ಪ್ರೇಮ ನಮ್ಮ 'ಬಲ್ಲು'ವಿಗೆ ನಿಮ್ಮ ಪಾದದಡಿಯಲ್ಲಿ ದೊರೆಯುತ್ತದೆ. ಅವನು ಆ ಭಾಗ್ಯ ಪಡೆಯುವುದು ಅವನ ಒಳ್ಳೆಯ ಭವಿಷ್ಯಕ್ಕೆ ನಾಂದಿ" ಎಂದಳು.

ಹೆಚ್ಚಿನ ಯಾವ ಮಾತಿಗೂ ಅವಕಾಶವಿಲ್ಲದೆ ಪಟ್ಟಮಹಾದೇವಿಯ ಆದೇಶದಂತೆ 'ಬಲ್ಲು' ಅಂತಃಪುರವಾಸಿಯಾದ. ಚಟ್ಟಲೆ, ಮಾಯಣರು ದಂಡಿನೊಂದಿಗೆ ಹೊರಡಲು ಸಿದ್ಧತೆ ಮಾಡಿಕೊಳ್ಳಲು ಅಪ್ಪಣೆ ಪಡೆದು ಬೀಳ್ಕೊಂಡರು. ಊಳಿಗದವಳ ಕೈಯ್ಯಲ್ಲಿದ್ದ ಬಲ್ಲುಗೊಮ್ಮೆ ಮುತ್ತಿಟ್ಟು ಚಟ್ಟಲೆ ಅರಮನೆಯಿಂದ ಹೊರಬಿದ್ದಳು.

ಪೂರ್ವ ನಿಶ್ಚಿತ ಮುಹೂರ್ತದಲ್ಲಿ ರಾಜಮರ್ಯಾದೆಯ ಪಂಚಮಹಾಶಬ್ದ–ಕೊಂಬು, ಕಹಳೆ, ಶಂಖ, ಭೇರಿ, ಹಲಗೆ–ಏಕಕಾಲದಲ್ಲಿ ಮೊಳಗಿ ದಿಕ್‌ದಿಗಂತವನ್ನು ವ್ಯಾಪಿಸುತ್ತಿರಲು ಪೊಯ್ಸಳೇಶ್ವರನ ಜೈತ್ರಯಾತ್ರೆ ಆರಂಭವಾಯಿತು. ಆ ಶಬ್ದ ಬರುಬರುತ್ತಾ ಕ್ಷೀಣಿಸಿ, ಕಡೆಗೆ ನಿಶ್ಯಬ್ದತೆ ವೇಲಾಪುರಿಯನ್ನು ಆವರಿಸಿತು. ಜನ ನಿಬಿಡವಾಗಿದ್ದ ರಾಜಧಾನಿಯಲ್ಲಿನ ಮುದುಕರು, ಹುಡುಗರನ್ನು ಬಿಟ್ಟು ಯುವಕರಲ್ಲಿ ಬಹುಭಾಗವೆಲ್ಲ ಜೈತ್ರಯಾತ್ರೆ ನಿಮಿತ್ತ ಮಹಾರಾಜರೊಂದಿಗೆ ಹೊರಬಿದ್ದುದರಿಂದ ರಾಜಧಾನಿಯಲ್ಲಿನ ಚಟುವಟಿಕೆಯೇ ಸ್ತಬ್ಧವಾಗಿಬಿಟ್ಟಿತೆನ್ನಿಸಿತು. ಈ ಜೈತ್ರಯಾತ್ರೆಯ ಸಲುವಾಗಿ ಅಂದು ದೇವಮಂದಿರದ ಕೆಲಸ ಸಹ ನಿಲ್ಲಿಸಲಾಗಿತ್ತು.

ಸಂಜೆ ಗೋಧೂಳಿ ಸಮಯದಲ್ಲಿ ಪಟ್ಟಮಹಾದೇವಿಯು ದಾಸೋಜ, ಗಂಗಾಚಾರಿಯರನ್ನು ಅರಮನೆಗೆ ಬರಮಾಡಿದಳು. ಅವರ ಕೈಗೆ ಓಲೆಯ ಕಡತವನ್ನು ಕೊಟ್ಟು "ಇದರೊಳಗಿನ ಚಿತ್ರಗಳನ್ನು ಸ್ವಲ್ಪ ಸೂಕ್ಷ್ಮವಾಗಿ ಪರಿಶೀಲಿಸಿ ನೋಡಿ, ನಿಮ್ಮ ಸ್ಪಷ್ಟವಾದ ಅಭಿಪ್ರಾಯವನ್ನು ತಿಳಿಸಿ'' ಎಂದಳು.

ಅದನ್ನು ಬಿಚ್ಚಿ ಮೊದಲನೆಯ ಹಾಳೆಯನ್ನು ನೋಡುತ್ತ, "ಇದರ ರಚಯಿತರು ಯಾರು?'' ಎಂದು ದಾಸೋಜ ಕೇಳಿದ.

"ರಚನೆ ಯಾರದೆಂಬುದರ ಮೇಲೆ ಅದರ ಮೌಲ್ಯವೇನು ?''

"ಹಾಗಿಲ್ಲ. ನಾವು ಕಂಡರಿಯದ ಕಲ್ಪನೆ ಇಲ್ಲಿ ಕಾಣುತ್ತಿದೆ. ಅದರಿಂದ ಕುತೂಹಲ ಕೆರಳಿ ಕೇಳಿದೆ.''

"ಎಲ್ಲವನ್ನೂ ನಿಧಾನವಾಗಿ ನೋಡಿ ಸಮಗ್ರ ಅಭಿಪ್ರಾಯ ತಿಳಿಸಿ. ನಾನು ಮತ್ತೆ ಕೆಲವು ಸಮಯದ ನಂತರ ಬರುತ್ತೇನೆ'' ಎಂದು ಉತ್ತರಕ್ಕೂ ಕಾಯದೆ ಶಾನ್ತಲದೇವಿ ಒಳಕ್ಕೆ ಹೊರಟುಹೋದಳು.

ಈ ಸಲವೂ ತನ್ನನ್ನು ರಣರಂಗಕ್ಕೆ ಕರೆದೊಯ್ಯಲಿಲ್ಲವೆಂದು ಮುಖ ಊದಿಸಿಕೊಂಡು ಬಿಟ್ಟಿಯಣ್ಣ ಕುಳಿತಿದ್ದ. ಅವನನ್ನು ಸಮಾಧಾನ ಮಾಡುವುದು ಶಾನ್ತಲ ದೇವಿಯ ಕರ್ತವ್ಯಗಳಲ್ಲಿ ಮುಖ್ಯವಾದುದಾಗಿತ್ತು. ಅವನ ಪತ್ನಿ ಸುವ್ವಲೆಗೆ ಎಷ್ಟೋ ವಿಷಯಗಳನ್ನು ತಿಳಿಸಿ ಅದರಂತೆ ವರ್ತಿಸು, ನಾನು ದೀಪ ಮುಡಿಸಿದ ಮೇಲೆ ಅವನನ್ನು ವಿಚಾರಿಸಿಕೊಳ್ಳುತ್ತೇನೆ ಎಂದು ಶಾನ್ತಲದೇವಿ ತಿಳಿಸಿದ್ದಳು. ಅದರಂತೆ ಅವಳು ಕುವರ ಬಿಟ್ಟಿಯಣ್ಣನ ಸೆಜ್ಜೆವನೆಗೆ ನೇರವಾಗಿ ಹೋದಳು. ಪಟ್ಟಮಹಾದೇವಿ ಬರುವ ಸೂಚನೆ ಕಂಸಾಳದಿಂದ ದಂಪತಿಗಳಿಗೆ ಮುಟ್ಟಿತು.

ದ್ವಾರಕ್ಕಾದರೂ ಬನ್ನಿ ಎನ್ನುವಂತೆ ಅವಳು ಬಿಟ್ಟಿಯಣ್ಣನನ್ನ ಕೈ ಜಗ್ಗುತ್ತಿದ್ದಳು. ಅವನು ಪಲ್ಲಂಗದ ಮೇಲೆ ಜಡ ಸದೃಶ್ಯನಾಗಿ ಕುಳಿತಿದ್ದ.

"ಏನು ಜನಗಳ ನಡೆದಿದೆ ಸತಿ ಪತಿಯರಲ್ಲಿ'' ಎನ್ನುತ್ತಲೇ ಶಾನ್ತಲದೇವಿ ಒಳಗೆ ಪ್ರವೇಶಿಸಿದಳು.

"ಇವರಿಗೆ ಮೂಗಿನ ತುದಿಯಲ್ಲೇ ಕೋಪ ಕುಣಿಯುತ್ತಿರುತ್ತದೆ. ನನಗಂತೂ ಇವರನ್ನು ಇನ್ನೂ ಅರ್ಥಮಾಡಿಕೊಳ್ಳಲು ಸಾಧ್ಯವಾಗಿಲ್ಲ'' ಎಂದಳು ಸುವ್ವಲೆ. ಸುವ್ವಲೆ ಆಗಲೇ ತನ್ನ ಪತಿಯ ಕೈ ಬಿಟ್ಟು ದೂರ ಸರಿದು ನಿಂತಿದ್ದಳು. ಅವನೂ ಪಲ್ಲಂಗ ಇಳಿದು ಸೆಟೆದು ನಿಂತುಕೊಂಡಿದ್ದ.

"ಕೋಪ ಬರಲಿ. ತಪ್ಪಿಲ್ಲ. ಆದರೆ ಅದಕ್ಕೆ ಸರಿಯಾದ ಕಾರಣ ಇರಬೇಕು. ಮತ್ತು ನಮ್ಮ ಮೇಲೆ ಆ ಕೋಪ ಕೆಟ್ಟ ಪರಿಣಾಮ ಮಾಡಬಾರದು. ಸ್ವಾರ್ಥಕ್ಕಾಗಿ ಹುಟ್ಟುವ ಕೋಪ ಅನರ್ಥಕಾರಿ. ಪರರ ಏಳಿಗೆಗಾಗಿ, ಒಳಿತಿಗಾಗಿ ಮಾಡುವ ಕೋಪಕ್ಕೂ ಬೆಲೆ ಇದೆ. ಈಗ ಈ ಮರಿದಂಡನಾಯಕರಿಗೆ ಎಂತಹ ಕೋಪ ಬಂದಿದೆ ?''

"ಪಟ್ಟಮಹಾದೇವಿಯವರಿತ್ತ ಖಡ್ಗಕ್ಕೆ ಈ ಚಂಡನ್ನು ಹಾರಿಸಿಬಿಡಬೇಕೆನ್ನುವಷ್ಟು ಕೋಪ ಬಂದಿದೆ'' ಎಂದ ಬಿಟ್ಟಿಯಣ್ಣ. ಅವನ ಮುಖ ಕೆಂಪಗಾಗಿ ಬಿಟ್ಟಿತು.

"ಅಂದರೆ ಸನ್ನಿಧಾನ ನಿನಗೆ ವಹಿಸಿದ ಕೆಲಸ ನಿನಗೆ ಬೇಡವೆಂದು ತಾನೆ ಅರ್ಥವಾಗುತ್ತದೆ?''

"ಅದೊಂದು ಕೆಲಸವೆ ?''

"ಬೊಪ್ಪದೇವರಿಗೂ ನಿನಗೂ ವಯಸ್ಸಿನ ಅಂತರವೆಷ್ಟು ?''

"ಇರಬಹುದು ಹತ್ತು ಹನ್ನೆರಡು ವರ್ಷಗಳು."

"ಅವರು ನಿನಗಿಂತ ಹಿರಿಯರು ತಾನೇ ?"

"ಇದ್ದುದನ್ನು ಒಪ್ಪಿಕೊಳ್ಳದ ಹೆಡ್ಡ ನಾನೇನಲ್ಲ."

"ನೀನು ಹೆಡ್ಡನಲ್ಲ. ಜಾಣ. ಎಲ್ಲವನ್ನೂ ಅರ್ಥಮಾಡಿಕೊಳ್ಳಬಲ್ಲೆ ಎಂದು ನಿನ್ನನ್ನು ಈ ಅರಮನೆ ಬೆಳೆಸಿತು. ನಿನ್ನ ಸಾಮರ್ಥ್ಯವನ್ನು, ನೀನು ಹೇಳಿದಂತೆ ಅರಮನೆ ಉಪಯೋಗಿಸಿಕೊಳ್ಳಬೇಕೆ? ಇಲ್ಲ ಅರಮನೆಗೆ, ರಾಷ್ಟ್ರಕ್ಕೆ ಉಪಯೋಗವಾಗುವ ರೀತಿ ಉಪಯೋಗಿಸಿಕೊಳ್ಳಬೇಕೆ ? ನೀನೇ ಹೇಳು."

"ರಾಷ್ಟ್ರಕ್ಕಾಗಿ ಪ್ರಾಣಕೊಡುವುದು ಎಲ್ಲಕ್ಕಿಂತ ಶ್ರೇಷ್ಠ."

"ಅದರಿಂದಲೇ ನೀನಿನ್ನೂ ಅನನುಭವಿ ಎನ್ನುವುದು. ರಾಷ್ಟ್ರಕ್ಕಾಗಿ ಪ್ರಾಣ ಕೊಡುವುದು ಎನ್ನುವುದಕ್ಕೆ ನೀನು ತಿಳಿದುಕೊಂಡಿರುವಷ್ಟೇ ಅರ್ಥವಿಲ್ಲ. ಅದಕ್ಕೆ ವ್ಯಾಪಕವಾದ ಅರ್ಥವಿದೆ. ಬೇರೆ ಏನೂ ಸಾಧ್ಯವಾಗದೆ, ಅಸು ನೀಗುವುದು ಬಿಟ್ಟು ಅನ್ಯಮಾರ್ಗ ಇಲ್ಲ ಎನ್ನುವಂತಹ ಉತ್ಕಟ ಪರಿಸ್ಥಿತಿ ಬಂದಾಗ, ಅದಕ್ಕೆ ಸಿಗುವ ಬೆಲೆ ಬೇರೆ. ಅನಾವಶ್ಯಕವಾಗಿ ಪ್ರಾಣವನ್ನು ಒಡ್ಡುವುದು ದೇಶಕ್ಕೆ ಅಹಿತಕರವಾದುದೇ ಆಗಿ ಪರಿಣಮಿಸುತ್ತದೆ."

"ಅದು ಹೇಗೆ ?"

"ಹೇಳುತ್ತೇನೆ. ಕೂತುಕೋ. ಸಾವಧಾನವಾಗಿ ಕೇಳು" ಎಂದು ತಾನು ಕುಳಿತು ಅವನನ್ನೂ ಸುವ್ವಲೆಯನ್ನೂ ಕೂಡುವಂತೆ ಮಾಡಿ ನಂತರ, "ಒಂದು ರಾಜ್ಯದ ಹುಟ್ಟಿಗೆ ಮಹತ್ವವಿದೆ ಎಂಬುದನ್ನು ಇತಿಹಾಸ ಓದಿದ ನೀನು ಬಲ್ಲೆ. ನಮ್ಮ ರಾಜ್ಯ ಹುಟ್ಟಿದುದಷ್ಟೇ ಅಲ್ಲ ಒಂದು ಶತಮಾನ ಕಾಲವನ್ನು ಅದು ದಾಟಿದೆ. ಆ ಕಾಲಮಾನದಲ್ಲಿ ವಿಶೇಷವಾದ ಅಭಿವೃದ್ಧಿಯನ್ನು ಪಡೆದಿದೆ. ಇದು ಹೇಗೆ ಸಾಧ್ಯವಾಯಿತು ಎಂದು ನೀನು ಎಂದಾದರೂ ಯೋಚಿಸಿರುವೆಯಾ?"

"ಒಬ್ಬರಾಗುತ್ತಲೂ ಒಬ್ಬರು ಪ್ರಜಾಹಿತಕೋರುವ ಮಹಾರಾಜರು ಈ ಸಿಂಹಾಸನಕ್ಕೆ ಒದಗಿ ಬಂದುದರಿಂದ."

"ಬರೀ ಅಷ್ಟೇ ಅಲ್ಲ. ಸಿಂಹಾಸನಕ್ಕೆ ಬರಲು ಒಂದು ಸಾಂಪ್ರದಾಯಿಕ ಕ್ರಮವಿದೆ. ಬಹುಮಟ್ಟಿಗೆ ಅದು ಲಭ್ಯವಾಗುವುದು ಹುಟ್ಟಿನ ಕಾರಣವಾಗಿ."

"ಪಟ್ಟಮಹಾದೇವಿಯವರಿಗೆ ಆ ಪದವಿ ದೊರೆತದ್ದು ಹುಟ್ಟಿನ ಕಾರಣವಾಗಿ ಅಲ್ಲವಲ್ಲ."

"ಪಟ್ಟಮಹಾದೇವಿ ಹೆಣ್ಣು. ಹೆಗ್ಗಡೆ ಮಾರಸಿಂಗಯ್ಯ, ಹೆಗ್ಗಡಿತಿ ಮಾಚಿಕಬ್ಬೆಯವರ ಮಗಳಾದರೂ ನನಗೆ ಅದು ಲಭ್ಯವಾಯಿತು. ಆದರೆ ನಾನು ಗಂಡಾಗಿದ್ದಿದ್ದರೆ ನನಗೆ ಸಿಂಹಾಸನ ದಕ್ಕುತ್ತಿತ್ತೆ ? ಗಂಡಾಗಿದ್ದಿದ್ದರೆ ನಿನ್ನ ಹಾಗೆ ನಾನೂ ಮರಿದಂಡನಾಯಕನಾಗಿ ಒಂದೊಂದಾಗಿ ನಿಯೋಜಿಸಿದ ಕೆಲಸವನ್ನು ಎಲ್ಲರ ಮೆಚ್ಚುಗೆಗೆ ಪಾತ್ರವಾಗುವಂತೆ ನಿರ್ವಹಿಸಿ ಮೇಲೆಮೇಲಕ್ಕೆ ಹೋಗಿ ಅತ್ಯುನ್ನತ ಪದವಿ ಎಂದರೆ ಮಹಾದಣ್ಣಾಯಕನೋ, ಮಹಾಪ್ರಧಾನಿಯೋ ಆಗಬಹುದಿತ್ತು. ಸಿಂಹಾಸನದ ಮೇಲೆ ಕೂಡುವ ವ್ಯಕ್ತಿ ಒಂದು ಸತ್ಕುಲದ ಸಂತಾನ. ಅದು ಸಾಂಪ್ರದಾಯಿಕ. ಆದರೆ ರಾಷ್ಟ್ರ ಬೆಳೆಯಬೇಕಾದರೆ, ಅದು ನಿನ್ನಂತಹವರನ್ನು ಸಿದ್ಧಮಾಡುವುದರಿಂದ ಸಾಧ್ಯ. ನಿನ್ನ ತಂದೆಯವರು, ಅವರಿಗೂ ಹಿಂದಿನ ದಣ್ಣಾಯಕರುಗಳು, ಪ್ರಧಾನರು, ಸಚಿವರು, ಭಂಡಾರಿಗಳು, ಹಂತ ಹಂತವಾಗಿ ತಮ್ಮ ನಿಷ್ಠೆ

ಯೋಗ್ಯತೆಯನ್ನು ಪ್ರದರ್ಶಿಸಿ ತಮ್ಮ ಅನುಭವ, ಜಾಣ್ಮೆ, ಸಾಮರ್ಥ್ಯಗಳಿಂದ ಮೇಲೇರಿ ರಾಷ್ಟ್ರವನ್ನು ಕಟ್ಟಲು ನೆರವಾದರು. ಎಲ್ಲ ದಿಕ್ಕಿನಲ್ಲೂ ರಾಷ್ಟ್ರದ ರಕ್ಷಣೆ ಆಗಬೇಕು. ಅಷ್ಟು ಜನ ದಣ್ಣಾಯಕರನ್ನು ನಾವು ಸದಾಕಾಲದಲ್ಲಿ ಸಿದ್ಧ ಮಾಡುತ್ತ ಹೋಗಬೇಡವೆ ? ರಣರಂಗಕ್ಕೆ ಹೋಗಿ ಅದರ ಅನುಭವ ಪಡೆಯಬೇಕೆಂಬ ನಿನ್ನ ಆಸೆ ಆಗಲೇ ಆಳುಪರ ಯುದ್ಧದಲ್ಲಿ ಫಲಿಸಿದೆ. ಪ್ರಧಾನಿ ಗಂಗರಾಜರು, ಪುನೀಸಮಯ್ಯನವರು, ಮಾಚಣ ದಂಡನಾಥರು, ಡಾಕರಸ ದಂಡನಾಥರು ಈಗ ಹಿರಿಯರ ಸಾಲಿಗೆ ಇದ್ದಾರೆ. ಅವರ ನಂತರದ ಸಾಲಿನಲ್ಲಿ ಏಚರಾಜರು, ಬೊಪ್ಪದೇವರು ಇದ್ದಾರೆ. ಅವರ ಹಿಂದಿನ ಸಾಲಿನಲ್ಲಿ ನೀನು, ಮರಿಯಾನೆ, ಭರತರು, ಇದ್ದೀರಿ. ರಾಷ್ಟ್ರದ ಬಾಳು ನಮ್ಮ ಮುಂದಿನ ಪೀಳಿಗೆಯ ಬಾಳಿನ ಮೇಲೆ ಅವಲಂಬಿಸಿದೆ. ನೀನು, ಮರಿಯಾನೆ, ಭರತರು ಬೊಪ್ಪ ದೇವರು ಯುದ್ಧಕ್ಕೆ ಹೋಗಿ ಪ್ರಾಣತೆತ್ತು ಕೆಲವೇ ದಿವಸಗಳಲ್ಲಿ ವಯಸ್ಸಾದ ಹಿರಿಯರು ಸ್ವಭಾವತಃ ಮರಣ ಹೊಂದಿಬಿಟ್ಟರೆ ರಾಷ್ಟ್ರದ ಗತಿ ಏನು ? ನಂಬಿಕಸ್ತರಾದ ಹಿರಿಯ ಅಧಿಕಾರಿಗಳನ್ನು ನಾವು ಪ್ರೊತ್ಸಾಹಿಸಿ ಬೆಳಸುವುದರ ಜೊತೆಗೆ, ಅವರನ್ನು ಅನಾವಶ್ಯಕವಾಗಿ ರಣರಂಗದ ಮುಂದಿನ ಸಾಲಿಗೆ ಕಳಿಸಬಾರದು. ಅದು ಆಡಳಿತದ ಗುಟ್ಟು ನಿನಗಾದರೂ ಹೊಣೆಗಾರಿಕೆ ಇಲ್ಲವೆಂದು ಭಾವಿಸಿದೆಯಾ ? ಇದೇ ಸಮಯ ನೋಡಿ ಬಡಗದಿಂದ ಚಾಲುಕ್ಯರು, ಇಲ್ಲವೆ ಉಚ್ಚಂಗಿ ಪಾಂಡ್ಯರು ದಂಡೆತ್ತಿಬಂದರೆ ಇಲ್ಲಿ ರಾಜಧಾನಿಯನ್ನು ರಕ್ಷಿಸುವವರಾರು ? ರಾಜಧಾನಿ ನಮ್ಮ ಕೈಯಲ್ಲಿ ಭದ್ರವಾಗಿದ್ದರೆ ರಾಜ್ಯ ಸದಾ ಸುಭದ್ರ. ದೂರ ದೂರದ ಯುದ್ಧಗಳಲ್ಲಿ ಎಂತಹ ಗೆಲವು ಬಂದರೂ ರಾಜಧಾನಿಯನ್ನು ಕಳೆದುಕೊಂಡರೆ, ಮಾಂಗಲ್ಯವಿಲ್ಲದ ಸತಿಯಂತೆ, ಕಣ್ಣಿಲ್ಲದ ದೇಹದಂತೆ ಕಂಗಾಲಾಗಿ ಬಿಡುತ್ತದೆ. ರಾಷ್ಟ್ರದ ಕಣ್ಣು ಕಾಪಾಡುವ ಕೆಲಸ ನಿನ್ನದು, ಬೊಪ್ಪದೇವನದು. ಅದನ್ನು ಸಣ್ಣದೆಂದು ಪರಿಗಣಿಸಬೇಡ. ಕಿರಿಯರಾದ ಬೊಪ್ಪದೇವ, ಮರಿಯಾನೆ, ಭರತ ಮತ್ತು ನಿನ್ನಿಂದ ಈ ರಾಷ್ಟ್ರಕ್ಕೆ ಮಹೋನ್ನತವಾದ ಕೆಲಸ ಆಗಬೇಕಾಗಿದೆ. ನೀವು ಈ ರಾಷ್ಟ್ರದ ಭಾವೀ ನಿಧಿ. ನಿಮ್ಮನ್ನು ಈಗ ಚೆನ್ನಾಗಿ ರಕ್ಷಿಸಿಕೊಂಡರೆ ಮುಂದೆ ಅದರಿಂದ ರಾಷ್ಟ್ರಕ್ಕೆ ಕ್ಷೇಮವಿದೆ ಎಂದು ಸಚಿವ ಸಂಪುಟ ನಿರ್ಣಯಿಸಿದೆ. ನೀವುಗಳು ಸಮರ್ಥರು ಎಂದು ಭಾವಿಸಿದ್ದರಿಂದಲೇ ಈ ನಿರ್ಣಯವನ್ನು ಕೈಕೊಳ್ಳಲಾಯಿತು. ಒಪ್ಪರ ಹಾಕಿದ ಕುದುರೆಯಂತೆ ಓಡುವ ಮನಸ್ಸು ಒಳ್ಳೆಯದಲ್ಲ. ಅದು ಸರಿಯೆ ತಪ್ಪೆ, ಯುಕ್ತವೆ ಅಯುಕ್ತವೆ, ಅದರಿಂದ ಒಳಿತಿದೆಯೆ ಕೆಡುಕಿದೆಯೆ ಎಂಬುದಾವುದನ್ನೂ ಪರ್ಯಾಲೋಚಿಸದೆ ಬಿಸಿರಕ್ತದ ಒತ್ತಡದಲ್ಲಿ ಹುಟ್ಟಿದ ನಿನ್ನಾಸೆ ಫಲಿಸಲಿಲ್ಲವೆಂದು ನೀನು ಕೋಪಿಸಿಕೊಂಡರೆ, ಅದು ನಿನ್ನ ಮೇಲೆಯೇ ಕೆಟ್ಟ ಪರಿಣಾಮವನ್ನು ಮಾಡುತ್ತದೆ. ನಿನ್ನ ವ್ಯಕ್ತಿತ್ವ ಘನವಾಗಬೇಕಾದರೆ, ನೀನು ಸಂಯಮ ಸಾಧಿಸಬೇಕು. ನಿನ್ನನ್ನು ಸಾಕಿದವರು, ನಿನ್ನನ್ನು ತುಳಿಯಲು ಎಂದೂ ಪ್ರಯತ್ನಿಸುವುದಿಲ್ಲವೆಂಬ ವಿಶ್ವಾಸ ನೀನು ತಾಳಬೇಕು. ಮಾತಾಪಿತೃಗಳನ್ನು ಏಕಕಾಲಕ್ಕೆ ಕಳೆದುಕೊಂಡವನೆಂಬ ಕಾರಣದಿಂದ ನಾವು ನಿನ್ನನ್ನು ಸ್ವಲ್ಪ ಮುಚ್ಚಟ್ಟೆಯಿಂದ ಸಾಕಿದೆವು. ಕುಮಾರ ಬಲ್ಲಾಳನಾಗಲಿ, ಚಿಕಬಿಟ್ಟಿ ವಿನಯನಾಗಲಿ ನಮ್ಮಿಂದ ನೀನು ಪಡೆದುಕೊಂಡಷ್ಟು ಪ್ರೀತಿ ಪಡೆದುಕೊಳ್ಳಲಿಲ್ಲ. ಬಹುಶಃ ನಾವು ತೋರಿದ ಮುಚ್ಚಟೆ, ಪ್ರೀತಿ, ನಿನ್ನಲ್ಲಿ ಬಯಸಿದ್ದು ಬೇಕೆಂಬ ಹಟಮಾರಿತನ ಹುಟ್ಟಲು ಕಾರಣವಾಗಿರಬಹುದು. ಅದರಿಂದ ಇಂದು ನೀನು ಕೋಪಗೊಂಡಿದ್ದರೆ, ಅದಕ್ಕೂ ನಾವೇ ಕಾರಣ. ನಾವು ತೋರಿದ ಪ್ರೀತಿಯೇ ಕಾರಣ. ನನ್ನ ಮಾತು ಬಹಳ ಉದ್ದವಾಯಿತು. ಎಲ್ಲವನ್ನೂ ಮತ್ತೆ ಆಲೋಚಿಸು. ನಮ್ಮ ಪ್ರೀತಿಗೆ ನಿಜವಾದ ಬೆಲೆಯಿದ್ದರೆ ನೀನು ಎಚ್ಚೆತ್ತು ಅದನ್ನು ಕಂಡುಕೊಳ್ಳುತ್ತೀ ಎಂದು ನಂಬಿದ್ದೇನೆ. ನೀನು ನನ್ನಲ್ಲಿ ನೃತ್ಯಾಭ್ಯಾಸ ಮಾಡಿದ್ದೀಯೆ. ಈಗ ನಿರ್ಮಾಣವಾಗುವ ದೇವ ಮಂದಿರದ ಭಿತ್ತಿಗಳಲ್ಲಿ ನೃತ್ಯ ಭಂಗಿಗಳ ವಿನ್ಯಾಸ ಮಾಡಿ ಒಬ್ಬ ರೂವಾರಿ

ಚಿತ್ರ ರೂಪಿಸಿದ್ದಾನೆ. ಅವನು ರೂಪಿಸಿದ್ದನ್ನೆಲ್ಲ ಈಗ ಪ್ರಸಿದ್ಧ ರೂವಾರಿಗಳಾದ, ದಾಸೋಜರು, ಗಂಗಾಚಾರಿಯವರು ನೋಡುತ್ತಿದ್ದಾರೆ. ನಿನಗೆ ಶಿಲ್ಪದಲ್ಲಿಯೂ ಆಸಕ್ತಿ ಇರುವುದರಿಂದ ಅದನ್ನು ನೋಡುವುದಕ್ಕೆ ಬರುವುದಾದರೆ ನನ್ನೊಂದಿಗೆ ಬಾ. ನನಗೆ ನೆರವಾಗಿ ಉದಯಾದಿತ್ಯರಸರು ಈ ಮಂದಿರ ನಿರ್ಮಾಣ ಸಮಯದಲ್ಲಿ ಇರಬೇಕಾಗಿತ್ತು. ಬೇರೆ ಕೆಲಸದ ಸಲುವಾಗಿ ಅವರು ಆಸಂದಿನಾಡಿಗೆ ಹೋದರು. ನೀನು ಅವರ ಸ್ಥಾನದಲ್ಲಿ ನನ್ನೊಂದಿಗಿದ್ದರೆ ನನಗೆ ಸಂತಸವಾಗುತ್ತದೆ. ಇದರಲ್ಲಿ ಬಲವಂತವಿಲ್ಲ. ಅವರು ಮುಂದಿನ ಮೊಗಸಾಲೆಯಲ್ಲಿ ಇದ್ದಾರೆ. ನಾನೂ ಅಲ್ಲಿರುತ್ತೇನೆ. ನಿನಗೆ ಇಚ್ಛೆಯೆನಿಸಿದರೆ ಬಾ'' ಎಂದು ಅಲ್ಲಿಂದ ಎದ್ದು ಹೊರಟುಹೋದಳು ಶಾನ್ತಲದೇವಿ.

ಅಲ್ಲಿ ಮೌನವಾವರಿಸಿತು.

ಸ್ವಲ್ಪ ಸಮಯ ತಡೆದು, "ಪಟ್ಟಮಹಾದೇವಿಯವರು, ಬಹುಶಃ ಬೇಸರ ಪಟ್ಟಿರಬೇಕು. ಅವರಿಗೆ ಬೇಸರ ಉಂಟು ಮಾಡಿದರೆ ನಮಗೆ ಒಳ್ಳೆಯದಾಗುವುದಿಲ್ಲ. ಅವರದೆಷ್ಟು ದೂರಾಲೋಚನೆ'' ಎಂದಳು ಸುವ್ವಲೆ.

ಬಿಟ್ಟಿಯಣ್ಣ ಏನೂ ಮಾತನಾಡದೆ ಅಲ್ಲಿಂದ ಎದ್ದು ಹೊರಟುಬಿಟ್ಟ. ಸುವ್ವಲೆ ಅವನು ಬಾಗಿಲು ದಾಟುವವರೆಗೂ ಇದ್ದಲ್ಲೇ ಇದ್ದು, ನಂತರ ತನ್ನ ಕೈ ಹಿಡಿದಾತ ಎತ್ತ ಹೋದನೆಂದು ಹೊರಗೆ ಬಂದು ನೋಡಿದಳು. ಮುಂದಿನ ಮೊಗಸಾಲೆಯತ್ತ ಅವನು ಪಾದ ಬೆಳೆಸಿದ್ದ. ಅಲ್ಲೇ ನಿಂತು ಅವಳು ಕೈ ಜೋಡಿಸಿ ಎದೆಗೊತ್ತಿಕೊಂಡಳು.

ಮೊಗಸಾಲೆಗೆ ಬಿಟ್ಟಿಯಣ್ಣ ಬಂದುದನ್ನು ಗಮನಿಸಿದ ಶಾನ್ತಲದೇವಿ, "ಬಾ, ಕುತುಕೋ'' ಎಂದು ತನ್ನ ಬದಿಯಲ್ಲಿದ್ದ ಆಸನವನ್ನು ತೋರಿಸಿದಳು. ಅವನು ಅಂತೆಯೇ ಮಾಡಿದ.

"ಅದ್ಭುತ ! ಇಡೀ ಮಂದಿರದ ಸಮಸ್ತ ಕಲ್ಪನೆಯನ್ನೂ ಚಿತ್ರಿಸಿದ್ದಾನೆ, ಈ ಮಹಾಶಿಲ್ಪಿ. ಭಿತ್ತಿಯ ಹೊರ ಮೈ ಹೇಗಿರಬೇಕು, ಒಳಮೈ ಹೇಗಿರಬೇಕು. ದೇವಮಂದಿರ ಮನಸ್ಸಿಗೆ ಬೆಳಕು ನೀಡುವ ತಾಣ. ಅಲ್ಲಿ ಕತ್ತಲಿರಬಾರದು. ಬೆಳಕಿರಬೇಕು ಎಂದು ಈತ ಸಂಯೋಜಿಸಿರುವ ಭಿತ್ತಿಗಳಲ್ಲಿ ಹೆಚ್ಚು ಕಡಿಮೆ ಸುತ್ತ ಜಾಲಂಧ್ರಗಳನ್ನು ಮಾಡಿರುವುದು ಒಂದು ಸೊಗಸನ್ನು ನೀಡಿದೆ. ಮತ್ತು ಬೆಳಕು ಗಾಳಿಯ ಪ್ರಬಂಧವೂ ಅದರಿಂದ ಯುಕ್ತ ಪ್ರಮಾಣದಲ್ಲಿ ಒದಗಿಬರುತ್ತದೆ. ಈ ಜಗತಿ, ಈ ಬಹುಕೋಣ ನಕ್ಷತ್ರಾಕಾರ, ಭಿತ್ತಿಯ ಹೊರಮೈ ಎಲ್ಲವೂ ಕಲಾಮಯವಾಗಿರುವುದಷ್ಟೇ ಅಲ್ಲದೆ, ನಮ್ಮ ಇಡೀ ಪರಂಪರೆಯ ಕಥೆ ಇದರಲ್ಲಿ ಅಡಗಿದೆ. ಇದನ್ನು ಸಿದ್ಧಮಾಡಲು ಆ ರೂವಾರಿ ಎಷ್ಟು ಮಾಸಗಳನ್ನು ತೆಗೆದುಕೊಂಡನೊ ! ಎಲ್ಲಿಯವನಂತೆ?'' ಎಂದು ದಾಸೋಜ ಕೇಳಿದ.

"ಅವೊಂದೂ ನಮಗೆ ತಿಳಿಯದು. ಇವೆಲ್ಲವನ್ನೂ ಎರಡು ದಿವಸಗಳಲ್ಲಿ ಆತ ರೂಪಿಸಿದ್ದಾನೆಂಬುದಷ್ಟು ಗೊತ್ತು.''

"ಆಶ್ಚರ್ಯ. ಕೈ ಓಟ ಹೇಗಿರಬೇಕು ? ಹಾಕಿದ ಗೆರೆ ಬದಲಾದುದೇ ಇಲ್ಲ. ಇದು ಮಹಾಸಾಧಕರಿಂದ ಮಾತ್ರ ಸಾಧ್ಯ. ಈ ಜಾಲಂಧ್ರಗಳನ್ನು ಅಳವಡಿಸಿರುವುದನ್ನು ನೋಡಿದರೆ ನಮ್ಮ ದಾಸೋಜರು ಬಲಿಪುರದ ತ್ರಿಪುರಾಂತಕೇಶ್ವರ ದೇವಸ್ಥಾನದಲ್ಲಿ ಅಳವಡಿಸಿರುವ ಜಾಲಂಧ್ರವನ್ನು ನೋಡಿ, ಈ ರೂವಾರಿ ಪ್ರಭಾವಿತನಾಗಿದ್ದಾನೆಂದು ನನಗನ್ನಿಸುತ್ತದೆ'' ಎಂದ ಗಂಗಾಚಾರಿ.

"ನಾನು ಯಾರು ಮಾಡಿದ್ದನ್ನೂ ನೋಡದೆ ಕಲ್ಪಿಸಲಿಲ್ಲವೆ ? ಹಾಗೆ ಆತನೂ ಕಲ್ಪಿಸಿರಬಹುದು.

ಆತನ ಕಲ್ಪನಾಶಕ್ತಿ ಅದ್ಭುತವಾದುದು ಎಂದಾಗ ಆ ಕಲ್ಪನೆ ಸ್ವಂತದ್ದೆ ಇರಬಹುದು. ಆತ ಬಲಿಪುರವನ್ನೇ ನೋಡಿಲ್ಲದಿದ್ದರೆ ತ್ರಿಪುರಾಂತಕೇಶ್ವರ ದೇವಸ್ಥಾನದ ಜಾಲಂದ್ರದ ಪ್ರಭಾವ ಈ ರೂವಾರಿಯ ಮೇಲೆ ಆಗಿದೆ ಎಂದು ಹೇಳುವುದು ಹೇಗೆ ? ಅದನ್ನು ನೋಡಿದ ದಿವಸ ನೀವು ಕುಣಿದು ಕುಪ್ಪಳಿಸಿದಿರಿ. ಮೆಚ್ಚಿಕೆ ಸೂಚಿಸಿದಿರಿ. ಬೆನ್ನು ತಟ್ಟಿದಿರಿ. ಪ್ರೋತ್ಸಾಹಿಸಿದಿರಿ. ನಿನ್ನ ಈ ಕೆಲಸದಿಂದ ಬಲಿಪುರದ ರೂವಾರಿಗಳಿಗೆ ಶಾಶ್ವತ ಕೀರ್ತಿ ಬರುತ್ತದೆ ಎಂದಿರಿ. ಅದಕ್ಕೆಲ್ಲ ನಿಮ್ಮ ಮನೋವೈಶಾಲ್ಯ ಕಾರಣ. ಈಗಲೂ ನಿಮಗೆ ಆ ಹಿಂದಿನದೇ ಕಕಲಾತಿ'' ಎಂದು ಪಟ್ಟಮಹಾದೇವಿಯತ್ತ ತಿರುಗಿ, ''ಈಗ ಏನು ಮಾಡಬೇಕೆಂಬುದು ಪಟ್ಟಮಹಾದೇವಿಯವರ ಅಭಿಪ್ರಾಯ'' ಎಂದು ದಾಸೋಜ ಕೇಳಿದ.

''ಆತುರದಲ್ಲಿ ನೋಡಿದರೂ ಸನ್ನಿಧಾನಕ್ಕೆ ಇದು ಮೆಚ್ಚಿಕೆಯಾಗಿದೆ. ಆದರೆ ನಿರ್ಣಯವನ್ನು ನನ್ನ ವಶಕ್ಕೆ ಒಪ್ಪಿಸಿದ್ದಾರೆ. ಈಗಾಗಲೇ ಒಪ್ಪಿಗೆಯಾಗಿರುವ ಮಂದಿರಕ್ಕೆ ಬೇಕಾಗುವಂತೆ ಕೆಲಸ ಸಾಗಿದೆ. ಆದರೆ ಈಗಿನ ಸ್ಥಿತಿಯಲ್ಲಿ ಅದನ್ನು ಬದಲಾಯಿಸುವುದರ ಪರಿಣಾಮ ಏನಾಗುತ್ತದೆ? ಅದರ ಒಳಿತು ಕೆಡಕುಗಳೇನು ? ಎಂಬುದನ್ನೆಲ್ಲ ಯೋಚಿಸಿ ನಿರ್ಣಯಿಸಬೇಕು. ನೀವಿಬ್ಬರೂ ನಮಗೆ ಪರಿಚಿತರು. ಪರಸ್ಪರ ನಂಬಿಕೆ ಇದೆ. ನಿಮ್ಮ ಸಲಹೆ ನಮಗೆ ಮಾನ್ಯ. ಅದರಿಂದ ಮೊದಲು ನಿಮ್ಮೊಂದಿಗೆ ಈ ವಿಷಯ ಮಾತನಾಡಲು ನಾನು ಇಚ್ಛಿಸಿದೆ.''

''ನಂಬಿಕೆಯಿಟ್ಟಿರುವುದಕ್ಕೆ ನಾವು ಕೃತಜ್ಞರು. ನಿಜವಾದ ಕಲೆಗಾರರಾದವರು, ಶಿಲ್ಪಶಾಸ್ತ್ರವಿಶಾರದರಾದವರು ಯಾರಾದರೂ ಇದನ್ನು ಖಂಡಿತ ಮೆಚ್ಚುತ್ತಾರೆ. ಇದರಂತೆ ಮಂದಿರದ ನಿರ್ಮಾಣವಾದರೆ ರಾಜ್ಯದ ಈ ದೇವಾಲಯವು ವಾಸ್ತುಶಿಲ್ಪ ಶಾಶ್ವತ ಮಾದರಿಯಾಗಿ ಉಳಿಯುತ್ತದೆ; ಆಚಂದ್ರಾರ್ಕವಾಗಿ ಕೀರ್ತಿ ಉಳಿಯುತ್ತದೆ. ಸಾವಿರ ಸಂಖ್ಯೆಯಲ್ಲಿ ರೂವಾರಿಗಳು ಬಂದರೂ ಎಲ್ಲರಿಗೂ ಪುರಸ್ಕಾರ ಕೀರ್ತಿ ದೊರೆಯುವಷ್ಟು ಕೆಲಸ ಇದರಲ್ಲಿದೆ. ಪ್ರತಿಯೊಬ್ಬರೂ ತಮ್ಮ ತಮ್ಮ ಪ್ರತಿಭೆಯನ್ನು ತೋರಿಸುವಷ್ಟು ಕುಸುರಿ ಕೆಲಸವಿದೆ. ಆದರೆ ಇದನ್ನು ಒಪ್ಪಿದರೆ ಮತ್ತೆ ಪಾಯವೆಲ್ಲ ಬದಲಾಗಬೇಕಾಗುತ್ತದೆ. ಈ ಸ್ಥಳ ಬೇಡವೆಂದರೆ ಬೇರೆ ಸ್ಥಳಶುದ್ದಿಗೆ ಉತ್ತು, ಬಿತ್ತಿ ಎಲ್ಲ ಆಗಬೇಕು. ಸಮಯ ದಂಡವಾಗುತ್ತದೆ. ನಮಗೆ ಈ ಚಿತ್ರಗಳು ಮಾತ್ರ ಮನಸ್ಸಿಗೆ ಹಿಡಿದಿವೆ'' ಎಂದ ಗಂಗಾಚಾರಿ.

''ನನಗೆ ಈಗ ನಿಮ್ಮ ಆಶ್ವಾಸನೆ ಸಾಕು. ನಾನು ಇನ್ನೆರಡು ದಿನದಲ್ಲಿ ಎಲ್ಲ ರೂವಾರಿಗಳನ್ನು ಒಟ್ಟಿಗೆ ಸೇರಿಸಿ ಅವರ ಮುಂದೆ ಈ ವಿಷಯ ಮಂಡಿಸುತ್ತೇನೆ. ನಂತರ ಅಭಿಪ್ರಾಯ ಸಂಗ್ರಹಿಸಿ ಕಡೇ ತೀರ್ಮಾನವನ್ನು ಮಾಡೋಣ. ಆಗದೆ ?''

''ಚಿತ್ತ, ಅಂದು ಮಾತನಾಡಲು ಮೊದಲು ನಮಗೆ ಆದೇಶ ಬರದಂತೆ ಕರುಣಿಸಬೇಕು. ಇತರರ ಅಭಿಮತ ಪಡೆದು ಅವಶ್ಯಕತೆ ಬಿದ್ದರೆ ನಮ್ಮ ಮಾತು ಕಡೆಯಲ್ಲಿ. ಈ ಬಿನ್ನಪವನ್ನು ಮನ್ನಿಸಬೇಕು'' ಎಂದು ವಿನಂತಿಸಿದ ದಾಸೋಜ.

''ಹಾಗೆಯೇ ಆಗಲಿ. ಆದಿತ್ಯವಾರ ರೂವಾರಿಗಳ ಕೂಡುಹ. ಒಳ್ಳೆಯದು'' ಎಂದು ಶಾನ್ತಲದೇವಿ ಎದ್ದಳು. ರೂವಾರಿಗಳೂ ಬಿಟ್ಟಿಯಣ್ಣನೂ ಎದ್ದರು. ಶಾನ್ತಲದೇವಿ ಅರಮನೆಯೊಳಕ್ಕೆ ಹೋದಳು. ಬಿಟ್ಟಿಯಣ್ಣ ಅವಳನ್ನು ಹಿಂಬಾಲಿಸಿದ. ರೂವಾರಿಗಳಿಬ್ಬರೂ ಅರಮನೆಯಿಂದ ಹೊರಟುಹೋದರು

ಶಾನ್ತಲದೇವಿ ತನ್ನ ಸೆಜ್ಜೆವನೆಯೊಳಕ್ಕೆ ಹೋದಳು. ತಾನೇನು ಮಾಡಬೇಕೆಂದು ತೋರದೆ ಬಿಟ್ಟಿಯಣ್ಣ ಎರಡು ಕ್ಷಣ ಅಲ್ಲೇ ಬಾಗಿಲ ಬಳಿ ನಿಂತ. ಮತ್ತೆ ತನ್ನ ಸೆಜ್ಜೆವನೆಯತ್ತ ಹೆಜ್ಜೆ ಹಾಕುತ್ತಿದ್ದ.

ಊಳಿಗದ ಸಾಂತವ್ವೆ ಅವನ ಬಳಿಸಾರಿ, "ಪಟ್ಟಮಹಾದೇವಿಯವರು ಕರೆಯುತ್ತಿದ್ದಾರೆ" ಎಂದು ವಿನಂತಿಸಿದಳು. ಅವನು ಹಿಂತಿರುಗಿ ಪಟ್ಟಮಹಾದೇವಿಯ ಸೆಜ್ಜೆವನೆಯನ್ನು ಪ್ರವೇಶಿಸಿದ.

"ಬಾ. ಕೂಡು" ಎಂದಳು ಶಾನ್ತಲದೇವಿ.

ಅವನು ಕುಳಿತ.

"ಎಲ್ಲವನ್ನೂ ನೋಡಿದೆಯಾ ?" ಎಂದು ಶಾನ್ತಲದೇವಿ ಕೇಳಿದಳು.

"ಇಲ್ಲ. ಕೆಲವನ್ನು ನೋಡಿದ್ದೇನೆ. ನನಗೆ ರೂವಾರಿಗಳ ಮಾತಿನತ್ತ, ಮೆಚ್ಚಿಕೆಯತ್ತ ಗಮನ ಹೋದುದರಿಂದ ಇದರತ್ತ ಗಮನ ಸ್ಥಿರವಾಗಿ ಉಳಿಯಲಿಲ್ಲ"

"ಇರಲಿ ಚಿಂತೆಯಿಲ್ಲ ಇದನ್ನು ಚಿತ್ರಿಸಿದ ವ್ಯಕ್ತಿಯನ್ನು ನೀನು ನೋಡಿದರೆ ನಂಬುವುದೇ ಇಲ್ಲ. ಆತನ ಕೈ ಎಳೆದದ್ದೆಲ್ಲಾ ಕಲೆ. ಆದರೂ ತನಗೆ ಅವಕಾಶಬೇಕು, ತನಗೆ ಶ್ರೇಷ್ಠ ಸ್ಥಾನಬೇಕು, ಹೊಗಳಬೇಕು, ಎಂದು ಆತ ಬಯಸುವುದಿಲ್ಲ. ತುಂಬಿದ ಕೊಡ ತುಳುಕುವುದಿಲ್ಲ ಎಂಬ ಗಾದೆ ನೆನಪಿದೆ ತಾನೆ. ತುಂಬಿದ ಕೊಡದಂತಹ ವ್ಯಕ್ತಿ ಇದರ ರಚಯಿತ. ಆದಿತ್ಯವಾರ ಹೇಗೂ ನೋಡುತ್ತೀಯೆ. ಗಂಡಾದ ನೀನು ಹೆಣ್ಣಿನ ಸೌಕುಮಾರ್ಯ ತಂದ ಕಲಾವಿದ ಇಂದು ರೇಖೆಗಳಲ್ಲಿ ಜೀವತುಂಬಿದ ಆ ರೂವಾರಿ, ನಾಳೆ ಕಲ್ಲಿನಲ್ಲಿ ಜೀವ ತುಂಬುತ್ತಾರೆ. ಅಂತಹವರಿಂದ ನೋಡಿ ಕಲಿಯುವುದು ಬಹಳವಿದೆ. ವ್ಯಕ್ತಿತ್ವ ಚೆನ್ನಾಗಿ ರೂಪಿತವಾಗಬೇಕು. ಆಗ ಅದನ್ನರಸಿ ಕ್ರಿಯೆಗಳು ಬರುತ್ತವೆ. ನೀನು ಅದನ್ನೆಲ್ಲ ತಿಳಿಯಬೇಕು. ಎಷ್ಟೇ ಜಾಣನಾದರೂ ಅನುಭವಪಾಕ ಆ ಜಾಣತನಕ್ಕೆ ಬೀಳದಿದ್ದರೆ ಜಾಣತನ ಕೈಗೂಡುವುದಿಲ್ಲ. ಅದು ಶಿಥಿಲವಾಗಿ ಹರಕು ಮುರುಕಾಗಿ ತೂರಿ ಹೋಗುತ್ತದೆ. ನಿನ್ನ ಜಾಣತನ ಹಾಗೆ ತೂರಿ ಹೋಗಬಾರದೆಂಬುದು ನಮ್ಮ ಆಶೆ. ಸಹಕರಿಸುತ್ತೀತಾನೆ ?"

"ಹು" ಎಂದ. ಧ್ವನಿ ಒಳಗೆ ಉಡುಗಿತು.

"ಯಾವುದನ್ನೂ ಸಂತಸದಿಂದ ಮಾಡಬೇಕು. ಬಲವಂತ ಮಾಘಸ್ನಾನದಿಂದ ಪುಣ್ಯ ಲಭಿಸುವುದಿಲ್ಲ. ಫಲವೂ ಸಿಗುವುದಿಲ್ಲ."

"ಇನ್ನು ಮೇಲೆ ನೀವಿಟ್ಟ ಗೆರೆ ದಾಟುವುದಿಲ್ಲ. ಅದರಲ್ಲೇ ನನ್ನ ಶ್ರೇಯಸ್ಸಿದೆ ಎಂದು ಭಾವಿಸುತ್ತೇನೆ."

"ಅಂತಹ ಅಂಧಾನುಕರಣೆಯೂ ಒಳಿತಲ್ಲ. ನಿನಗೆ ಸರಿಯೆನಿಸದಿದ್ದಾಗ ತೆರೆದ ಮನಸ್ಸಿನಿಂದ ಇದಿರಿಗೆ ಮಾತನಾಡು. ಅನುಮಾನ ಪರಿಹರಿಸಿಕೊ. ನಿನ್ನ ಭಾವನೆ ಏನೆಂದು ಸ್ಪಷ್ಟವಾಗಿ ತಿಳಿಯ ಹೇಳು. ಇನ್ನೊಬ್ಬರನ್ನೂ ಅರ್ಥಮಾಡಿಕೊ. ನಿನ್ನನ್ನೂ ಅರ್ಥಮಾಡಿಕೊಳ್ಳಲು ಸಾಧ್ಯವಾಗುವಂತೆ ವರ್ತಿಸು. ಎಲ್ಲಾ ಸರಿ ಹೋಗುತ್ತದೆ. ಹಿಡಿ. ಈ ಕಡತ ನಿನ್ನ ವಶದಲ್ಲಿರತಕ್ಕದ್ದು. ಆದಿತ್ಯವಾರದೊಳಗೆ ಇದರಲ್ಲಿನ ಎಲ್ಲ ಚಿತ್ರಗಳನ್ನೂ ಚೆನ್ನಾಗಿ ಗ್ರಹಿಸಿ, ಒಂದೊಂದರ ಬಗೆಗೂ ಖಚಿತವಾದ ಅಭಿಪ್ರಾಯವನ್ನೂ ತಳೆದುಕೊ. ಅಂದಿನ ಕೊಡುಹದಲ್ಲಿ ನೀನು ಮಾತನಾಡಬೇಕಾಗಬಹುದು" ಎಂದು ಕಡತ ಹಿಡಿದ ಕೈ ಚಾಚಿದಳು.

"ಯಾರಾದರೂ ನಕ್ಕಾರು ? ಪ್ರಸಿದ್ಧ ರೂವಾರಿಗಳ ನಡುವೆ ನನಗೆ ಮಾತನಾಡಲು ಅಧಿಕಾರವೇನು?" ಎಂದು ಬಿಟ್ಟಿಯಣ್ಣ ಪ್ರಶ್ನಿಸಿದ. ಕಡತ ತೆಗೆದುಕೊಳ್ಳಲಿಲ್ಲ.

"ನನ್ನ ನೆರವಿಗಿರಬೇಕಾದ ನೀನು ಮಾತನಾಡುವಷ್ಟು ಜಾಣನಾಗದಿದ್ದರೆ ಎಲ್ಲಾ ನಾನೇ

ಮಾಡಬೇಕಾಗುತ್ತದೆ. ನೆರವು ಎಂಬುದಕ್ಕೆ ಆಗ ಅರ್ಥವೇನು ? ಈಗ ಹೋಗು. ನನ್ನ ನೆರವಿಗೆ ನಿಲ್ಲಬಲ್ಲೆನೆಂದು ನಿನಗೆ ಧೈರ್ಯ ಬಂದಾಗ ನೀನು ಮತ್ತೆ ಬಾ'' ಎಂದಳು ಶಾನ್ತಲದೇವಿ.

ಬಿಟ್ಟಿಯಣ್ಣ ಕೈ ಚಾಚಿ, ''ಕೊಡಿ ಆ ಕಡತವನ್ನು'' ಎಂದ.

''ಹಿಡಿ'' ಎಂದು ಶಾನ್ತಲದೇವಿ ಅದನ್ನು ಕೊಟ್ಟಳು.

ಅದನ್ನು ತೆಗೆದುಕೊಂಡು ಅವನು ಅಲ್ಲಿಂದ ಹೊರಬಿದ್ದ.

ಈ ರೀತಿ ಖಂಡತುಂಡವಾಗಿ ಪಟ್ಟಮಹಾದೇವಿ ಮಾತನಾಡಿದುದನ್ನು ಅವನೆಂದೂ ಕಂಡಿರಲಿಲ್ಲ. ತಾನು ಎಷ್ಟೋ ಸಲ ತಪ್ಪು ಮಾಡಿದ್ದರೂ ಹಟಮಾರಿತನ ಪ್ರದರ್ಶನ ಮಾಡಿದ್ದರೂ ತನ್ನನ್ನು ರಮಿಸಿ, ಒಲಿಸಿಕೊಂಡು ನಯವಾಗಿ ವರ್ತಿಸುತ್ತಿದ್ದವರು ಅವರು. ಇಂದು ಅವರ ಮಾತಿನಲ್ಲಿ, ಧ್ವನಿಯಲ್ಲಿ ಅದೇಕೆ ಬದಲಾವಣೆ ಇತ್ತು ? ನನ್ನ ಮೇಲೆ ಅಸಾಧ್ಯ ಕೋಪ ಬಂದಿರಬೇಕು. ಹಾಗಾದರೆ ಸುವ್ವಲೆಯನ್ನು ಬಿಟ್ಟು ಆ ಕೋಪ ಇಳಿಸಬೇಕು, ಎಂದು ಯೋಚಿಸುತ್ತಾ ಅವನು ತನ್ನ ಸೆಜ್ಜೆವನೆಯನ್ನು ಸೇರಿದ. ಆಗ ಸುವ್ವಲೆ ಅಲ್ಲಿರಲಿಲ್ಲ. ಕಡತ ಬಿಚ್ಚಿ ಒಂದೊಂದಾಗಿ ನೋಡತೊಡಗಿದ. ಅದರಲ್ಲಿ ಪ್ರದರ್ಶಿತವಾದ ಕಲಾವಂತಿಕೆಯನ್ನು ನೋಡಿ ಅವನು ನಿಜವಾಗಿ ಮಾರುಹೋದ. ಅದರ ನೋಡುವಿಕೆಯಲ್ಲಿ ತಲ್ಲೀನನಾದ ಅವನಿಗೆ ಸಮಯ ಕಳೆದುದೇ ತಿಳಿಯಲಿಲ್ಲ. ಎರಡು ಮೂರು ಸಲ ಸುವ್ವಲೆ ಬಂದು ಇಣಿಕಿ, ಅವನ ತಲ್ಲೀನತೆಯನ್ನು ನೋಡಿ, ಅಲ್ಲಿಂದ ಜಾರಿಕೊಂಡಿದ್ದಳು. ಸೂರ್ಯಾಸ್ತಮಾನಕ್ಕೆ ಮುಂಚೆಯೇ ಆರೋಗಣೆ ಮುಗಿದಿತ್ತು. ಪವಡಿಸುವುದಷ್ಟೆ ಉಳಿದಿತ್ತು.

ಅಂದು ತನ್ನ ಸ್ವಾಮಿ ತೋರಿದ ಹಟಮಾರಿತನ ಅವಳಿಗೆ ಕಿರಿಕಿರಿಯನ್ನುಂಟು ಮಾಡಿತ್ತು. ಆದರೆ ಅವಳು ವಾಸ್ತವವಾಗಿ ಅಸಹಾಯಳಾಗಿದ್ದಳು. ಕಿರಿಯ ವಯಸ್ಸಿನ ಅನನುಭವಿ ಅವಳೇನು ತಾನೆ ಮಾಡಿಯಾಳು ? ಸನ್ನಿಧಾನ ಪ್ರಯಾಣ ಬೆಳೆಸಿದ ಮೇಲೆ ಪಟ್ಟಮಹಾದೇವಿ ಕರೆಸಿಕೊಂಡು ಹೇಳಿದ ಹಿತವಚನ, ಮಾಡಿದ ಸಲಹೆಗಳನ್ನು ಅವಳು ಕಲ್ಪಿಸಿಕೊಳ್ಳಲು ಸಹ ಸಾಧ್ಯವಿರಲಿಲ್ಲ. ತನ್ನ ಕೈ ಹಿಡಿದಾತನ ಒಳಿತನ್ನು ಪಟ್ಟಮಹಾದೇವಿ ಎಷ್ಟೊಂದು ಆಳವಾಗಿ ಪರ್ಯಾಲೋಚಿಸಿದ್ದಾರೆ ಎಂಬುದು ಅವಳಿಗೆ ಸ್ವಲ್ಪ ಅರ್ಥವಾಯಿತು. ತನ್ನ ಗಂಡನ ಹಟಮಾರಿತನ ಒಳಿತಲ್ಲವೆಂದು ಸಹ ಅವಳಿಗರಿವಾಯಿತು. ಇಷ್ಟಾದರೂ ಅವರು ಅನುಸರಿಸ ಹೇಳಿದ ರೀತಿ ಎಂತಹ ಒಳ್ಳೆಯರೀತಿ ? ಮನುಷ್ಯನಿಗೆ ಅಸಮಾಧಾನವಾದಾಗ ಅವನು ಮಾಡಿದುದು ತಪ್ಪು ಎಂದು ಗೊತ್ತಾದರೂ ಕೆಲವೊಮ್ಮೆ ತೀರ ಹತ್ತಿರದವರು ಆ ಕುರಿತು ಎತ್ತಿ ಆಡಬಾರದು. ತನಗೆ ಬೇಕಾದವರೂ ತನ್ನದು ಸರಿಯಲ್ಲವೆಂದು ಹೇಳಿದರೆ, ಯಾರದೋ ಚಿತಾವಣೆಯಿದೆ, ನನ್ನ ಮೇಲೆ ತಿರುಗಿಸಿದ್ದಾರೆ, ಎಂದೆಲ್ಲ ಯೋಚನೆ ಅಡ್ಡದಾರಿ ಹಿಡಿಯುತ್ತದೆ. ಅದಕ್ಕೆ ಎಂದೂ ಅವಕಾಶ ಕೊಡಬಾರದು ಎಂದು ತಾನು ನಡೆದುಕೊಳ್ಳಬೇಕಾದ ರೀತಿ ವಿವರಿಸಿದುದು ಆಗ ಸರಿ ಎನಿಸದಿದ್ದರೂ ಪಟ್ಟಮಹಾದೇವಿಯ ಆದೇಶದಂತೆ ತನ್ನ ಗಂಡ ರೂವಾರಿಗಳ ಬಳಿ ಹೊರಟಾಗ ಮನಸ್ಸು ಬದಲಾಯಿಸಿತು. ತನ್ನ ಗಂಡ ಏನೇನು ಮಾಡಿದನೆಂಬುದನ್ನು ತಿಳಿಯಲು ಅವಳಲ್ಲಿ ಕುತೂಹಲ ಕೆರಳಿ ನಿಂತಿತ್ತು. ಇದೊಂದು ಹೊಸ ಬಗೆಯ ಬಾಳಿನ ಪಾಠ ಅವಳಿಗಿಂದು ಆರಂಭವಾಗಿತ್ತು. ಅದರಿಂದ ಅವಳು ಪಟ್ಟಮಹಾದೇವಿಯನ್ನು ಮೊದಲು ಏಕಾಂತದಲ್ಲಿ ನೋಡಿ ನಂತರ ತನ್ನ ಪತಿಯನ್ನು ಕಾಣುವುದೆಂದು ಲೆಕ್ಕ ಹಾಕಿ ಅವನ ಕಣ್ಣಿನಿಂದ ತಪ್ಪಿಸಿಕೊಂಡಿದ್ದಳು. ಪಟ್ಟಮಹಾದೇವಿ ಸುವ್ವಲೆಗೆ ತಾನು ಅವನೊಂದಿಗೆ ಹೇಗೆ ನಡೆದುಕೊಂಡಿದ್ದೇನೆಂಬುದನ್ನು ವಿವರಿಸಿ, ''ಅವನಿಗೆ ನನ್ನ ವರ್ತನೆಯಿಂದ ಏನಾಗಿದೆ ಎಂಬುದನ್ನು

ನಾನು ತಿಳಿಯಬೇಕು. ಅವನು ನನ್ನ ಮೇಲೆ ಅಸಮಾಧಾನವಾಗಿ ಮಾತನಾಡಿದರೂ ಟೀಕಿಸಿದರೂ ನೀನು ತಿರುಗಿ ಬೀಳಬೇಡ. ಏನೂ ತಿಳಿಯದವಳಂತೆ ಅವನ ಭಾವನೆಗೆ, ಮಾತಿಗೆ ಹೊಂದಿಕೆಯಾಗುವ ಮಾತನ್ನೇ ಆಡು. ಅವನು ಮುಂದೆ ಈ ರಾಷ್ಟ್ರದ, ಈ ಸಿಂಹಾಸನದ ರಕ್ಷಕನಾಗಬೇಕು ಸುವ್ವಲೆ. ಅವನನ್ನು ಅದಕ್ಕೆ ಯೋಗ್ಯನನ್ನಾಗಿ ಮಾಡುವುದು ನಮ್ಮ ಕೆಲಸ. ನೀನು ನನ್ನೊಂದಿಗೆ ಸಹಕರಿಸಬೇಕು. ಅವನ ಹೆಸರು ನಮ್ಮ ಇತಿಹಾಸದಲ್ಲಿ ಉಳಿಯುವಂತಾಗಬೇಕು. ಆಗಲೆ ಮಹಾಮಾತೃಶ್ರೀ ಅವರು, ಅವನ ತಾಯಿಗಿತ್ತ ವಚನವನ್ನು ಪಾಲಿಸಲು ನಾನು ನೆರವಾದಂತೆ ಆಗುತ್ತದೆ. ಅವನು ಬಂದಾಗ ನೀನಿಲ್ಲವೆಂದು ಸಹ ಅವನ ಕೋಪ ನೆತ್ತಿಗೇರಿಸರೆ ಆಶ್ಚರ್ಯವಿಲ್ಲ. ಹೋಗು'' ಎಂದು ಹೇಳಿ ಶಾನ್ತಲದೇವಿ ಅವಳನ್ನು ಕಳಿಸಿಕೊಟ್ಟಳು.

ಅವಳು ಬಂದಾಗ ಬಿಟ್ಟಿಯಣ್ಣ ಚಿತ್ರಗಳನ್ನು ವೀಕ್ಷಿಸುವುದರಲ್ಲಿ ತಲ್ಲೀನನಾಗಿದ್ದ. ಎರಡು ಮೂರು ಸಲ ಅವಳು ಇಣಿಕಿದಾಗಲೂ ಅವನು ಮೈಮರೆತಿದ್ದ. ಅಂತಃಪುರದ ಬಿಸಿಲು ಮಹಡಿಯ ಮೇಲೆ ಏರಿ ಬೆಳುದಿಂಗಳಿನಲ್ಲಿ ಸುವಾಸನಾ ಭರಿತ ಗಾಳಿಯಲ್ಲಿ ನಿದ್ದೆ ಬರುವವರೆಗೂ ಕುಳಿತಿದ್ದು, ಪವಡಿಸಲು ಬಂದಾಗಲೂ ಅವನು ಇನ್ನೂ ಅದರಲ್ಲಿಯೆ ಮಗ್ನನಾಗಿದ್ದ.

ಒಳಗೆ ಬಂದ ಸುವ್ವಲೆ ಬಾಗಿಲು ಹಾಕುವಾಗ ಸದ್ದು ಮಾಡಿದಳು.

ಬಿಟ್ಟಿಯಣ್ಣ ತಲೆಯೆತ್ತಿ ಬಾಗಿಲಿನತ್ತ ನೋಡಿದ. ದೀಪದತ್ತ ನೋಡಿದ. ಬತ್ತಿಗಳೆಲ್ಲ ಕುಡಿಕಟ್ಟಿ ಪ್ರಕಾಶ ಮಂದವಾಗ ತೊಡಗಿದುದು ಅವನ ಗಮನಕ್ಕೆ ಬಂತು.

"ಎಲ್ಲಿ ಹೋಗಿದ್ದೆ ಸುವ್ವಲೆ ?''

"ನಾನೆಲ್ಲಿಗೆ ಹೋಗಲಿ ಅರಮನೆ ಬಿಟ್ಟು ?''

"ಈಗ ವೇಳೆ ಎಷ್ಟು ?''

"ಚಂದ್ರ ನಡುನೆತ್ತಿಯಲ್ಲಿದ್ದಾನೆ. ನಿಮಗೆ ನಿದ್ದೆ ಬರದಿರಬಹುದು. ಆ ಚಿತ್ರ ನೋಡುವುದರಲ್ಲಿ ನಿಮಗೆ ಸುತ್ತಲೂ ಏನು ನಡೆದಿದೆ ಎಂಬುದು ಸಹ ತಿಳಿದಿಲ್ಲ. ಕೆಲಸವಿಲ್ಲದ ನಾವು ಎಷ್ಟು ಹೊತ್ತು ಎದ್ದಿರಲು ಸಾಧ್ಯ ? ನಿಮ್ಮ ತಪಸ್ಸಿಗೆ ಅಡ್ಡಿಯಾಗದಿರಲಿ ಎಂದು ಬಿಸಿಲು ಮಹಡಿಯಲ್ಲಿ ಕಾಲ ಕಳೆದೆ. ನಿದ್ದೆ ತಡೆದುಕೊಳ್ಳಲು ಆಗಲಿಲ್ಲ. ಈಗ ಪೂರ್ತಿ ಒಳಗೆ ಬಂದು ಬಾಗಿಲು ಹಾಕಿದೆ.''

"ಅದೇನು ಪೂರ್ತಿ ಒಳಗೆ ಬರುವುದು ಎನ್ನುವ ಮಾತು ?''

"ನಾಲ್ಕು ಸಲ ನಡುವೆ ಬಂದು ಇಣಿಕಿ ಹೋದೆ. ನೀವು ತನ್ಮಯತೆಯಿಂದ ವಿಮುಕ್ತರಾಗಿದ್ದೀರೇನೋ ಎಂದು. ಅದೇ ಸಮಾಧಿ ಸ್ಥಿತಿಯಿತ್ತು. ಅದರಿಂದ ಆಗೆಲ್ಲ ಪೂರ್ತಿ ಒಳಕ್ಕೆ ಬರಲಿಲ್ಲ. ಅದಿರಲಿ ಅಷ್ಟೊಂದು ತಲ್ಲೀನಗೊಳಿಸುವ ಸುಂದರಿಯರ ಚಿತ್ರಗಳಿವೆಯೇನು?''

"ಇಡೀ ವಿಶ್ವವೇ ಅದರಲ್ಲಿ ಇದೆ. ಎಂದಾಗ ಸುಂದರಿಯರೂ ಇದ್ದಾರೆ. ಆದರೆ ಅದೆಲ್ಲ ನಿನಗೆಲ್ಲಿ ತಿಳಿಯುತ್ತದೆ ?''

"ಹೌದು. ನಾನು ಹೆಡ್ಡಿ. ನನಗೆ ಹೇಗೆ ತಿಳಿಯಬೇಕು ?'' ಎಂದು ಸರಸರನೆ ಹೋಗಿ ಅವಳ ಪಲ್ಲಂಗದ ಮೇಲೆ ಮಲಗಿ ಹೊದ್ದಿಕೆ ಎಳೆದುಕೊಂಡಳು.

ಬಿಟ್ಟಿಯಣ್ಣ ಕಡತ ಅಲ್ಲೇ ಬಿಟ್ಟು ಪಲ್ಲಂಗದ ಬಳಿ ಸಾರಿ, "ಓಹೋ ಇಣಿಕಿದಾಗ ಗಮನಿಸಲಿಲ್ಲವೆಂದು ಕೋಪ ಬಂದಿದೆಯೇನು ? ಆ ಕೋಪ ಹೋಗಿಸದೆ ಗತ್ಯಂತರವಿಲ್ಲ'' ಎಂದು ಬತ್ತಿಗಳನ್ನೆಲ್ಲ

ನೊಂದಿಸಿಬಿಟ್ಟ ಸ್ವಲ್ಪ ಕಾಲ ಮೌನವಾವರಿಸಿತು. ನಾಲ್ಕಾರು ಕ್ಷಣಗಳವರೆಗೆ ಬುಸುಗುಟ್ಟಿದಂತೆ ಉಸಿರು ಕೇಳುತ್ತಿದ್ದುದು ನಗುವಿನಲ್ಲಿ ಪರ್ಯವಸಾನವಾಯಿತು.

"ಅಬ್ಬ, ಸುಮ್ಮನಿರಿ ಸಧ್ಯ. ನನ್ನ ಕೈಲಿ ಇನ್ನು ನಗುವುದಕ್ಕೆ ಆಗುವುದಿಲ್ಲ" ಎಂದು ನಗು ಏದುರಿಸಿರಿನೊಂದಿಗೆ ಸುವ್ವಲೆ ಹೇಳಿದಳು.

"ಸರಿ. ಹಾಗಾದರೆ ಮಲಗಿಕೋ."

"ನಿದ್ದೆ ಎಲ್ಲಾ ಹೊರಟುಹೋಯಿತು"

"ದೀಪ ಮುಡಿಸಲೇ. ಅಸೂಯೆ ಪಟ್ಟೆಯಲ್ಲ. ಆ ಸುಂದರಿಯರ ಚಿತ್ರವನ್ನು ಬೇಕಾದರೆ ನೀನೂ ನೋಡು."

"ಈಗ ನಡುವೆ ಆ ಸುಂದರಿಯರು ಬೇಡ. ಬೆಳಗ್ಗೆ ನೋಡಿದರಾಯಿತು. ಸ್ವಲ್ಪ ಹೊತ್ತು ಮಾತನಾಡದೆ ಹಾಗೇ ಕಣ್ಣು ಮುಚ್ಚಿಕೊಂಡು ಮಲಗಿದ್ದರೆ, ನಿದ್ದೆ ಬಂದು ಬಿಡುತ್ತದೆ. ಸಂಜೆ ನೀವಂತೂ ಆರೋಗಣೆಗೆ ಬರಲಿಲ್ಲ. ಹೊಟ್ಟೆ ತಾಳ ಹಾಕುತ್ತಿರಬಹುದು."

"ಹಸಿವಾಗಿದೇಂತ ಸೂಚನೆ ತಕೋಳ್ಳೋದಕ್ಕೆ ಮಿದಿಳಿಗೆ ಜಾಗವೇ ಇಲ್ಲ. ನೀನೇನು ಚಿಂತಿಸಬೇಡ. ಸುಮ್ಮನೆ ಮಲಗಿಕೋ."

ಮತ್ತೆ ಮೌನವಾವರಿಸಿತು. ನಿದ್ದೆ ಬೇಗ ಬಂತು.

ಬೆಳಿಗ್ಗೆ ಎದ್ದು ಪ್ರಾತರ್ವಿಧಿಗಳೆಲ್ಲ ಮುಗಿದ ಮೇಲೆ ಬಿಟ್ಟಿಯಣ್ಣ, "ಸುವ್ವಲೆ, ಪಟ್ಟಮಹಾದೇವಿಯವರಿಗೆ ನನ್ನ ಮೇಲೆ ಕೋಪ ಬಂದ ಹಾಗೆ ಕಾಣುತ್ತದೆ" ಎಂದ.

"ಇರಲಾರದು. ನನಗೇನೂ ಹಾಗೆ ತೋರಲಿಲ್ಲ."

"ನೀನು ನೋಡಿದ್ದೆಯಾ ?"

"ಹು."

"ಯಾವಾಗ ?"

"ನೀವು ರೂವಾರಿಗಳ ಬಳಿ ಹೋದಾಗ ನಾನು ಹಿಂದಿನ ತೊಟ್ಟಿಯಲ್ಲಿ ಚಟ್ಟಲೆಯ ಮಗುವನ್ನು ಆಡಿಸುತ್ತಿದ್ದೆ. ಅದಕ್ಕೆ ನಿದ್ದೆ ಬಂತು. ಆಮೇಲೆ ನಮ್ಮ ಸೆಜ್ಜೆವನೆಗೆ ಬಂದಾಗ ನೀವು ಕಡತದಲ್ಲಿ ತಲ್ಲೀನರಾಗಿದ್ದಿರಿ. ನಾನು ಏನೂ ತೋರದೆ ಕಾಲ ಕಳೆಯಲು ಪಟ್ಟಮಹಾದೇವಿಯವರ ಬಳಿಗೆ ಹೋಗಿದ್ದೆ."

"ನನ್ನ ಬಗೆಗೆ ಏನಾದರೂ ಹೇಳಿರಲೇಬೇಕು ಅವರು."

"ಏನೂ ಹೇಳಲಿಲ್ಲ."

"ಏನೂ ಹೇಳಲಿಲ್ಲವೆಂದರೆ ಸುಮ್ಮನೆ ಮುಖ ನೋಡುತ್ತ ಕುಳಿತಿದ್ದರೇನು ?"

"ಇಲ್ಲ. ಏನೇನೋ ಹಳೆಯ ಕಥೆಗಳನ್ನೆಲ್ಲ ಹೇಳಿದರು."

"ನಿನಗೆ ಹಳೆ ಕಥೆ ಹೇಳುವ ಉದ್ದೇಶ."

"ನನಗೇನು ಗೊತ್ತು. ತಿಳಿದಿರಲಿ ಎಂದು ಹೇಳಿರಬಹುದು."

"ಇರಬಹುದು. ಅವರು ಅನಾವಶ್ಯಕವಾದ ಮಾತನ್ನು ಯಾವಾಗಲೂ ಯಾರೊಂದಿಗೂ ಆಡುವುದಿಲ್ಲ."

"ಇರಬಹುದು. ನಿಮಗೆ ಅವರ ವಿಷಯವೆಲ್ಲ ಚೆನ್ನಾಗಿ ಗೊತ್ತು."

"ಗೊತ್ತು."

"ಅಂದ ಮೇಲೆ ಅವರು ಕೋಪಗೊಂಡಿದ್ದಾರೆ ಎಂದು ನಿಮಗೆ ಅನ್ನಿಸಲು ಅವರ ಮಾತು ಕಾರಣವಾಗಿರಬೇಕು ಅಲ್ಲವೆ ?"

"ಹೌದು."

"ನನಗೆ ತಿಳಿಸಬಹುದಾದರೆ....."

"ನನ್ನ ಕೆಲಸದಲ್ಲಿ ನೆರವಾಗುವುದಕ್ಕೆ ಇಷ್ಟವೆನಿಸಿದಾಗ ನನ್ನ ಬಳಿ ಬಾ ಎಂದರು. ಸದಾ ಬುದ್ಧಿವಾದ ಹೇಳುವ ಅವರು, ನನ್ನದು ಎಟ್ಟ ಸ್ವಭಾವವೆಂಬ ತೀರ್ಮಾನಕ್ಕೆ ಬಂದಲ್ಲದೆ ಹಾಗೆ ಹೇಳುವವರಲ್ಲ."

"ಅಂದರೆ ನೀವು ಹಾಗೆ ನಡೆದುಕೊಂಡಿರಬೇಕು."

"ಇರಬಹುದು. ಇದೇ ಮೊದಲನೆಯ ಸಲವೇನಲ್ಲ."

"ಆದರೆ ನೀವು ಈಗ ಬೆಳೆದ ಗಂಡಸು. ಮಗುವಿನಂತೆ ಅವರು ಹೇಗೆ ನೋಡಿಯಾರು? ತಿರುಗಿ ಬಿದ್ದೀರಿ ಎಂದು ಅವರಿಗೂ ಭಯವಿರಬಹುದು."

"ನಾನು ಪಟ್ಟಮಹಾದೇವಿಯವರ ಮೇಲೆ ತಿರುಗಿ ಬೀಳುವುದೆ ? ಎಂದಿಗೂ ಸಾಧ್ಯವಿಲ್ಲ."

"ಹಾಗಾದರೆ ಸನ್ನಿಧಾನ ಜೈತ್ರಯಾತ್ರೆ ಹೊರಟ ಶುಭ ಮುಹೂರ್ತದಲ್ಲಿ ಏಕೆ ನೀವು ಅಲ್ಲಿರಲಿಲ್ಲ? ಇದು ಸರಿಯೆ ?"

"ತಪ್ಪು, ತಪ್ಪು, ತಪ್ಪು ! ಸಾವಿರ ಸಲ ಹೇಳುತ್ತೇನೆ. ಆ ತಪ್ಪಿಗೆ ಶಿಕ್ಷೆ ಕೊಡಲಿ ಅನುಭವಿಸುತ್ತೇನೆ. ಆದರೆ ನಾನು ನನ್ನನ್ನು ಪೋಷಿಸಿದವರ ನೆರವಿಗೆ ಬರಲಾರೆನೆಂಬ ಸಂಶಯ ಅವರಲ್ಲಿ ಮೂಡಿದೆ. ಅದು ನನಗೆ ಅಶ್ರೇಯಸ್ಕರ."

"ಅಂದರೆ ಅವರಿಗೆ ನಿಮ್ಮಲ್ಲಿದ್ದ ನಂಬಿಕೆ ಈಗಿಲ್ಲ ಎಂದು ನಿಮ್ಮ ಭಾವನೆಯೋ ?"

"ಇರಬಹುದು."

"ಹೋಗಿ ಅವರೊಂದಿಗೆ ಮಾತನಾಡುವುದು ಒಳಿತು. ಅವರು ಕ್ಷಮೆಯಲ್ಲಿ ಭೂಮಿತಾಯಿಯನ್ನು ಮೀರಿಸುತ್ತಾರೆ ಎಂದು ಕೇಳಿದ್ದೇನೆ."

"ನಮಗೆ ತಿಳಿದಂತೆ ಭೂಮಿತಾಯಿಗೆ ಬಾಯಿಲ್ಲ. ಅವಳಲ್ಲಿ ಚೇತನವಿದೆ. ನಮಗೆ ತನ್ನ ಆ ಚೇತನದ ಮೂಲಕ ಅನ್ನ ಕೊಡುತ್ತಾಳೆ. ಆದರೆ ಈ ತಾಯಿಗೆ ಕಿವಿಯಿದೆ, ಹೃದಯವಿದೆ, ಬಾಯಿಯಿದೆ. ಜೊತೆಗೆ ಇದು ಸಾಕಾರಮೂರ್ತಿ. ಕಲ್ಪನೆಯ ಭೂಮಿತಾಯಿಗಿಂತ ಈ ತಾಯಿಯ ವರ್ತನೆ ಸ್ಪಷ್ಟ ಹಾಗೂ ಅರ್ಥವತ್ತಾಗಿರುತ್ತದೆ."

"ಅಂದಮೇಲೆ ತಪ್ಪೊಪ್ಪಿಕೊಂಡು ಬಿಡುವುದು ಮೇಲಲ್ಲವೆ ?"

"ನೀನು ಜೊತೆಗೆ ಬರುವೆಯಾ ?"

"ಏಕೆ ? ಭಯವೇ ?"

"ನೀನಿದ್ದರೆ ವಾಸಿ."

"ಬೇಡಿ, ನೀವೊಬ್ಬರೇ ಹೋಗಿಬನ್ನಿ."

ಅವನು ಒಡನೆಯೇ ಹೊರಟ. ಆದರೆ ಪಟ್ಟಮಹಾದೇವಿ ಅವನಿಗೆ ಸಿಗಲಿಲ್ಲ. ಅವಳ ತಂದೆಯವರಿಗೆ ಆರೋಗ್ಯ ಕೆಟ್ಟಿದೆಯೆಂದು ವರ್ತಮಾನ ಬಂದು ಅವಳು ತನ್ನ ತವರು ಮನೆಗೆ ಹೋಗಿದ್ದಳು. ಎರಡು ದಿವಸ ಅವನಿಗೆ ಪಟ್ಟಮಹಾದೇವಿಯವರ ಸಂದರ್ಶನವಾಗಲೇ ಇಲ್ಲ. ಆದಿತ್ಯವಾರ ಮೊದಲೇ ನಿರ್ಣಯವಾದಂತೆ ರೂವಾರಿಗಳ ಕೂಡುಹದ ವ್ಯವಸ್ಥೆಯಾಗಿತ್ತು.

ಮಾತು ಕೊಟ್ಟಂತೆ ಯಾತ್ರಿಕ ರೂವಾರಿ ಅರಮನೆಯ ಬಾಗಿಲಿಗೆ ಬಂದ. ವೇಲಾಪುರದಲ್ಲಿ ನಿರ್ಮಾಣವಾಗಲಿರುವ ದೇವಮಂದಿರದ ಕೆಲಸದಲ್ಲಿ ತೊಡಗಿದ್ದ ನೂರಾರು ರೂವಾರಿಗಳು ಅರಮನೆಯ ಪ್ರಾಕಾರದ ಮಹಾದ್ವಾರದಲ್ಲಿ ಸಾಗಿದ್ದರು. ರೇವಿಮಯ್ಯನೂ ಅಲ್ಲಿದ್ದ. ಅವನು ಯಾತ್ರಿಕ ರೂವಾರಿಯನ್ನು ಕಂಡು ಸನ್ನೆ ಮಾಡಿ ಇವರೆಲ್ಲರೂ ಹೋಗಲೆಂಬಂತೆ ತಿಳಿಸಿದ. ಯಾತ್ರಿಕ ರೂವಾರಿ ಅರ್ಥವರಿತವನಂತೆ ಮಹಾದ್ವಾರದ ಹೊರಗಿನ ಚಿತ್ತಾರದ ಕೆಲಸವನ್ನು ನೋಡುವವನಂತೆ ನಿಂತ. ರೂವಾರಿಗಳೆಲ್ಲರೂ ಅರಮನೆಯ ಹೆಬ್ಬಾಗಿಲಿನ ಬಳಿ ಸೇರಿ ಒಳಕ್ಕೆ ಹೋಗತೊಡಗಿದ್ದರು. ರೇವಿಮಯ್ಯ ಯಾತ್ರಿಕ ರೂವಾರಿಯ ಬಳಿ ಬಂದು, "ಬನ್ನಿ" ಎಂದು ಕರೆದ.

ಇಬ್ಬರೂ ಒಳಕ್ಕೆ ಹೊರಟರು. ರೇವಿಮಯ್ಯ ಮುಂದೆ. ಅವನ ಹಿಂದೆ ರೂವಾರಿ ನಿಧಾನವಾಗಿ ಅರಮನೆಯತ್ತ ಹೆಜ್ಜೆ ಹಾಕುತ್ತಿದ್ದರು. ಸ್ಥಪತಿ ಹರೀಶ ಸರಸರನೆ ಬಂದು ಇವರನ್ನು ದಾಟಿ ರೇವಿಮಯ್ಯನನ್ನು ಗುರುತಿಸಿ, ನಿಂತು, "ಇವನಾರು ?" ಎಂದು ಕೇಳಿದ.

"ಇವರೊಬ್ಬ ರೂವಾರಿಗಳು" ಎಂದ ರೇವಿಮಯ್ಯ ಹಾಗೇ ಹೆಜ್ಜೆ ಮುಂದೆ ಹಾಕಿದ.

"ಮತ್ತೆ, ನಾನೆಂದೂ ಇವರನ್ನು ನೋಡಿದಂತೆ ನೆನಪಿಲ್ಲ" ಎಂದ ಹರೀಶ ಅವನೊಂದಿಗೆ ಸಾಗುತ್ತಾ.

"ನೋಡಿದ್ದರೆ ತಾನೇ ನೆನಪಾಗುವುದು ?"

"ಏನು ಪಟ್ಟಮಹಾದೇವಿಯವರನ್ನು ಕಾಣಬೇಕಂತೇನು ?"

"ಹೌದು."

"ಯಾವ ಊರು ನಿಂದು ?" ಎಂದು ರೂವಾರಿಯನ್ನು ಹರೀಶ ಪ್ರಶ್ನಿಸಿದ.

"ಸಧ್ಯಕ್ಕೆ ವೇಲಾಪುರಿಯೆ" ಎಂದ ರೂವಾರಿ.

"ನಾನು ಕೇಳಿದ್ದು ಅದಲ್ಲ, ಸ್ವಂತ ಊರು ಯಾವುದು ಎಂದು."

"ಇದ್ದದ್ದೆ ನನ್ನ ಸ್ವಂತ ಊರು."

ಹರೀಶನಿಗೆ ತುಸು ಬೇಸರವಾಯಿತು. ತಾನು ಕಿರಿಯನೆಂದು ಭಾವಿಸಿ ಉತ್ತರ ಕೊಡಲು ಅವನು ಗತ್ತು ಮಾಡುತ್ತಿದ್ದಾನೆ. ತಾನಾರೆಂಬುದು ತಿಳಿದರೆ ಅವನ ರೀತಿ ಬದಲಾಯಿಸಬಹುದೆಂದು ಮನಸ್ಸಿನಲ್ಲಿ ಅಂದುಕೊಂಡು, "ನಾನು ಇಲ್ಲಿ ನಿರ್ಮಿತವಾಗಲಿರುವ ದೇವಮಂದಿರದ ಸ್ಥಪತಿ" ಎಂದ.

"ಬಹಳ ಸಂತೋಷ" ಎಂದು ಹೇಳಿ ರೂವಾರಿ ಸುಮ್ಮನಾದ.

"ನೀನು ಯಾರ ಯಾರ ಬಳಿ ಕೆಲಸ ಮಾಡಿದ್ದೀ ?" ಎಂದು ಪ್ರಶ್ನಿಸಿದ ಹರೀಶ.

"ಯಾರ ಬಳಿ ಕೆಲಸ ಮಾಡಿದರೂ ನಾನು ಮಾಡುವುದು ನನ್ನ ಕೆಲಸ ತಾನೆ ?"

"ಇಂತಹ ಕಡೆ ಕೆಲಸಮಾಡಿದ್ದೇನೆಂದು ಹೇಳಿದರೆ ಇಲ್ಲೂ ಏನಾದರೂ ಕೆಲಸ ಕೊಡಬಹುದಿತ್ತು ಎಂದು ಆಲೋಚಿಸಿದೆ" ಎಂದ ಹರೀಶ.

"ನನ್ನ ಹೇಳಿಕೆಯೇ ಯೋಗ್ಯತೆಗೆ ಅಳತೆಗೋಲೋ ಅಥವಾ ನಾನು ಮಾಡುವ ಕೆಲಸ ಯೋಗ್ಯತೆಗೆ ಅಳತೆಗೋಲೋ ?"

"ಅದಕ್ಕೇ ಮತ್ತೆ, ಎಲ್ಲಿ ಯಾರ ಬಳಿ ಕೆಲಸ ಮಾಡಿದ್ದೀ ಎಂದು ಕೇಳಿದ್ದು ?"

"ಅದನ್ನೆಲ್ಲ ತಾವು ನೋಡಿದ್ದರೆ ತಾನೆ ? ದೊಡ್ಡಗದ್ದುವಳ್ಳಿಗೆ ಹೋಗಿ ಬಂದಿದ್ದೀರಾ ?"

"ಇಲ್ಲ. ಇನ್ನೂ ಮೊನ್ನೆ ಮೊನ್ನೆ ತಾನೆ ಆ ಕೆಲಸ ಮುಗಿದಿದೆಯೆಂದು ಸಮಾಚಾರ."

"ಕ್ರೀಡಾಪುರಕ್ಕೆಂದಾದರೂ ಭೇಟಿಕೊಟ್ಟದ್ದೀರಾ ?"

"ಇಲ್ಲ."

"ನೋಡಿದಿರಾ ? ಈ ಪ್ರಶ್ನೋತ್ತರದಿಂದ ಉಭಯರಿಗೂ ಏನೂ ಲಾಭವಾಗಲಿಲ್ಲ."

ಅರಮನೆಯಿಂದ ಅಂಕಕಾರನೊಬ್ಬ ಓಡಿಬಂದು, "ಪಟ್ಟಮಹಾದೇವಿಯವರು ಆಗಲೇ ಮೊಗಸಾಲೆಯಲ್ಲಿ ಉಪಸ್ಥಿತರಾಗಿದ್ದಾರೆ. ಸ್ಥಪತಿಗಳೆಲ್ಲಿ ಎಂದು ಕೇಳಿದರು. ಸ್ವಲ್ಪ ಜಾಗ್ರತೆ ಹೆಜ್ಜೆ ಹಾಕಿ" ಎಂದ

ಅವನು ಸರಸರನೆ ಅರಮನೆಯತ್ತ ಸಾಗಿದ.

ಸ್ವಲ್ಪ ಹೊತ್ತಿನ ನಂತರ ಹಡಿಯಾರನೊಬ್ಬ ಬಂದು, ರೇವಿಮಯ್ಯನ ಕಿವಿಯಲ್ಲಿ ಏನನ್ನೋ ಹೇಳಿದ. ರೇವಿಮಯ್ಯ ಒಪ್ಪಿಗೆ ಸೂಚಿಸಿ ಅರಮನೆಯನ್ನು ರೂವಾರಿಯೊಂದಿಗೆ ಪ್ರವೇಶಿಸಿದ.

ಅತ್ತ ಸ್ಥಪತಿ ಮೊಗಸಾಲೆಯನ್ನು ಪ್ರವೇಶಿಸಿ ಅವನಿಗಾಗಿ ಕಾದಿರಿಸಿದ್ದ ಸ್ಥಾನದ ಬಳಿ ಬಂದು, ಪಟ್ಟಮಹಾದೇವಿಯವರಿಗೆ ಬಾಗಿವಂದಿಸಿ, "ಪಟ್ಟಮಹಾದೇವಿಯವರು ಕ್ಷಮಿಸಬೇಕು. ನಾನು ಬರುವುದರಲ್ಲಿ ವಿಲಂಬವಾಯಿತು. ಸನ್ನಿಧಾನದ ಅಮೂಲ್ಯ ವೇಳೆಯನ್ನು ನಾನು ದಂಡ ಮಾಡಿದುದಕ್ಕೆ ವಿಷಾದಿಸುತ್ತೇನೆ" ಎಂದ.

"ಅದು ಈಗ ದೊಡ್ಡ ಪ್ರಶ್ನೆ ಏನೂ ಅಲ್ಲ. ಇಂದು ಸೇರಿಸಿರುವ ಈ ರೂವಾರಿ ಕೂಡುಹದ ಉದ್ದೇಶ ಮುಖ್ಯ. ನಮ್ಮ ಕುವರ ಬಿಟ್ಟಿಯಣ್ಣ ಇದರ ಉದ್ದೇಶವನ್ನು ವಿವರಿಸುತ್ತಾನೆ" ಎಂದಳು ಶಾನ್ತಲದೇವಿ.

ಕುವರ ಬಿಟ್ಟಿಯಣ್ಣ ಎದ್ದು ನಿಂತು ಬಾಗಿ ವಂದಿಸಿ, "ಪಟ್ಟಮಹಾದೇವಿಯರ ಅಪ್ಪಣೆಯನುಸಾರ ನಾನು ಈ ಕೂಡುಹದ ಉದ್ದೇಶವನ್ನು ತಮ್ಮಗಳ ಮುಂದೆ ಮಂಡಿಸುತ್ತೇನೆ. ನಾನು ಎಲ್ಲ ದೃಷ್ಟಿಯಿಂದಲೂ ಈ ಕೆಲಸ ಮಾಡಲು ಅನರ್ಹ. ಆದರೂ ಅವರು ನನ್ನನ್ನು ಈ ಕೆಲಸಕ್ಕೆ ನಿಯೋಜಿಸಿದರೇಕೆಂಬುದು ನನಗಿನ್ನೂ ಅರ್ಥವಾಗಿಲ್ಲ. ಮಹಾಸನ್ನಿಧಾನ ಚೈತ್ರಯಾತ್ರೆ ಹೊರಟಿದ್ದಾರೆಂಬುದು ನಿಮ್ಮಗಳಿಗೆಲ್ಲ ತಿಳಿದಿದೆ. ಅವರು ಜಯಶ್ರೀಯೊಂದಿಗೆ ಹಿಂದಿರುವುದರೊಳಗೆ ದೇವಮಂದಿರದ ನಿರ್ಮಾಣ ಕೆಲಸವನ್ನು ಪೂರೈಸಿರಬೇಕೆಂಬುದು ಪಟ್ಟಮಹಾದೇವಿಯವರ ಉದ್ದೇಶ. ಕಿರಿಯ ಪ್ರಭು,

ಉದಯಾದಿತ್ಯರಸರು ಸಹ ಈಗ ರಾಜಧಾನಿಯಲ್ಲಿ ಉಪಸ್ಥಿತರಿಲ್ಲದಿರುವುದರಿಂದ ಅವರ ಪಾಲಿನ ಕರ್ತವ್ಯವನ್ನು ನಿರ್ವಹಿಸಲು ಅರಮನೆ ನನಗೆ ಆಜ್ಞೆ ಮಾಡಿದೆ. ಇಲ್ಲಿ ಸೇರಿರುವ ಎಲ್ಲರಲ್ಲಿ ನಾನು ಅತ್ಯಂತ ಕಿರಿಯ. ಅಂತಹುದರಲ್ಲಿ ನನ್ನ ಪಾಲಿಗೆ ಇಂತಹ ಹಿರಿಯ ಹೊಣೆಗಾರಿಕೆಯನ್ನು ಕೊಟ್ಟರೆ ಸಹಜವಾಗಿ ತಲೆತಿರುಗುವ ಸಂಭವವೇ ಹೆಚ್ಚು. ಅಂತಹ ತಲೆತಿರುಗುವ ಪ್ರಸಂಗವನ್ನೇ ಕೊರಳಿಗೆ ಕಟ್ಟಿ ತಲೆ ತಗ್ಗಿಸುವುದು ಹೇಗೆ ? ತಲೆತಗ್ಗಿಸಿ, ವಿನಯದಿಂದ ಗುರಿಸಾಧಿಸುವುದರಲ್ಲಿ ಬರುವ ಹಿರಿಮೆ ಏನು ಎಂಬುದರ ಅನುಭವ ಮಾಡಿಕೊಡುವ ಕ್ರಮ ಇದು ಎಂದು ನನಗನ್ನಿಸಿದೆ. ಕಿರಿಯನಾದ ನನ್ನಲ್ಲಿ ಉತ್ಸಾಹದ ಕಾರಣವಾಗಿ ಆತುರದ ಭಾವನೆಗಳು ಮೂಡುವುದು ಸಹಜ. ಅಂತಹ ಸಂದರ್ಭದಲ್ಲಿ ತಾವುಗಳು ನನ್ನ ವಿಚಾರದಲ್ಲಿ ಔದಾರ್ಯದಿಂದ ನಡೆಸಿಕೊಳ್ಳಬೇಕೆಂದು ಪ್ರಾರ್ಥಿಸಿ, ನನ್ನ ಕೆಲಸದಲ್ಲಿ ನಾನು ಕೃತಕಾರ್ಯನಾಗುವಂತೆ ನನಗೆ ಅರಮನೆಯ ಆಶೀರ್ವಾದದ ಕರುಣೆ ಇರಲಿ ಎಂದು ನಮ್ರವಾಗಿ ವಿನಂತಿಸಿ, ಈ ಕೂಡುಹದ ಉದ್ದೇಶವನ್ನು ತಿಳಿಸುತ್ತೇನೆ.

ನಾನು ಆಗಲೇ ಸೂಚಿಸಿದಂತೆ ಈ ಕೆಲಸ ಬೇಗ ಮುಗಿಯಬೇಕಾಗಿದೆ. ಸ್ಥಾನಮಾನ, ಯೋಗ್ಯತೆ ಇವುಗಳ ಕಾರಣವಾಗಿ ಉಂಟಾಗಬಹುದಾದ ಯಾವ ಭಿನ್ನಾಭಿಪ್ರಾಯ ವಿರಸಗಳಿಗೂ ಅವಕಾಶವೀಯದಂತೆ ಕೆಲಸ ಸಾಗಿಸುವುದು ಈಗ ಮುಖ್ಯ. ಬಹುಶಃ ತಮ್ಮಲ್ಲಿ ಅನೇಕರಿಗೆ ಗೊತ್ತಿಲ್ಲದಿರಬಹುದು. ಎಲ್ಲೆಲ್ಲಿ ಏನೇನು ನಡೆಯುತ್ತದೆ, ಯಾರು ಯಾರು ಏನೇನು ಮಾಡುತ್ತಾರೆ ಎಂಬುದು ಅರಮನೆಗೆ ತಿಳಿಯಲು ಸಾಧ್ಯವಿಲ್ಲ ಎಂದು ತಾವು ಭಾವಿಸಿದ್ದೀರಿ. ಆದರೆ ವಾಸ್ತವವಾಗಿ ಎಲ್ಲವೂ ಅರಮನೆಗೆ ತಿಳಿಯುತ್ತದೆ. ಇತ್ತೀಚಿನ ಕೆಲವು ವರದಿಗಳಿಂದ ಶ್ರೇಷ್ಠ ಅಶ್ರೇಷ್ಠ, ಅರಮನೆಗೆ ಪ್ರೀತಿಪಾತ್ರ, ಅದರಿಂದ ಪ್ರಭಾವೀವ್ಯಕ್ತಿ, ಈ ಕಾರಣಕ್ಕಾಗಿ ಮುಖ್ಯ ಸ್ಥಾನ ದೊರೆತಿದೆ ಹಾಗೆ ಹೀಗೆ ಎಂಬ ಮಾತುಗಳು ಆಗಾಗ ಹೊರಬಿದ್ದಿವೆ. ನಿರ್ದಿಷ್ಟವಾಗಿ ಇಂತಿಂತಹವರು ಹೀಗೆ ಹೀಗೇ ಹೇಳಿದ್ದಾರೆ ಎಂಬುದು ಅರಮನೆಗೆ ತಿಳಿದಿದ್ದರೂ ಅದನ್ನು ಬಹಿರಂಗಪಡಿಸಲು ಇಷ್ಟ ಪಡುವುದಿಲ್ಲ. ಏಕೆಂದರೆ ಕೆಲವೊಮ್ಮೆ ಅಂತಹ ಮಾತುಗಳು ಯಾವು ಯಾವುದೋ ಉದ್ವೇಗದ ಸಮಯದಲ್ಲಿ ಥಟ್ಟನೆ ಬಂದಿರಬಹುದು. ಕೆಡುಕನ್ನೇ ಗುರಿಯಾಗಿಟ್ಟುಕೊಂಡು ಅಂತಹ ಮಾತು ಹೊಮ್ಮಿದ್ದರೆ ಶಿಕ್ಷೆ ಅನಿವಾರ್ಯವಾಗುತ್ತಿತ್ತು. ಈವರೆಗೆ ನಡೆದಿರುವುದು ಕ್ಷಮಾರ್ಹವೆಂದು ಅರಮನೆಗೆ ಗೊತ್ತಿದೆಯಾಗಿ ಹೆಸರುಗಳು ಅನವಶ್ಯಕ. ಇಂದು ಉದ್ವೇಗದಿಂದ ಹೊಮ್ಮಿದ ಮಾತು ನಾಳೆ ಉದ್ದೇಶಪೂರಿತವಾಗಿ ಪರಿಣಮಿಸುವ ಸಂಭವವಿದೆ. ಅದರಿಂದಲೇ ಎಲ್ಲರ ಇದಿರಿಗೆ ಈ ವಿಷಯವನ್ನು ತೆರೆದ ಮನಸ್ಸಿನಿಂದ ತಿಳಿಸುವುದರ ಜೊತೆಗೆ ಕೆಲವು ಅಂಶಗಳ ಸ್ಪಷ್ಟೀಕರಣ ಮಾಡಬೇಕೆಂಬುದು ಅರಮನೆಯ ಉದ್ದೇಶವಾಗಿದೆ. ದೇಮಂದಿರ ನಿರ್ಮಾಣದಲ್ಲಿ ಕೃತಿ ನಿಷ್ಠೆಗೆ ಪ್ರಾಮುಖ್ಯತೆಯೇ ವಿನಾ ಸ್ಥಾನಕ್ಕೆ ಅಲ್ಲ. ಈ ಕಾರಣದಿಂದ ವಯಸ್ಸು, ಅನುಭವ, ಬಿರುದು ಬಾವಲಿಗಳು ಎಲ್ಲವೂ ಇಲ್ಲಿ ಗೌಣವಾಗಿವೆ. ಅರಮನೆಯ ದೃಷ್ಟಿಯಲ್ಲಿ ಸ್ಥಪತಿ ಮೊದಲಾಗಿ ಪ್ರತಿಯೊಬ್ಬ ರೂವಾರಿಯೂ ಸಮಾನ. ನಕ್ಷೆ ಒಪ್ಪಿಗೆಯಾದುದು, ಯಾರು ಅದನ್ನು ಕಲ್ಪಿಸಿ ರಚಿಸಿದುದು ಎಂಬುದರ ಮೇಲೆ ನಿರ್ಣಯವಾಗಲಿಲ್ಲವೆಂಬುದು ತಮ್ಮಗಳಿಗೆ ಗೊತ್ತು. ರಚನೆ ಎಂತಹುದು ಎಂಬುದರ ಮೇಲೆ ಆಧಾರಿತವಾಗಿದೆ. ಈ ರಾಜ್ಯದ ಎಲ್ಲ ಕೆಲಸಗಳಲ್ಲೂ ವ್ಯಕ್ತಿ ಮುಖ್ಯವಲ್ಲ. ಅವನ ಕರ್ತವ್ಯಶಕ್ತಿ ಮುಖ್ಯ ಎಂಬ ಧೋರಣೆಯ ಮೇಲೆ ರೂಪಿತವಾಗಬೇಕಾಗಿದೆ. ಇಂದು ಒಂದು ಕೆಲಸಕ್ಕೆ ಮುಖ್ಯನಾದವನು ನಾಳೆ ಇನ್ನೊಂದು ಕೆಲಸಕ್ಕೆ ಅಮುಖ್ಯನೆಂದು ಪರಿಗಣಿತನಾಗಬಹುದು. ಮುಖ್ಯ, ಅಮುಖ್ಯ ಎಂಬುದಕ್ಕೆ ಒಂದೇ ವ್ಯಕ್ತಿ ಒಳಗಾಗಿದ್ದರೂ ಅತ್ತ ಶ್ರೇಷ್ಠತೆಯ ಮುದ್ರೆಯಾಗಲಿ ಇತ್ತ ಅಶ್ರೇಷ್ಠತೆಯ ಮುದ್ರೆಯಾಗಲಿ ಆ ವ್ಯಕ್ತಿಗೆ ಒತ್ತುವುದಿಲ್ಲ. ವ್ಯಕ್ತಿ

ಸದಾ ಅರಮನೆಯ ನಂಬುಗೆಗೆ ಪಾತ್ರನಾಗಿರಬೇಕೆಂಬುದರ ಮೇಲೆ ಅವಲಂಬಿತವಾಗಿರುತ್ತದೆ. ಅದರಿಂದ ಪಟ್ಟಮಹಾದೇವಿಯವರ ಪರವಾಗಿ ನಾನು ತಮ್ಮಗಳಲ್ಲಿ ವಿನಂತಿಸುವುದು ಇಷ್ಟೆ. ತಮ್ಮ ತಮ್ಮಲ್ಲಿ ಯಾರೂ ಮೇಲುಕೀಳೆಂಬ ಭಾವನೆಯನ್ನು ತಾಳಬಾರದು. ಕೆಲಸ ಮಾಡುವಾಗ ನೇತಾರನ ಇಚ್ಛೆಯಂತೆ ನಿರ್ವಹಿಸುವವರಾದರೂ ಎಲ್ಲರೂ ಸಮಾನರು. ನೇತಾರರೂ ಅಷ್ಟೆ. ಯೋಜಿತ ಕೆಲಸ ಸಾಧನೆಗೆ ಮಾರ್ಗದರ್ಶಕರೇ ವಿನಾ ಅವರು ಉಳಿದವರಿಗಿಂತ ಮೇಲೆ ಅಲ್ಲ. ಈ ಮಂದಿರದ ಕಲ್ಪನೆ ಒಂದು ವ್ಯಕ್ತಿಯ ಕಲ್ಪನೆಯಾದರೂ ಅದು ಬಹುಮುಖ ಪ್ರತಿಭೆಯ ಏಕತೆಯ ಕುರುಹಾಗಿ ಉಳಿಯಬೇಕು. ತಾರತಮ್ಯದತ್ತ ಮನಸ್ಸು ಹೊರಳಿದರೆ ಏಕತೆಯನ್ನು ಸಾಧಿಸುವುದು ಅಸಾಧ್ಯವಾಗುತ್ತದೆ. ಅದರಿಂದ ಅವರವರ ವೈಯಕ್ತಿಕ ಪ್ರತಿಭೆಯನ್ನು ಏಕತೆಯತ್ತ ಒಡಮೂಡಿಸುವ ದೃಢ ನಿಶ್ಚಯವನ್ನು ಇಂದು ಅರಮನೆ ನಿಮ್ಮಿಂದ ಬಯಸುತ್ತಿದೆ. ಅಪ್ರಕೃತವಾಗಲಾರದೆಂಬ ನಂಬಿಕೆಯಿಂದ ಈ ಸಂದರ್ಭದಲ್ಲಿ, ಸ್ವವಿಚಾರವೊಂದನ್ನು ಮನಬಿಚ್ಚಿ ಉಸುರುವುದು ಯುಕ್ತವೆಂದು ನನಗೆ ತೋರುತ್ತಿದೆ. ತಾಯಿತಂದೆಯನ್ನು ಏಕಕಾಲಕ್ಕೆ ಕಳೆದುಕೊಂಡು ತಬ್ಬಲಿಯಾದ ನನ್ನನ್ನು, ಈ ಅರಮನೆ ತನ್ನ ಶಿಶುವಾಗಿ ಬೆಳೆಸಿತು. ನನ್ನ ತಾಯಿತಂದೆಗಳ ಏಕನಿಷ್ಠೆಯ ಫಲವಾಗಿ ನನಗೆ ದೊರೆತ ಕರುಣೆ ಅದು. ಅರಮನೆಯ ಪ್ರೀತಿ ನನ್ನನ್ನು ಸ್ವಲ್ಪ ಹೆಮ್ಮೆಗೇರಿಸಿತು. ನನ್ನ ವಯೋಧರ್ಮಕ್ಕನುಗುಣವಾದ ಆತುರದ ಫಲವಾಗಿ ನಾನು ಸಂಕುಚಿತ ಭಾವದಿಂದ ವರ್ತಿಸಿದೆ. ನಮ್ಮ ಪಟ್ಟಮಹಾದೇವಿಯವರು, ನನ್ನಲ್ಲಿನ ಸಂಕುಚಿತ ಭಾವವನ್ನು ದೂರ ಮಾಡಿ, ಕರ್ತವ್ಯ ಪ್ರಜ್ಞೆಯನ್ನು ಮೂಡಿಸಿ, ಅದರ ಅನಂತ ಮುಖಗಳ ಸಾಕ್ಷಾತ್ಕಾರವನ್ನು ಮಾಡಿಕೊಟ್ಟರು. ನಾನು ಎಂಬುದನ್ನು ಸ್ವಲ್ಪ ಹಿಂದೆ ಸರಿಸಿ, ಕರ್ತವ್ಯವನ್ನು ಮುಂದಿಟ್ಟುಕೊಳ್ಳಬೇಕೆಂಬ ಅರಿವು ಮೂಡುವಂತೆ ಮಾಡಿದರು. ತಪ್ಪು ಮಾಡಿದೆ ಎಂದು ಹೇಳಿಕೊಳ್ಳುವಾಗ ನಿಮ್ಮೆದುರಿನಲ್ಲಿ ನನಗೇನು ಸಂಕೋಚವೆನಿಸಲಿಲ್ಲ. ತಪ್ಪು ಮಾಡಿದವನ ಮನಃಶುದ್ಧಿಗೆ ಇದಕ್ಕಿಂತ ಬೇರೊಂದು ಉಪಾಯವಿಲ್ಲ. ಇದರಿಂದ ಅವನು ಭಯದೂರನಾಗುತ್ತಾನೆ. ಅದರಿಂದ ಕಾರ್ಯ ನಿಷ್ಠೆಗೆ ಅವನ ಮನಸ್ಸು ಸಿದ್ಧವಾಗುತ್ತದೆ. ಆ ಕಾರ್ಯನಿಷ್ಠೆಯನ್ನು ಅರಮನೆ, ಇಂದು ಎಲ್ಲ ರೂವಾರಿಗಳಿಂದ, ದೇವಮಂದಿರ ನಿರ್ಮಾಣದಲ್ಲಿ ನಿರೀಕ್ಷಿಸುತ್ತಿದೆ. ನನ್ನದು ಹುಡುಗು ಬುದ್ಧಿ. ಅಪ್ರಬುದ್ಧ ಸೂತ್ರ ತಪ್ಪಿದ ಮಾತುಗಳು, ಭಾವಗಳು ನನ್ನ ಮಾತಿನಲ್ಲಿ ಇದ್ದಿರಬಹುದು. ಅವನ್ನು ಮನ್ನಿಸಿ ಮುಖ್ಯವಾದುದನ್ನು ಗ್ರಹಿಸಬೇಕಾಗಿ ವಿನಂತಿ. ಪಟ್ಟಮಹಾದೇವಿಯವರು ನಿಮ್ಮ ಮನಸ್ಸುಗಳನ್ನು ಅರಿಯಲು ಬಯಸುತ್ತಿದ್ದಾರೆ'' ಎಂದು ಮಾತು ನಿಲ್ಲಿಸಿದ.

ಅವನು ಮಾತಿನ ಓಘ, ಆತುರ, ಭಾವನೆಗಳ ಏರುಪೇರುಗಳನ್ನು ಗಮನಿಸಿದ ಶಾನ್ತಲದೇವಿ ಮನದೊಳಗೇ ಒಂದು ಬಗೆಯ ಸಮಾಧಾನ ತಂದುಕೊಂಡಳು. ಅವನು ಈ ರೀತಿ ಹೇಳುವನೆಂದು ಭಾವಿಸಿರಲಿಲ್ಲ. ಉದಯಾದಿತ್ಯ ಹೇಳಿದ್ದ ಮಾತುಗಳನ್ನು ತಿಳಿಸಿ, ರೂವಾರಿ ರೂವಾರಿಯಲ್ಲಿ ಅರಮನೆಗೆ ಭೇದವಿಲ್ಲ ಎಂಬುದಷ್ಟನ್ನು ಸೂಚಿಸು ಎಂದು ಆದೇಶ ನೀಡಿದ್ದಳು. ಅವನು ಆದೇಶ ಮೀರಿ ಏನು ಏನನ್ನೋ ಹೇಳಿದ್ದ. ಆದರೆ ಅವನ ಮಾತುಗಳನ್ನು ರೂವಾರಿಗಳು ಏಕಾಗ್ರಚಿತ್ತದಿಂದಲೇ ಕೇಳಿದ್ದರು. ಮಾತು ಮುಗಿದಿದ್ದರೂ ಯಾರೂ ಏನೂ ಮಾತನಾಡಲಿಲ್ಲ.

ಸ್ವಲ್ಪ ಸಮಯ ಕಾದಮೇಲೆ, "ಸ್ಥಪತಿಗಳ ಅಭಿಪ್ರಾಯವೇನು ?'' ಎಂದು ಕೇಳಿದಳು ಶಾನ್ತಲದೇವಿ.

"ಭಾವನೆ ಉತ್ತಮವಾದುದೆ. ಆದರೆ ಕೆಲಸ ಮಾಡುವವನೂ, ಮಾಡಿಸುವವನೂ ಸಮಾನವೆಂದಾಗ

ಅವನು ಹೇಳಿದ್ದನ್ನು ನಾನು ಯಾಕೆ ಮಾಡಬೇಕು ಎಂಬ ಭಾವನೆ ಬಂದು ಬಿಡುತ್ತದೆ. ಅದರಿಂದ ಐಕ್ಯತೆಯನ್ನು ಸಾಧಿಸಲು ಹೇಗೆ ಸಾಧ್ಯ ?'' ಎಂದು ಹರೀಶ ಕೇಳಿದ.

"ಅದನ್ನು ಹೇಗೆ ಸಾಧಿಸಬೇಕೆನ್ನುತ್ತೀರಿ ?''

"ಮಾಡಿಸುವವನು ಹೇಳಬೇಕು. ಮಾಡುವವನು ಅವನ ಆಜ್ಞಾಧಾರಕನಾಗಿರಬೇಕು. ದಣ್ಣಾಯಕರು ಹೇಳಿದಂತೆ ಸೈನ್ಯ ಕೇಳದಿದ್ದರೆ ಯುದ್ಧದ ಗತಿ ಏನು ?''

"ಅಲ್ಲಿ ಗುರಿ ಒಂದೇ. ಶತ್ರುಹನನ–ಅವನ ನಿರ್ಮೂಲನ. ಆದರೆ ಇಲ್ಲಿ ಕಲಾ ಸೃಷ್ಟಿಯಿದೆ. ಕಲ್ಪನಾ ವಿಲಾಸವಿದೆ. ವೈಯಕ್ತಿಕ ಪ್ರತಿಭೆಯಿದೆ. ವೈವಿಧ್ಯಕ್ಕೆ ಅವಕಾಶವಿದೆ. ಆತ್ಮಾನುಭವ ಆನಂದಗಳಿಗೆ ಎಡೆಯಿದೆ. ಕಲ್ಪಿತ ಸೌಂದರ್ಯದಲ್ಲಿ ಹೆಚ್ಚು ಕಳೆ ತುಂಬುವ ಕುಶಲತೆ ಅಡಗಿದೆ. ಇವೆಲ್ಲ ಮನಸ್ಸು ಸುಪ್ರೀತವಾದಾಗ ಮಾತ್ರ ಹೊಮ್ಮುತ್ತವೆ. ಅಧಿಕಾರ ದರ್ಪಗಳಿಂದ ಸಾಧ್ಯವಿಲ್ಲವೆಂಬುದು ನಮ್ಮ ಭಾವನೆ'' ಎಂದು ಒತ್ತಿ ಹೇಳಿದಳು ಶಾನ್ತಲದೇವಿ.

"ಪಟ್ಟಮಹಾದೇವಿಯವರ ಭಾವನೆ ಸರಿಯೆಂದು ತೋರುತ್ತದೆ'' ಎಂದು ಚಾವುಣ ಹೇಳಿದ.

"ಬಲಿಪುರದವರಲ್ಲಿ ಎಲ್ಲ ಒಂದೇ ಭಾವನೆ. ಅಂಕುಶದಿಂದ ಕಲೆ ಹೊಮ್ಮುವುದಿಲ್ಲ. ಅದು ಆತ್ಮಪ್ರೇರಣೆ, ಕಲ್ಪನೆಗಳ ಫಲ. ಅದು ಅಭಿವ್ಯಕ್ತಿ ಸ್ವಾತಂತ್ರ್ಯವಿದ್ದಾಗ ಮಾತ್ರ ಸಾಧ್ಯ'' ಎಂದು ಪದರಿ ಮಲ್ಲೋಜ ಹೇಳಿದ.

"ಹಾಗಾದರೆ ಸ್ಥಪತಿಗೇನು ಕೆಲಸ ?'' ಎಂದು ಹರೀಶ ಪ್ರಶ್ನಿಸಿದ.

"ಸ್ಥಪತಿ ಒಟ್ಟು ನಿರ್ಮಿತಿಯ ಯೋಜಕ. ನಿರ್ದೇಶಕ. ಕಲ್ಪನೆಯ ಪರಿಪೂರ್ಣ ಫಲ ಹೇಗಿರಬೇಕೆಂಬುನ್ನು ರೂವಾರಿ ರೂವಾರಿಗೆ ಮನದಟ್ಟು ಮಾಡುವ ಸೂತ್ರಧಾರ. ಅವನು ರೂವಾರಿಗಳ ಒಡೆಯನಲ್ಲ'' ಎಂದು ಕುಮಾರಮಾಚಾರಿ.

"ಅಭಿವ್ಯಕ್ತಿ ಸ್ವಾತಂತ್ರ್ಯವಿದೆಯೆಂದು ಒಬ್ಬೊಬ್ಬರೂ ಒಂದೊಂದು ಕಲ್ಪಿಸಿ ಕೆತ್ತಿಟ್ಟರೆ ಸ್ಥಪತಿಯ ಗತಿಯೇನು ?'' ಎಂದು ಹರೀಶ ಪ್ರಶ್ನಿಸಿದ.

"ಅಭಿವ್ಯಕ್ತಿ ಸ್ವಾತಂತ್ರ್ಯ ಎಂದರೆ ಕಡಿವಾಣವಿಲ್ಲದ ಹುಚ್ಚು ನಾಗಾಲೋಟವಲ್ಲ. ತನಗೇನು ಬೇಕೆಂಬುದನ್ನು ಸ್ಥಪತಿ ಮನದಟ್ಟು ಮಾಡಿ ತಾನು ಕಲ್ಪಿಸಿದ ರೂಪಚಿತ್ರಿಸಿ ಕೊಟ್ಟರೆ ಅದರಂತೆ ಪ್ರತಿಕೃತಿ ಮಾಡಿಕೊಡುವ ಕೆಲಸ ರೂವಾರಿಯದು. ಅಲ್ಲಿರುವ ಅಭಿವ್ಯಕ್ತಿ ಸ್ವಾತಂತ್ರ್ಯ ರೂವಾರಿಯದು. ಅಭಿವ್ಯಕ್ತ ಮಾಡುವ ರೂವಾರಿಯ ಕೈ ಹಿಡಿದ ಉಳಿ ಚಾಣಗಳು ಹೀಗೆ ಹಿಡಿಯಬೇಕು, ಅವುಗಳಿಗೆ ಮೇಲಿಂದ ಬೀಳುವ ಏಟು ಈ ಕೋಣದಿಂದ ಬೀಳಬೇಕು, ಪ್ರಹಾರದ ಒತ್ತಡ ಇಂತಿಷ್ಟೇ ಇರಬೇಕು ಎಂದು ಹೇಳುತ್ತ ಹೋಗುವವನು ಸ್ಥಪತಿಯಾಗಲಾರ. ಅವನು ದಂಡನ್ಯಾಯಾಧೀಶನ ತೀರ್ಪನ್ನು ಕಾರ್ಯರೂಪಕ್ಕೆ ತರುವ ಕಟುಕಾಧಿಕಾರಿಯಾಗುತ್ತಾನೆ. ಅದು ಕಲೆಗೆ ಅನ್ಯಾಯವೆಸಗಲು ಕಾರಣವಾಗುತ್ತದೆ'' ಎಂದು ನಾಗೋಜ ನುಡಿದ.

ಮಾತು ಎತ್ತಲೋ ಜಾರಿತೆಂಬ ಶಂಕೆ ಶಾನ್ತಲದೇವಿಯಲ್ಲಿ ತಲೆದೋರಿತು. ಅವಳು ಕೂಡಲೇ, "ಇಲ್ಲಿ ಸೇರಿರುವ ಕೂಡುಹ ಒಬ್ಬೊಬ್ಬರ ಸ್ಥಾನಮಾನ ಕರ್ತವ್ಯಗಳ ಬಗೆಗೆ ಚರ್ಚಿಸಲು ಅಲ್ಲ. ಸಮಗ್ರ ಕೃತಿ ಹೇಗೆ ರೂಪಿಸಬೇಕು ಎಂಬುದನ್ನು ಚಿಂತನ ಮಾಡಲು. ಕಲೆಗಾರನಿಗೆ ಅಭಿವ್ಯಕ್ತಿ ಸ್ವಾತಂತ್ರ್ಯವಿದ್ದೇಯಿದೆ.

ಆ ಸ್ವಾತಂತ್ರ್ಯವಿದ್ದಲ್ಲಿ ಮಾತ್ರ ನಮಗೆ ಕಲೆಗಾರನನ್ನು ಗುರುತಿಸಲು ಸಾಧ್ಯವಾಗುತ್ತದೆ. ಕುಸುರಿ ಕೆಲಸ ಮಾಡುವ ಕೈಗಳಲ್ಲಿನ ಭಿನ್ನತೆ ಏನು, ಧಾಟಿ ಏನು, ಎನ್ನುವುದು ಕೃತಿಗಳ ಮೇಲಿಂದ ಗುರುತಿಸಲು ಸಾಧ್ಯವಾಗುವ ವ್ಯಕ್ತಿತ್ವವನ್ನು ಪ್ರತಿ ಕಲೆಗಾರನೂ ತನ್ನದಾಗಿಸಿಕೊಂಡಿರುತ್ತಾನೆ. ಅದರಿಂದಲೇ ಕೃತಿಯಲ್ಲಿ ಕಲೆಗಾರನನ್ನು ಕಾಣಲು ಸಾಧ್ಯವಾಗುತ್ತದೆ. ಇಲ್ಲಿ ನಿರ್ಮಾಣವಾಗಲಿರುವ ದೇವಮಂದಿರದಲ್ಲಿ ಆ ರೀತಿ ಪ್ರತಿ ಕಲೆಗಾರರನನ್ನೂ ಗುರುತಿಸುವ ಕಲೆ ಉತ್ಪನ್ನವಾಗಬೇಕು. ಮತ್ತು ಕಲೆ ಒಮ್ಮೆ ಮಾಡಿದ ಕಲ್ಪನೆಗಿಂತ ಹೆಚ್ಚು ಸುಂದರವಾದ ಕಲ್ಪನೆ ಹೊಂದುವ ಸಾಧ್ಯತೆಯಿದ್ದರೆ ಹಿಂದಿನ ಕಲ್ಪನೆಗೇ ಅಂಟಿ ಕೂಡಬಾರದು. ಹೊಸ ಅಭಿವ್ಯಕ್ತಿ ವಿಸ್ಫುರಿಸುವುದಕ್ಕೆ ತೆರೆದ ಮನಸ್ಸಿನ ಅವಕಾಶ ಕಲೆಗಾರರಿಗೆ ನೀಡಬೇಕು. ಅರಮನೆಯ ವಶಕ್ಕೆ ಈಗಿನ ಸಂದರ್ಭದಲ್ಲಿ ಈ ಬಗೆಯ ಹೊಸ ಅಭಿವ್ಯಕ್ತಿಯೆಂದು ಕಾಣುವ ಚಿತ್ರಗುಚ್ಛ ಸಿಕ್ಕಿದೆ. ಅದನ್ನು ಈ ರೂವಾರಿ ಸಭೆಯಲ್ಲಿ ಮಂಡಿಸಿ ತಮ್ಮಗಳ ಅಮೂಲ್ಯ ಭಾವನ, ಸಲಹೆಗಳನ್ನು ತಿಳಿಯುವ ಬಯಕೆ ನನಗಿದೆ. ಬಿಟ್ಟಿ ಆ ಕಡತವನ್ನು ಸ್ಥಪತಿಗಳ ಕೈಗೆಕೊಡು. ಎಲ್ಲರೂ ಅವನ್ನು ನೋಡಲಿ'' ಎಂದಳು ಶಾನ್ತಲದೇವಿ.

ಕುವರ ಬಿಟ್ಟಿಯಣ್ಣ ಕಡತವನ್ನು ಹರೀಶನ ಕೈಗೆ ಕೊಟ್ಟ ಅವನು ಅದರೊಳಗಿನ ಚಿತ್ರಗಳನ್ನು ನೋಡತೊಡಗಿದ.

"ಒಂದು ವಿಷಯ. ಇದನ್ನು ನೋಡಲು ಸಾಕಷ್ಟು ಸಮಯ ಹಿಡಿಯುತ್ತದೆ ಎಂಬುದು ನನಗೆ ಗೊತ್ತು. ಏಕೆಂದರೆ ನಾನಾಗಲೇ ಅವನ್ನೆಲ್ಲ ನೋಡಿದ್ದೇನೆ. ತಾವುಗಳೆಲ್ಲ ನೋಡಿ ಮುಗಿಸುವಷ್ಟು ಸಮಯದಲ್ಲಿ ನನಗಿರುವ ಬೇರೆ ಕೆಲಸ ನೋಡಿಕೊಂಡು ಬರುತ್ತೇನೆ. ಇಲ್ಲಿ ತಮ್ಮ ನೆರವಿಗೆ ಬಿಟ್ಟಿ ಇರುತ್ತಾನೆ'' ಎಂದು ಹೇಳಿ ಶಾನ್ತಲದೇವಿ ಅಲ್ಲಿಂದ ಅಂತಃಪುರದೊಳಕ್ಕೆ ಹೊರಟುಹೋದಳು.

ಯಾತ್ರಿಕ ರೂವಾರಿ ಸಿದ್ಧಮಾಡಿದ ಚಿತ್ರಗಳನ್ನು, ಇತ್ತ ರೂವಾರಿಗಳು ಅತ್ಯಂತ ಉತ್ಸಾಹದಿಂದ ನೋಡುತ್ತಿದ್ದರು.

ಅತ್ತ ಅಂತಃಪುರದಲ್ಲಿ ಪ್ರವೇಶಿಸಿದ ಶಾನ್ತಲದೇವಿ, ಯಾತ್ರಿಕ ರೂವಾರಿ ಕುಳಿತಿದ್ದ ಮನ್ತ್ರಣಸಾಲೆಯ ಖಾಸಾ ಕೊಠಡಿಯೊಂದರೊಳಕ್ಕೆ ಕಾಲಿಡುತ್ತಿದ್ದ ಹಾಗೆಯೇ ಅವನು ಎದ್ದು ವಂದಿಸಿದ. "ಕೂಡಿ, ಕೂಡಿ'' ಎನ್ನುತ್ತಾ ಶಾನ್ತಲದೇವಿ ಕುಳಿತಳು. ಅವನೂ ಕುಳಿತ.

ರೇವಿಮಯ್ಯ ಬಾಗಿಲನ್ನು ಮುಚ್ಚಿ ಕೊಠಡಿಯ ಒಳಗೆ ಬಾಗಿಲನ್ನು ಆತು ನಿಂತಿದ್ದ.

"ಸನ್ನಿಧಾನದ ತಂದೆಯವರ ಆರೋಗ್ಯ ಹೇಗಿದೆ ?'' ಎಂದು ರೂವಾರಿ ಪ್ರಶ್ನಿಸಿದ.

"ಈಗ ಉತ್ತಮಗೊಂಡಿದ್ದಾರೆ. ಅವರ ಜಾತಕ ನಿಮಗೆ ಕೊಡುತ್ತೇನೆ. ನೀವು ನೋಡಿ ನಿರ್ಣಾಯಕವಾಗಿ ಅವರ ಭವಿಷ್ಯವನ್ನು ಹೇಳಬಹುದಲ್ಲ.''

"ನನಗೆ ಶಿಲ್ಪವಿದ್ಯೆ ಗೊತ್ತು.''

"ಅದು ಹೇಳಬೇಕಾಗಿಲ್ಲ. ನೀವು ಆ ಶಾಸ್ತ್ರದಲ್ಲಿಯಷ್ಟೇ ಅಲ್ಲ. ಎಲ್ಲ ಲಲಿತ ಕಲೆಗಳಲ್ಲೂ ನಿಷ್ಣಾತರು ಎಂಬುದು ನನಗೆ ಅರ್ಥವಾಗಿದೆ. ಜೊತೆಗೆ ವೇದ ಶಾಸ್ತ್ರ ಪುರಾಣಾದಿಗಳೆಲ್ಲವೂ ನಿಮಗೆ ಚೆನ್ನಾಗಿ ಗೊತ್ತೆಂಬುದು ನೀವು ರೂಪಿಸಿರುವ ಚಿತ್ರಗಳಿಂದಲೇ ಗುರುತಿಸಬಹುದು. ದೇವೀದೇವತೆಗಳ ಆಕಾರ ರೂಪಗಳನ್ನು ವರ್ಣಿಸುವ ಎಲ್ಲ ಶ್ಲೋಕಗಳೂ ನಿಮಗೆ ಕಂಠಸ್ತವಾಗಿರಬೇಕು. ಅದಿರಲಿ. ನೀವು ಜಾತಕವನ್ನು ನೋಡಿ ಹೇಳುವಿರಿ ತಾನೇ ?''

"ನೋಡಬಹುದು. ಆದರೆ ಫಲ ಜೋತಿಷ್ಯ ವಾಕ್ಸಿದ್ಧಿಯಿಲ್ಲದೆ ಸಿದ್ಧಿಸುವುದಿಲ್ಲ. ನಾನು ಅಲೆಮಾರಿಯಾಗಿ ಕೇವಲ ತಾತ್ಪೂರ್ತಿಕವಾದ ವೈಯಕ್ತಿಕ ಕರ್ಮಾನುಷ್ಠಾನವಷ್ಟನ್ನೇ ಮಾಡಿಕೊಂಡು ಬಂದಿರುವವನು. ಅಂತರಂಗ–ಬಹಿರಂಗ ಶುದ್ಧಿ, ನಿತ್ಯನಿಷ್ಠೆಯಿಂದ, ಯಾವ ಉನ್ನತ ಮಟ್ಟದಲ್ಲಿರಬೇಕೋ ಆ ಮಟ್ಟದಲ್ಲಿ ನಾನಿದ್ದೇನೆ ಎಂಬ ನಂಬಿಕೆಯೇ ನನಗಿಲ್ಲದಾಗ ಫಲಜ್ಯೋತಿಷ್ಯದ ಬಗೆಗೆ ಹೇಳಬಾರದು."

"ಮತ್ತೆ ಮಹಾಸನ್ನಿಧಾನ ಜೈತ್ರಯಾತ್ರೆ ಹೊರಟ ಮುಹೂರ್ತವನ್ನು ಕುರಿತು ಆಗಲೇ ಭವಿಷ್ಯ ಹೇಳಿದ್ದೀರಲ್ಲ."

"ಅದು ಇಲ್ಲಿಯವರೆಗೂ ಬಂತೋ" ಎಂದು ರೇವಿಮಯ್ಯನತ್ತ ದೃಷ್ಟಿ ಹೊರಳಿಸಿ ನೋಡಿ ಮತ್ತೆ, "ಆ ಹೊತ್ತಿನಲ್ಲಿ ಹಾಗೆಂದು ಥಟ್ಟನೆ ಅಂತರಂಗಕ್ಕೆ ಅನ್ನಿಸಿತು. ಆಡಿ ಬಿಟ್ಟೆ ಆ ಪ್ರೇರಣ ಸ್ವಪ್ರಯತ್ನದ್ದಲ್ಲ. ಆ ಬಗೆಯ ಪ್ರೇರಣೆಗೆ ಸತ್ಯಕ್ತಿ ಇದೆ. ಪ್ರಯತ್ನ ಪೂರ್ವಕ ಸಿದ್ಧಿ ದೊರಕಬೇಕಾದರೆ ಕ್ರಿಯಾಶುದ್ಧಿ, ಔಪಾಸನಾ ಶುದ್ಧಿ, ಮನಃ ಶಾಂತಿ ಎಲ್ಲವೂ ಆವಶ್ಯಕ."

"ಸರಿ. ನನ್ನ ಅಭಿಲಾಷೆ ತಿಳಿಸಿದ್ದೇನೆ. ನಿಮಗೆ ನೋಡಿ ಹೇಳಬಹುದು ಎನ್ನಿಸಿದಾಗ ಹೇಳಬಹುದು. ಆತುರವೇನಿಲ್ಲ, ನಿಮ್ಮ ಸ್ವವಿಷಯ ಕೇಳುತ್ತೇನೆಂದು ನೀವು ಅನ್ಯಥಾ ಭಾವಿಸಬಾರದು. ಈ ಎರಡು ದಿವಸ ನೀವಿಲ್ಲಿ ಏಕೆ ನಿಲ್ಲಲಿಲ್ಲ ? ಎಲ್ಲಿಗೆ ಹೋಗಿದ್ದಿರಿ ?"

"ಹೇಳಲೇ ಬೇಕೆ ?" ಒಂದು ಬಗೆಯ ವಿಷಾದದ ಛಾಯೆ ಅವನ ಮುಖದ ಮೇಲೆ ಪಸರಿಸಿತು.

"ಒತ್ತಾಯವಿಲ್ಲ. ಕುತೂಹಲವೆನ್ನಿಸಿತು. ಅರಮನೆಯ ಅತಿಥಿಗಳಾಗಿ ಇರಿ ಎಂದು ಹೇಳಿದಾಗ ಜನ ಉತ್ಸಾಹಭರಿತರಾಗುವುದನ್ನೇ ಕಂಡ ಅರಮನೆಯವರಿಗೆ ಬಸವನ ಹುಳುವಿನ ನಿಮ್ಮ ರೀತಿ ಸೋಜಿಗವೆನಿಸಿತು. ಅದರಿಂದ ಕೇಳಿದೆ ಅಷ್ಟೆ"

"ನನಗೆ ಜನ ಸಂಪರ್ಕ ಅಷ್ಟು ಇಷ್ಟವಿಲ್ಲ. ಹತ್ತು ಜನ ಕುಳಿತರೆ ತಲೆಗೊಂದು ಸೊಲ್ಲು. ಒಮ್ಮೆ ಸ್ವೇಚ್ಛಾ ಸೊಲ್ಲಿನಲ್ಲಿ ತೊಡಗಿದರೆ ಅದಕ್ಕೆ ನೆಲೆಯೇ ಸಿಕ್ಕುವುದಿಲ್ಲ. ಅದು ಎತ್ತ ಸಾಗೀತೆಂಬುದೂ ತಿಳಿಯುವುದಿಲ್ಲ. ಅದರಿಂದ ನಾನು ಕೆಲಸವಿಲ್ಲದಿದ್ದಾಗ ಏಕಾಂತ ಬಯಸುತ್ತೇನೆ."

"ಅದೂ ಸರಿಯೆ. ಸ್ವವಿಷಯ ಬೇಡ. ನನಗೊಂದು ಸಮಸ್ಯೆ ಹುಟ್ಟಿದೆ. ನಾನು ತೆರೆದ ಮನಸ್ಸಿನಿಂದ ಎಲ್ಲವನ್ನೂ ವಿಚಾರ ಮಾಡುತ್ತೇನೆ. ನನ್ನ ಗುರುಗಳು ಅದನ್ನೇ ನನಗೆ ಬೋಧಿಸಿದರು. ಕಲ್ಪನಾಲೋಕದಲ್ಲಿಯೇ ಸದಾ ವಿಹರಿಸುವ ಕಲೆಗಾರ ತನ್ನ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಅತಿಗೊಯ್ದು, ಹಟಮಾರಿಯಾಗುವ ಸಂಭವವೂ ಇದೆ. ಸಾಮೂಹಿಕ ಕೆಲಸದಲ್ಲಿ ಆ ಬಗೆಯ ಹಟಮಾರಿತನ ಬಂದರೆ ಅದರ ಫಲವಾಗಿ ಅನೇಕ ತೊಡಕುಗಳು ಉದ್ಭವವಾಗುತ್ತವೆ. ಅಲ್ಲವೆ ?"

"ನನ್ನಲ್ಲಿ ಈ ಬಗೆಯ ಹಟಮಾರಿತನವಿದೆಯೆಂದು ಸನ್ನಿಧಾನ ಗುರುತಿಸಿದೆಯೆ ?"

"ಯಾರೊಬ್ಬರ ಹಟಮಾರಿತನ ಕುರಿತೂ ನಾನು ಹೇಳಲಿಲ್ಲ. ಅದಿದ್ದರೆ ಸಾಮೂಹಿಕ ಕೆಲಸದಲ್ಲಿ ತೊಡಕು ಬರುತ್ತದೆಯೆಂದು ಹೇಳಿದೆ ಅಷ್ಟೆ. ಕಲೆಯ ಉಪಯೋಗ ಸೌಂದರ್ಯ ಸೃಷ್ಟಿಗೆ. ಆ ಸೌಂದರ್ಯ ಸೃಷ್ಟಿಯಲ್ಲಿ ಸುರುಚಿ ಎದ್ದು ಕಾಣಬೇಕು. ಮನಸ್ಸು ಆನಂದಪಡಬೇಕು. ಅಲ್ಲಿ ಹೇಸಿಗೆ ಮೂಡಲು ಅವಕಾಶ ಇರಬಾರದು. ಅಥವಾ ಆ ಕಲೆ ಕೀಳು ಅಭಿರುಚಿಯನ್ನು ಪ್ರಚೋದಿಸಬಾರದು ಎನ್ನಬಹುದು. ನಿಮ್ಮ ಅಭಿಪ್ರಾಯ ?"

"ರುಚಿ ಹುಟ್ಟುವುದು ಸಂಸ್ಕಾರದ ಫಲ. ಒಂದು ಸುಂದರ ವಸ್ತುವನ್ನು ನೋಡಿ ಎಷ್ಟು ಚೆನ್ನಾಗಿದೆ ಎನ್ನುವವರೂ ಇದ್ದಾರೆ. ಇದು ನನ್ನದಾಗಿದ್ದಿದ್ದರೆ ಎನ್ನುವವರೂ ಇದ್ದಾರೆ. ಇಂತಹ ಸುಂದರವಾದುದು ಅನ್ಯರ ಪಾಲಾಯಿತಲ್ಲ ಎನ್ನುವವರೂ ಇದ್ದಾರೆ. ಮೂವರ ಸಂಸ್ಕಾರವೂ ಬೇರೆ ಬೇರೆ. ಅವರಿದಿರಿಗೆ ಕಲಾವಸ್ತು ಇಟ್ಟಾಗ ಮೂವರದೂ ಬೇರೆ ಅಭಿಪ್ರಾಯವಾಗಬಹುದು."

"ಅಂದರೆ ಕಲೆಗಾರ ಸೃಷ್ಟಿಸಿದ್ದೆಲ್ಲ ಉತ್ತಮವೆಂದು ನಿಮ್ಮ ಭಾವನೆಯೆ ?"

"ಕಲೆಗಾರನೂ ಮನುಷ್ಯನೆ ? ಅವನಿಗೂ ಸಂಸ್ಕಾರವೆಂಬುದಿದೆ. ಸೃಷ್ಟಿಸಿದ ಕಲೆಯಿಂದ ಕಲೆಗಾರ ಸಂಸ್ಕಾರದ ಸ್ವರೂಪವನ್ನು ಮನಗಾಣಲು ಸಾಧ್ಯವಾಗಬಹುದು.

"ಈಗ ನೀವು ಚಿತ್ರಿಸಿಕೊಟ್ಟಿದ್ದೀರಲ್ಲ ಕಡತ. ಅದಿಷ್ಟನ್ನೂ ನೀವು ಎರಡೇ ದಿನಗಳಲ್ಲಿ ಚಿತ್ರಿಸಿದಿರಾ?"

"ಅದು ಮಾತ್ರ ಅತಿಮಾನವರ ಮಾತಾಯಿತು. ನಾನು ಹಾಗೆಲ್ಲಿ ಹೇಳಿದೆ ?"

"ನಿಮ್ಮನ್ನು ಕಂಡ ಮೇಲೆ ನೀವು ಬೇಡಿದುದು ಅಷ್ಟೇ ಕಾಲವಲ್ಲವೆ ?"

"ಯಾವುದೋ ಒಂದು ಕಾಲಕ್ಕೆ ಒಂದು ಕಲ್ಪನೆ ಮೂಡಿತ್ತು. ಆ ಕಲ್ಪನೆಯನುಸಾರ ನನಗೆ ಬಿಡುವಾದಾಗಲೆಲ್ಲ ಚಿತ್ರಿಸುತ್ತಾ ಹೋಗಿದ್ದೆ. ಸನ್ನಿಧಾನ ಸೂಚಿಸಿದಾಗ ನನ್ನಲ್ಲಿ ಒಂದು ಸಂದಿಗ್ಧ ತಲೆದೋರಿತು."

"ಏನದು ?"

"ಈಗಾಗಲೇ ಸ್ಥಲ ನಿರ್ದೇಶವಾಗಿ ಅದರ ಶಾಸ್ತ್ರೋಕ ಶುದ್ಧೀಕರಣ ನಡೆದು ಶಂಕುಸ್ಥಾಪನೆಯೂ ಆಗಿಬಿಟ್ಟಿದೆ. ಶಂಕುಸ್ಥಾಪನೆ ವಾಸ್ತುಶಿಲ್ಪದಲ್ಲಿನ ಕ್ರಮದಂತೆ ಆಗಿದೆ. ನಾನು ಒಪ್ಪಿಸುವ ಚಿತ್ರ ನಕ್ಷೆಗಳು ಒಪ್ಪಿತವಾದರೆ ಶಂಕುವನ್ನು ಕದಲಿಸದೆ ಅಲ್ಲಿಗೇ ಉಳಿದೆಲ್ಲವನ್ನು ಅಳವಡಿಸಲು ಸಾಧ್ಯವೇ ಎಂಬುದನ್ನು ನಿರ್ಣಯಿಸಿ ಅದಕ್ಕೆ ಸಮಗ್ರ ನಕ್ಷೆಯನ್ನು ಅಳವಡಿಸಬೇಕಾಗಿತ್ತು. ನನ್ನ ಕಲ್ಪನಾಮಂದಿರವನ್ನು, ಅದರ ಅಳತೆಗಳನ್ನು ಸಿದ್ಧವಾದ ಯೋಜನೆಯ ಆಯಕಟ್ಟಿಗೆ ಹೊಂದಿಸಬೇಕಾಗಿತ್ತು. ಅದಕ್ಕಷ್ಟೆ ನಾನು ಸಮಯ ಬೇಡಿದ್ದೆ."

"ಅಂದರೆ ಶಂಕು ಬದಲಿಸದಂತೆ ಈ ಮಂದಿರ ನಿರ್ಮಾಣವಾಗಬೇಕೆಂಬುದು ನಿಮ್ಮ ಗುರಿಯೇ?"

"ಹಾಗಿಲ್ಲದಿದ್ದರೆ ಮತ್ತೆಷ್ಟು ಕಾಲ ವ್ಯರ್ಥವಾಗುತ್ತದೆ ? ಮಹಾಸನ್ನಿಧಾನ ಜಯಮಾಲೆ ಧರಿಸಿ ಹಿಂತಿರುಗುವಷ್ಟರಲ್ಲಿ ಮೂಲಮಂದಿರ ನಿರ್ಮಾಣವಾದರೂ ಮುಗಿದಿರಬೇಡವೆ ?"

"ಅಂದರೆ ನಿಮ್ಮ ನಕ್ಷೆ ಒಪ್ಪುತ್ತಾರೆಂದು ನೀವು ಖಾತ್ರಿ ಮಾಡಿಕೊಂಡಂತೆ ಕಾಣುತ್ತದೆ."

"ಆ ಬಗೆಯ ಖಾತ್ರಿಯೂ ಇಲ್ಲ. ಕಕಲಾತಿಯೂ ನನಗಿಲ್ಲ. ಒಂದು ವೇಳೆ ಒಪ್ಪಿತವಾದರೆ, ಹೊಸತೊಡಕು ಇರಬಾರದೆಂಬುದಷ್ಟೆ ನನ್ನ ಗುರಿಯಾಗಿತ್ತು."

"ಒಂದು ವೇಳೆ ಅದು ಒಪ್ಪಿತವಾದರೆ ನೀವು ಸ್ಥಪತಿಯಾಗಿ ಕೆಲಸ ಮಾಡುತ್ತೀರಾ ?"

"ಈಗಾಗಲೆ ಒಬ್ಬರಿದ್ದಾರೆ. ಅವರೇ ಮುಂದುವರಿದರೆ ಒಳ್ಳೆಯದಲ್ಲವೆ ?"

"ಇದನ್ನು ಕಲ್ಪಿಸಿ ಸೃಷ್ಟಿಸಿದವರು ನೀವು. ನೀವೇ ಸ್ಥಪತಿ ಆದರೆ ಅದರಂತೆ ಮಂದಿರ ನಿರ್ಮಿತವಾಗಲು ನೀವು ಮಾರ್ಗದರ್ಶನ ನೀಡಲು ಅನುಕೂಲವಾಗುತ್ತದೆ."

"ಅದಕ್ಕೆ ಸ್ಥಾನ ಏಕೆ ಬೇಕು ? ನಾನು ಅದು ಮುಗಿಯುವವರೆಗೂ ಇಲ್ಲೇ ಇರುತ್ತೇನೆ, ಸನ್ನಿಧಾನ ಹಾಗೆ ಬಯಸಿದರೆ, ಸ್ಥಪತಿಗಳು ಏನಾದರೂ ಕೆಲಸ ವಹಿಸಿದರೆ ಅವನ್ನೂ ನಾನು ಮಾಡುತ್ತೇನೆ."

"ನೋಡೋಣ. ಪ್ರಭುಗಳು ಇದ್ದಿದ್ದರೆ ನನಗೆ ಹೆಚ್ಚು ಅನುಕೂಲವಿರುತ್ತಿತ್ತು.... ರೇವಿಮಯ್ಯ, ರೂಪಾರಿಗಳು ಏನು ಮಾಡುತ್ತಿದ್ದಾರೆ ನೋಡಿ ಬಾ. ನಾವು ಅಲ್ಲಿಗೆ ಮತ್ತೆ ಹೋಗಬೇಕೆಂಬುದು ನಿನಗೆ ಗೊತ್ತಲ್ಲ."

"ನೆನಪಿದೆ" ಎಂದರೂ ಅಲ್ಲೇ ನಿಂತ ರೇವಿಮಯ್ಯ ಕದಲಲಿಲ್ಲ.

"ಏಕೆ ?"

"ರೂಪಾರಿಗಳನ್ನೂ ಕರೆದೊಯ್ಯಬೇಕೇನೋಂತ ನಿಂತೆ" ಎಂದ.

"ನೀನು ಅಲ್ಲಿಗೆ ಹೋಗಿ ಬರುವವರೆಗೆ ಇಲ್ಲೇ ಇರುತ್ತಾರೆ. ಹೊರಗೆ ಯಾರಿದ್ದಾರೆ ?"

"ಬೋಕಣ ಇದ್ದಾನೆ."

"ನೀನು ಬರುವವರೆಗೆ ಅವನು ಇಲ್ಲಿ ಒಳಗಿರಲಿ. ಅದೇ ತಾನೆ ನಿನ್ನಿಷ್ಟ. ಹಾಗೆಯೇ ಮಾಡು."

ರೇವಿಮಯ್ಯ ಬಾಗಿಲು ತೆಗೆದು ಒಳಗೊಂದು ಹೊರಗೊಂದು ಕಾಲಿಟ್ಟು ಬೋಕಣನನ್ನು ಕೈ ಸನ್ನೆಯಿಂದ ಕರೆದು, "ನಾನು ಹಿಂತಿರುಗುವವರೆಗೆ ನೀನು ಒಳಗಡೆ ಇರಬೇಕೆಂದು ಪಟ್ಟಮಹಾದೇವಿಯವರ ಅಪ್ಪಣೆಯಾಗಿದೆ. ಬಾ ಬೋಕಣ" ಎಂದ.

ಬೋಕಣ ಬರುತ್ತಲೂ ಅವನು ಹೊರಟು ಹೋದ. ಬೋಕಣ ಒಳಗೆ ಬಂದು ಬಾಗಿಲು ಹಾಕಿ ಅದಕ್ಕೆ ಆತು ನಿಂತುಕೊಂಡ.

ರೂಪಾರಿಗೆ ಇದೆಲ್ಲ ಏಕೆಂಬುದು ಗೊತ್ತಾಗಲಿಲ್ಲ. ಕೇಳುವ ಧೈರ್ಯವೂ ಆಗಲಿಲ್ಲ. ಸ್ವಲ್ಪ ಸಮಯದಲ್ಲಿಯೇ ರೇವಿಮಯ್ಯ ಹಿಂತಿರುಗಿ, "ಪಟ್ಟಮಹಾದೇವಿಯವರನ್ನು ರೂಪಾರಿಗಳ ಕೂಡುಹ ನಿರೀಕ್ಷಿಸುತ್ತಿದೆ" ಎಂದ.

"ರೇವಿಮಯ್ಯ ನೀನು ಇವರೊಂದಿಗೆ ಇಲ್ಲೇ ಇರು. ಬೋಕಣನ ಹಿಂದೆ ನಾನು ಹೋಗುತ್ತೇನೆ. ಹೇಳಿ ಕಳಿಸಿದಾಗ ನೀನು ರೂಪಾರಿಗಳನ್ನು ಕೂಡುಹಕ್ಕೆ ಕರೆದು ತಾ" ಎಂದು ಅವಳು ತನ್ನಾಸನದಿಂದ ಎದ್ದಳು.

ಬೋಕಣ ತೆರೆಸರಿಸಿ ದಾರಿಮಾಡಿದ. ಶಾನ್ತಲದೇವಿ ಕೂಡುಹಕ್ಕೆ ಹೋಗಿ ಮಂಡಿಸಿದಳು. ನಂತರ, "ಸ್ಥಪತಿಗಳೇ, ಎಲ್ಲರೂ ಕಡತನದಲ್ಲಿನ ಚಿತ್ರ, ನಕ್ಷೆಗಳನ್ನು ನೋಡಿಯಾಯಿತೆ ?" ಎಂದು ಕೇಳಿದಳು.

"ಆಯಿತು" ಎಂದ ಹರೀಶ.

"ಹೇಗೆ ಇವೆ ?" ಎಂದು ನೇರವಾಗಿ ಪ್ರಶ್ನಿಸಿದಳು ಶಾನ್ತಲದೇವಿ.

"ಹಿರಿಯರಾದ ದಾಸೋಜರು, ಗಂಗಾಚಾರಿಯವರು ಹೇಳಲಿ." ಎಂದ ಹರೀಶ.

"ನಮ್ಮ ಅಭಿಪ್ರಾಯ ಕಡೆಗೆ. ನಾವು ಹಳೆಯಕಾಲದ ಜನ. ಇಲ್ಲಿ ನವ ಕಲ್ಪನೆ ಇದೆ. ಅದರಿಂದ ನಮಗಿಂತ ಈಚಿನ ಪೀಳಿಗೆಯವರು ತಮ್ಮ ಅಭಿಪ್ರಾಯ ಹೇಳಲಿ" ಎಂದು ದಾಸೋಜ ಹೇಳಿದ.

"ಅದೂ ಸರಿಯೆ. ಎಲ್ಲರಿಗಿಂತ ಕಿರಿಯರು ಕುಮಾರ ಚಾವುಣರು. ಅವರು ಮೊದಲು ತಮ್ಮ ಅಭಿಪ್ರಾಯ ಹೇಳಲಿ'' ಎಂದಳು ಶಾನ್ತಲದೇವಿ.

ಅವನು ಸಂಕೋಚದಿಂದ ತಲೆಯಲ್ಲಾಡಿಸಿದ.

"ಹೇಳು ಪರವಾಗಿಲ್ಲ'' ಎಂದು ದಾಸೋಜನೇ ಮಗನನ್ನು ಪ್ರೋತ್ಸಾಹಿಸಿದ.

ಅವನು ತುಂಬ ಸಂಕೋಚದಿಂದ ಎದ್ದು ನಿಂತು ಕೈ ಮುಗಿದು ರೂವಾರಿ ಸಮೂಹಕ್ಕೆ ವಂದಿಸಿ, "ನಾನು ಅನನುಭವಿ. ನಮ್ಮ ಮನೆತನ ಪ್ರಸಿದ್ಧಿ ಪಡೆದ ಬಲಿಪುರದ ರೂವಾರಿ ಮನೆತನ. ನನ್ನ ಜನ್ಮದಾತರು ಹಾಗು ಗುರುವಾಗಿರುವ ನನ್ನ ತೀರ್ಥರೂಪರಿದಿರಿಗೆ ನಿಜವಾಗಿ ನನ್ನ ಹೃದಯಕ್ಕೆ ಹೊಳೆದುದನ್ನು ಹೇಳಲು ಅಂಜಿಕೆಯಾಗುತ್ತದೆ. ಅದರಂತೆ ಇಲ್ಲಿ ಹಿರಿಯರಾದ ತಾವುಗಳೆಲ್ಲರೂ ಇದ್ದೀರಿ. ತಮ್ಮಿದಿರಿಗೂ ಹೇಳಲು ಅಂಜಿಕೆಯಾಗುತ್ತದೆ. ನಾನು ಹಾಗೆಂದು ಹೇಳಿದರೆ ಸತ್ಯ ಹೇಳಲು ಅಂಜುತ್ತೇನೆಂದು ಯಾರೂ ಭಾವಿಸಬಾರದು. ನನ್ನ ಮಾತು ಯಾರಿಗಾದರೂ ಅಪಥ್ಯವೆನಿಸಿದರೆ ಅವರು ನನ್ನ ಸತ್ಯಪ್ರಿಯತೆಯತ್ತ ದೃಷ್ಟಿ ಹೊರಳಿಸಿ ಕ್ಷಮಿಸಬೇಕೆಂದು ವಿನಂತಿಸಿಕೊಳ್ಳುತ್ತೇನೆ. ಈ ಕಡತದಲ್ಲಿರುವ ಚಿತ್ರಗಳನ್ನು ಕಲ್ಪಿಸಿ ಒಂದು ಸುಂದರ ವಿಶ್ವವನ್ನೇ ಸಾಕಾರರೂಪದಲ್ಲಿ ಕಣ್ಮನಗಳಲ್ಲಿ ಮೂಡುವಂತೆ ಮಾಡುವ ಕೆಲಸ ಸಾಮಾನ್ಯ ರೂವಾರಿಯಿಂದ ಸಾಧ್ಯವಿಲ್ಲ. ಶ್ರೇಷ್ಠ ರೂವಾರಿಗಳಿಗೆ ಬಿರುದನ್ನಿತ್ತು ನಾಡು ಗೌರವಿಸುತ್ತದೆ. ಆ ಬಿರುದು ಕೊಡುವಾಗ, ಸ್ವೀಕರಿಸುವಾಗ ಅದರ ಹಿಂದೆ ಪ್ರತಿಷ್ಠೆಯು ಸೋಗು ಅಡಗದೆ ಗತ್ಯಂತರವಿಲ್ಲ. ಇದನ್ನು ಚಿತ್ರಿಸಿದ ರೂವಾರಿಗೆ ಕೊಡಲು ಯೋಗ್ಯವಾದ ಬಿರುದೇ ಇಲ್ಲವೆಂದು ನನಗನ್ನಿಸುತ್ತದೆ. ಇಂತಹ ರೂವಾರಿ ಯುಗದಲ್ಲಿ ಒಮ್ಮೆ ಜನ್ಮವೆತ್ತಬಹುದು. ಇದನ್ನು ಕೃತಿಗಿಳಿಸಿದರೆ ಜಗತ್ಪಸಿದ್ಧವಾದ ಕೃತಿಯಾಗಿ ಬೆರಗುವಡೆಸುತ್ತದೆ. ಇದು ಕಲ್ಪನೆಗೂ ಮೀರಿದ ಕಲ್ಪನೆ. ಹೊಚ್ಚ ಹೊಸ ಕಲ್ಪನೆ. ಪೊಯ್ಸಳನಾಡು ಜಗತ್ತಿಗೀವ ನವ್ಯ ನೂತನ ವಾಸ್ತು ಕೊಡುಗೆಯಾಗುತ್ತದೆ. ಆ ರೂವಾರಿ ಬ್ರಹ್ಮರನ್ನು ಕಾಣುವ, ಅವರ ಪಾದಕಮಲದ ಮರಿ ದುಂಬಿಯಾಗುವ ಆಸೆ ನನಗಿದೆ. ಸನ್ನಿಧಾನ ಆ ಅವಕಾಶ ಬೇಗ ಮಾಡಿಸಬೇಕೆಂದು ಪ್ರಾರ್ಥಿಸುತ್ತೇನೆ. ಈ ನನ್ನ ಮೆಚ್ಚಿಕೆಯನ್ನು ಅನ್ಯಥಾ ಭಾವಿಸಬಾರದೆಂದು ಕೋರುತ್ತೇನೆ'' ಎಂದು ಹೇಳಿ ಮತ್ತೊಮ್ಮೆ ಸಭೆಗೆ ವಂದಿಸಿ ಕುಳಿತ.

ಹೀಗೆಯೇ ಒಬ್ಬೊಬ್ಬರೂ ಮೆಚ್ಚಿಕೆಯನ್ನೇ ನುಡಿದರು. ಅಭಿಪ್ರಾಯ ಇನ್ನು ಹೇಳಿರದಿದ್ದ ದಾಸೋಜರು, "ಈಗ ನಮ್ಮ ಸ್ಥಪತಿಗಳ ಅಭಿಪ್ರಾಯ ತಿಳಿಯಲು ನಾವುಗಳು ಕಾತರರಾಗಿದ್ದೇವೆ'' ಎಂದರು.

"ಇಷ್ಟು ಜನರ ಮೆಚ್ಚಿಕೆಗೆ ಪಾತ್ರವಾಗಿರುವಾಗ ನಾನು ಹೇಳುವುದೇನಿದೆ ? ಬಹು ಜನಾಭಿಪ್ರಾಯವೇ ಕಲೆಯ ಮೌಲ್ಯವನ್ನು ರೂಪಿಸುತ್ತದೆ. ಇದರ ರಚಯಿತರು ಕುಶಲರು ಎಂಬುದರಲ್ಲಿ ಅನುಮಾನವಿಲ್ಲ. ಅವರ ಕಲ್ಪನೆಯೂ ನವ್ಯಮಾರ್ಗವನ್ನು ತುಳಿದಿದೆ. ಕಂಡ ಕೂಡಲೇ ಅದು ಆಕರ್ಷಕವೆನ್ನಿಸುತ್ತದೆ. ಈವರೆಗಿದ್ದುದಕ್ಕಿಂತ ಇದು ತೀರ ಭಿನ್ನ ಎಂಬುದು ಮುಖ್ಯ ಕಾರಣ. ಓರೆ ಕೋರೆಗಳು ಅತಿಯಾಗಿ ಹೊರ ಮೈಯಲ್ಲಿ ಕಾಣಸಿಗಬೇಕಾದ ವೈಶಾಲ್ಯಕ್ಕೆ ಎಡೆಯಿಲ್ಲವೆನಿಸುತ್ತದೆ. ಅತಿಸೂಕ್ಷ್ಮದ ಕಡೆ ಗಮನ ಹೆಚ್ಚಿ, ಓರೆಕೋರೆಗಳತ್ತ ಮನಸ್ಸು ಹೆಚ್ಚು ವಾಲಿ, ಮೂಡಿದ ಚಿತ್ರ ಇದು. ಮಹತೋಮಹೀಯನ ವೈಶಾಲ್ಯ ಪ್ರತೀಕವಾಗಬೇಕಾದುದು ಈ ಓರೆಕೋರೆಗಳ ಕಾರಣವಾಗಿ ಕುಬ್ಜವಾದೀತೇನೋ ಎಂದು ನನಗನ್ನಿಸುತ್ತದೆ. ಅವು ಏನೇ ಇರಲಿ, ನವ್ಯ ಮಾರ್ಗಕ್ಕೆ ಇದರಿಂದ ಬೀಜಾಂಕುರವಾಗುತ್ತದೆ ಎಂಬುದು ನಿಜ. ಈ ಕಲ್ಪನೆ

ಈವರೆಗೆ ಮೂಡಿ ಬಂದಿಲ್ಲ ಎಂಬುದೂ ನಿಜ. ಆದರೆ ಈ ಪ್ರಕಾರ ಹೀಗೆಯೇ ಎಷ್ಟು ಕಾಲ ಉಳಿದೀತೆಂದು ಹೇಳುವುದು ಕಷ್ಟ. ಸುಲಭದಲ್ಲಿ ಕೃತಿಯನ್ನು ಸಾಧಿಸಲು ತವಕ ಪಡುವ ಆತುರದ ಮಾನವ, ಇಷ್ಟು ಸೂಕ್ಷ್ಮವಾದುದರ ನಿರ್ಮಾಣದಲ್ಲಿ ಸಮಯ ದಂಡ ಮಾಡಲು ಇಷ್ಟಪಟ್ಟಾನೆ ಎಂಬ ಪ್ರಶ್ನೆ ಸಹ ಹುಟ್ಟಬಹುದು. ನಾಡಿನಲ್ಲಿ ಬೇರೆಲ್ಲಿಯಾದರೂ ಈ ಕಲ್ಪನೆಯನ್ನು ರೂಪಕ್ಕಿಳಿಸಬಹುದು'' ಎಂದು ಹರೀಶ ಹೇಳಿದ.

"ಸ್ಥಪತಿಗಳೆ, ಇಲ್ಲೇ ಇವನ್ನು ಕೃತಿಗಳಿಸಿದರೆ ಆಗದೇನು ?'' ಎಂದು ಗಂಗಾಚಾರಿ ಕೇಳಿದ.

"ಇಲ್ಲಿ ಈಗ ಹೇಗೆ ಸಾಧ್ಯ ? ಈಗಾಗಲೇ ಒಪ್ಪಿತವಾಗಿರುವ ರೂಪರೇಷೆಗೆ ಅನುಗುಣವಾಗಿ ಶಂಕುಸ್ಥಾಪನೆಯಾಗಿ ಪಾಯದ ಆಗಿತ ಮುಗಿದಿದೆ. ಇದನ್ನು ತೆಗೆದುಕೊಳ್ಳಬೇಕೆಂದರೆ ಇದನ್ನೆಲ್ಲ ಮುಚ್ಚಿ ಹೊಸದಾಗಿ ಶಂಕುಸ್ಥಾಪನೆ ಮಾಡಿ ಕೆಲಸ ಮಾಡಿಸಬೇಕಾಗುತ್ತದೆ'' ಎಂದ ಹರೀಶ.

"ಶಂಕು ಕದಲದಂತೆ ಈಗ ಅಗಿದಿರುವಷ್ಟು ಪಾಯವೂ ಹೊಂದುವಂತೆ ಈ ಕಲ್ಪನೆ ಮಾಡಿರುವುದಾಗಿ ಇದರ ಚಿತ್ರ ಶಿಲ್ಪಿ ರೂವಾರಿ ನನಗೆ ತಿಳಿಸಿದ್ದಾರೆ'' ಎಂದಳು ಶಾನ್ತಲದೇವಿ.

"ಅಂದರೆ, ಅದನ್ನೆಲ್ಲ ಯೋಚಿಸಿಯೇ ಅರಮನೆ ಈ ಕೆಲಸವನ್ನು ಬೇರೊಬ್ಬ ರೂವಾರಿಗೆ ವಹಿಸಿದೆ ಎಂದಾಯಿತು. ಅರಮನೆಯ ಇಷ್ಟವನ್ನು ನಾವು ವಿರೋಧಿಸುವುದಾದರೂ ಹೇಗೆ ?'' ಎಂದು ಹರೀಶ ಥಟ್ಟನೆ ಹೇಳಿದ. ಅವನಲ್ಲಿ ಆಗಲೇ ಅಸಮಾಧಾನ ಹೆಡೆಯೆತ್ತಿತ್ತು.

"ತಪ್ಪು ಕಲ್ಪನೆಯಿಂದ ಯಾರೂ ಆತುರದ ಅಭಿಪ್ರಾಯ ಮಾಡಬಾರದು. ಬೋಕಣ ಆ ರೂವಾರಿಗಳನ್ನು ಕರೆದು ತರುವಂತೆ ರೇವಿಮಯ್ಯನಿಗೆ ಹೇಳು'' ಎಂದಳು ಶಾನ್ತಲದೇವಿ.

"ಓ, ಅವನೇ !'' ಎಂದು ಹರೀಶನ ಬಾಯಿಂದ ಮಾತು ಜಾರಿತು.

ಶಾನ್ತಲದೇವಿಯ ತೀಕ್ಷ್ಣ ನೋಟ ಕೂಡಲೇ ಹರೀಶನತ್ತ ತಿರುಗಿತು. ವ್ಯಕ್ತಿ ವೈಷಮ್ಯ ತನ್ನ ಆಟ ಪ್ರಾರಂಭಿಸಿದೆಯೆಂದು ಅವಳು ಅರಿತಳು. ಆದರೂ ಅದನ್ನು ಸಾಧ್ಯವಾದರೆ ದೂರಮಾಡಬೇಕೆಂದು ಬಯಸಿ, "ಅಂದರೆ ಆ ರೂವಾರಿಗಳು ಸ್ಥಪತಿಗಳಿಗೆ ಗೊತ್ತೇನು ?'' ಎಂದು ಸಹಜವೆಂಬಂತೆ ಶಾನ್ತಲದೇವಿ ಕೇಳಿದಳು.

"ನನಗೇನು ಗೊತ್ತಿಲ್ಲ. ಅಲೆಮಾರಿಯಂತಿರುವ ಒಬ್ಬಾತ ರೇವಿಮಯ್ಯನ ಜೊತೆಗೆ ಅರಮನೆಯ ಆವಾರದೊಳಗೆ ಬರುತ್ತಿದ್ದ. ಯಾರೆಂದು ಕೇಳಿದ್ದಕ್ಕೆ ರೂವಾರಿ ಎಂದು ಹೇಳಿದ್ದ. ಅವನೇ ಇರಬಹುದೇನೋ ಎಂದು ನಾನು ಭಾವಿಸಿದೆ'' ಎಂದ ಹರೀಶ.

"ಹೌದು, ಅವರೇ'' ಎಂದು ಘೋಷಿಸಿದಳು ಶಾನ್ತಲದೇವಿ.

'ಎಲ್ಲಾದರೂ ಉಂಟೆ, ಇರಲಾರದು' ಎಂದು ಹೇಳಬೇಕೆಂದು ಹರೀಶನ ಬಾಯೊಳಗೆ ಮಾತುಗಳು ನುಗ್ಗಿದವು. ಅಷ್ಟರಲ್ಲಿ ರೇವಿಮಯ್ಯ ರೂವಾರಿಯೊಂದಿಗೆ ಬಂದುದರಿಂದ ಆ ಮಾತುಗಳು ಹಾಗೆಯೇ ಹಿಂದೆ ಸರಿದವು.

ಯಾತ್ರಿಕ ರೂವಾರಿ ರೇವಿಮಯ್ಯನೊಂದಿಗೆ ಕೂಡುಹಕ್ಕೆ ಬಂದ. ರೂವಾರಿ ಸಮೂಹವನ್ನು ಕಂಡು ಕರಜೋಡಿಸಿ ಬಾಗಿ ವಂದಿಸಿದ.

ತೆರವಾಗಿದ್ದ ಆಸನದತ್ತ ಬೆರಳು ಮಾಡಿ, "ಕೂಡಿ'' ಎಂದಳು ಶಾನ್ತಲದೇವಿ.

ಅವನು ಸಂಕೋಚದಿಂದ ಅಲ್ಲಿ ಹೋಗಿ ಕುಳಿತ.

"ನಾನಾಭಾಗಗಳ ಶ್ರೇಷ್ಠ ರೂವಾರಿಗಳೆಲ್ಲ ಇಲ್ಲಿ ಮಂಡಿಸಿದ್ದಾರೆ. ನಮ್ಮ ಸ್ಥಪತಿಗಳು ಅವರ ಪರಿಚಯವನ್ನು ಮಾಡಿಸುತ್ತಾರೆ'' ಎಂದಳು ಶಾನ್ತಲದೇವಿ.

"ಮೊದಲು ಅವರ ಪರಿಚಯ ಎಲ್ಲ ರೂವಾರಿಗಳಿಗೆ ಆಗಲಿ'' ಎಂದು ಹರೀಶ ಹೇಳಿದ.

ಶಾನ್ತಲದೇವಿ ರೂವಾರಿಯತ್ತ ಮುಖ ತಿರುಗಿಸಿದಳು.

ರೂವಾರಿ ಎದ್ದು ನಿಂತು, "ಅವಿನಯವೆಂದು ಯಾರೂ ಭಾವಿಸಬಾರದು. ವೈಯಕ್ತಿಕ ಕಾರಣಗಳಿಗಾಗಿ ನಾನು ಸ್ವವಿಷಯ ಹೇಳಿಕೊಳ್ಳಲಾರದವನಾಗಿದ್ದೇನೆ. ಈ ವಿಷಯದಲ್ಲಿ ನನ್ನನ್ನು ಒತ್ತಾಯಿಸಬಾರದಾಗಿ ವಿನಂತಿಸುತ್ತೇನೆ. ನಾನೊಬ್ಬ ರೂವಾರಿ. ನಮ್ಮದು ಅಚ್ಚ ಕನ್ನಡ ರೂವಾರಿ ಮನೆತನ. ಯಾವ ಕೀರ್ತಿ, ಹೆಸರು, ಬಿರುದುಗಳಿಗೂ ಆಶಿಸದೆ ತಾವು ಮೈಗೂಡಿಸಿಕೊಂಡ ವಿದ್ಯೆಯನ್ನು ಕೃತಿಗಿಳಿಸುವಷ್ಟು ಕೆಲಸವನ್ನು ಮಾತ್ರ ಮಾಡಿಕೊಂಡು ಬಂದಿದೆ ನಮ್ಮ ಮನೆತನ. ನಮ್ಮ ವಂಶ ಕಾಯಾ ವಾಚಾ ಮನಸಾ ಪರಿಶುದ್ಧವಾದ ಸಾತ್ವಿಕ ವೈದಿಕ ಶಿಲ್ಪವಂಶ. ಈ ವಿಷಯದಲ್ಲಿ ನನಗೆ ಹೆಮ್ಮೆಯಿಲ್ಲ. ತೃಪ್ತಿಯಿದೆ'' ಎಂದು ಸುಮ್ಮನಾದ.

"ತಮ್ಮ ಸ್ವಗ್ರಾಮ'' ಎಂದು ಹರೀಶ ಕೇಳಿದ.

"ಹೇಳಲು ಇಷ್ಟವಿಲ್ಲ.''

"ನಿಮ್ಮ ವಂಶದವರು ಬೇರೆ ಯಾರು ಇದ್ದಾರೆ ?'' ದಾಸೋಜ ಕೇಳಿದ.

"ಯಾರೂ ಇಲ್ಲನಾನೇ ಕಡೆಯವನು.''

"ಅಂದರೆ ಸಂತಾನ ?'' ಗಂಗಾಚಾರಿ ಪ್ರಶ್ನಿಸಿದ.

"ನಾನೇ ಕಡೆಯವನು ನಮ್ಮ ವಂಶದಲ್ಲಿ ಎಂದಾಗ ಈ ಪ್ರಶ್ನೆಗೆ ಅವಕಾಶವಿಲ್ಲ.''

"ತಮ್ಮ ಶುಭನಾಮಧೇಯ ?'' ಚಾವುಣ ಉತ್ಸಾಹದಲ್ಲಿ ಕೇಳಿದ.

"ತಿಳಿದು ಪ್ರಯೋಜನವಿಲ್ಲ ನಾನೊಬ್ಬ ರೂವಾರಿ ಎಂದಿಷ್ಟು ತಿಳಿದರೆ ಸಾಕು.''

"ಸನ್ನಿಧಾನದಲ್ಲಿ ಅರ್ಪಿಸಿದ ಚಿತ್ರಗಳ ಕಡತದ ಚಿತ್ರಶಿಲ್ಪಿ ನೀವೆ ಏನು ?'' ಎಂದು ಹರೀಶ ಕೇಳಿದ.

"ಯಾಕೆ ? ನಾನಾಗಿರಲಾರದೆಂದು ತಮಗನ್ನಿಸುತ್ತದೆಯೇನು ?'' ಅವನ ಮಾತಿನಲ್ಲಿ ಮೊನಚಿತ್ತು.

"ಹಾಗಲ್ಲ. ಇಲ್ಲೊಬ್ಬ ರೂವಾರಿ ಬಂದಿದ್ದ. ಸ್ಥಪತಿಯೆಂದು ಅವನು ನನ್ನ ಬಳಿ ಬಂದು ಕೆಲವು ಚಿತ್ರಗಳನ್ನು ಕೊಟ್ಟು ತನ್ನ ಬಗೆಗೆ ಏನೇನೋ ಹೇಳಿಕೊಂಡ. ನಾನೊಂದು ಕಲ್ಪನೆ ಸೂಚಿಸಿ ಅದರಂತೆ ಚಿತ್ರ ರಚಿಸಿಕೊಡಿ ಎಂದೆ. ಆತನಿಂದ ಆಗಲಿಲ್ಲ. ಬೇರಾರೋ ರಚಿಸಿದ ಚಿತ್ರ ತಂದು ತನ್ನದೆಂದು ಹೇಳಿ ಇಲ್ಲಿ ಉದ್ಯೋಗ ಗಿಟ್ಟಿಸಿಕೊಳ್ಳುವ ಪ್ರಯತ್ನ ಮಾಡಿದ್ದ. ಅದು ನೆನಪಾಯಿತು.....''

ಹರೀಶನ ಮಾತು ಮುಗಿಯುವ ಮುನ್ನವೇ ಯಾತ್ರಿಕ ರೂವಾರಿ ಬಾಯಿ ಹಾಕಿ, "ನಾನು ಉದ್ಯೋಗ ಅರಸಿ ಬರಲಿಲ್ಲ. ಕಲೆಗಾರ ಸ್ವತಂತ್ರ ವ್ಯಕ್ತಿ. ಅವನು ಯಾರ ಪರೀಕ್ಷೆಗೂ ಒಳಗಾಗಿ ಅವರ ಸಂಧಾನದ ಮೂಲಕ ಸ್ಥಾನಗಳಿಸುವವನಲ್ಲ. ಅವನ ಕೃತಿ ಅವನಿಗೆ ಸ್ಥಾನ ಕಲ್ಪಿಸಿ ಕೊಡುತ್ತದೆ. ಈ ಅನಾವಶ್ಯಕ ಚರ್ಚೆಯಿಂದ ಏನೂ ಪ್ರಯೋಜನವಿಲ್ಲ. ಹೆಸರು ಕುಲಗೋತ್ರಗಳನ್ನು ಅರಸುವ ಬದಲು

ಕರ್ತೃತ್ವವಿರುವ ಕಲೆಗಾರ ಮುಖ್ಯ. ನನ್ನ ರೀತಿ ತಮಗೆಲ್ಲ ವಿಚಿತ್ರವೆನ್ನಿಸಬಹುದು. ನಾನು ಯಾರನ್ನೂ ಸಂಶಯದಿಂದ ನೋಡುವುದಿಲ್ಲ. ಆತ್ಮವಿಶ್ವಾಸವಿಲ್ಲದೆ ಯಾರೂ ಕಲೆಗಾರನಾಗಲಾರ. ಆ ಆತ್ಮವಿಶ್ವಾಸವನ್ನು ಕೆರಳಿಸಬಾರದು. ಸಂಶಯ ಪಡುವುದು ಕೆರಳುವಿಕೆಯನ್ನು ಆಹ್ವಾನಿಸಿದಂತೆ. ಈ ಚಿತ್ರಗಳು ಯಾರಿಂದಲೇ ರಚಿತವಾಗಿರಲಿ, ಈ ನಕ್ಷೆಗಳು ಯಾರಿಂದಲೇ ರೂಪಿತವಾಗಿರಲಿ, ಅವು ಕೃತಿರೂಪತಾಳಲು ಯೋಗ್ಯವೆನಿಸಿದರೆ ಆ ಕೆಲಸಕ್ಕೆ ತೊಡಗುವುದು ಮುಖ್ಯ. ಈ ಕಡತದ ಚಿತ್ರಗಳ ರಚಯಿತರು ಯಾರೆಂಬುದು ಸನ್ನಿಧಾನಕ್ಕೆ ಗೊತ್ತು. ಅದು ಅವರಲ್ಲವೆಂದು ಹೇಳಿದಾಕ್ಷಣ ರಚಯಿತರ ಕಲ್ಪನೆಗೆ ಚ್ಯುತಿ ಬರುವಂತಿಲ್ಲ. ಅದರಿಂದ ಮುಂದೇನು ಮಾಡಬೇಕೆಂದು ಯೋಚಿಸುವುದು ಯುಕ್ತ. ಈ ಮಾತುಗಳ ದ್ವಂದ್ವದಲ್ಲಿ ಕಾಲ ಕಳೆಯುವುದಕ್ಕಿಂತ ಕೃತಿಯತ್ತ ಮನಸ್ಸನ್ನು ಹೊರಳಿಸಬಹುದೆಂದು ನನಗೆ ತೋರುತ್ತದೆ'' ಎಂದ.

''ಈಗ ನಿಮ್ಮ ಸಲಹೆ ಏನು ಸ್ಥಪತಿಗಳೆ ?'' ಎಂದು ಕೇಳಿದಳು ಶಾನ್ತಲದೇವಿ.

''ಈತನೇ ಇದನ್ನು ರಚಿಸಿದ್ದಾನೆಯೋ ಇಲ್ಲವೇ ಅದು ಬೇರೆ ವಿಚಾರ. ರಚಯಿತ ಯಾರೇ ಇರಲಿ. ರಚನೆ ಉತ್ಕೃಷ್ಟವಾಗಿದೆ. ಗುಣಕ್ಕೆ ನನ್ನಲ್ಲಿ ಮತ್ಸರವಿಲ್ಲ. ಬೇರೆಲ್ಲಿಯಾದರೂ ಇದನ್ನು ಕೃತಿಗಿಳಿಸಬಹುದು'' ಎಂದು ಹರೀಶ ಹೇಳಿದ.

''ಇಲ್ಲೇ ಇದು ಕೃತಿಗಿಳಿಯಬೇಕೆಂಬುದು ಅರಮನೆಯ ಇಚ್ಛೆ. ಆ ಇಚ್ಛೆ ಸಾಧುವಲ್ಲವೆಂದು ನಿಮ್ಮಗಳ ಅಭಿಪ್ರಾಯವೆ ?'' ಎಂದು ಶಾನ್ತಲದೇವಿ ಕೇಳಿದಳು.

''ಇಲ್ಲೇ ಕೃತಿಗಿಳಿಸಬಹುದು. ಅರಮನೆಯ ಇಚ್ಛೆ ಸಾಧುವಾಗಿದೆ'' ಎಂದು ನಾಗೋಜ ಹೇಳಿದ.

''ರಾಜಧಾನಿಯಲ್ಲೇ ಇಂತಹುದಿರಬೇಕು'' ಎಂದು ಪದರಿ ಮಲ್ಲೋಜ ಹೇಳಿದ.

ಚಾಲೋಜ, ಮಲ್ಲಿಯಣ್ಣ, ಚಿಕ್ಕಹಂಪ ಇದೇ ಅರ್ಥದ ಧ್ವನಿಗೂಡಿಸಿದರು.

ಒಲವು ಅತ್ತಲೇ ವಾಲಿತು. ಹರೀಶನಿಗೆ ಪರಿಸ್ಥಿತಿ ಅರಿವಾಯಿತು. ಅವನು, ''ಎಲ್ಲರ ಇಚ್ಛೆ ಏನೆಂಬುದು ಅರಿವಾಯಿತು. ಹಾಗೆಯೇ ಆಗಲಿ, ಅದಕ್ಕೆ ಅವಕಾಶ ಮಾಡಿಕೊಡಲು ಅರಮನೆ ನನಗೆ ಸ್ಥಾನ ಬಿಡುಗಡೆಯನ್ನು ಕರುಣಿಸಬೇಕು'' ಎಂದ.

''ಏಕೆ ? ನೀವೇ ಸ್ಥಪತಿಯಾಗಿ ಮುಂದುವರಿಯಿರಿ. ಈ ರೂವಾರಿಗಳಿಗೆ ಅಭ್ಯಂತರವಿಲ್ಲ. ತಾವು ಸ್ಥಪತಿಯಾಗಬೇಕೆಂಬ ಆಸೆಯೂ ಇಲ್ಲ'' ಎಂದಳು ಶಾನ್ತಲದೇವಿ.

''ಸನ್ನಿಧಾನ, ಇದು ಅವಿನಯವೆಂದು ಭಾವಿಸಬಾರದು. ನನ್ನದು ಒಂದು ಬಗೆಯ ತೆರೆದ ಮನೋಭಾವ. ಒಳಗೊಂದು ಹೊರಗೊಂದು ನಾನು ಅರಿಯೆ. ಈ ಪ್ರಸಂಗದಿಂದ ನನ್ನ ಉತ್ಸಾಹ ಕುಗ್ಗಿದೆ. ಸಧ್ಯದಲ್ಲಿ ಕೆಲಸ ಮಾಡಲು, ಮಾಡಿಸಲು ನನ್ನಿಂದ ಅಸಾಧ್ಯವಾಗುತ್ತದೆ. ಅಸೂಯೆಯಿಂದ ನಾನು ಈ ಮಾತನ್ನು ಹೇಳುತ್ತಿಲ್ಲ. ಇವರೇ ಈ ಚಿತ್ರಗಳನ್ನು ಕಲ್ಪಿಸಿ ಚಿತ್ರಿಸಿದ್ದರೆ ಇದನ್ನು ಕೃತಿಗಿಳಿಸಲು ಇವರೇ ಸಮರ್ಥರು. ಅದರಿಂದ ನನಗೆ ಬಿಡುಗಡೆ ಕೊಟ್ಟು ಅವರನ್ನು ಈ ಸ್ಥಾನಕ್ಕೆ ನೇಮಿಸುವುದು ಯುಕ್ತ'' ಎಂದು ಹರೀಶ ಹೇಳಿದ.

''ಸ್ಥಪತಿಗಳಲ್ಲಿ ಹುಟ್ಟಿರುವ ಶಂಕೆ ನನಗೆ ಅರ್ಥವಾಗುತ್ತದೆ. ಅವರ ಶಂಕೆಯನ್ನು ನಾನು ನಿವಾರಣೆ ಮಾಡಬಲ್ಲೆನೆಂಬ ಆತ್ಮವಿಶ್ವಾಸ ನನ್ನಲ್ಲಿದೆ. ನಾನಿಲ್ಲೇ ಇದ್ದು ಅವರಿಗೆ ನನ್ನ ಸಂಪೂರ್ಣ ಸಹಕಾರ ಕೊಡುತ್ತೇನೆ. ಅವರೇ ಸ್ಥಪತಿಯಾಗಿ ಮುಂದುವರಿಯಲಿ. ನನಗೆ ಕೀರ್ತಿಲಾಲಸೆ ಇಲ್ಲ ನನ್ನ ಹೆಸರು

ಜಗತ್ತಿನಲ್ಲಿ ಶಾಶ್ವತವಾಗಿ ನಿಲ್ಲಲಿ ಎಂಬ ಆಸೆಯೂ ನನಗೆ ಇಲ್ಲ. ಕೃತಿ ನಿಂತರೆ ಸಾಕು. ಕನ್ನಡಿಗರ ಕಲೆ ಸೂರ್ಯ ಚಂದ್ರರಿರುವವರೆಗೆ ಜನತೆಯಲ್ಲಿ ಸದಭಿರುಚಿ ಹುಟ್ಟಿಸಿದರೆ ಸಾಕು. ನಮ್ಮ ಸಂಸ್ಕೃತಿಗೆ ಕಲಾಕೃತಿ ಪ್ರೇರಕವಾದರೆ ಸಾಕು. ಈ ಸ್ಥಪತಿಗಳ ಅನುವರ್ತಿಯಾಗಿ ಸಂಪೂರ್ಣ ಸಹಕಾರ ನೀಡುತ್ತೇನೆ. ಇದರ ಹೆಸರು, ಕೀರ್ತಿ ಎಲ್ಲವೂ ಅವರದಾಗಲಿ. ನನಗೇನೂ ಅಭ್ಯಂತರವಿಲ್ಲ'' ಎಂದು ಯಾತ್ರಿಕ ರೂವಾರಿ ಹೇಳಿದ.

"ಇನ್ನೊಬ್ಬರ ಕೃತಿಯಿಂದ ಹೆಸರು ಪಡೆವ ಆಸೆ ನನಗೇನು ಇಲ್ಲ. ಕೃತಿ ಯಾರದೋ ಹೆಸರೂ ಅವರದೇ ಆಗಬೇಕು. ಇದರಂತೆಯೇ ದೇವಮಂದಿರ ರೂಪಿತವಾಗಬೇಕೆಂಬ ನಿರ್ಣಯವನ್ನು ಅರಮನೆ ಕೈ ಕೊಂಡರೆ ನನಗೆ ಮಾತ್ರ ಸ್ಥಾನ ಬಿಡುಗಡೆ ಆಗಲೇಬೇಕು'' ಎಂದು ಸ್ಪಷ್ಟವಾಗಿ ಹರೀಶ ನುಡಿದ.

"ಸ್ಥಪತಿ ಸ್ಥಾನದಿಂದ ಬಿಡುಗಡೆ ಎಂದರೆ ಮಂದಿರ ನಿರ್ಮಾಣದಲ್ಲಿನ ಸಹಕಾರದ ಬಿಡುಗಡೆ ಎಂದಲ್ಲ ತಾನೆ?'' ಎಂದು ನೇರವಾಗಿ ಪ್ರಶ್ನಿಸಿದಳು ಶಾನ್ತಲದೇವಿ.

"ಈ ಸ್ಥಳದಲ್ಲಿ ನಾನಿರುವುದಾದರೆ ಅದು ಈವರೆಗೆ ಇದ್ದಂತೆ ಮಾತ್ರ. ಬೇರೆ ಯಾವ ರೀತಿಯಲ್ಲಿಯೂ ಇರಲು ಮನಸ್ಸನ್ನು ನಾನು ಖಂಡಿತ ಒಗ್ಗಿಸಿಕೊಳ್ಳಲಾರೆ. ನನ್ನಲ್ಲಿ ಆ ಸಾಮರ್ಥ್ಯವಿಲ್ಲ'' ಎಂದ ಹರೀಶ.

"ಹಠ ಹಿಡಿಯಬಾರದು. ದೇಶದ ಕೆಲಸದಲ್ಲಿ, ಸಮಾಜದ ಕೆಲಸದಲ್ಲಿ ಹೊಂದಾಣಿಕೆಗೆ ಮನಸ್ಸನ್ನು ಒಗ್ಗಿಸಿಕೊಳ್ಳಬೇಕು. ವ್ಯಕ್ತಿಗಿಂತ ಕೃತಿ ಮುಖ್ಯವೆಂಬ ತತ್ವ ಇಲ್ಲೂ ಹೊಂದುತ್ತದೆ'' ಎಂದು ಗಂಗಾಚಾರಿ ಹೇಳಿದ.

"ಅದು ಅಭಿಪ್ರಾಯದ ಮಾತು. ನನಗೆ ಸಮಾಜದ ಕೆಲಸದಲ್ಲಿ, ದೇಶದ ಕೆಲಸದಲ್ಲಿ ಶ್ರದ್ಧೆ ಇದೆ. ಹೊಂದಾಣಿಕೆ ಮಾಡಿಕೊಳ್ಳುವ ಮನಸ್ಸೂ ಇದೆ. ಆದರೆ ಹಿಡಿದ ಕೆಲಸದಲ್ಲಿ ಸ್ಥಾನ ಪಲ್ಲಟ ನನಗೆ ಒಗ್ಗದು. ಇದು ಸ್ಪಷ್ಟ. ಇದೇ ರಚನೆ ಬೇರೊಂದೆಡೆಯಲ್ಲಿ ರೂಪಿಸಿ, ಆಗ ನಾನು ಈ ರೂವಾರಿ ಮಹಾಶಯರ ಅನುವರ್ತಿಯಲ್ಲ, ಬೇಕಾದರೆ ಆಳೂ ಆಗುತ್ತೇನೆ. ನನಗೆ ಅಸೂಯೆಯಿಲ್ಲ. ಒಟ್ಟಿನ ಮೇಲೆ ಈ ಸ್ಥಳ ನನಗೆ ಆಗಿಬರುವಂತಿಲ್ಲ. ನನ್ನನ್ನು ಬಿಟ್ಟುಕೊಡಬೇಕು. ನಾನು ಇದೊಂದು ವಿಚಾರ ಬಿಟ್ಟು ಉಳಿದವುಗಳ ಆಜ್ಞಾಧಾರಕ. ಮತ್ತೆ ನಾನು ಬೇರೆಡೆ ಬೇಕೆನಿಸಿದರೆ ಅಲ್ಲಿ ನನಗೀವ ಅಪ್ಪಣೆಯನ್ನು ಯಾವ ಸ್ಥಾನವನ್ನೂ ಅಪೇಕ್ಷಿಸದೆ ಪರಿಪಾಲಿಸುತ್ತೇನೆ.''

"ಇದರ ಮೇಲೆ ನಿಮ್ಮಿಷ್ಟ. ಯಾರ ಮನಸ್ಸಿನಲ್ಲೂ ಕಹಿ ಉಳಿಯಬಾರದು. ಎಂಬುದು ಅರಮನೆಯ ಇಷ್ಟ. ಮುಂದೆ ಕೆಲಸ ಈ ರೂವಾರಿಗಳು ರೂಪಿಸಿರುವಂತೆ ಸಾಗುತ್ತದೆ. ಅವರ ನೇತೃತ್ವದಲ್ಲಿ ಸಾಗುತ್ತದೆ. ಈ ಕೂಡುಹ ಇಂದಿಗೆ ಮುಗಿದಂತೆ. ಸ್ಥಪತಿ ಓಡೆಯಗಿರಿ ಹರೀಶರು ನಾಳೆ ಬೆಳಗ್ಗೆ ಅರಮನೆಗೆ ಬಂದು ನನ್ನನ್ನು ಕಾಣಬೇಕು'' ಎಂದು ಹೇಳಿ ಶಾನ್ತಲದೇವಿ ಎದ್ದು ಹೊರಟುಹೋದಳು. ಸಭೆ ಕದಲಿತು ಯಾತ್ರಿಕ ರೂವಾರಿಯನ್ನು ರೇವಿಮಯ್ಯ ಕರೆದೊಯ್ದ.

ತನ್ನ ಹೆಸರು ಹೇಳದ ನೂತನ ಸ್ಥಪತಿಯ ನೇತೃತ್ವದಲ್ಲಿ ಕೆಲಸ ಭರದಿಂದ ಸಾಗಿತು. ಓಡೆಯಗಿರಿಯ ಹರೀಶನ ಜೊತೆಗೆ ಬಂದಿದ್ದ ಮೂರು ನಾಲ್ಕು ಜನ ರೂವಾರಿಗಳೂ ಅವನೊಂದಿಗೆ ಹೊರಟು ಹೋದರು. ಹೊರಡುವ ಮುನ್ನ ಆದೇಶದಂತೆ ಭೇಟಿಗೆ ಬಂದಿದ್ದ ಹರೀಶನಿಗೆ ಅರಮನೆಯಿಂದ ಯೋಗ್ಯ ಮನ್ನಣೆಮಾಡಿ, "ಕೃತಿ ಮುಖ್ಯ, ವ್ಯಕ್ತಿ ಗೌಣ ಎಂಬ ತತ್ವದ ಅನುಸಾರ ಅರಮನೆ

ನಡೆದುಕೊಳ್ಳಬೇಕು. ನೀವು ಅರಮನೆಗೆ ಬೇಕು. ಅರಮನೆ ನಿಮಗೆ ಬೇಕು. ಈ ಪ್ರಸಂಗ ಕಹಿಯಾಗಿ ಉಳಿಯದಂತೆ ನೋಡಿಕೊಳ್ಳುವ ಹೊಣೆ ನಿಮ್ಮದೆ. ಕೃತಿರೂಪ ಬದಲಾದರೂ ನೀವೇ ನಿಂತು ಅದನ್ನು ರೂಪಿಸಬೇಕೆಂಬುದೇ ಅರಮನೆಯ ಇಚ್ಛೆಯಾಗಿತ್ತು. ನೀವೇ ತೀರ್ಮಾನ ಕೈ ಕೊಂಡುದರಿಂದ ಅರಮನೆ ಅದಕ್ಕೆ ಮನ್ನಣೆ ಕೊಡಬೇಕಾಯಿತು. ಪರಸ್ಪರ ಅಭಿಮಾನ ಏಕರೀತಿ ಇರಬೇಕೆಂಬುದು ನನ್ನ ವೈಯಕ್ತಿಕ ಇಚ್ಛೆ. ಕಲೆಗಾರನ ಸ್ವಾತಂತ್ರ್ಯ ಕಸಿದುಕೊಳ್ಳಲು ಅರಮನೆ ಇಚ್ಛೆ ಪಡುವುದಿಲ್ಲ'' ಎಂದು ಶಾನ್ತಲದೇವಿ ಹೇಳಿದುದಕ್ಕೆ, "ಬೇರೆ ಯಾವುದಕ್ಕೆ ಕರೆ ಬಂದರೂ ಬರುತ್ತೇನೆ. ಈಗ ಮಾತ್ರ ಕ್ಷಮಿಸಬೇಕು'' ಎಂದು ಅವನು ಹೇಳಿದ್ದ. ಅವನು ಹೋಗಿಯೂ ಆಗಿತ್ತು.

ವೇಲಾಪುರಿಯಲ್ಲಿ ಹೊಸ ರೀತಿಯ ಚಟುವಟಿಕೆ ಆರಂಭವಾಗಿತ್ತು. ಯಾತ್ರಿಕ ರೂವಾರಿ ಮಾರನೆಯ ದಿವಸ ಒಳ್ಳೆಯ ಮುಹೂರ್ತದಲ್ಲಿ ಅವರೆಗೆ ಅಗೆದಿದ್ದ ಪಾಯಕ್ಕೆ ಸೇರಿದಂತೆ, ಶಂಕುವಿಗೆ ಹೊಂದಿದಂತೆ ತಾನು ರಚಿಸಿದ ನಕ್ಷೆಗೆ ಅನುಗುಣವಾಗಿ ಪಾಯ ವಿಸ್ತರಿಸುವಂತೆ ಸೂತ್ರ ಕಟ್ಟಿ ಗುರುತು ಮಾಡಿಸಿದ. ಪಾಯದ ಕೆಲಸ ಸಾಗುತ್ತಿದ್ದಾಗ ರೂವಾರಿಗಳನ್ನೆಲ್ಲ ಒಂದೆಡೆ ಸೇರಿಸಿ ಇಡೀ ಮಂದಿರವನ್ನು ಹೇಗೆ ರೂಪಿಸಬೇಕು, ಅದರಲ್ಲಿ ಯಾರು ಯಾರು ಯಾವ ಯಾವುದನ್ನು ಮಾಡಬೇಕು ಎಂಬುದರ ಬಗೆಗೆ, ಅವರವರ ಇಚ್ಛೆ ಅರಿತು ಸೂಚಿಸಿ ಕೆಲಸ ಹಂಚಿಬಿಟ್ಟ. ಹಂಚಿದ ಕೆಲಸ ಮುಗಿಸಲು ಎಷ್ಟು ಕಾಲ ತೆಗೆದುಕೊಳ್ಳುತ್ತೀರಿ ಎಂದು ಅವರವರನ್ನೇ ಕೇಳಿ ಅದನ್ನೂ ನಿಗದಿ ಮಾಡಿದ. ಆ ನಿಗದಿ ಮಾಡುವಲ್ಲಿ ಸಾಲುಸಾಲಿನಲ್ಲಿ ಪ್ರತಿ ರೂವಾರಿಯ ಕೆಲಸ ಅಡಕವಾಗುವಂತೆ ವ್ಯವಸ್ಥೆ ರೂಪಿಸಿದ್ದ. ಹೀಗಾಗಿ ಎಲ್ಲರೂ ಕೆಲಸದಲ್ಲಿ ನಿರತರಾಗಿರಲೇ ಬೇಕಾಗಿತ್ತು. ಕೆಲಸ ಹಂಚಿದ ಮೇಲೆ, ಆವರೆಗೆ ಬಂದಿರುವ ಸಾಮಗ್ರಿ ಎಷ್ಟು ಇನ್ನೂ ಸಾಲದುದು ಎಷ್ಟು, ಕೆಲಸ ಮಾಡುವಾಗ ಅಚಾತುರ್ಯದಿಂದ ಕೆಡಬಹುದಾದ ಪ್ರಮಾಣವೆಷ್ಟು ಎಂಬುದನ್ನೆಲ್ಲ ಲೆಕ್ಕ ಹಾಕಿ, ಅವುಗಳನ್ನು ತರಿಸಲು ವ್ಯವಸ್ಥೆ ಮಾಡಿಸಿದ. ಇತರ ರೂವಾರಿಗಳಂತೆ ತನಗೂ ಕೆಲಸ ನಿಗದಿ ಮಾಡಿಕೊಂಡು ಕೆಲಸ ಮಾಡತೊಡಗಿದ್ದ. ದಿನದ ಕೆಲಸ ಮುಗಿಯುತ್ತಿದ್ದುದು ಹೊಸ ವ್ಯವಸ್ಥೆಯಲ್ಲಿ ಸೂರ್ಯಾಸ್ತಮಾನಕ್ಕೆ ಕಾಲು ಪ್ರಹರಕ್ಕೆ ಮುಂಚಿತವಾಗಿ. ನಂತರ ಬಿಟ್ಟಿಗ, ಪಟ್ಟ ಮಹಾದೇವಿಯರೊಂದಿಗೆ ಆ ದಿವಸ ಆದ ಒಬ್ಬೊಬ್ಬರ ಕೆಲಸದ ಪರಿಶೀಲನೆ ಜರುಗುತ್ತಿತ್ತು. ಏನಾದರೂ ಓರೆಕೋರೆಗಳಿದ್ದರೆ ಅವನ್ನು ಸಂಬಂಧಿಸಿದವರಿಗೆ ಮರುದಿನ ಕೆಲಸಕ್ಕೆ ತೊಡಗುವ ಮುನ್ನ ತಿಳಿಸಲಾಗುತ್ತಿತ್ತು. ಹೀಗೆ ಒಂದು ನಿಶ್ಚಿತ ಕ್ರಮದಲ್ಲಿ ವೇಲಾಪುರಿಯಲ್ಲಿ ಮಂದಿರದ ಕೆಲಸ ಸಾಗಿತ್ತು.

# ೫. ಸಂಶಯಾತ್ಮಾ ವಿನಶ್ಯತಿ

ನಕ್ಷತ್ರ ಮಾದರಿಯ ವಾಸ್ತು ನಿರ್ಮಾಣದ ಕೆಲಸ ಭರದಿಂದ ಸಾಗಿತ್ತು. ಅಂದಂದಿನ ಕೆಲಸದ ವಿಮರ್ಶೆ ಅಂದಂದೇ ನಡೆಯುತ್ತಿತ್ತು. ಬರೀ ವಾಗ್ಯುದ್ಧವಾಗದೆ ಪರಸ್ಪರ ಅರಿವು ಮತ್ತು ಶಿಲ್ಪ ಮತ್ತು ಶಾಸ್ತ್ರ ವಿಷಯಗಳ ಆಳವಾದ ವಿವೇಚನೆಗೆ ಅವಕಾಶದ ಸಾಧನವಾಯಿತು ಅದು. ಕೆಲಸ ಸಾಗುತ್ತಿದ್ದ ರೀತಿ ರಭಸಗಳನ್ನು ಕಂಡ ಶಾನ್ತಲದೇವಿಯಲ್ಲಿ ಸಹ ಹೊಸ ಸ್ಫೂರ್ತಿಯೊಂದು ಅಂಕುರಿಸಿತು. ದಿನದ ಬಹುಕಾಲವನ್ನು ಅವಳು ಮತ್ತು ಬಿಟ್ಟಿಗ ಶಿಲ್ಪಿಗಳ ಹಂದರಗಳಲ್ಲಿ ಕಳೆಯುತ್ತಿದ್ದರು. ಕೇವಲ ಆರೋಗಣೆ, ಉಪಹಾರಾದಿಗಳ ಮಟ್ಟಿಗೆ ಅವಳು ಹಗಲಿನಲ್ಲಿ ಅರಮನೆಯಲ್ಲಿರುತ್ತಿದ್ದಳು. ಬೆಳಿಗ್ಗೆ ಎದ್ದು ಪ್ರಾತರ್ವಿಧಿ, ಸ್ನಾನ, ಪ್ರಾರ್ಥನಾದಿಗಳನ್ನು ಮುಗಿಸಿಕೊಂಡು ಬಂದ ಮೇಲೆ, ಅವಳು ಹೆಚ್ಚು ಕಡಿಮೆ ದೇವಮಂದಿರದ ಕೆಲಸದ ತಾಣದಲ್ಲಿಯೇ ಹೆಚ್ಚು ಕಾಲವನ್ನು ಕಳೆಯತೊಡಗಿದಳು. ಅರಮನೆಯ ವತಿಯಿಂದ ನಡೆಯುತ್ತಿದ್ದ ಸಂಗೀತ, ನೃತ್ಯ ಶಿಕ್ಷಣ ಶಾಲೆಗಳಲ್ಲಿ ಒಂದು ಪ್ರಹರ ಕಾಲವನ್ನು ಅವಳು ಪ್ರತಿದಿನ ವಿನಿಯೋಗಿಸುವುದನ್ನು ಮಾತ್ರ ತಪ್ಪಿಸುತ್ತಿರಲಿಲ್ಲ.

ದಿನಗಳೆದಂತೆ ಯಾತ್ರಿಕ ರೂವಾರಿ ಮತ್ತು ಶಾನ್ತಲದೇವಿಯ ಕಲಾ ಹೃದಯಗಳು ಸಮೀಪವಾಗತೊಡಗಿದವು. ರೂವಾರಿಯು ಪ್ರಕೃತಕ್ಕಿಂತ ಹೆಚ್ಚಾಗಿ ಒಂದು ಮಾತನ್ನೂ ಯಾರ ಬಳಿಯೂ ಆಡದಿದ್ದವನು, ಕ್ರಮೇಣ ಶಾನ್ತಲದೇವಿಯ ಬಳಿ ಸಂಕೋಚ ದೂರನಾದನು. ಪಟ್ಟಮಹಾದೇವಿಯ ವ್ಯಕ್ತಿತ್ವ, ವಿಶಾಲ ಹೃದಯ, ಅನುಕಂಪ ಪ್ರಕಟಿಸುವ ಅವಳ ಕರುಣಾರ್ದ್ರ ಹೃದಯಗಳ ಅರಿವುಂಟಾಗಿ, ಅವನಲ್ಲಿ ಅವಳ ಬಗೆಗೆ ಅಪಾರ ಗೌರವ ಉತ್ಪನ್ನವಾಯಿತು. ಕಲೆಯ ಬಗೆಗಿನ ಅವಳ ಜ್ಞಾನ, ಅವಳು ಅರ್ಥೈಸುವ ರೀತಿ, ಅದರ ಗುರಿಯ ಬಗೆಗೆ ಅವಳು ಮಾಡುತ್ತಿದ್ದ ವಿಶ್ಲೇಷಣೆಯಿಂದ ಅವನು ಬೆರಗುಗೊಂಡಿದ್ದ.

ಇಷ್ಟೆಲ್ಲಾ ಆದರೂ ಅವಳು ಎಂದೂ ಅವನ ಸ್ವವಿಷಯವನ್ನು ಕೇಳಲಿಲ್ಲ. ಬಹಳ ಎಚ್ಚರಿಕೆಯಿಂದ ಅದನ್ನು ದೂರವಿಡುತ್ತಿದ್ದಳು. ಆದರೆ ಅವನ ಅಂತರಂಗದ ನೋವನ್ನು ಹೇಗಾದರೂ ಬಯಲು ಮಾಡಲೇಬೇಕೆಂದು ಅವಳು ಸಂಕಲ್ಪ ಮಾಡಿದ್ದಳು. ಅದೂ ಇದೂ ಮಾತನಾಡುತ್ತ ಅವಳು ಕೆಲವೊಮ್ಮೆ ವೈಯಕ್ತಿಕ ವಿಚಾರಕ್ಕೆ ತೊಡಗುತ್ತಿದ್ದಳು. ಆಗಲೂ ಅವಳು ವ್ಯಕ್ತಿಗಳ ನಡವಳಿಕೆ ಸರಿಯೆ ತಪ್ಪೆ ಎಂದು ವಿಮರ್ಶೆ ಮಾಡಲು ಹೋಗುತ್ತಿರಲಿಲ್ಲ. ಬರೀ ಘಟನೆಯನ್ನು ವಿವರಿಸುತ್ತಿದ್ದಳು. ತನಗೆ ಸಂಬಂಧಿಸಿದ ವಿಷಯವನ್ನು ಸಹ ಅವಳು ಹೇಳಿದುದುಂಟು, "ಎಲ್ಲರ ಬಾಳು ಸದಾ ಸುಖದ ಸುಪ್ಪತ್ತಿಗೆಯಲ್ಲ. ಏನಾದರೂ ಕೊಂಕುಗಳು ಇದ್ದೇ ಇರುತ್ತವೆ. ಆದರೆ ಅದನ್ನೇ ದೊಡ್ಡದು ಮಾಡಿಕೊಂಡು ಹೋದರೆ

ಲೋಕದಲ್ಲಿ ಬರೀ ಹುಚ್ಚರೇ ತುಂಬಿಯಾರು'' ಎಂದು ಅಂದೊಂದು ದಿನ ಸಂಜೆ ಅಂದಿನ ಕೆಲಸ ಮುಗಿದ ಮೇಲೆ ಅರಮನೆಯ ಮೊಗಸಾಲೆಯಲ್ಲಿ ಮಾತನಾಡುತ್ತ ಕುಳಿತಿದ್ದಾಗ ಶಾನ್ತಲದೇವಿ ಹೇಳಿದಳು.

"ಒಬ್ಬರ ಅನ್ನ ಇನ್ನೊಬ್ಬರ ವಿಷ ಎಂಬ ನಾಣ್ಣುಡಿ ಇದೆಯಲ್ಲವೆ ?'' ಎಂದು ರೂವಾರಿ ಮೆಲ್ಲನುಸುರಿದ.

ಶಾನ್ತಲದೇವಿ ಅವನನ್ನು ಒಂದು ಬಗೆಯಾದ ವಿಶ್ಲೇಷಕ ದೃಷ್ಟಿಯಿಂದ ನೋಡಿದಳು. ಅವನ ಈ ಮಾತು ಅವಳಿಗೆ ಆಗಿನ ಮಟ್ಟಿಗೆ ಅಪ್ರಕೃತವಾದುದೆನಿಸಿತು. ಆದರೂ ಅವಳು, "ಈಗ ಯಾರ ಅನ್ನ ಯಾರಿಗೆ ವಿಷವಾಗಿದೆ ?'' ಎಂದು ಪ್ರಶ್ನಿಸಿದಳು.

"ನನ್ನ ಮನಸ್ಸಿನಲ್ಲಿ ಬೇರೆ ಯಾರ ವಿಚಾರವೂ ಬರಲಿಲ್ಲ. ಅನಿರೀಕ್ಷಿತವಾಗಿ ಮಾತು ಬಂದಿತು ಅಷ್ಟೆ. ಅದು ಕೇವಲ ಲೋಕಾಭಿರಾಮದ ಮಾತೇ ವಿನಾ, ಅದಕ್ಕೆ ಹೆಚ್ಚಿನ ಗಮನ ಬೇಕಿಲ್ಲ'' ಎಂದ ರೂವಾರಿ.

"ನಾನು ಅದನ್ನು ಒಪ್ಪಲಾರೆ. ಎಷ್ಟೋ ವಿಷಯಗಳು ಅಂತರಂಗದಲ್ಲಿ ಸುಪ್ತವಾಗಿರುತ್ತವೆ. ಇಲ್ಲವೆ ಸ್ವಇಚ್ಛೆಯಿಂದ ಅದುಮಿ ಹಿಡಿದಿಟ್ಟರಲಾಗುತ್ತದೆ. ಅಂಥವು ಕೆಲವೊಮ್ಮೆ ಈ ರೀತಿ ನುಸುಳಿ ಬರುವುದೂ ಉಂಟು.''

"ಛೇ, ಛೆ, ಹಾಗೇನಿಲ್ಲ''

"ಇಲ್ಲದಿದ್ದರೆ ಬಿಡಿ. ನಾನೂ ಸಹಜವಾಗಿ ಕೇಳಿದೆ. ನೀವು ಸ್ವವಿಷಯ ಹೇಳುವವರಲ್ಲವಲ್ಲ. ಅದರಿಂದ ಏನನ್ನೋ ನಿಮ್ಮಲ್ಲಿ ಅದುಮಿ ಇಟ್ಟಿದ್ದೀರಿ. ಅದು ಈ ರೂಪದಲ್ಲಿ ವ್ಯಕ್ತವಾಗಿರಬಹುದು ಎಂದು ನನಗನ್ನಿಸಿತು ಅಷ್ಟೆ. ಅದರಿಂದ ಹಾಗೆ ಕೇಳಿದೆ'' ಎಂದಳು ಶಾನ್ತಲದೇವಿ.

"ಆ ವಿಚಾರ ಬಿಡಿ. ವಾಸ್ತವವಾಗಿ ನಾನು ಇಲ್ಲಿಯ ಕೆಲಸ ಆರಂಭ ಮಾಡಿದಾಗಿನಿಂದ, ಈ ವಿಷಯ ನನ್ನ ಮನಸ್ಸಿನಲ್ಲಿ ಸುಳಿದೇ ಇಲ್ಲ. ಮನುಷ್ಯನ ಬಾಳಿಗೆ ಅನೇಕ ಮುಖಗಳು ಇರುತ್ತವೆ. ಗುರಿಮಾತ್ರ ಅನೇಕ ಮುಖ ಪಡೆಯುವುದಿಲ್ಲ. ನನ್ನ ಬಾಳಗುರಿಯನ್ನು ಸಹ ನಾನು ಒದಿಗೊತ್ತಿಬಿಟ್ಟಿದ್ದೆ. ಈಗ ಅದು ಕೊನರಿತಷ್ಟೇ ಅಲ್ಲ, ಪೊಯ್ಸಳರ ಔದಾರ್ಯದಲ್ಲಿ ಅದು ಗುರಿ ಮುಟ್ಟುತ್ತದೆ ಎಂಬ ಸಂತೋಷ ಬಂದಿದೆ.''

"ಕಹಿಯಲ್ಲಿ ಸವಿ, ದುಃಖದಲ್ಲಿ ಸಂತೋಷ ಪಡೆದುಕೊಳ್ಳಬೇಕು. ಅಂತಹವರು ನಿಷ್ಕಾಮಕರ್ಮ ಯೋಗಿಗಳಾಗುತ್ತಾರೆ.''

"ಅದೆಲ್ಲ ಮಹಾತ್ಮರ ವಿಷಯವಾಯಿತು. ನಾವು ಹುಲು ಮಾನವರು. ಸಣ್ಣ ವಿಷಯಕ್ಕೂ ಖೇದ ಪಡುತ್ತೇವೆ. ಎಂದಾಗ ಕಹಿಯಲ್ಲಿ ಸಿಹಿ ಕಾಣಲು ಸಾಧ್ಯವೇ ?''

"ಮಹಾತ್ಮರೂ ಮಾನವರೇ ತಾನೆ ? ಸಾಧನೆಯಿಂದ ಆ ಕೀರ್ತಿಗೆ ಭಾಜನರಾಗುತ್ತಾರೆ. ಅದನ್ನು ಸಾಧಿಸಲು ಪ್ರತಿಯೊಬ್ಬರಿಗೂ ಹಕ್ಕಿದೆ. ಸಾಧಿಸಲೂ ಬಹುದು.''

"ನನ್ನಂತಹವರಿಂದ ಅದು ಸಾಧ್ಯವಿಲ್ಲ.''

"ಹಾಗೆನ್ನಬೇಡಿ. ನಿಮ್ಮಿಂದಲೂ ಸಾಧ್ಯವಿದೆ. ನಿಮ್ಮಲ್ಲಿ ಆ ಪ್ರವೃತ್ತಿ ಇಲ್ಲದೆ ಇದ್ದಿದ್ದರೆ, ನೀವು ನಿಮ್ಮ ಸಕ್ತೆಗೆ ಒಡೆಯಗಿರಿ ಹ[illegible]ಶರೇ ಸ್ಥಪತಿ ಆಗಲಿ ಎಂದು ಬಿಚ್ಚು ಮನಸ್ಸಿನಿಂದ ಹೇಳುತ್ತಿರಲಿಲ್ಲ.''

“ನನ್ನದು ತ್ಯಾಗ ಮನೋಭಾವವೇನಲ್ಲ. ಅದು ಸಾನು ಜೀವನದಲ್ಲಿ ತಾಳಿದ್ದ ಜಿಹಾಸೆಯ ಒಂದು ಮುಖ ಅಷ್ಟೆ.”

“ಅಂದರೆ ಹರೀಶರು ಒಪ್ಪಿಕೊಂಡಿದ್ದರೆ ನಿಮಗೆ ಬೇಸರವಾಗುತ್ತಿತ್ತೆ ?”

“ನನಗೆ ಬೇಸರವೂ ಆಗುತ್ತಿರಲಿಲ್ಲ. ಆನಂದವೂ ಆಗುತ್ತಿರಲಿಲ್ಲ.”

“ಆದರೆ ಅವರಿಗೆ ಅದು ಅಪಥ್ಯವಾಯಿತು; ಕಹಿಯಾಯಿತು. ಕೈಗೆ ದೊರೆತ ಸಂತೋಷವನ್ನು ಬದಿಗೊತ್ತಿ, ಇಲ್ಲದ್ದನ್ನು ಮನಸ್ಸಿಗೆ ಹಚ್ಚಿಕೊಂಡು ಅವರು ಬೇಸರ ಪಟ್ಟುಕೊಂಡರಷ್ಟೆ. ನಷ್ಟ ಅವರಿಗೇ ಆಯಿತಲ್ಲಾ ಎಂಬ ವ್ಯಥೆ ನಮಗೆ.”

“ಅವರು ದುಡುಕಿದರು. ಅಂತಹ ವಯಸ್ಸು. ಏನು ಮಾಡಲು ಸಾಧ್ಯ ? ಅವರು ಒಪ್ಪಿಕೊಂಡಿದ್ದರೂ ಇದೇ ರೀತಿಯ ಶ್ರದ್ಧೆಯನ್ನು ನನ್ನ ಕೆಲಸದಲ್ಲಿ ತೋರುತ್ತಿದ್ದೆ.”

“ನಿಮ್ಮ ವಿಷಯ ಇರಲಿ. ಹರೀಶರ ಹೆಸರು ಬಂದುದರಿಂದ ನಿಮ್ಮನ್ನು ಒಂದು ಪ್ರಶ್ನೆ ಕೇಳಬೇಕೆನ್ನಿಸಿದೆ ? ಕೇಳಲೆ ?” ರೂವಾರಿ ಥಟ್ಟನೆ ಉತ್ತರ ಕೊಡಲಿಲ್ಲ. ಮೌನವಹಿಸಿದ. “ನಿಮಗಿಷ್ಟವಿಲ್ಲದಿದ್ದರೆ ಬೇಡ ಬಿಡಿ” ಎಂದಳು ಶಾನ್ತಲದೇವಿ.

“ಮತ್ತೊಬ್ಬರ ವಿಷಯ ನಮಗೇಕೆ ?”

“ಮತ್ತೊಬ್ಬರ ಟೀಕೆಗೆ ನಾವು ತೊಡಗಿದರೆ ಆಗ ನೀವು ಹೇಳುವ ಮಾತು ಸರಿಯಾದೀತು.”

“ಒಂದಲ್ಲ ಒಂದು ಬಗೆಯ ಟೀಕೆ ಬಂದೇ ಬರುತ್ತದೆ. ಅದರಿಂದ...”

“ನೀವು ನೋಡುವ ದೃಷ್ಟಿಕೋನ ಒಂದು ಬಗೆ, ಆದರೆ ನನ್ನದು ಬೇರೊಂದು ಬಗೆ.”

“ಅಂದರೆ ?”

“ಪ್ರಶ್ನೆ ಬೇಡ, ಸ್ವಲ್ಪ ವಿಮರ್ಶಿಸೋಣ. ಆಗಬಹುದು ತಾನೆ ?”

“ನಾನು ಮೂಕ ಶ್ರಾವಕ ತಾನೆ ?”

“ಹಾಗೆಯೇ ಆಗಲಿ. ಹರೀಶರಿಗೆ ನಿಮ್ಮ ಬಗೆಗೆ ಸದ್ಭಾವನೆ ಇತ್ತೆಂದು ನಾನು ನಂಬಲಾರೆ. ಏಕೆಂದರೆ ನಾನು ಎಲ್ಲವನ್ನೂ ಬಿಚ್ಚುಮನಸ್ಸಿನಿಂದ ಹೇಳಿದ್ದೇನೆ. ಮುಚ್ಚು ಮರೆ ಮಾಡಲಿಲ್ಲ. ನೀವಾದರೂ ಇಲ್ಲಿಗೆ ಸ್ಪರ್ಧಿಯಾಗಿ ಬರಲಿಲ್ಲ. ತನ್ನ ಕಲೆಯನ್ನು ಬೆಳೆಸಿಕೊಳ್ಳಲು ಆತನಿಗೆ ಚೆನ್ನದಂತಹ ಒಂದು ಅವಕಾಶವಿತ್ತು. ಆದರೆ ಅದನ್ನು ಆತ ಬಿಟ್ಟುಕೊಡಲು ಕಾರಣ ಏನು ಗೊತ್ತೆ? ಅಸೂಯೆ. ಅವಶ್ಯಕವಿಲ್ಲದ ಕಡೆ ಸಂಶಯ. ಏನೂ ಇಲ್ಲದಿದ್ದ ಕಡೆ ಪೂರ್ವ ಚಿಂತನೆ ಇತ್ತು ಎಂಬ ಭಾವನೆ. ಅದರಿಂದ ಅಸಮಾಧಾನ ಹುಟ್ಟಿತು. ಅನಂತರ ನಿರಾಶೆ. ಕೋಪ. ಹೀಗೆ ಒಂದೊಂದಾಗಿ ಅವರ ಮನಸ್ಸಿಗೆ ಗ್ರಹಣ ಹಿಡಿದವು. ಅವರ ವರ್ತನೆಯು ಆ ಗ್ರಹಣದ ಫಲ.”

“ಎಷ್ಟೋ ಹಿರಿಯರನ್ನು ಬಿರುದಾಂಕಿತರನ್ನು ಅವರ ನೇತೃತ್ವದಲ್ಲಿ ಕೆಲಸ ಮಾಡಲು ಅವಕಾಶ ಕಲ್ಪಿಸಿ ಚಿಕ್ಕ ವಯಸ್ಸಿನಲ್ಲಿಯೇ ಅವರಿಗೆ ಹಿರಿಯ ಮನ್ನಣೆ ಕೊಟ್ಟದ್ದೀರಿ.”

“ನೀವು ಮೌನ ಶ್ರಾವಕರಾಗದಿದ್ದುದು ಒಳಿತಾಯಿತು. ನಮ್ಮ ಅರಮನೆಯಲ್ಲಿ ಸದಾ ಗುಣಕ್ಕೆ, ಪ್ರತಿಭೆಗೆ ಮನ್ನಣೆ ಇದೆ. ವಯಸ್ಸು, ಕುಲ, ಸ್ಥಾನ ಅವೆಲ್ಲ ಗೌಣ. ಅದರಿಂದ ಅವರಿಗೆ ಮನ್ನಣೆ

ದೊರಕಿತ್ತು. ಆದರೆ ಅವರು ಅದರ ಸದುಪಯೋಗ ಮಾಡಿಕೊಳ್ಳಲಿಲ್ಲ. ಅಷ್ಟೇ ಅಲ್ಲ, ನಿಮ್ಮ ಮೇಲೆ ಸಂಶಯ ಪಟ್ಟಿದ್ದಾರೆ.''

"ನಾನೇನು ತಪ್ಪು ಮಾಡಿದ್ದೇನೆ ?''

"ಅದರ ಗೊಡವೆಯೇ ಅವರಿಗೆ ಬೇಡ. ಈ ಸಮಯದಲ್ಲಿ ಅವರಿಗೆ ಏನೋ ಸಂಶಯ ಬಂತು. ಹಾಗೆಂದು ನಿರ್ಧರಿಸಿದರು. ಅದರಂತೆ ವರ್ತಿಸಿದರು ಕೂಡ. ಅಂತಹವರನ್ನು ನಾವು ತಿದ್ದಲು ಸಾಧ್ಯವೆ? ನೀವೇ ಹೇಳಿ.''

"ನನ್ನ ಮೇಲೆ ಸಂಶಯ ಪಟ್ಟಿದ್ದರೆ ಅನ್ಯಾಯ. ನಾನಂತೂ ಹಾಗೆಣಿಸಿರಲಿಲ್ಲ.''

"ನಿಮ್ಮ ಮೇಲೆ ಸಂಶಯ ಪಡುವವರು ನಿಮ್ಮನ್ನು ಕೇಳಿ ಸಂಶಯ ಪಡುತ್ತಾರೆಯೆ ? ಇಲ್ಲ, ನಿಮ್ಮ ಮಾತನ್ನು ನಂಬುತ್ತಾರೆಯೋ ? ಒಟ್ಟಿನಲ್ಲಿ ಸಂಶಯ ಎಂಬುದರ ಗ್ರಹಣ ಹಿಡಿದರೆ, ಅದಕ್ಕೆ ಬೇಗ ಬಿಡುಗಡೆಯೇ ಇಲ್ಲ. ಅದೆಂತಹ ಅನಾಹುತ ಮಾಡಬಲ್ಲುದು ಎಂಬುದಕ್ಕೆ ಈ ಅರಮನೆಯಲ್ಲಿಯೇ ಬೇಕಾದಷ್ಟು ಜರುಗಿದೆ.''

"ಹೌದೇ ? ಅರಮನೆಯಲ್ಲಿಯೂ ಹಾಗೆ ಆಗುವ ಸಂಭವವಿದೆಯೆ ?"

"ಅರಮನೆಯಲ್ಲಿರುವವರೂ ಮನುಷ್ಯರಲ್ಲವೆ ? ಅವರಿಗೂ ರಾಗ ದ್ವೇಷಾದಿಗಳು ಇಲ್ಲವೆ?''

"ವಿವರ ಕೇಳುವವರೆಗೆ ನಾನು ಮಾತ್ರ ನಂಬಲಾರೆ. ಅದೂ ಸನ್ನಿಧಾನವನ್ನು ಅರಿತವನು ಈ ಮಾತನ್ನು ಖಂಡಿತ ನಂಬಲಾರ''

"ಈ ಸನ್ನಿಧಾನವೂ ಒಂದು ಕಾಲದಲ್ಲಿ ನಿಮ್ಮಂತೆ ಸಾಮಾನ್ಯ ಜನತೆಯಲ್ಲಿ ಒಬ್ಬಳಾಗಿದ್ದಳು.''

"ಹೌದೆ ?''

"ನೂರಕ್ಕೆ ನೂರು ಹೌದು. ಅಂತಹ ಕಾಲದಲ್ಲಿ ಸಂಶಯದಿಂದ ಏನೆಲ್ಲ ನಡೆದು ಹೋಯಿತು. ಆದರೂ ಸತ್ಯಕ್ಕೆ ಕಡೆಗೆ ಜಯ ಲಭಿಸಿತು. ವಿನಾಕಾರಣ ಸಂಶಯ ಪಟ್ಟವರು ಕಡೆಗೆ ಪಶ್ಚಾತ್ತಾಪ ಸಹ ಪಟ್ಟರು. ಆ ಹಿಂದಿನ ಪ್ರಸಂಗಗಳನ್ನು ಅನುಭವಿಸಿದ ನಾನು ಕಣ್ಣಿಂದ ಸಾಕ್ಷಾತ್ತಾಗಿ ಕಂಡ ವಿನಾ ಸಂಶಯ ಪಡುವುದಿಲ್ಲ.''

"ನಾನು ವಿವರ ಕೇಳಿದರೆ ತಪ್ಪಿಲ್ಲ ತಾನೆ ?''

"ಈಗ ಸಾಧ್ಯವಿಲ್ಲ. ಮತ್ತೆ ಯಾವಾಗಲಾದರೂ ಬಿಡುವಿದ್ದಾಗ ಹೇಳಿದರಾಯಿತು. ನಾಳಿನ ಕೆಲಸ ಏನೇನು ?''

"ದಣ್ಣಾಯಕರವರಿಗೆ ಹೇಳಿದ್ದೇನೆ. ಸೂರ್ಯಾಸ್ತಮಾನ ಸಮೀಪಿಸುತ್ತಿದೆ. ಸನ್ನಿಧಾನಕ್ಕೆ ಆರೋಗಣೆಯ ಸಮಯ......'' ಎಂದು ರೂವಾರಿ ಹೇಳುತ್ತಿರುವಂತೆಯೇ ಅಂತಃಪುರದತ್ತಣಿಂದ ಮಗು ಅಳುವ ಶಬ್ದ ಕೇಳಿಸತೊಡಗಿತಷ್ಟೇ ಅಲ್ಲ ಅದು ಬರುಬರುತ್ತ ಹತ್ತಿರವಾಯಿತು.

ಶಾನ್ತಲದೇವಿ ರೂವಾರಿ ಇಬ್ಬರೂ ಧ್ವನಿ ಬಂದತ್ತ ನೋಡಿದರು.

ಸುವ್ವಲೆ ಬಲ್ಲುವನ್ನು ರಮಿಸುತ್ತಾ ಬರುತ್ತಿದ್ದಾಳೆ. ಮಗು ಹಿಡಿದ ರೊಚ್ಚು ಬಿಟ್ಟಿಲ್ಲ. ಕೊಸರಿ, ಕೊಸರಿ ಚಿಮ್ಮುತ್ತಿದೆ. ಕಂಕುಳಿನಿಂದ ಬಿಡಿಸಿಕೊಳ್ಳಲೆತ್ನಿಸುತ್ತಿದೆ.

"ಯಾಕೆ ಸುವ್ವಲೆ ಏನಾಯಿತು ?" ಎನ್ನುತ್ತಾ ಶಾನ್ತಲದೇವಿ ಎದ್ದು ಅವಳತ್ತ ಹೋದಳು. ರೂವಾರಿ ಆಗಲೇ ಎದ್ದು ನಿಂತಿದ್ದ.

"ಏನು ಮಾಡಿದರೂ ಸುಮ್ಮನಾಗದು. ಒಂದೇ ರೊಚ್ಚು. ಯಾರಿಗೂ ಬಗ್ಗಲಿಲ್ಲ" ಎಂದಳು ಸುವ್ವಲೆ.

ಶಾನ್ತಲದೇವಿ ಬಲ್ಲುವನ್ನು ತನ್ನ ಕೈಗೆ ತೆಗೆದುಕೊಂಡು, "ತಾಯಿಯನ್ನು ನೆನೆಸಿಕೊಂಡು ರೊಚ್ಚಿಗೆದ್ದಿರಬೇಕು. ಸುಧಾರಿಸುವುದು ಹೇಗೋ ತಿಳಿಯದಲ್ಲ" ಎಂದು. ಮಗುವನ್ನು ತನ್ನ ಕೈ ಕವಚದಲ್ಲಿ ಎದೆಗಪ್ಪಿಕೊಂಡು ಬೆನ್ನ ಮೇಲೆ ಮೆದುವಾಗಿ ತಟ್ಟುತ್ತಿದ್ದಳು. ಮಗು ಕ್ರಮೇಣ ಅಳು ನಿಲ್ಲಿಸಿ ಹಾಗೆಯೇ ನಿದ್ದೆ ಹೋಯಿತು.

ರೂವಾರಿ ಕುತೂಹಲದಿಂದ ಕಣ್ಣರಳಿಸಿ ಮಗುವನ್ನು ನೋಡುತ್ತಿದ್ದ.

"ಇದರ ತಂದೆ, ತಾಯಿ ತಲಕಾಡು ಯುದ್ಧಕ್ಕೆ ಮಹಾಸನ್ನಿಧಾನದ ಜೊತೆಗೆ ಹೋಗಿದ್ದಾರೆ. ಈ ಬಲ್ಲುವಿನ ತಾಯಿ ತಂದೆಯ ಕತೆಯೂ ಸ್ವಾರಸ್ಯವೆ !"

ಮತ್ತೆ ಮಗು ಬೆಚ್ಚಿದಂತೆ ಮಾಡಿ ಕಣ್ಣು ಬಿಟ್ಟು ಅಳತೊಡಗಿತು.

"ಒಳ್ಳೆಯದು ರೂವಾರಿಗಳೆ" ಎಂದು ಶಾನ್ತಲದೇವಿ ಅಳುತ್ತಿದ್ದ ಮಗುವಿನೊಂದಿಗೆ ಒಳಕ್ಕೆ ಹೊರಟುಹೋದಳು. ಸುವ್ವಲೆ ಅವಳನ್ನು ಹಿಂಬಾಲಿಸಿದಳು.

ರೂವಾರಿ ತನ್ನ ಬಿಡಾರದತ್ತ ಕಾಲು ಹಾಕಿದ. ಅವನಂತರಂಗವನ್ನು ಏತರಿಂದಲೋ ತಿವಿದಂತೆ ಅವನಿಗನ್ನಿಸಿತು. ಒಮ್ಮೆ ಏನೋ ಒಳಗೆ ಖಳಕ್ ಎಂದಂತೆ ಭಾಸವಾಯಿತು. ಗಾಢವಾದ ಆಲೋಚನೆಯಲ್ಲಿ ಮಗ್ನನಾಗಿ ಅವನು ತನ್ನ ಬಿಡಾರ ಸೇರಿದ. ಅವನು ಬಯಸದಿದ್ದರೂ ಅವನಿಗೆ ಒಳ್ಳೆ ಸುಸಜ್ಜಿತವಾದ ಬಿಡಾರದ ವ್ಯವಸ್ಥೆ ಆಗಿತ್ತು. ಅವನ ಬೇಕು ಬೇಡಗಳನ್ನು ನೋಡಿಕೊಳ್ಳಲು ಒಬ್ಬ ಊಳಿಗದವನು ಸಹ ಇದ್ದ. ರೂವಾರಿ ಬಂದು ಕೈಕಾಲು ಮುಖ ತೊಳೆದು ಸಂಜೆಯ ಆಹ್ನಿಕಗಳನ್ನು ಮುಗಿಸಿದ ಮೇಲೆ, "ಆರೋಗಣೆಗೆ ಸಿದ್ಧಮಾಡಲೆ?" ಎಂದು ಆ ಊಳಿಗದವನು ಕೇಳಿದ.

"ಇವತ್ತು ಏನೋ ಒಂದು ಬಗೆಯಾಗಿದೆ ಮಂಚಣ. ನೀನು ಉಂಡು ಮಲಗಿಕೋ" ಎಂದ.

ಮಂಚಣ ಹಾಗೆಯೇ ನಿಂತಿದ್ದ.

"ಯಾಕೋ ? ಹೋಗು."

"ಬೆಳಗಿನಿಂದ ದಣಿದಿರುತ್ತೀರಿ. ಈಗ ಉಣ್ಣದಿದ್ದರೆ ನಾಳಿನ ಕೆಲಸಕ್ಕೆ....."

"ಉಂಡರೆ ನಾಳಿನ ಕೆಲಸಕ್ಕೆ ತೊಂದರೆ. ನೀನು ಹೋಗು ಉಂಡು ಮಲಗಿಕೋ."

ಅವನು ಇನ್ನೂ ನಿಂತಿದ್ದ.

"ಯಾಕೋ ?"

"ನನಗೆ ಪಟ್ಟಮಹಾದೇವಿ ಸನ್ನಿಧಾನದವರ ಅಪ್ಪಣೆ ಇದೆ. ಉಪವಾಸವಿರಲು ಬಿಡಬಾರದೆಂದು. ನೀವು ಉಣ್ಣದಿದ್ದರೆ ಅದನ್ನು ನಾನು ಇದ್ದದ್ದು ಇದ್ದ ಹಾಗೆ ಅವರಿಗೆ ತಿಳಿಸಬೇಕು."

"ಅದು ನನ್ನಿಷ್ಟ. ಅವರಿಗೆ ಅದೆಲ್ಲ ಏಕೆ ತಿಳಿಸಬೇಕು ?"

“ನನಗೇನು ಗೊತ್ತು ? ನಿಮ್ಮೊಬ್ಬರದೇ ಅಲ್ಲ. ಇಲ್ಲಿ ಕೆಲಸ ಮಾಡುವ ಎಲ್ಲ ರೂವಾರಿಗಳ ಊಟ ಉಪಚಾರಗಳ ಬಗೆಗೆ ಅವರಿಗೆ ನಿತ್ಯ ಹೇಳಬೇಕು. ಹಾಗೆಂದು ಊಡಿಸುವವರಿಗೆ ಅವರ ಕಟ್ಟಪ್ಪಣೆ ಇದೆ.”

“ನಮಗೆ ಬೇಡದಾಗಲೂ ಬಲವಂತದಿಂದ ಉಣ್ಣಬೇಕೇನು ?”

“ನಾವು ಆಜ್ಞಾಧಾರಕರು ಅಷ್ಟೆ”

“ಹು, ನಡಿ, ಇದೊಳ್ಳೆ ಬಲವಂತಕ್ಕೆ ಬಂತಲ್ಲ” ಎಂದು ಎದ್ದು ಅವನು ಒಳ ಮನೆಗೆ ಉಣ್ಣಲು ಹೋಗಿ ಕುಳಿತ. ತುತ್ತು ಕೈಗೆತ್ತಿಕೊಂಡ. ಹಾಗೆಯೆ ಕುಳಿತ.

ಮಂಚಣ ನೋಡಿ ತುಸು ಕಕ್ಕುವಿಕ್ಕಾದ. “ಅನ್ನ ಕೈಯಾಗೆ ಹಿಡಿದು ಚಿಂತಿಸಬಾರದಂತೆ. ನಮ್ಮಜ್ಜಿ ಹೇಳುತ್ತಿದ್ದಳು” ಎಂದು ಮೆಲ್ಲನುಸುರಿದ.

ರೂವಾರಿ ಮಂಚಣನತ್ತ ನೋಡಿದ. ಅವನ ಮುಖದಲ್ಲಿ, “ಸ್ವಲ್ಪ ಸೇರಿಸಿಕೊಂಡು ಊಟ ಮಾಡಿ” ಎಂದು ಪ್ರೇರೇಪಿಸುವ ಒತ್ತಾಯದ ನೋಟ, ಭಂಗಿ, ಮಂದಹಾಸವಿತ್ತು.

ರೂವಾರಿ ಬೇಗ ಬೇಗ ನಾಲ್ಕಾರು ತುತ್ತು ತಿಂದು ಎದ್ದು ಬಿಟ್ಟ

‘ಇದನ್ನೆಲ್ಲಾ ಇಲ್ಲಿ ಹೇಳಬೇಡ’ ಎಂದು ಮಂಚಣನಿಗೆ ಹೇಳಲೇ ಎಂದು ಅವನ ಮನಸ್ಸು ಯೋಚಿಸುತ್ತಿತ್ತು. ಆ ಕುರಿತು ಸಹ ಅವನ ಮನಸ್ಸು ಯಾವ ನಿರ್ಧಾರಕ್ಕೂ ಬರಲಿಲ್ಲ.

ಕೈ ತೊಳೆದುಕೊಂಡು ಹೋಗಿ ಪಲ್ಲಂಗದ ಮೇಲೆ ಮಲಗಿದ. ಅವನಿಗೆ ಬಹಳ ಹೊತ್ತು ನಿದ್ದೆ ಬರಲಿಲ್ಲ. ಕಣ್ಣು ಬಿಟ್ಟಿದ್ದರೆ ಮಂಚಣ ಮತ್ತೆ ಏನಾದರೂ ಮಾತು ತೆಗೆದಾನೆಂದು ರೆಪ್ಪೆ ಮುಚ್ಚಿ ಅವನು ಆಲೋಚನಾಮಗ್ನನಾಗಿದ್ದ. ಮಂಚಣ ತನ್ನ ಊಟ ಮುಗಿಸಿ ಬಂದು ರೂವಾರಿ ಮಲಗಿದ್ದಲ್ಲಿನ ದೀಪ ನಂದಿಸಿ ಮಲಗಿಕೊಂಡ.

ರೂವಾರಿಯ ಮನಸ್ಸು ತನ್ನೂರಿನತ್ತ ಹಾರಿತು. ಹಿಂದಿನ ಯಾವುದೋ ಘಟನೆಗಳನ್ನೆಲ್ಲ ನೆನಪು ಮಾಡಿಕೊಳ್ಳುವುದರಲ್ಲಿ ತೊಡಗಿತ್ತು. ಆಲೋಚನೆಗಳ ನಡುವೆ, ಶಾನ್ತಲದೇವಿ ಹೇಳಿದ ಮಾತುಗಳು ಪುನಃ ಪುನಃ ಅವನ ಸ್ಮರಣೆಗೆ ಬರುತ್ತಿದ್ದವು. ‘ನಿಮ್ಮ ಮೇಲೆ ಸಂಶಯ ಪಡುವವರು ನಿಮ್ಮನ್ನು ಕೇಳಿ ಸಂಶಯ ಪಡುತ್ತಾರೆಯೆ ? ಆ ಹಿಂದಿನ ಪ್ರಸಂಗಗಳನ್ನು ಅನುಭವಿಸಿದ ನಾನು ಮಾತ್ರ ಕಣ್ಣಿಂದ ಸಾಕ್ಷಾತ್ತಾಗಿ ಕಂಡ ವಿನಾ ಸಂಶಯ ಪಡುವುದಿಲ್ಲ’ ಎಂಬ ಅವಳ ಮಾತಿನ ಹಿನ್ನೆಲೆಯಲ್ಲಿಯೇ ಅವನ ಆಲೋಚನೆಗಳು ರೂಪ ಧರಿಸುತ್ತ ಹೋದವು. ಅವರೆಂದಂತೆ ಕಣ್ಣಿಂದ ಕಂಡ ಮೇಲೆ ಸಂಶಯದ ಪ್ರಶ್ನೆ ಎಲ್ಲಿ ಬಂತು ? ಉಂಟು, ಇಲ್ಲ ಎಂಬುದು ಆಗ ನಿರ್ಧಾರವಾಗಿ ಬಿಟ್ಟಿರುತ್ತದೆ. ಮತ್ತೆ ಅಷ್ಟು ಜಾಣರಾದ ಅವರು ಹಾಗೇಕೆ ಮಾತನಾಡಿದರು? ಏನೋ ಮುಂದೆ ಅವರೇ ಆ ಹಿಂದಿನವನ್ನು ಹೇಳಿದಾಗ ಕೇಳಿದರೆ ಆಯಿತು. ಅದು ಅಂತಹ ದೊಡ್ಡ ವಿಷಯವಲ್ಲ. ಆದರೆ ನನ್ನ ಮೇಲೆ ರೂವಾರಿ ಹರೀಶ ಸಂಶಯ ಪಡಲು ಕಾರಣವಾದರೂ ಏನಿತ್ತು ? ಆಗ ಒಳದನಿಯೊಂದು ಮಂದ್ರದಲ್ಲಿ ಮೊರೆಯಿತು, ‘ನೀನು ಒಮ್ಮೆ ಸಂಶಯ ಪಟ್ಟೆಯಲ್ಲ, ನೀನು ಕೇಳಿದೆಯಾ ? ನಿನ್ನ ಪಾಡಿಗೆ ನೀನೇ ನಿರ್ಧರಿಸಿ ಬಿಡಲಿಲ್ಲವೆ ?’ ಎಂದು. ‘ನಾನು ಆತುರದ ನಿರ್ಧಾರ ಮಾಡಲಿಲ್ಲ. ತಕ್ಕ ಆಧಾರದ ಮೇಲೆ ನಿರ್ಧಾರಕ್ಕೆ ಬಂದೆ. ನನ್ನ ನಿರ್ಧಾರ ಸರಿಯಾಗಿಯೇ ಇದೆ. ಅದು ಸರಿಯೆಂದು ನಾನು ಯಾರಿಗೆ ಬೇಕಾದರೂ ಸಾಕ್ಷಿ ಮಾಡಿಕೊಡಬಲ್ಲೆ. ಸಾಕ್ಷಾತ್ ದೇವರೇ ಬೇಕಾದರೂ ಬರಲಿ.’ ಈ ನಿಲುಗಡೆಗೆ ಮನಸ್ಸು ಬಂದ ಮೇಲೆ ಅವನಿಗೆ ಜಂಪು ಹತ್ತಿರಬೇಕು.

ಮಾರನೆಯ ಬೆಳಿಗ್ಗೆ ರೂವಾರಿ ಎಂದಿನಂತೆ ಬ್ರಾಹ್ಮೀ ಮುಹೂರ್ತದಲ್ಲಿ ಏಳಲಿಲ್ಲ. ಸಾಮಾನ್ಯವಾಗಿ ಅವನೆದ್ದ ಮೇಲೆ, ಅವನೇ ಮಂಚಣನನ್ನು ಎಬ್ಬಿಸುತ್ತಿದ್ದ. ಇಂದು ಮಂಚಣನಿಗೆ ಬಡಿದೆಬ್ಬಿಸಿದಂತೆ ಆಯಿತು. ಕಣ್ಣುಬಿಟ್ಟು ಪಿಳಿ ಪಿಳಿ ನೋಡಿದ. ಪಕ್ಕದ ಪಲ್ಲಂಗದತ್ತ ನೋಡಿದ. ರೂವಾರಿ ಮಲಗಿದ್ದಂತೆ ಭಾಸವಾಯಿತು. ಥಟ್ಟನೆ ಎದ್ದು ಹಿತ್ತಲಕಡೆ ಹೋಗಿ ಆಕಾಶ ನೋಡಿ ಬಂದು ರೂವಾರಿಯನ್ನು ಎಬ್ಬಿಸುವುದೇ ಬೇಡವೇ ಎಂದು ಕ್ಷಣಕಾಲ ಯೋಚಿಸಿದ. ಹೊದ್ದಿಕೆಯನ್ನೂ ಹೊದೆಯದೆ ನಿದ್ದೆ ಹೋಗುತ್ತಿದ್ದ ರೂವಾರಿಯನ್ನು ನೋಡಿ ಮೆಲ್ಲಗೆ ಹಣೆಯ ಮೇಲೆ ತನ್ನ ಕೈಯಿಟ್ಟು ಸಮಾಧಾನ ಪಟ್ಟುಕೊಂಡು ಎಬ್ಬಿಸಿದ. ಅವನೆದ್ದು ಕುಳಿತು ಕೈ ಮುಗಿದು ಮುಖ ಸವರಿಕೊಂಡು, "ಓಹ್, ಇಂದು ನನಗಿಂತ ನೀನೇ ಮುಂಚೆ ಎದ್ದೆಯಾ ಮಂಚಣ" ಎನ್ನುತ್ತಾ ಪಲ್ಲಂಗದಿಂದಿಳಿದು ಪ್ರಾತರ್ವಿಧಿಗಳನ್ನು ತೀರಿಸಿಕೊಳ್ಳಲು ಹೊರಟ.

ಎಂದಿನಂತೆ ಸಮಯಕ್ಕೆ ಸರಿಯಾಗಿ ಅವನು ದೇವಮಂದಿರ ನಿರ್ಮಾಣ ತಾಣದತ್ತ ಬಂದು, ಒಮ್ಮೆ ಎಲ್ಲವನ್ನೂ ಸುತ್ತಿಕೊಂಡು ಬಂದ. ಈ ಕೆಲಸವೇ ಅವನಿಗೆ ಒಂದರ್ಧ ಪ್ರಹರ ಕಾಲ ಹಿಡಿಯುತ್ತಿತ್ತು. ಅವನು ಸಿದ್ಧಪಡಿಸಿದ್ದ ನಕ್ಷೆಯಂತೆ ಈಗಾಗಲೇ ಸುಭದ್ರವಾದ ತಳಪಾಯ ಅದರ ಮೇಲೆ ಮೂರು ಹಸ್ತ ಎತ್ತರದ ಜಗತಿ ನಿರ್ಮಾಣವಾಗಿತ್ತು. ಇನ್ನು ಭಿತ್ತಿಗಳ ನಿರ್ಮಾಣ ಕೆಲಸ ಸಾಗಬೇಕಾಗಿತ್ತು. ಅದಕ್ಕಾಗಿ ಭಿತ್ತಿಯ ತಳದಿಂದ ಹಿಡಿದು ಮುಖದ್ವಾರದ ಅರ್ಧದವರೆಗೆ ಬರಬೇಕಾಗಿದ್ದ ಸಾಲು ಸಾಲು ಚಿತ್ತಾರದ ಕೆಲಸವನ್ನು ಅವನು ಎಲ್ಲರಿಗೂ ಹಂಚಿದ್ದ. ಪ್ರಾಣಿಗಳು; ಗಿಡಮರ ಬಳ್ಳಿಗಳು, ಕಣ್ಮನಗಳನ್ನು ಆಕರ್ಷಿಸುವ ಬಗೆಬಗೆಯ ಚಿತ್ತಾರಗಳು; ನೃತ್ಯಭಂಗಿಗಳು; ವಾದ್ಯ ಮೇಳಗಳು; ಪೌರಾಣಿಕ ಕಥೆಗಳ ಶಿಲ್ಪರೂಪಗಳು; ಇವುಗಳ ಸಾಲು ಸಾಲು ಯೋಜಿತವಾಗಿತ್ತು. ಕೆಲಸವನ್ನು ಅನೇಕ ರೂವಾರಿಗಳಿಗೆ ಹಂಚಿದ್ದರೂ ಅವುಗಳನ್ನು ಸಾಲಾಗಿ ಸುತ್ತಲೂ ಅಳವಡಿಸಿದರೆ ವೈವಿಧ್ಯದಲ್ಲಿ ಒಂದು ಏಕತೆಯನ್ನು ತರುವಂತೆ ರೂವಾರಿಯ ಯೋಜನೆ ಇತ್ತು. ಅದರಿಂದ ಅವುಗಳ ಗುರಿ, ಸ್ಥೂಲ ರೂಪರೇಷೆ, ವಿಷಯ ಸೂಚಿ ಅವನಿಂದ ದೊರೆತಿದ್ದರೂ ಸುತ್ತಿನಲ್ಲಿ ಒಬ್ಬೊಬ್ಬರೊಡನೆಯೂ ವಿಚಾರ ವಿನಿಮಯ ಮಾಡಿ, ಕೆಲವೊಮ್ಮೆ ರೂವಾರಿಗಳು ಕಲ್ಪಿಸಿ ಸೂಚಿಸಿದ ಸಣ್ಣ ಪುಟ್ಟ ಮಾರ್ಪಾಡು ಮೂಲ ಚಿತ್ರದಲ್ಲಿ ಇರದಿದ್ದರೂ ಅವು ಮೂಲ ಯೋಜನೆಗೆ ಪೂರಕವಾಗಿದ್ದು, ಕಲಾ ಸೌಂದರ್ಯ ಹೆಚ್ಚಿಸುವಂತಿದ್ದರೆ, ಅದನ್ನು ಮೈಗೂಡಿಸುವ ಕೆಲಸ ಮಾಡುತ್ತಿದ್ದ. ಈ ಬೆಳಗಿನ ಸುತ್ತು ವೀಕ್ಷಣೆ ನಡೆದ ಮೇಲೆ, ತಾನು ಸ್ವತಃ ಕೆಲಸ ಮಾಡುತ್ತಿದ್ದ ತಾಣಕ್ಕೆ ಬಂದು, ತನ್ನ ಭಾಗದ ಕೆಲಸವನ್ನು ಮಾಡುತ್ತಿದ್ದ.

ಇಂದು ತನ್ನ ವೀಕ್ಷಣೆ ಮುಗಿಸಿ ಬಂದಮೇಲೆ, ತನ್ನ ತಾಣದಲ್ಲಿ ಅವನು ಕೆಲಸಕ್ಕೆ ತೊಡಗಲಿಲ್ಲ. ಏನೋ ಯೋಚನೆಯಲ್ಲಿ ಮಗ್ನನಾದವನಂತೆ ಕುಳಿತಿದ್ದ. ಕುವರ ಬಿಟ್ಟಿಯಣ್ಣನೂ ತನ್ನ ಇತರ ಕೆಲಸಗಳನ್ನು ಮುಗಿಸಿಕೊಂಡು, ಮಂದಿರದ ಕೆಲಸಗಳು ಸಾಗುತ್ತಿರುವುದನ್ನು ವೀಕ್ಷಿಸಿ ರೂವಾರಿಯ ತಾಣಕ್ಕೆ ಬಂದ. ರೂವಾರಿ ಕೆಲಸ ಕೈಕೊಂಡು ಅನೇಕ ಪಕ್ಷಗಳು ಉರುಳಿದ್ದರೂ ಕೂಡ ಎಂದೂ ಅವನು ಚಟುವಟಿಕೆ, ಲವಲವಿಕೆಯನ್ನು ಬಿಟ್ಟು ಈ ರೀತಿ ಜಡ ಸ್ವರೂಪದಲ್ಲಿ ಇದ್ದುದನ್ನು ಕಂಡಿರಲಿಲ್ಲ. ಏಕೆ ಹೀಗೆ ? ಎಂದು ವಿಚಾರಿಸೋಣವೆ ಎಂದು ಅವನ ಮನಸ್ಸಿಗೆ ಅನ್ನಿಸಿತು. ಮರುಕ್ಷಣದಲ್ಲಿಯೇ ಬೇಡವೆಂದು ತೀರ್ಮಾನಿಸಿಕೊಂಡು ಅಲ್ಲಿಂದ ಹೊರಟುಹೋದ.

ಆರೋಗಣೆಯ ಸಮಯಕ್ಕೆ ಸರಿಯಾಗಿ ಎಂದಿನಂತೆ ಕಹಳೆ ಝೇಂಕರಿಸಿತು. ಅದು ರೂವಾರಿಯನ್ನು ಯೋಚನಾ ಸಮಾಧಿಯಿಂದ ಎಚ್ಚರಗೊಳಿಸಿತು. "ಛೇ, ಛೆ" ಎಂದು ತಲೆ ಕೊಡವಿಕೊಂಡು ಎದ್ದು ತನ್ನ

ಬಿಡಾರದತ್ತ ಹೆಜ್ಜೆ ಹಾಕತೊಡಗಿದ. ನನಗೇಕೆ ಈ ಬಗೆಯ ಮಂಕು ಆವರಿಸಿತು ? ನಾನು ಹಾಗೆ ಕುಳಿತಿದ್ದಾಗ ಪಟ್ಟಮಹಾದೇವಿಯವರು ಏನಾದರೂ ಬಂದು ಹೋಗಿದ್ದರೆ ಏನು ಗತಿ ? ಬೆಳಗಿನ ಜಾವದ ಹಾಳು ಕನಸು ಇಷ್ಟೆಲ್ಲ ಮಾಡಿತು. ಮನಸ್ಸಿನಿಂದ ಎಂದೆಂದಿಗೂ ದೂರವಾಗಿದ್ದ ಆ ವ್ಯಕ್ತಿ ಕನಸಿನಲ್ಲಿ ಈಗ ಏಕೆ ಬರಬೇಕಾಗಿತ್ತು ? ದುರಂತ ದಾಟಲು, ಜೀವನದಲ್ಲಿ ಹುಟ್ಟಿದ ವಿಷವನ್ನು ತೊರೆಯಲು, ನಾನು ಗೃಹತ್ಯಾಗ ಮಾಡಿದ್ದು ವಿಷು ಸಂವತ್ಸರದಲ್ಲಿ. ಅಲ್ಲಿಂದ ಹದಿನೈದು ಸಂವತ್ಸರಗಳು ಉರುಳಿಹೋಗಿವೆ. ಇಷ್ಟು ಕಾಲಾನಂತರ ಈಗೇಕೆ ಈ ಬಗೆಯ ಕನಸು ? ಎಂದು ಮುಂತಾಗಿ ತನಗೆ ಬಿದ್ದ ಕನಸಿನ ಬಗೆಗೆ ಚಿಂತಿಸುತ್ತಾ ತನ್ನ ಬಿಡಾರ ಸೇರಿ, ಸಿದ್ಧವಾಗಿದ್ದ ಆರೋಗಣೆಯನ್ನು ಬೇಗ ಮುಗಿಸಿಕೊಂಡು, ಅವನು ಮತ್ತೆ ಕೆಲಸದ ತಾಣದಲ್ಲಿ ಯುಕ್ತವೇಳೆಗೆ ಉಪಸ್ಥಿತನಿದ್ದ.

ಮಧ್ಯಾಹ್ನಾತ್ಪರ ಅವನು ತಾನು ಮಾಡಬೇಕಾದ ಕೆಲಸವನ್ನು ಮಾಡಲೂ ಸಹ ಪ್ರಾರಂಭ ಮಾಡಿದ. ಆದರೆ ಅವನಿಗೆ ದಿನನಿತ್ಯದ ಏಕಾಗ್ರತೆ ಸಾಧಿಸಲಿಲ್ಲ. ಕೈಗಳು ಎಡಚೆಡಚಾದವು. ಸಮಯ ಸಾಗುತ್ತಿತ್ತೇ ವಿನಾ ಕೆಲಸ ಸಾಗಲಿಲ್ಲ. ಸೂರ್ಯ ಮುಳುಗುವುದರತ್ತ ತನ್ನ ಗಮನ ಹರಿಯಿಸಿದ್ದ. ದಿನವಿಡೀ ಪಟ್ಟಮಹಾದೇವಿಯವರು ಬರಲಿಲ್ಲವೆಂಬ ಸ್ಮರಣೆ ಬಂತು. ಅಥವಾ ಬೆಳಿಗ್ಗೆ ಬಂದು ಹೋಗಿದ್ದರೆ ? ಎಂದೆನ್ನಿಸಿತು. ಕೂಡಲೇ ಅವನು ಕಾಪಿನವನತ್ತ ಸಾಗಿ, "ಸನ್ನಿಧಾನ ಇಂದೇಕೆ ಬರಲಿಲ್ಲ?" ಎಂದು ಕೇಳಿದ.

"ನಮಗೆಲ್ಲ ಅದು ತಿಳೀತದಾ ಸ್ವಾಮೀ" ಎಂದವನುತ್ತರಿಸಿದ.

"ಹಾಗಾದರೆ ಇವತ್ತು ಅರಮನೆಯಿಂದ ಯಾರೂ ಬರಲಿಲ್ಲವೆ ?"

"ಯಾಕೆ ಡಣ್ಣಾಯಕರು—ಪುಟ್ಟಬುದ್ಧಿಯವರು ಬಂದಿದ್ದರಲ್ಲ. ತಾವು ಅವರನ್ನು ನೋಡಲಿಲ್ಲವೆ?"

"ಇಲ್ಲ" ಎಂದವನೇ ಅವನು ಅಲ್ಲಿಂದ ಹೊರಟುಬಿಟ್ಟ ತನ್ನ ಬಿಡಾರದತ್ತ ಸರಸರನೆ ಹೆಜ್ಜೆ ಹಾಕಿದ. ಅವನು ನೂರಿನ್ನೂರು ಮಾರು ಹೋದಮೇಲೆ ಥಟ್ಟನೆ ನಿಂತ. ದಿನದಲ್ಲಿ ಎರಡು ಪ್ರಹರಕಾಲವನ್ನಾದರೂ ಇಲ್ಲಿ ಕಳೆಯುತ್ತಿದ್ದ ಪಟ್ಟಮಹಾದೇವಿಯವರು ಇಂದೇಕೆ ಬರಲಿಲ್ಲ ? ಬಂದಿದ್ದ ಡಣ್ಣಾಯಕ ಸಹ ತನ್ನನ್ನೇಕೆ ಮಾತನಾಡಿಸಲಿಲ್ಲ ? ಈ ಯೋಚನೆ ತಲೆಯಲ್ಲಿ ಕೂತರೆ ತನ್ನಿಂದ ಕೆಲಸ ಮಾಡಲು ಸಾಧ್ಯವೇ ಇಲ್ಲ ಎನಿಸಿತು. ತಾನೇ ಅರಮನೆಯತ್ತ ಕಾಲು ಹಾಕಿದ.

ಸ್ವಇಚ್ಛೆಯಿಂದ ಅವನು ಅರಮನೆಗೆ ಬಂದುದು ಅದೇ ಮೊದಲ ಸಲ. ಉಳಿದೆಲ್ಲ ಸಂದರ್ಭಗಳಲ್ಲಿಯೂ ಅವನು ಆಹ್ವಾನಿತನಾಗಿಯೋ, ಇಲ್ಲವೇ ಪಟ್ಟಮಹಾದೇವಿಯ ಜೊತೆಗೋ ಅರಮನೆಗೆ ಬರುತ್ತಿದ್ದುದು. ಅರಮನೆಯ ಎಲ್ಲ ಪಡೆಯಿಲರಿಗೂ, ಕಾಪಿನವರಿಗೂ ರೂವಾರಿಯ ಪರಿಚಯ ಚೆನ್ನಾಗಿ ಇತ್ತು. ಅರಮನೆಯ ಮುಂದಿನ ಭವ್ಯ ಸೋಪಾನವೇರಿ ಅವನು ಮಹಾದ್ವಾರಕ್ಕೆ ಬರುವ ಹೊತ್ತಿಗೆ, ಕುವರ ಬಿಟ್ಟಿಯಣ್ಣ ಅಲ್ಲಿಂದ ಹೊರಬೀಳುವುದರಲ್ಲಿದ್ದ. ರೂವಾರಿಯನ್ನು ಕಂಡು, "ಸನ್ನಿಧಾನ ಹೇಳಿ ಕಳಿಸಿದ್ದಾರೆಯೆ ರೂವಾರಿಗಳೆ ?" ಎಂದು ಅವನು ಕೇಳಿದ.

"ಇಲ್ಲ. ನಾನೇ ಅವಕಾಶವಿದ್ದರೆ ಕಾಣೋಣವೆಂದು ಬಂದೆ. ತಾವು ಬೆಳಿಗ್ಗೆ...."

"ಹೌದು ಬಂದಿದ್ದೆ. ತಾವು ಯಾವುದೋ ಗಾಢವಾದ ಚಿಂತೆಯಲ್ಲಿ ಮುಳುಗಿದ್ದಿರಿ. ನಿಮ್ಮ ಚಿಂತನದ ಫಲವಾಗಿ ಏನಾದರೂ ಹೊಸದೊಂದು ಸೃಷ್ಟಿಯಾಗುವುದಿದ್ದರೆ ನಾನು ಅದನ್ನು ಕುಂಠಿತಗೊಳಿಸಬಾರದೆಂದು ಹಾಗೆಯೇ ಬಂದುಬಿಟ್ಟೆ. ನಿಮಗಾರು ಹೇಳಿದರು ?" ಎಂದು ಕೇಳಿದ ಬಿಟ್ಟಿಯಣ್ಣ.

"ದಣ್ಣಾಯಕರು ಬಂದುದನ್ನು ನಾನು ಗಮನಿಸದಿದ್ದುದನ್ನು ಕ್ಷಮಿಸಬೇಕು."

"ಅಷ್ಟೆಲ್ಲ ದೊಡ್ಡ ಮಾತು ಬೇಡ. ಏನಾದರೂ ತಪ್ಪಾಗಿದ್ದಾಗ ತಾನೆ ಆ ಬಗೆಯ ಯೋಚನೆ ಮನಸ್ಸಿಗೆ ಬರಬೇಕು ? ಅದಿರಲಿ ಅತ್ಯವುಸರದ ಕೆಲಸವೇನಾದರೂ ನಿಮಗೆ ಸನ್ನಿಧಾನದ ಜೊತೆಗೆ ಇತ್ತೆ?"

"ಇದಕ್ಕೆ ಉತ್ತರ ಹೇಳುವುದು ಕಷ್ಟ. ಏಕೋ ಇಂದು ನನ್ನ ಮನಸ್ಸು ನನ್ನ ಹಿಡಿತದಲ್ಲಿಲ್ಲ. ಅದಕ್ಕೆ ಸರಿಯಾಗಿ ಈ ದಿವಸ ಸನ್ನಿಧಾನ ಸಹ ಅತ್ತ ದಿನನಿತ್ಯದಂತೆ ಬರಲಿಲ್ಲ. ನಿನ್ನೆ ಸಂಜೆ ಮಗು ರೊಚ್ಚು ಹಿಡಿದ ಹಿನ್ನೆಲೆಯಲ್ಲಿ, ಏನೋ ಅವ್ಯಕ್ತವಾದ ನೋವು ನನ್ನಲ್ಲಿ ಅಂಕುರಿಸಿತು. ಸನ್ನಿಧಾನದ ದರ್ಶನ ಪಡೆದು ಎಲ್ಲವೂ ಸರಿಯಾಗಿದೆ ಎಂದು ತಿಳಿದು ಹೋಗಲು ಬಂದೆ."

"ತಮ್ಮ ಮನಸ್ಸು ಹಿಡಿತದಲ್ಲಿರಲಿಲ್ಲ ಎನ್ನುವುದಕ್ಕೂ ಅರಮನೆಯದಕ್ಕೂ ಹೇಗೆ ತಾನೆ ಸಂಬಂಧ ಇರಲು ಸಾಧ್ಯ ರೂವಾರಿಗಳೆ ?"

"ನಾನು ದೇವರಲ್ಲ. ನನ್ನ ಭಾವನೆಯನ್ನು ನಿರ್ವಂಚನೆಯಿಂದ ತಿಳಿಸಿದ್ದೇನೆ. ಸನ್ನಿಧಾನವನ್ನು ನೋಡಲು ಏನಾದರೂ ಅಡಚಣೆ ಇದೆಯೇನು ?"

ಒಡನೆಯೇ ಬಿಟ್ಟಿಯಣ್ಣ ಉತ್ತರ ಕೊಡಲಿಲ್ಲ. ಎರಡು ಕ್ಷಣದ ನಂತರ, "ಹು, ಬನ್ನಿ, ಮೊಗಸಾಲೆಯಲ್ಲಿ ಕುಳಿತಿರಿ. ಈಗ ಬರುತ್ತೇನೆ" ಎಂದು ಬಿಟ್ಟಿಯಣ್ಣ ಒಳಕ್ಕೆ ಹೊರಟುಹೋದ.

ರೂವಾರಿ ಮೊಗಸಾಲೆಯಲ್ಲಿ ಬಂದು ಕುಳಿತ.

ಸ್ವಲ್ಪ ಕಾಲದ ನಂತರ ಬಿಟ್ಟಿಯಣ್ಣ ಬಂದು, "ಆರೋಗಣೆಗೆ ಸನ್ನಿಧಾನ ಹೊರಟಿದ್ದರು. ಮುಗಿಸಿಕೊಂಡು ಬರುತ್ತಾರಂತೆ ಸಮಯ ಇದೆ ತಾನೆ ?" ಎಂದ.

"ಅವರಿಗೆ ಸಮಯಾನುಕೂಲವಾದರೆ ನಮ್ಮ ಭಾಗ್ಯ. ಅವರು ಆರೋಗಣೆ ಮುಗಿಸಿಕೊಂಡು ಬರುವುದಾಗಿ ತಿಳಿಸಿದ್ದೇ ಅರ್ಧ ಸಮಾಧಾನ. ತಮ್ಮ ಆರೋಗಣೆ ?"

"ಇಂದು ಸ್ವಲ್ಪ ತಡ. ನನಗೆ ಬೇರೆ ಸ್ವಲ್ಪ ಕೆಲಸವಿದೆ. ದಣ್ಣಾಯಕ ಬೊಪ್ಪದೇವರೊಡನೆ ಕೆಲವು ರಾಜಕಾರ್ಯಗಳಲ್ಲಿ ಆಪ್ತಾಲೋಚನೆ ಮಾಡಬೇಕಾಗಿದೆ. ಅದರಿಂದ ನೀವು ಒಬ್ಬರೇ ಇಲ್ಲಿ ಕೂತಿರಬೇಕು. ನಾನು ಜೊತೆಗಿರದೆ ಹೊರಟು ಹೋದೆನೆಂದು ಬೇಸರಿಸಬೇಡಿ."

"ರಾಜಕಾರ್ಯ ಮೊದಲು. ಹೋಗಿಬನ್ನಿ. ಒಳ್ಳೆಯದಾಗಲಿ."

ಬಿಟ್ಟಿಯಣ್ಣ ಅವುಸರ ಅವುಸರವಾಗಿ ಹೊರಟುಹೋದ.

ಶಾನ್ತಲದೇವಿ ಬರುವಳೆಂಬ ಸುದ್ದಿಯನ್ನು ಕಂಸಾಳಮೊದಲೇ ಸೂಚಿಸಿತು. ಇಷ್ಟು ಬೇಗ ಬರಬಹುದೆಂದು ಊಹಿಸಲಾರದವನಾಗಿದ್ದ ರೂವಾರಿ, ತುಸು ಅಪ್ರತಿಭನಾಗಿ ಗಾಬರಿಯಿಂದ ಎದ್ದು ಉತ್ತರೀಯಾದಿಗಳನ್ನು ಸರಿಪಡಿಸಿಕೊಂಡ.

ಶಾನ್ತಲದೇವಿ ಬಂದವಳೇ ತನ್ನ ಆಸನದಲ್ಲಿ ಕುಳಿತಳು. ಅವಳನ್ನು ಕಂಡೊಡನೆಯೇ ಎದ್ದಿದ್ದ ರೂವಾರಿಯೂ ಅವಳ ಸನ್ನೆಯನ್ನು ಗ್ರಹಿಸಿ ಕುಳಿತುಕೊಂಡ.

"ನೀವು ಯಾವುದೋ ಚಿಂತೆಯಲ್ಲಿ ಮಗ್ನರಾಗಿದ್ದಿರೆಂದು ಕುವರ ಬಿಟ್ಟಿಯಣ್ಣ ವರದಿ ಮಾಡಿದ. ಬಂದು ವಿಚಾರಿಸಬೇಕೆಂದು ನನಗೆ ಅನ್ನಿಸಿದರೂ ಬರಲು ಆಗಲಿಲ್ಲ."

"ಮಗು ಆರೋಗ್ಯವಾಗಿದೆ ತಾನೆ ?''

ಶಾನ್ತಲದೇವಿ ಒಂದು ಬಗೆಯ ಬೆರಗುಗಣ್ಣಿಂದ ರೂವಾರಿಯತ್ತ ನೋಡಿದಳು. ನಂತರ, "ಯಾಕೆ? ಅದರ ಆರೋಗ್ಯ ಸರಿಯಿಲ್ಲದಿರಬಹುದು ಎಂದು ನಿಮಗನ್ನಿಸಿತೇನು ?''

"ನನಗೆ ಯಾವುದೇ ನಿರ್ದಿಷ್ಟ ಭಾವನೆ ಮೂಡಲಿಲ್ಲ. ಆದರೂ ಏನೋ ಒಂದು ಅವ್ಯಕ್ತವಾದ ಆತಂಕ ಮನಸ್ಸಿನಲ್ಲಿ ತಲೆದೋರಿತು. ಅದರಿಂದ ಸರಿಯೆ ತಪ್ಪೆ ಎಂದು ವಿವೇಚಿಸದೆ ಬಂದು ಬಿಟ್ಟೆ ತಪ್ಪಾಗಿದ್ದರೆ ಸನ್ನಿಧಾನ ಕ್ಷಮಿಸಬೇಕು.''

"ನಿಮ್ಮನ್ನು ಇಲ್ಲಿಯವರೆಗೆ ನಡೆಸಿಕೊಂಡು ಬಂದ ಕಾರಣ ಏನೇ ಇರಲಿ. ನೀವು ಬಂದುದು ಒಳಿತಾಯಿತು. ಜೊತೆಗೆ ನಿಮ್ಮಲ್ಲಿ ಈ ಮಗುವಿನ ಬಗೆಗೆ ಉಂಟಾದ ಆತಂಕವಿದೆಯಲ್ಲ, ಅದು ಶುಭ ಸೂಚನೆ'' ಎಂದಳು ಶಾನ್ತಲದೇವಿ.

"ಆತಂಕ, ಶುಭ ಸೂಚನೆಯೆ ?''

"ಹೌದು, ವಿಷಾದಪಿ ಅಮೃತಂ ಗ್ರಾಹ್ಯಂ ಎಂಬ ಒಂದು ಮಾತು ಇದೆ. ಅದರನ್ವಯ ನಿಮ್ಮಲ್ಲಿ ಆ ಮಗುವಿನ ಬಗೆಗೆ ಹುಟ್ಟಿದ ಆಂತಕ, ಕ್ಷೀರಸಾಗರ ಕಡೆದಾಗ, ಹುಟ್ಟಿದ ಕಾಲಕೂಟ ವಿಷಕ್ಕೆ ಸಮಾನ. ಅದು ಅಂದು ನೀಲಕಂಠನ ಕಂಠಸ್ತವಾದರೆ, ಇಂದು ಈ ಆತಂಕ ಬೇರೆ ರೂಪ ಧರಿಸಿ ಎಲ್ಲಿಯೋ ಸೆರೆ ಸಿಕ್ಕಿ ತೊಳಲುತ್ತಿದೆ. ಆದರೆ ಈ ಆತಂಕದ ಹಿಂದೆ ನಿಮ್ಮ ಹೃದಯದಲ್ಲಿ ಅಂತರ್ಗತವಾಗಿ ಸುಪ್ತವಾಗಿ ನೆಲೆಸಿದ್ದ ಕಕಲಾತಿ, ಪುತ್ರವಾತ್ಸಲ್ಯ ಕೊನರತೊಡಗಿದೆ. ಆ ಚಿಗುರು ಮುಂದೆ ಫಲಭರಿತವೂ ಆದೀತು. ಚಿಂತಿಸಬೇಡಿ'' ಎಂದಳು ಶಾನ್ತಲದೇವಿ.

ರೂವಾರಿ ತಲೆ ಕೊಡಹಿದ. "ಇಲ್ಲ. ನನಗೆ ಅಂತಹ ಕಕಲಾತಿಗೆ ಅವಕಾಶವೇ ಇಲ್ಲ. ನನಗೆಂದಾದರೂ ಮಗನಾಗಿದ್ದರೆ ತಾನೆ ಆ ಕಕಲಾತಿ ಹುಟ್ಟುವುದು ?'' ಎಂದು ಬಡಬಡನೆ ಹೇಳಿದ.

"ಮುಂದೆ ಆಗಬಾರದೆಂದಿದೆಯೇನು ?''

"ಹೌದು.''

"ಅದೇಕೆ ?''

"ದಯವಿಟ್ಟು ಆ ವಿವರಕ್ಕೆ ಒತ್ತಾಯಿಸಬೇಡಿ.''

"ಹೌದಲ್ಲವೆ ? ಮರೆತಿದ್ದೆ. ತಪ್ಪಾಯಿತು. ನಿಮ್ಮ ಸ್ವವಿಚಾರದಲ್ಲಿ ಇಷ್ಟೆಲ್ಲ ಪ್ರಶ್ನಿಸುವ ಗೊಡವೆಗೆ ನಾನು ಹೋಗಬಾರದಾಗಿತ್ತು. ನಿಮ್ಮ ಸ್ವವಿಚಾರ ಬೇಡ. ಆದರೆ ಬಲ್ಲುವಿನ ವಿಷಯಕ್ಕೆ ನಿಮಗೇಕೆ ಆತಂಕವಾಯಿತು. ನೀವು ಅವನನ್ನು ನೋಡಿದ್ದು ಕೇವಲ ನಿನ್ನೆ. ಅವನ ತಂದೆ ನಿಮಗೆ ಗೊತ್ತಿಲ್ಲ. ತಾಯಿ ನಿಮಗೆ ಗೊತ್ತಿಲ್ಲ. ಈ ಕಕಲಾತಿ ಏಕೆ ?''

"ಬಹುಶಃ ನಿನ್ನೆ ಸನ್ನಿಧಾನ ಹೇಳಿದ ಮಾತುಗಳು ನನ್ನ ಕರುಳಿನ ಮೇಲೆ ಪ್ರಭಾವ ಮಾಡಿರಬೇಕು.''

"ಅಂತಹ ಪ್ರಭಾವಯುತವಾದ ಯಾವ ಮಾತನ್ನೂ ನಾನು ಆಡಿದ ಹಾಗೆ ನೆನಪಿಲ್ಲವಲ್ಲ?''

"ದಣ್ಣಾಯಕರು ಹುಟ್ಟಿನಲ್ಲೇ ತಾಯಿ ತಂದೆಯನ್ನು ಕಳೆದುಕೊಂಡವರು. ನೀವು ಜೋಪಾನ ಮಾಡಿದಿರಿ ? ಬಲ್ಲುವಿನ ತಾಯಿ ತಂದೆಗಳು ಯುದ್ಧಭೂಮಿಗೆ ತೆರಳಿದ್ದಾರೆ. ಅದನ್ನೂ ನೀವು ಜೋಪಾನ

ಮಾಡಬೇಕು. ಅದರ ಜೊತೆಗೆ ಬಲ್ಲುವಿನ ತಾಯಿ ತಂದೆಯರ ಕಥೆ ಸ್ವಾರಸ್ಯವೆಂದು ಹೇಳಿದಿರಿ. ಆ ಸ್ವಾರಸ್ಯ, ಸಂಶಯ ಎಂಬ ಮಾತಿಗೆ ಪೂರಕವಾದುದರಿಂದ ಬಹುಶಃ ನನ್ನ ಮೇಲೆ ಪರಿಣಾಮ ಮಾಡಿರಬೇಕು.''

"ಅಂದರೆ ನಿಮಗೇ ಅದು ಖಚಿತವಾಗಿ ಏನೂ ಎಂದು ತಿಳಿಯದೆ ಇದ್ದರೂ ಅವನ ಬಗೆಗೆ ಆತಂಕ ಪಡುವ ನಿಮ್ಮ ಕರುಳು ತುಂಬ ಹೆಂಗರುಳು.'' ರೂವಾರಿ ಆ ಮಾತನ್ನು ಕೇಳಿ ನಕ್ಕುಬಿಟ್ಟ "ಏಕೆ ? ನಗುವಂತಹ ಮಾತನಾಡಿದೆನೆ ?''

"ಹೆಂಗರುಳು ಎಂದಿರಲ್ಲ. ನಗು ಬಂತು, ನನ್ನದು ಕರುಳಲ್ಲ. ಅದು ಕಟುಕನ ಕತ್ತಿ ಎಂದು ಹೇಳಿದ್ದರೆ ಸರಿಯಾಗುತ್ತಿತ್ತೇನೋ !''

ಈಗ ಶಾನ್ತಲದೇವಿ ನಕ್ಕಳು. ರೂವಾರಿ ಅವಳತ್ತ ಪ್ರಶ್ನಾರ್ಥಕವಾಗಿ ನೋಡಿದ. ಎರಡು ಕ್ಷಣಗಳ ನಂತರ "ತಮ್ಮನ್ನು ತಾವರಿಯದ ಜನರು ಈ ಲೋಕದಲ್ಲಿ ಅನೇಕರಿದ್ದಾರೆ. ನೀವು ಬಹುಶಃ ಅಂತಹವರಲ್ಲಿ ಒಬ್ಬರು. ಎಂತಲೇ ನಿಮ್ಮನ್ನು ನೀವು, ಕಟುಕ ಎಂದುಕೊಳ್ಳುತ್ತೀರಿ. ಕಟುಕನಿಗೆ ಎಂದಾದರೂ ತನ್ನ ಕ್ರಿಯೆಯ ಬಗೆಗೆ ಪಶ್ಚಾತ್ತಾಪವಾದೀತೆ ? ಅಥವಾ ಪಶ್ಚಾತ್ತಾಪ ಮೂಡಿದವನು ಕಟುಕನಾಗಿ ಉಳಿಯಲು ಸಾಧ್ಯವೆ ? ಇಲ್ಲದ ಸಲ್ಲದ ದೋಷವನ್ನು ನೀವಾಗಿಯೇ ಆರೋಪಿಸಿಕೊಳ್ಳಬೇಡಿ. ಕಲೆಗಾರ ಕಟುಕನಾಗಲಾರ. ಆದರೆ ಕಾಮುಕ ಮಾತ್ರ ಕಟುಕನಾಗಬಲ್ಲ.''

ರೂವಾರಿ ಏನೂ ಮಾತನಾಡಲಿಲ್ಲ.

"ಏಕೆ. ನನ್ನ ಮಾತು ಸರಿಯೆನಿಸಲಿಲ್ಲವೆ ?'' ಶಾನ್ತಲದೇವಿ ಪ್ರಶ್ನಿಸಿದಳು.

"ಸನ್ನಿಧಾನದ ಆಲೋಚನೆಯ ಗುರಿಯೇನೆಂಬುದೇ ನನಗೆ ಅರ್ಥವಾಗುತ್ತಿಲ್ಲ.''

"ನನಗೆ ಯಾವ ಗುರಿಯೂ ಇಲ್ಲ. ಅದು ಕೇವಲ ಪ್ರಪಂಚಾನುಭವದ ಮಾತು ಅಷ್ಟೆ. ನೀವು ಪ್ರಪಂಚದಿಂದ ದೂರವಿರಬೇಕೆಂದು ಬಯಸಿ ಅನುಭವವನ್ನು ಕಳೆದುಕೊಳ್ಳುತ್ತೀರಿ. ಬಾಳು ನಿಜವಾಗಿ ಸುಂದರ. ಹಾಗೆ ಮಾಡಿಕೊಳ್ಳುವುದು ನಮ್ಮ ಕೈಯಲ್ಲಿದೆ. ಅದನ್ನು ಘೋರ ನರಕ ಮಾಡಿಕೊಳ್ಳುವುದೂ ನಮ್ಮ ಕೈಯಲ್ಲಿದೆ. ಅನುಭವಿ ಅದನ್ನು ಸುಂದರ ಮಾಡಿಕೊಳ್ಳಲು ಪ್ರಯತ್ನಿಸುತ್ತಾನೆ. ಅನನುಭವಿ ಅದನ್ನು ಘೋರ ಮಾಡಿಕೊಳ್ಳುತ್ತಾನೆ. ನನ್ನ ಮಾತು ಸಂಪೂರ್ಣ ಅರ್ಥವಾಗಬೇಕಾದರೆ ಈ ಅರಮನೆಯಲ್ಲಿ ನಡೆದುದನ್ನು, ಬಲ್ಲುವಿನ ತಾಯಿ ತಂದೆಯರ ಕಥೆಯನ್ನು ನೀವು ಕೇಳಬೇಕು.''

"ಈಗ ಹದಿನೈದು ಸಂವತ್ಸರಗಳಿಂದ ನನಗೆ ಯಾರ ಮಾತು, ಯಾರ ಅನುಭವವನ್ನೂ ತಿಳಿಯಲು ಆಸಕ್ತಿಯಿಲ್ಲವಷ್ಟೇ ಅಲ್ಲ, ಅದನ್ನು ತಿಳಿಯಬೇಕಾದ ಪ್ರಸಂಗ ಬಂದರೆ ನಾನೇ ದೂರವಾಗುತ್ತ ಬಂದಿದ್ದೇನೆ. ಸನ್ನಿಧಾನಕ್ಕೆ ಗೊತ್ತಲ್ಲ ನಾನು ಶ್ರೀಮದಾಚಾರ್ಯರಿಂದ ಸಹ ತಪ್ಪಿಸಿಕೊಂಡು ಓಡಿಬಿಟ್ಟಿದ್ದೆ. ಆದರೆ ಈಗ ಸನ್ನಿಧಾನದ ನೇತೃತ್ವದಲ್ಲಿ ಕೆಲಸ ಮಾಡತೊಡಗಿದಾಗಿನಿಂದ, ನನ್ನಲ್ಲಿಯೇ ಏನೋ ಅವ್ಯಕ್ತವಾದ ಮಾರ್ಪಾಡಾಗುತ್ತಿದೆ. ಸನ್ನಿಧಾನ ಹೇಳುವುದನ್ನು ಆಲಿಸಬೇಕು ಎನ್ನಿಸುತ್ತದೆ. ಕೆಲವೊಮ್ಮೆ ಸನ್ನಿಧಾನವಾಡುವ ಮಾತು ಮನಸ್ಸಿಗೆ ಕಿರಿಕಿರಿ ಎನಿಸಿದರೂ ಕೂಡ ಹಿಂದಿನಂತೆ ಓಡಹೋಗಬೇಕು ಎನಿಸುವುದಿಲ್ಲ. ಅದರಿಂದ ಈಚೀಚೆಗೆ ಸನ್ನಿಧಾನ ಹೇಳುವುದನ್ನೆಲ್ಲ ಕೇಳಲು ನನಗೆ ಆಸೆಯಾಗುತ್ತದೆ.''

"ಈ ಬದಲಾವಣೆ ನಿಮಗೆ ಅವಶ್ಯಕವಾದುದೇನೋ ನಿಜ. ಆದರೆ ನಾವಿಬ್ಬರೂ ಬರೀ ಈ ಹೇಳುವುದರಲ್ಲಿ, ಕೇಳುವುದರಲ್ಲಿ ಮಗ್ನರಾಗಿ ಕೂತರೆ ದೇವಮಂದಿರದ ಕೆಲಸ ತಟಸ್ಥವಾಗಿಬಿಟ್ಟೀತು. ಅದರಿಂದ...''

"ಸನ್ನಿಧಾನ ನನ್ನನ್ನು ತಪ್ಪಾಗಿ ಅರ್ಥಮಾಡಿಕೊಂಡಿರಬೇಕು."

"ಅಲ್ಲಲ್ಲ, ರೂವಾರಿಗಳು ನನ್ನ ಮಾತಿನ ಧ್ವನಿಯನ್ನು ಗ್ರಹಿಸಲಿಲ್ಲ ಅಷ್ಟೆ. ಅದಿರಲಿ, ಈಗ ನೀವು ಬಂದುದು ?"

"ಅದೇ. ದಿನವಿಡೀ ಸನ್ನಿಧಾನ ಅತ್ತ ಬರಲಿಲ್ಲವಲ್ಲ. ಬರದಿರುವುದಕ್ಕೆ ಏನೋ ಬಲವತ್ತರವಾದ ಕಾರಣವಿರಬೇಕು ಎನ್ನಿಸಿತು."

"ಅದನ್ನರಿಯಲು ಬಲ್ಲುವಿನ ನೆವಮಾಡಿಕೊಂಡು ಬಂದಿರಾ ?" ರೂವಾರಿಯನ್ನು ರೇಗಿಸಲೆಂಬಂತೆ ಅವಳು ಧ್ವನಿ ವಿನ್ಯಾಸ ಮಾಡಿ ಆಡಿದಳು. ರೂವಾರಿ ಎದ್ದು ನಿಂತ. "ಏಕೆ ಎದ್ದಿರಿ ? ಕೂಡಿ." ಎಂದಳು ಶಾನ್ತಲದೇವಿ.

"ತಪ್ಪಾಯಿತು. ಸನ್ನಿಧಾನದ ಸ್ವವಿಷಯದಲ್ಲಿ ನನಗೇಕೆ ಕಕಲಾತಿ ಹುಟ್ಟ ಬೇಕಾಗಿತ್ತು ? ತಪ್ಪು, ತಪ್ಪು. ಆ ಕಕಲಾತಿ ಹುಟ್ಟಬಾರದಾಗಿತ್ತು. ನಾನೆಷ್ಟಾದರೂ ಊಳಿಗಕ್ಕೆ ಸೇರಿದವನು. ಊಳಿಗಕ್ಕೆ ಸಂಬಂಧಿಸದ ಸ್ವವಿಷಯ ಕೇಳಲು ನನಗೇನು ಹಕ್ಕು ? ಒಟ್ಟಿನ ಮೇಲೆ ನನ್ನ ಮನಸ್ಸಿಗೆ ಏನೋ ಆಗಿದೆಯೆಂದು ಕಾಣುತ್ತದೆ. ಅಪ್ಪಣೆಯಾದರೆ....." ಎಂದು ಮಾತು ನಿಲ್ಲಿಸಿದ. ಅವನು ಕೂಡಲಿಲ್ಲ.

"ಕೂಡಿ ಎಂದು ಅಪ್ಪಣೆ ಮಾಡಿಯಾಗಿದೆ. ಮರೆತಿರೇನು ?" ಶಾನ್ತಲದೇವಿಯ ಮುಖದಲ್ಲಿ ಯಾವ ಭಾವವೂ ಅವನಿಗೆ ಕಾಣಿಸಲಿಲ. ಹೀಗೆ ನಿರ್ಭಾವವಾಗಿದ್ದ ಅವಳ ಮುಖವನ್ನು ಅವನೆಂದೂ ಈವರೆಗೆ ಕಂಡಿರಲಿಲ್ಲ. ಎರಡು ಕ್ಷಣಗಳಲ್ಲಿ ಅವನು ಯಾಂತ್ರಿಕವಾಗಿ ಕುಳಿತ. ಶಾನ್ತಲದೇವಿ ಕಂಸಾಳ ಬಾಜಿಸದಳು. ಊಳಿಗದವಳು ಬಂದು ಬಾಗಿ ವಂದಿಸಿದಳು. "ಸ್ಥಪತಿಗಳು ಈ ದಿನ ಅವರ ಬಿಡಾರದಲ್ಲಿ ಸರಿಯಾಗಿ ಉಂಡಿಲ್ಲವೆಂಬ ಸುದ್ದಿ ಬಂದಿದೆ. ಆದರಿಂದ ರಾತ್ರಿ ಇಲ್ಲಿಯೇ ಅವರ ಆರೋಗಣೆಗೆ ವ್ಯವಸ್ಥೆ ಆಗಬೇಕೆಂದು ಅಗ್ರಸಾಲೆಯಲ್ಲಿ ಹೇಳು. ಡಣ್ಣಾಯಕರು ಹಿಂತಿರುಗಿದ ಮೇಲೆ ಅವರು, ಸ್ಥಪತಿಗಳ ಒಟ್ಟಿಗೆ ಆರೋಗಣೆಗೆ ಕೂಡುತ್ತಾರೆ. ಹಾಗೆಯೇ ಸ್ಥಪತಿಗಳು, ಬಿಡಾರಕ್ಕೆ ಊಟಕ್ಕೆ ಬರುವುದಿಲ್ಲ ಎಂದು ಮಂಚಣನಿಗೆ ಹೇಳಿ ಕಳುಹಿಸು."

"ಅಪ್ಪಣೆ" ಎಂದು ಊಳಿಗದವಳು ಹೊರಟುಹೋದಳು.

ರೂವಾರಿ ಕಕ್ಕುವಿಕ್ಕಾಗಿ ನೋಡುತ್ತ ಕುಳಿತ. ಅರಮನೆಯಲ್ಲಿ ತನಗೆ ಆರೋಗಣೆಯೆ ? ತಾನು ಹಗಲಿನಲ್ಲಿ ಸರಿಯಾಗಿ ಊಟಮಾಡದಿದ್ದ ಸುದ್ದಿ ಸಹ ಆಗಲೆ ಅರಮನೆಗೆ ಮುಟ್ಟಿದೆ. ಅಂದರೆ ತನ್ನ ವಿಷಯದಲ್ಲಿ ಅರಮನೆ ತುಂಬಾ ಸೂಕ್ಷ್ಮವಾದ ರೀತಿಯ ಗಮನ ಕೊಡುತ್ತಿದೆ. ಇಷ್ಟೆಲ್ಲ ಗಮನ ತನ್ನಂತಹ ಒಬ್ಬ ಸಾಮಾನ್ಯ ಮನುಷ್ಯನಿಗೆ ನೀಡುವ ಈ ಅರಮನೆ, ಈ ಪಟ್ಟಮಹಾದೇವಿಯವರ ಕಲಾಪ್ರೇಮ, ಎಷ್ಟು ದೊಡ್ಡದು ಎಂದು ಅವನ ಮನಸ್ಸಿಗನ್ನಿಸಿತು.

"ನೋಡಿ ಸ್ಥಪತಿಗಳೆ, ಡಣ್ಣಾಯಕ ಬರುವವರೆಗೆ ಸಮಯವಿದೆ. ನೀವು ಬಯಸಿದರೆ ಬಲ್ಲುವಿನ ತಾಯಿ ತಂದೆಯರ ಕತೆ ಹೇಳುತ್ತೇನೆ" ಎಂದಳು ಶಾನ್ತಲದೇವಿ.

ರೂವಾರಿ ಆಲಿಸುವ ಶಿಷ್ಯನಂತೆ ಭಂಗಿಮಾಡಿ ಕುಳಿತ. ಏನೂ ಮಾತನಾಡಲಿಲ್ಲ.

ಶಾನ್ತಲದೇವಿ ಮಾತನ್ನು ಪ್ರಾರಂಭಿಸಿ ಚಟ್ಟಲೆ ಮಾಯಣರ ಸಂಪೂರ್ಣ ಕಥೆಯನ್ನು ಎಳೆಎಳೆಯಾಗಿ ಬಿಡಿಸಿ ಹೇಳಿ, "ಭಸ್ಮವಾಗಿದ್ದ ಈ ಬಾಳಿನಲ್ಲಿ ಅವರು ಪ್ರೇಮ ಮಂದಿರ ಕಟ್ಟಿ ಬಲ್ಲುವನ್ನು ತಮ್ಮ

ಪ್ರೇಮಪುತ್ಥಳಿಯಾಗಿ ಪಡೆದು, ಜನ್ಮ ಸಾರ್ಥಕವಾಯಿತೆಂಬ ಭಾವತಾಳಿದ್ದಾರೆ. ಆದರೆ ನನಗೇನು ಆಶ್ಚರ್ಯವೆಂದರೆ ಈ ಜಗನ್ನಿಯಾಮಕನಿಗೆ ಮಾತ್ರ ಕರುಣೆಯಿಲ್ಲ. ರಾಷ್ಟ್ರಕ್ಕಾಗಿ, ತಮ್ಮ ಮಹಾರಾಜರಿಗಾಗಿ ಪ್ರಾಣದ ಹಂಗು ತೊರೆದು ದುಡಿವ ನಿಷ್ಠಾವಂತರನ್ನು ತೊಂದರೆಗೆ ಸಿಕ್ಕಿಸುತ್ತಾನೆ. ಅವರಿಬ್ಬರೂ ತುಂಬಾ ಜಾಣರು. ಹೇರಿಗರ ಕೆಲಸವನ್ನು ತುಂಬಾ ಜಾಣ್ಮೆಯಿಂದ ನಿರ್ವಹಿಸುತ್ತಾರೆ. ಆದರೆ ತಲಕಾಡು ಧಾಳಿಯ ಸಂದರ್ಭದಲ್ಲಿ ಅವರಿಬ್ಬರೂ ಶತ್ರುಗಳ ಸೆರೆಗೆ ಸಿಕ್ಕಿದ್ದಾರಂತೆ. ನಿನ್ನೆ ಸಂಜೆ ಬೇಹು ಬಂತು. ಮಗು ಮೂರುನಾಲ್ಕು ದಿನಗಳಿಂದ ಒಂದು ಬಗೆಯ ಕಿರಿಕಿರಿ ಮಾಡುತ್ತಿತ್ತು. ನಿನ್ನೆಯಂತೂ ಅದನ್ನು ಹಿಡಿಯುವುದೇ ಕಷ್ಟವಾಯಿತು. ಅದರೊಂದಿಗೆ ಈ ಸುದ್ದಿ ಬೇರೆ ! ಆ ಮಗುವಿನ ನಿಷ್ಕಲ್ಮಷ ಅಂತರಂಗಕ್ಕೆ, ಅವ್ಯಕ್ತವಾದ ಶಕ್ತಿಯ ಕಾರಣವಾಗಿ, ತನ್ನ ಮಾತಾಪಿತೃಗಳ ಈ ಕಷ್ಟದ ಸ್ಥಿತಿ ಗೊತ್ತಾಗಿ ಹಾಗೆ ಕಿರಿಕಿರಿ ಮಾಡಿತೋ ಏನೊ ? ಈ ದಿವಸವಿಡೀ ಅಲ್ಲಿಂದ ಬಂದ ಆದೇಶದಂತೆ ಏನೇನೋ ಕೆಲಸಗಳು ಆಗಬೇಕಾಗಿತ್ತು. ಅದರಿಂದ ನನಗೆ ಅತ್ತ ಬರಲು ಆಗಲಿಲ್ಲ. ಬಲ್ಲು ಇವತ್ತೆಲ್ಲ ನೆಮ್ಮದಿಯಾಗಿದ್ದಾನೆ'' ಎಂದಳು.

ತುಟಿಪಿಟಕ್ಕೆನ್ನದೆ ಅರಳಿದ ಕಣ್ಣಿನಿಂದ ಶಾನ್ತಲದೇವಿ ಹೇಳಿದುದೆಲ್ಲವನ್ನೂ ಕೇಳಿದ ರೂವಾರಿ, "ಅಸಾಧ್ಯ, ಅಸಾಧ್ಯ. ನಂಬುವುದೇ ಕಷ್ಟ'' ಎಂದು ಉದ್ಗರಿಸಿದ.

"ಯಾವುದು ? ನಾನು ಹೇಳಿದ್ದೆ ?'' ಎಂದು ಶಾನ್ತಲದೇವಿ ಕೇಳಿದಳು.

"ಅಲ್ಲ, ಅಲ್ಲ. ಅದನ್ನು ಕುರಿತು ಆ ಮಾತನ್ನು ಹೇಳಲಿಲ್ಲ. ಬೇರೆ ಯಾವುದೋ ಸ್ಮರಣೆಗೆ ಬಂತು ಅದರಿಂದ, ನನಗೆ ನಾನೇ ಹಾಗಂದುಕೊಂಡು ಬಿಟ್ಟೆ''

"ಅದೇನೆಂದು ತಿಳಿಯಬಹುದೆ ?''

"ಇವತ್ತು ಬೇಡ. ಬೇರೆ ಯಾವಾಗಲಾದರೂ ನೋಡೋಣ.''

"ಹಾಗೆಯೇ ಮಾಡಿ. ನಂಬಿಕೆ ಮೂಡದೆ, ಮನಸ್ಸು ಸಂಶಯದಲ್ಲಿ ತೊಳಲುತ್ತಿರುವವರೆಗೆ, ಅವೆಲ್ಲ ಹಾಗೆಯೇ ! ಮಹಾಸನ್ನಿಧಾನದ ಅಗ್ರಜರು ಬಲ್ಲಾಳ ಪ್ರಭುಗಳ ಅತ್ತೆಯವರೊಬ್ಬರಿದ್ದರು. ನಮ್ಮ ಪ್ರಧಾನಿ ಗಂಗರಾಜರ ಸೋದರಿ. ಅವರ ಮನಸ್ಸಿನಲ್ಲಿ ಒಂದು ಆಶೆ ಹುಟ್ಟಿತು. ತಮ್ಮ ಮಗಳನ್ನು ಪಟ್ಟಮಹಾದೇವಿ ಮಾಡಬೇಕು ಎಂದು. ಆ ಆಶೆ ಕೈಗೂಡಿಸಿಕೊಳ್ಳಲು ಅವರು ಮಾಡಿದ ಕೆಲಸಗಳನ್ನು ನೆನೆಸಿಕೊಂಡರೆ, ಆ ಸಂಬಂಧದಲ್ಲಿ ಆಕೆ ವಿನಾಕಾರಣ ಇತರರ ಮೇಲೆ ಪಟ್ಟ ಸಂಶಯಗಳನ್ನು ನೆನೆಸಿಕೊಂಡರೆ, ಬಾಳುವುದೇ ಬೇಡವೆನ್ನಿಸುತ್ತೆ. ಆದರೂ ಒಂದು ನಾಣ್ನುಡಿ ಇದೆ. ಪ್ರತ್ಯಕ್ಷವಾಗಿ ಕಂಡರೂ ಪ್ರಮಾಣಿಸಿ ನೋಡೂಂತ'' ಎಂದು ಹೇಳಿ ದಣ್ಣಾಯಕಿತಿ ಚಾವಮ್ಮೆಯ ಇಡೀ ಪ್ರಸಂಗವನ್ನು ತನಗೆ ತಿಳಿದಂತೆ ಒಂದು ಚೂರೂ ಬಿಡದೆ ಹೇಳಿ, "ತಮ್ಮ ಸುಂದರ ಬಾಳನ್ನು ಹಾಳಾದ ಇಲ್ಲದ ಸಂಶಯದಿಂದ ಘನಘೋರವಾಗಿ ತಾವಾಗಿಯೇ ಮಾಡಿಕೊಂಡು ಲೋಕ ತ್ಯಜಿಸಿದರು. ಅದಕ್ಕೇ ಹಿರಿಯರು ಸಂಶಯಾತ್ಮಾ ವಿನಶ್ಯತಿ ಎಂದು ಹೇಳಿದ್ದಾರೆ'' ಎಂದು ಮಾತನ್ನು ಮುಗಿಸಿದಳು.

"ಇದಕ್ಕೇ, ಆಸೆ ಕೆಟ್ಟದ್ದು ಎಂದು ಭಗವಾನ್ ಬುದ್ಧ ಹೇಳಿದ್ದೂಂತ ಕಾಣುತ್ತೆ.''

"ಹೌದು. ಆಸೆ ಎಂದು ಬುದ್ಧ ಹೇಳಿದ್ದು, ದುರಾಶೆ ಎನ್ನುವುದಕ್ಕೆ. ಆಸೆ ಇಲ್ಲದಿದ್ದರೆ ಮಾನವನಿಗೆ ಬೆಳವಣಿಗೆಯೇ ಇರುವುದಿಲ್ಲ. ನಿರಾಶಾವಾದಿಗಳಿಂದ ಒಳ್ಳೆಯ ಸಮಾಜ ಸೃಷ್ಟಿಯಾಗುವುದಿಲ್ಲ. ಲೋಕದಲ್ಲಿ ಆಶೆ, ಸಂಶಯಗಳು ಮಾನವನ ಬಾಳನ್ನು ಕೆಸರಿನ ಕೂಪ ಮಾಡಿವೆ. ಮಹಾಸನ್ನಿಧಾನದ

ಅಗ್ರಜರ ಪಟ್ಟ ಮಹಾದೇವಿಯವರು ಯಾರೆಂಬುದು ನಿಮಗಾಗಲೇ ಗೊತ್ತಲ್ಲ. ಅವರು ತಮ್ಮ ಒಡಹುಟ್ಟಿದ ಸೋದರಿಯರ ಮೇಲೆ, ನನ್ನ ಮೇಲೆ, ಸಂಶಯ ಪಟ್ಟು ತಮ್ಮ ಬಾಳನಷ್ಟೇ ಅಲ್ಲ, ತಾವು ಕೈ ಹಿಡಿದಾತನ ಹಾಗೂ ಸೋದರಿಯರ ಬಾಳನ್ನೆಲ್ಲಾ ಅಸಹ್ಯ ಮಾಡಿಬಿಟ್ಟರು. ಎಲ್ಲಾ ಮುಗಿದಮೇಲೆ, 'ಅಯ್ಯೋ ತಪ್ಪು ಮಾಡಿದೆ' ಎಂದು ಪಶ್ಚಾತ್ತಾಪ ಪಟ್ಟರು. ಅದನ್ನು ಇನ್ನು ಯಾವಾಗಲಾದರೂ ಹೇಳುತ್ತೇನೆ. ಮಾನವನಾಗಿ ಹುಟ್ಟಿದ ಮೇಲೆ ಈ ಎಲ್ಲ ಬಗೆಯ ವಿಷವರ್ತುಲದ ಒಳಗೆ ಇದ್ದು, ಬಾಳನ್ನು ಸುಂದರ ಮಾಡಿಕೊಳ್ಳಬೇಕು ಅವನೇ ನಿಜವಾದ ಸಾಧಕ'' ಎಂದು ಮಾತು ನಿಲ್ಲಿಸಿದಳು.

ಕುವರ ಬಿಟ್ಟಿಯಣ್ಣ, ದಣ್ಣಾಯಕ ಬೊಪ್ಪದೇವನೊಂದಿಗೆ ವಿಚಾರ ವಿನಿಮಯ ಮಾಡಿಕೊಂಡು ಬಂದ. ಮೊಗಸಾಲೆಯಲ್ಲಿ ಇನ್ನೂ ರೂವಾರಿ ಮತ್ತು ಪಟ್ಟಮಹಾದೇವಿ ಕುಳಿತಿರುವುದನ್ನು ನೋಡಿ ಅಶ್ಚರ್ಯಪಟ್ಟ

ಒಳಗೆ ಬಂದ ಕುವರ ಬಿಟ್ಟಿಯಣ್ಣನನ್ನು ನೋಡಿ, "ಎಲ್ಲಾ ಕೆಲಸವಾಯಿತು ತಾನೆ?'' ಎಂದು ಶಾನ್ತಲದೇವಿ ಕೇಳಿದಳು.

ಬಿಟ್ಟಿಯಣ್ಣ ಒಡನೆಯೇ ಉತ್ತರಿಸದೆ ಒಮ್ಮೆ ರೂವಾರಿಯತ್ತ ನೋಡಿ ಮತ್ತೆ ಶಾನ್ತಲದೇವಿಯತ್ತ ನೋಡಿದ.

"ನೋಡು ಇವತ್ತು ಸ್ಥಪತಿಗಳು ಹಗಲಿನಲ್ಲಿ ಸರಿಯಾಗಿ ಉಂಡಿಲ್ಲ. ಅದರಿಂದ ಈಗ ನಿನ್ನೊಡನೆ ಇವರ ಆರೋಗಣೆ ಎಂದು ವ್ಯವಸ್ಥೆ ಮಾಡಲಾಗಿದೆ. ಸ್ವಲ್ಪ ಸರಿಯಾಗಿ ಇವರನ್ನು ನೋಡಿಕೋ. ಮೊದಲು ನಿಮ್ಮ ಆರೋಗಣೆ ಮುಗಿಯಲಿ. ಇವರನ್ನು ಬಿಡಾರಕ್ಕೆ ಕಳುಹಿಸಿ ನಂತರ ಉಳಿದ ವಿಷಯ ಹೇಳುವೆಯಂತೆ. ನಾನು ಕಾದಿರುತ್ತೇನೆ'' ಎಂದು ಎದ್ದು ನಿಂತಳು ಶಾನ್ತಲದೇವಿ.

ರೂವಾರಿಯೂ ಎದ್ದುನಿಂತ.

"ಸಂಕೋಚ ಮಾಡಿಕೊಳ್ಳದೆ ಊಟಮಾಡಿ'' ಎಂದು ಹೇಳಿ ಶಾನ್ತಲದೇವಿ ಹೊರಟುಹೋದಳು.

ಆರೋಗಣೆ ಆದಮೇಲೆ ರೂವಾರಿ ತನ್ನ ಬಿಡಾರಕ್ಕೆ ಹಿಂತಿರುಗಿದ. ತಾನು ಸರಿಯಾಗಿ ಊಟಮಾಡಲಾಗದಿದ್ದುದು ಒಂದು ಸಣ್ಣ ವಿಷಯ. ಅದನ್ನೇಕೆ ಮಂಚಣ ಹೋಗಿ ಅರಮನೆಗೆ ವರದಿ ಮಾಡಬೇಕಾಗಿತ್ತು ? ಎಂದು ರೂವಾರಿಗೆ ಅಸಮಾಧಾನವಾಗಿತ್ತು. ಬಿಡಾರಕ್ಕೆ ಹಿಂತಿರುಗಿದ ಮೇಲೆ ಅವನಿಗೆ ಗಟ್ಟಿಯಾಗಿ ತಿಳಿವಳಿಕೆ ಹೇಳುವುದು ಎಂದು ಸಹ ರೂವಾರಿ ಯೋಚಿಸಿದ್ದ. ಶಾನ್ತಲದೇವಿ ಹೇಳಿದ ದಣ್ಣಾಯಕಿತಿಯ ಕತೆ, ಚಟ್ಟಲೆಯ ಕತೆ ಅವನ ಚಿತ್ತವನ್ನು ತುಂಬಿ, ಈ ವಿಷಯವೇ ಅವನ ನೆನಪಿನಲ್ಲಿ ಉಳಿಯಲಿಲ್ಲ. ದೊಡ್ಡವರ ಸಣ್ಣತನ, ಸಣ್ಣವರ ದೊಡ್ಡತನಗಳ ಸ್ವರೂಪ ಗೊತ್ತಾದರೂ ಅದರೊಂದಿಗೆ ದೊಡ್ಡವರ ದೊಡ್ಡತನವೂ, ಸಣ್ಣವರ ಸಣ್ಣತನವೂ ಸಹ ಅವನಿಗೆ ಮನವರಿಕೆಯಾಯಿತು. ಆದರೆ ಸಂಶಯವೆಂಬುದು ಹೊಕ್ಕರೆ ಅದು ದೊಡ್ಡವರು ಸಣ್ಣವರು ಎಂಬ ಭೇದವಿಲ್ಲದೆ ಅವರ ಬಾಳನ್ನು ಕೆಸರುಮಯ ಮಾಡುತ್ತದೆ ಎಂಬುದಂತೂ ಅವನಿಗೆ ಖಚಿತವಾಯಿತು. ಭಾವೋದ್ವೇಗಗಳು ನೆಲೆನಿಂತಾಗ ಅದು ಎಲ್ಲರಿಂದಲೂ ಒಂದೇ ಬಗೆಯ ಕ್ರಿಯೆಯನ್ನು ಮಾಡಿಸುತ್ತದೆ ಎಂಬುದರ ಸಾಕ್ಷಾತ್ಕಾರವೇ ಆಯಿತು. ಆದರೂ ಇವುಗಳ ನಡುವೆ ನಿರ್ವಿಣ್ಣತೆಯಿಂದ, ತೆರದ ಮನಸ್ಸಿನಿಂದ, ನಿರ್ಲಿಪ್ತತೆಯಿಂದ, ಆವೇಗರಹಿತವಾಗಿ ನಿಂತ ಪಟ್ಟಮಹಾದೇವಿಯ ರೀತಿ ಮತ್ತು ಗಾಂಭೀರ್ಯವನ್ನು ಕಂಡು ಅವನು

ವಿಸ್ಮಿತನಾದ. ಹಾಗಿರಲು ಅವರಿಗೆ ಹೇಗೆ ಸಾಧ್ಯವಾಯಿತು ಎಂದು ಯೋಚಿಸಿದ. ಶುದ್ಧಮನಸ್ಸು, ಸುಸಂಸ್ಕಾರ ಇವೆರಡೇ ಮುಖ್ಯ ಕಾರಣ ಎಂದು ಅವನಿಗನ್ನಿಸಿತು.

ವಾಸ್ತವವಾಗಿ ಲೋಕ ಭಾವಿಸಿದ ರೀತಿಯಲ್ಲಿ ಶೀಲಭ್ರಷ್ಟಳಾದ ಚಟ್ಟಲೆಗೆ ಒಳ್ಳೆಯ ಬಾಳೇ ಒದಗಿ ಬರಲು ಸಾಧ್ಯವಿಲ್ಲ. ಅಂತಹುದರಲ್ಲಿ ಅವಳಿಗೆ ಒಳ್ಳೆಯ ಬಾಳು ಒದಗಿ ಬರುವಂತೆ ಮಾಡಲು ಪಟ್ಟಮಹಾದೇವಿ ವಹಿಸಿದ ಪಾತ್ರ ಅವನಿಗೆ ಏಕೋ ತುಂಬ ಮೆಚ್ಚಿಕೆಯದು ಎನಿಸಿತು. ಅದರ ಹಿಂದೆಯೇ ತನ್ನ ಬಾಳಿನ ಕಥೆ ಅವನ ಮನಃಪಟ್ಟಲದಲ್ಲಿ ಮತ್ತೆ ಸುಳಿಯುತ್ತಾ ಹೋಯಿತು. ಬೆಳಗಿನ ಜಾವದ ಕನಸಿನಿಂದ ಹಿಡಿದು ತಾನು ಗೃಹತ್ಯಾಗ ಮಾಡಿದವರೆಗಿನ ಒಂದೊಂದು ಘಟನೆಯೂ ಅವನ ಮನದಲ್ಲಿ ಹಾದು ಹೋಯಿತು. ಅದರ ಸ್ಮರಣೆಯ ವೇಗೆ ಹೆಚ್ಚಿದಂತೆಲ್ಲಾ, ಅವನ ಆ ಹಿಂದಿನ ಅಂದಂದಿನ, ಆಯಾಯ ಗಳಿಗೆಯ ಆ ವೇಗವೇ ಮರುಕಳಿಸಿದಂತಾಯಿತು. 'ಛೆ, ಛೆ. ತೆರೆದ ಮನಸ್ಸಿನ ಚಟ್ಟಲೆಗೂ ಇಲ್ಲಿಯದಕ್ಕೂ ಸಂಬಧವೇ ಇಲ್ಲ. ಒಂದು ಅಸಹಾಯಕ ನಿರ್ಮಲತ್ವವಾದರೆ, ಇನ್ನೊಂದು ಯೋಜಿತ ನೀಚ ಪ್ರವೃತ್ತಿ. ಒಂದು ಪುಟಕ್ಕಿಕ್ಕಿದ ಚಿನ್ನ. ಇನ್ನೊಂದು ಬೆಂದು ಬೂದಿಯಾದ ಕಾಷ್ಠ. ಒಂದು ತ್ಯಾಗ ಜ್ಯೋತಿ. ಇನ್ನೊಂದು ಜಗತ್ತನ್ನೂ ಕತ್ತಲಿಸುವ ಸ್ವಾರ್ಥದ ಕರ್ಬೊಗೆ....' ಹೀಗೆಯೇ ಅವನ ಮನಸ್ಸು, ಎರಡು ವ್ಯಕ್ತಿಗಳ ಬಗೆಗೆ ಹೋಲಿಕೆಯ ಆಲೋಚನೆ ಮಾಡುತ್ತಿದ್ದಂತೆಯೇ ನಿದ್ದೆ ಹೋದ.

# ೬. ನಾಟ್ಯ ನಾದ ಸರಸ್ವತಿ

ಅತ್ತ ತಲಕಾಡಿನ ಯುದ್ಧ ಸಾಗಿದ್ದಾಗ ಇತ್ತ ವೇಲಾಪುರಿಯಲ್ಲಿ ದೇವಮಂದಿರದ ಕೆಲಸ ಭರದಿಂದ ಸಾಗಿತ್ತು. ಪೌರಾಣಿಕ ಕಥಾ ನಿರೂಪಕ ಶಿಲ್ಪಗಳ ಸಾಲುಗಳನ್ನೂ ಮುಗಿಸಿ, ಕೂಡಿಸಿ ಅದರ ಮೇಲೆ ಮಂದಿರದೊಳಕ್ಕೆ ಬೆಳಕು ಹರಿಯಲು ಅನುಕೂಲಿಸುವಂತಹ ಚಿತ್ತಾರದ ಜಾಲಂಧ್ರಗಳು ನಡುವೆ ಏರಿ ನಿಂತವು. ಜಾಲಂಧ್ರಗಳ ನಡುವೆ ಉಬ್ಬು ಚಿತ್ರಗಳು ಮೂಡಿ ನಿಂತವು. ನಡುನಡುವೆ ರಾಷ್ಟ್ರ ನಂಬಿರುವ ದೇವ ದೇವತೆಗಳ ಬೇರೆ ಬೇರೆ ಸ್ವರೂಪಗಳ ವಿಗ್ರಹಗಳನ್ನು ಹೊಂದಿಸಿ ಅವುಗಳನ್ನು ಮಂಟಪವಾಸಿಗಳಂತೆ ರೂಪಿಸಲಾಗಿತ್ತು. ಅವೆಲ್ಲಕ್ಕೆ ಮೇಲೆ ಇಳಿಜಾರು ಶಿಲಾಛಾವಣಿವರೆಗೆ ಕಲ್ಲಿನ ಸರಳ ಉಬ್ಬು ತಗ್ಗುಗಳ ವಿನ್ಯಾಸ ರೂಪಿತವಾಯಿತು. ಛಾವಣಿಯ ಮಟ್ಟಕ್ಕೆ ಮಂದಿರ ಸಿದ್ಧವಾಯಿತು.

ಒಂದು ದಿವಸ ಪಟ್ಟಮಹಾದೇವಿ ಶಾನ್ತಲದೇವಿ, ಬಿಟ್ಟಿಯಣ್ಣ ಮತ್ತು ಸ್ಥಪತಿ ಒಂದು ಸುತ್ತು, ಎದ್ದು ನಿಂತಿದ್ದ ಮಂದಿರದ ಸುತ್ತಲೂ ಕೈಯಲ್ಲಿ ನಕ್ಷೆ ಹಿಡಿದು ವೀಕ್ಷಿಸಿಕೊಂಡು ಮಹಾದ್ವಾರದ ಬಳಿಗೆ ಬಂದು ನಿಂತರು.

"ಈ ಮಹಾದ್ವಾರದ ಮೇಲೆ ಎಡಪಕ್ಕದಲ್ಲಿ ಇಷ್ಟು ಅಗಲಕ್ಕೂ ಛಾವಣಿಯವರೆಗೂ ರಾಜ ಸಭೆಯ ಒಂದು ಚಿತ್ರ ಮೂಡಿಸೋಣವೆನ್ನಿಸಿದೆ'' ಎಂದ ರೂವಾರಿ ಸ್ಥಪತಿ.

"ಸನ್ನಿಧಾನ ಹಿಂತಿರುಗಿದ ಮೇಲೆ ಒಂದು ಮಾತು ಕೇಳಿ ಆ ಕೆಲಸ ಮಾಡುವುದು ಒಳಿತು'' ಎಂದಳು ಶಾನ್ತಲದೇವಿ.

"ಅಪ್ಪಣೆ'' ಎಂದ ಸ್ಥಪತಿ.

ಬಿಟ್ಟಿಯಣ್ಣನತ್ತ ತಿರುಗಿದ ಶಾನ್ತಲದೇವಿ, "ನೀನು ನಕ್ಷೆಯನ್ನು ನೋಡಿದ್ದೀಯೆ. ಈಗ ಎದ್ದು ನಿಂತಿರುವ ಮಂದಿರ ನಕ್ಷೆಯಂತೆಯೇ ಇದೆಯೆ ?'' ಎಂದು ಕೇಳಿದಳು.

"ತದ್ವತ್ ಇದೆ. ಆದರೂ....." ಮಾತು ನಿಲ್ಲಿಸಿದ ಬಿಟ್ಟಿಯಣ್ಣ.

"ಏನಾದರೂ ಅಸಮರ್ಪಕವೆನಿಸಿದೆಯೆ ?'' ಎಂದು ಸ್ಥಪತಿ ಕೇಳಿದ.

"ಈ ನಕ್ಷೆಯಲ್ಲಿ ಈ ಮಂದಿರದ ಎತ್ತರ ಎಷ್ಟು ಎಂಬ ಕಲ್ಪನೆ ನನ್ನ ಮನಸ್ಸಿಗೆ ನಿಲುಕಿರಲಿಲ್ಲ. ಆದರೆ ಈಗ ನಿರ್ಮಿತವಾಗಿರುವಷ್ಟು ಈ ಮಂದಿರದ ರಚನೆಯನ್ನು ಕೆಳಗಿನಿಂದ ನೋಡುತ್ತ ಹೋದಂತೆ ಕಣ್ಣಿಗೆ ಆನಂದ ನೀಡುತ್ತದೆ ಎಂದೆನ್ನಿಸುತ್ತದೆ. ಆದರೆ ಮೇಲೆರುತ್ತ ಏರುತ್ತ ಚಪ್ಪಟೆ ಎನಿಸುತ್ತದೆ. ಕೆಳಗೆ ಆನಂದ ನೀಡುವ ಆ ಉಬ್ಬು ತಗ್ಗುಗಳು ಮೇಲಿಲ್ಲ'' ಎಂದ ಬಿಟ್ಟಿಯಣ್ಣ.

"ನನಗೂ ಹಾಗೆನ್ನಿಸಿತು. ಅದಕ್ಕಾಗಿ ಕೆಲವು ಆಕರ್ಷಕ ಭಂಗಿಯ ವಿಗ್ರಹಗಳನ್ನು ಕೆತ್ತಿ ಒಂದು ಓರೆಯ ಮೇಲೆ ಅಲ್ಲಲ್ಲಿ ಮಂದಿರದ ಸುತ್ತಲೂ ಅಳವಡಿಸಬೇಕೆಂದಿದ್ದೇನೆ. ಮತ್ತು ಅದರ ಸಲುವಾಗಿ ಕೆಲವು ಚಿತ್ರಗಳನ್ನು ಸಹ ನಾನು ರಚಿಸಿದ್ದೇನೆ'' ಎಂದು ಸ್ಥಪತಿ ಹೇಳಿದ.

"ಈವರೆಗೆ ಆ ವಿಷಯವನ್ನು ನೀವು ಏಕೆ ತಿಳಿಸಲೇ ಇಲ್ಲ ?'' ಎಂದು ಶಾನ್ತಲದೇವಿ ಕೇಳಿದಳು.

"ಪ್ರಸಂಗ ಬಂದಾಗ ತಿಳಿಸೋಣವೆಂದಿದ್ದೆ. ಈ ಮಂದಿರದ ಸಮಗ್ರ ಚಿತ್ರ ಒಮ್ಮೆಲೇ ನನ್ನ ಮನದಲ್ಲಿ ಮೂಡಿ ಬಂದಿಲ್ಲ. ತೋಚಿದ್ದನ್ನೆಲ್ಲ ಚಿತ್ರರೂಪದಲ್ಲಿ ರಚಿಸಿಡುವುದು ನನ್ನದೊಂದು ಗೀಳು. ನಾನು ಅನಿರೀಕ್ಷಿತವಾಗಿ ಈ ಕೆಲಸದಲ್ಲಿ ತೊಡಗಬೇಕಾಯಿತು. ಆಗ ನನಗಿದ್ದ ಅಲ್ಪ ಅನುವಿನಲ್ಲಿ ಆ ಕ್ಷಣಕ್ಕೆ ಒಂದು ರೂಪ ಕೊಟ್ಟಿದ್ದೆ. ಮಂದಿರದ ಭಿತ್ತಿ ಮೇಲೇರುತ್ತ ಏರುತ್ತ ಭಣ ಭಣ ಎನ್ನುತ್ತದೆ ಎಂದು ಆಗಲೇ ಅನಿಸಿತ್ತು. ಕೆಲಸ ಕೈಕೊಂಡ ಮೇಲೆ ದೃಷ್ಟಿ ಮೇಲೆ ಹರಿಸಿದಾಗಲೂ ಆಕರ್ಷಣೆ ಹಾಗೆಯೇ ಉಳಿದಿರಬೇಕೆಂದೂ ವೈವಿಧ್ಯವೂ ಅದರಲ್ಲಿ ಮಿಳಿತಗೊಂಡಿರಬೇಕೆಂದೂ ಓರೆ ವಿಗ್ರಹಗಳನ್ನು ಅಳವಡಿಸಬೇಕೆಂದು ನಿರ್ಣಯಿಸಿಕೊಂಡು ಚಿತ್ರೀಕರಣಕ್ಕೆ ಬಿಡುವಿನ ಕಾಲದಲ್ಲಿ ತೊಡಗಿದೆ. ಈಗ ವಾಸ್ತವವಾಗಿ ಒಳಿತಾಯಿತು. ನನಗನ್ನಿಸಿದಂತೆ ಬೇರೆಯವರಿಗೂ ಅನ್ನಿಸಿದ ಮೇಲೆ ಅಲ್ಲಿ ಅಪೂರ್ಣತೆ ಇದೆ ಎಂದೇ ಭಾವಿಸಬೇಕು.''

"ನಿಮ್ಮ ಚಿತ್ರಗಳನ್ನು ನೋಡಬೇಕಲ್ಲ'' ಎಂದಳು ಶಾನ್ತಲದೇವಿ.

"ತಂದೊಪ್ಪಿಸುತ್ತೇನೆ.''

"ಒಳ್ಳೆಯದು ಸ್ಥಪತಿಗಳೆ. ಹಾಗೆಯೇ ಮಾಡಿ'' ಎಂದು ಶಾನ್ತಲದೇವಿ ಸೂಚಿಸಿದಳು.

"ರಣ ಶಿಬಿರದಿಂದ ಬಲ್ಲುವಿನ ಮಾತಾಪಿತೃಗಳ ಸುದ್ದಿ ಏನಾದರೂ ತಿಳಿದು ಬಂದಿದೆಯೆ?'' ಎಂದು ತುಸು ಸಂಕೋಚದಿಂದ ರೂವಾರಿ ಕೇಳಿದ.

"ಬಂದಿದೆ. ಸುರಕ್ಷಿತವಾಗಿದ್ದಾರೆ.''

"ಬಿಡುಗಡೆ ಹೇಗೆ ಆಯಿತೆಂದು ತಿಳಿಯಬಹುದೆ ?''

"ಅವರ ಸ್ವಪ್ರಯತ್ನದಿಂದ ಸೆರೆಸಿಕ್ಕೆವೆಂದು ಅವರು ಕಂಗಾಲಾಗಿ ಕುಳಿತಿದ್ದರೆ ಅವರು ನಮಗೆ ದಕ್ಕುತ್ತಲೇ ಇರಲಿಲ್ಲ. ಅನುಮಾನ ಪಡದೆ ಧೈರ್ಯದಿಂದ ಅವರು ತಮ್ಮ ಕಾರ್ಯ ರೂಪಿಸಿಕೊಂಡರು. ಕೃತಕಾರ್ಯರಾದರು. ಏಕೆಂದರೆ ಅವರು ಎಲ್ಲಕ್ಕೂ ಮೊದಲು ಆಶಾವಾದಿಗಳು. ಶಂಕೆಯನ್ನು ವಿಸರ್ಜಿಸಿದವರು; ಧೈರ್ಯ ಶಾಲಿಗಳು. ಆಮೆಯಂತೆ ಹೆದರಿ ಕೈಕಾಲು ತಲೆಗಳನ್ನು ಚಿಪ್ಪಿನೊಳಕ್ಕೆ ಎಳೆದುಕೊಳ್ಳುವವರಲ್ಲ.''

"ಅವರ ವಿಚಾರ ತಿಳಿದಾಗಿನಿಂದ ಅವರನ್ನು ಎಂದು ನೋಡೇನೆಂಬ ಅಪೇಕ್ಷೆ, ಆತುರ ನನ್ನದಾಗಿದೆ.''

"ಅದೂ ಬಹುಶಃ ಬಹಳ ದೂರವಿಲ್ಲ. ಏಕೆಂದರೆ ಚೋಳ ರಾಜಪ್ರತಿನಿಧಿ ರಣರಂಗದಿಂದ ಪಲಾಯನ ಮಾಡಿದನೆಂದೂ ಗಂಗರಾಜಾದಿಗಳು ಶತ್ರುಗಳ ಬೆನ್ನಟ್ಟಿದರೆಂದೂ ಬೇಹು ಬಂದಿದೆ. ನಿಮ್ಮ ಭವಿಷ್ಯ ನಿಜವಾಗುವ ಕಾಲ ಸನ್ನಿಹಿತವೆನ್ನಬಹುದು.''

"ಜೋತಿಷ್ಯ ಸುಳ್ಳಾಗುವುದಿಲ್ಲ'' ಎಂದ ರೂವಾರಿ.

"ಆದರೆ ಹೇಳುವವರು ಸರಿಯಾಗಿ ಜೋತಿಷ್ಯ ತಿಳಿಯದೆ ಇದ್ದರೆ, ಅವರು ಹೇಳುವ ಫಲ ಹೇಗೆ ದೊರಕೀತು ?''

"ಸನ್ನಿಧಾನದ ಮಾತು ನಿಜ. ಅದಕ್ಕೇ ನಾನು ಆ ಬಗೆಗೆ ಮಾತನಾಡಲು ಹೋಗುವುದಿಲ್ಲ ಸನ್ನಿಧಾನದ ತೀರ್ಥರೂಪರ ಜಾತಕದ ಮಾತು ಹಿಂದೆ ಬಂದುದು ನೆನಪಿರಬಹುದು."

"ಸಾವಿನ ವಿಷಯ, ಜಾರತ್ವದ ವಿಷಯ ನುಡಿಯ ಬಾರದಂತೆ. ಹೌದೆ ?" ಎಂದು ಕೇಳಿದಳು ಶಾನ್ತಲದೇವಿ.

"ಹೌದು, ನೇರವಾಗಿ ನುಡಿಯಬಾರದು. ಪರ್ಯಾಯವಾಗಿ ಸೂಚಿಸಬಹುದು ?"

"ಶಾಸ್ತ್ರ ಸುಳ್ಳಾಗುವುದಿಲ್ಲ ಎಂದಾಗ ಸತ್ಯ ಹೇಳಲು ಏಕೆ ಹಿಂಜರಿಯಬೇಕು ? ಈ ಸಲಹೆ ಅಸಾಧುವಲ್ಲವೆ ?"

"ನಾನು ಅಲ್ಪಜ್ಞ. ಹಿಂದಿನವರು ಸೂಚಿಸಿದುದು ಸರಿಯಲ್ಲವೆಂದು ಹೇಳಲು ಮನಸ್ಸಿಗೆ ಒಗ್ಗುವುದಿಲ್ಲ. ಆದರೂ ಅದಕ್ಕೆ ಏನಾದರೂ ಕಾರಣವಿರಬೇಕು."

"ಅಪ್ರಿಯವಾದ ಸತ್ಯ ನುಡಿಯಬಾರದೆಂದು."

"ನಿಜಾಂತ ಕಾಣುತ್ತದೆ. ಬಹಳ ಹಿಂದಿನ ಮಾತು. ನಮ್ಮ ಸ್ವಂತ ಊರಿನಲ್ಲಿದ್ದಾಗಿನದು. ಒಬ್ಬಾತ ಬಂದು ತಮ್ಮ ಜಾತಕ ಕೊಟ್ಟು 'ಇದರ ಮೇಲೆ ನಮ್ಮ ಮಾತಾಪಿತೃಗಳ ಬಗೆಗೆ ಹೇಳಲು ಸಾಧ್ಯವೆ ?' ಎಂದು ಕೇಳಿದರು. ನಾನು 'ಸಾಧ್ಯ' ಎಂದೆ. 'ಹಾಗಾದರೆ ನಮ್ಮ ತಂದೆ ಯಾವಾಗ ಸಾಯುತ್ತಾರೆ ಹೇಳಿ' ಎಂದು ಥಟ್ಟನೆ ಕೇಳಿಬಿಟ್ಟರು. ಆತನ ಆ ಮಾತನ್ನು ಕೇಳಿ. ನನಗೆ ಒಂದು ಬಗೆಯ ಅಸಹ್ಯವೆನಿಸಿತು, ಇಷ್ಟುಹೊತ್ತೂ ನನ್ನ ಕಣ್ಣು ಮಾತ್ರ ಆ ಜಾತಕದ ಮೇಲೆ ಇತ್ತು. ಆ ಕುಂಡಲಿ ನೋಡುತ್ತಿದ್ದಂತೆ ಮನಸ್ಸಿಗೆ ಏನೋ ಸೂಚಿತವಾಯಿತು. ನನ್ನ ಮುಖದ ಮೇಲೆ ಒಂದು ವ್ಯಂಗ್ಯ ನಗೆ ಮೂಡಿ ಬಂತು. ಆತ ಅದನ್ನು ಗಮನಿಸಿ, 'ಏಕೆ' ಎಂದರು. 'ಯಾರಾದರೂ ಹೀಗೆಲ್ಲಾ ಕೇಳುತ್ತಾರೆಯೆ ? ತಂದೆ ಪೂಜ್ಯರಲ್ಲವೆ ?' ಎಂದೆ. 'ಆದರೂ ಅವರ ಕಾಟ ಸಹಿಸುವುದು ಬಹಳ ಕಷ್ಟವಾಗಿದೆ' ಎಂದರು ಆತ. 'ಓ ಹಾಗೇನು, ನಿಮಗೆ ಆ ಕಾಟದಿಂದ ಬೇಗಲೆ ಬಿಡುಗಡೆ ಆಗುತ್ತದೆ' ಎಂದೆ. ಆತ ಸಂತಸದಿಂದ ಹೊರಟುಹೋದರು. ನಾನು ನಿಜವನ್ನು ಹೇಳಿರಲಿಲ್ಲ.

"ಸುಳ್ಳು ಹೇಳಿದಿರಾ ?"

"ಸುಳ್ಳೂ ಹೇಳಿರಲಿಲ್ಲ."

"ನಿಜವೂ ಅಲ್ಲ. ಸುಳ್ಳೂ ಅಲ್ಲ ಎಂದರೆ."

"ಆತನ ಮನಸ್ಸಿನ ಪ್ರಶ್ನೆಯೇ ಬೇರೆ ಆಗಿತ್ತು. ಅದು ಸನ್ನಿಧಾನಕ್ಕೆ ಗೊತ್ತಲ್ಲ. ನನಗೆ ಆ ಕುಂಡಲಿಯಲ್ಲಿ ಕಂಡ ಸತ್ಯವೇ ಬೇರೆ ? ತನ್ನ ಮರಣ ಯಾವಾಗೆಂಬುದನ್ನರಿಯದ ಆತ, ಅದು ಸನಿಯಲ್ಲಿದ್ದರೂ ತನ್ನ ತಂದೆಯ ಮರಣದ ವಿಷಯ ಕೇಳಲು ಬಂದಿದ್ದ. ಸಾಯುವವನು ನಿಮ್ಮ ತಂದೆಯಲ್ಲ ನೀನು ಎಂದು ನಾನು ಸತ್ಯವನ್ನು ಹೇಳಲಿಲ್ಲ. ತಂದೆ ತನಗೆ ಕಾಟಕೊಡುವನೆಂಬುದು ಅವನ ಭಾವನೆಯಾಗಿತ್ತು. ಅದರಿಂದ, ನಿನಗೆ ಆ ಕಾಟದಿಂದ ಬಿಡುಗಡೆ ಎಂದೆ. ಕಾಟ ಸಹಿಸಲು ಈತ ಬದುಕಿರುವಂತೆಯೇ ಇರಲಿಲ್ಲವಲ್ಲ."

"ನಿಜ, ಜ್ಯೋತಿಷ್ಯದ ಪೂರ್ಣ ಅರಿವಿದ್ದರೆ ಅದರ ಪ್ರಭಾವವೇ ಬೇರೆ."

"ಸನ್ನಿಧಾನಕ್ಕೂ ಆ ಶಾಸ್ತ್ರದ ಅರಿವು ಬಹಳ ಚೆನ್ನಾಗಿ ಇರಬೇಕಲ್ಲವೇ ?"

"ಇದೆ. ಅಷ್ಟೋ ಇಷ್ಟೋ. ನಾನು ಫಲ ಜೋತಿಷ್ಯದ ಕಡೆಗೆ ಅಷ್ಟು ಆಸಕ್ತಿ ನೀಡಿದವಳಲ್ಲ. ನಮ್ಮ ಈ ಮರಿಡಣ್ಣಾಯಕನ ಜಾತಕದ ಬಗೆಗೆ ಮಾತ್ರ ನಾನು ಆಸಕ್ತಿ ವಹಿಸಿದ್ದುಂಟು."

"ನಾನು ಒಮ್ಮೆ ಅದನ್ನು ನೋಡಬಹುದೆ ?"

"ಅಗತ್ಯವಾಗಿ ನೋಡಿ. ಆದರೆ ಅವನಿಗೆ ಏನೂ ಹೇಳಬೇಡಿ."

"ಏನಾದರೂ ಹೇಳುವುದಕ್ಕಲ್ಲ. ಅನುಭವ ಸಿದ್ಧಾಂತವೇ ಜೋತಿಷ್ಯ ಸೂತ್ರಗಳಿಗೆ ಮೂಲ ಆಧಾರವಲ್ಲವೆ ? ಮಾತಾಪಿತೃಗಳನ್ನು ಒಟ್ಟಿಗೆ ಕಳೆದುಕೊಂಡ ಇವರ ಜಾತಕದ ಗ್ರಹಸ್ಥಿತಿ ಹೇಗೆಂಬುದನ್ನು ತಿಳಿಯುವ ಕುತೂಹಲದಿಂದ ಕೇಳಿದೆ ಅಷ್ಟೆ"

"ರೂವಾರಿಗಳೆ, ನನಗೆ ಲಭ್ಯವಾಗಿರುವಂತಹ ಮಾತಾಪಿತೃಗಳು ನನ್ನಂತಹವನಿಗೆ ಮಾತ್ರ ಲಭ್ಯ" ಎಂದ ಬಿಟ್ಟಿಯಣ್ಣ.

"ಅದೂ ಸಹ ಒಂದು ವಿಶೇಷ ಯೋಗವೆ. ಅದೂ ನಿಮ್ಮ ಜಾತಕದಲ್ಲಿ ಕಾಣಬಹುದು."

"ಸುಮ್ಮನೆ ಈಗ ಆಗಬೇಕಾದ ಕೆಲಸದ ಕಡೆ ಗಮನಕೊಡಿ. ಜಾತಕ, ಕುಂಡಲಿ, ಗ್ರಹಸ್ಥಿತಿ, ಗೋಚಾರಾಂತ ಗೊಂದಲಕ್ಕೆ ಬಿದ್ದು ಸಮಯ ದಂಡಮಾಡಬೇಡಿ" ಎಂದ ಬಿಟ್ಟಿಯಣ್ಣ.

"ಶಿಲ್ಪದ ಕೆಲಸವಿಲ್ಲದಾಗ ನೋಡುತ್ತೇನೆ. ಆಗದೆ ?"

"ಆಗೊಂದು ನೀವು ಹೊಂದಿಸ ಬಯಸಿರುವ ಭಂಗಿಯನ್ನು ಕಲ್ಪಿಸುವುದರಲ್ಲಿ ತೊಡಗಿ. ಅದು ಇದಕ್ಕಿಂತ ಉಪಯುಕ್ತವಾದ ಕೆಲಸ" ಎಂದ ಬಿಟ್ಟಿಯಣ್ಣ.

"ಮರಿಡಣ್ಣಾಯಕರು ಸ್ತ್ರೀ ವೇಷ ಧರಿಸಿ ನಾಟ್ಯ ಮಾಡಿ ಮರುಳು ಮಾಡಿದ್ದೀರಂತಲ್ಲ. ನೀವು ಹಾಗೆ ವೇಷ ಧರಿಸಿ ಭಂಗಿ ಇತ್ತರೆ ನನಗೆ ಸಾಕು, ನೀವಿತ್ತ ಭಂಗಿಯ ಚಿತ್ರರೂಪಿಸಿ ವಿಗ್ರಹ ಕಡೆಯುತ್ತೇನೆ."

"ಮೂಡಿ ಬಂದಿರುವ ಈ ಮೀಸೆಯನ್ನೇನು ಮಾಡಲಿ ? ಅದಕ್ಕಿಂತ ನನ್ನ ಗುರುಗಳು ಪಟ್ಟಮಹಾದೇವಿಯವರು ಉತ್ತಮ ಭಂಗಿ ನೀಡಬಲ್ಲರು."

"ಬಿಟ್ಟಿ !" ಎಂದಳು ಶಾನ್ತಲದೇವಿ. ಅವಳ ನೋಟ ತೀಕ್ಷ್ಣವಾಯಿತು.

"ಪಾಪ. ಇನ್ನೂ ಹುಡುಗು, ಅವರು ಹೇಳಿದರೆ ನನಗೆ ಔಚಿತ್ಯದ ಜ್ಞಾನವಿಲ್ಲವೆ ? ಸನ್ನಿಧಾನದಿಂದ ನಾವು ಹಾಗೆಲ್ಲ ನಿರೀಕ್ಷೆ ಮಾಡಬಾರದು."

"ನಿಮ್ಮ ಕಲ್ಪನೆಗಳೇ ನಿಜ ಮಾನವರ ಭಂಗಿಗಿಂತ ಸುಂದರವಾಗಿರುವಾಗ ಅದರ ಅವಶ್ಯಕತೆಯೇ ಇರುವುದಿಲ್ಲ. ಹು, ಈಗೇಕೆ ಆ ವಿಚಾರ. ನೀವು ಈ ಸಂಜೆ ಆ ಚಿತ್ರಗಳನ್ನು ತನ್ನಿ. ಬಾ ಬಿಟ್ಟಿ" ಎಂದು ಶಾನ್ತಲದೇವಿ ಅರಮನೆಯತ್ತ ಹೊರಟು ಬಿಟ್ಟಳು. ಬಿಟ್ಟಿಯಣ್ಣ ಅವಳನ್ನು ಹಿಂಬಾಲಿಸಿದ.

ಪಟ್ಟಮಹಾದೇವಿಯ ಆದೇಶದಂತೆ ಸ್ಥಪತಿ ತಾನು ಕಲ್ಪಿಸಿ ಚಿತ್ರಿಸಿದ್ದ ಚಿತ್ರಗಳನ್ನು ತೆಗೆದುಕೊಂಡು ಅರಮನೆಗೆ ಆ ಸಂಜೆ ಹೋದ. ಪಟ್ಟಮಹಾದೇವಿ, ಕುವರ ಬಿಟ್ಟಿಯಣ್ಣ ಮತ್ತು ಸ್ಥಪತಿ ಒಟ್ಟಿಗೆ ಕುಳಿತು ಆ ಚಿತ್ರಗಳನ್ನು ನೋಡಿದರು.

"ಒಟ್ಟು ಎಷ್ಟು ಚಿತ್ರಗಳನ್ನು ರಚಿಸಿದ್ದೀರಿ ?" ಎಂದು ಶಾನ್ತಲದೇವಿ ಕೇಳಿದಳು.

"ಇಪ್ಪತ್ತನಾಲ್ಕು."

"ಅವುಗಳನ್ನು ಎಲ್ಲಿ ಹೊಂದಿಸಬೇಕೆಂದಿದ್ದೀರಿ ?'' ಎಂದು ಶಾನ್ತಲದೇವಿ ಕೇಳಿದಳು.

"ಅವುಗಳು ಎಲ್ಲಿ ಇರಬೇಕೆಂಬ ಬಗೆಗೆ ನಿಶ್ಚಯಿಸಿಲ್ಲ ಸನ್ನಿಧಾನ ಸೂಚಿಸಿದರೆ ಅದರಂತೆ ಹೊಂದಿಸಬಹುದು.''

"ಇಡೀ ದೇವಮಂದಿರ ನಿಮ್ಮ ಕಲ್ಪನೆಯದು. ಅದರಿಂದ ನಿಮಗೆ ಅದು, ನನಗಿಂತ ಸರಿಯಾದ ರೀತಿ ಹೊಳೆಯುತ್ತದಲ್ಲವೆ ?''

"ಮೂಲ ಕಲ್ಪನೆಯಲ್ಲಿ ಅದು ಸೇರಿ ಬಂದಿರಲಿಲ್ಲ. ಅದರಿಂದ ಈ ವಿಷಯದಲ್ಲಿ ನಾನು ಹೇಳಿದರೂ ಅಷ್ಟೆ ಸನ್ನಿಧಾನ ಅಪ್ಪಣೆ ಕೊಡಿಸಿದರೂ ಅಷ್ಟೆ''

"ಇಷ್ಟು ವಿಗ್ರಹಗಳು ಬೇಕು ಎಂದು ನಿಮ್ಮ ಭಾವನೆಯೇನು ?''

"ಹಾಗೇನು ನಾನು ಭಾವಿಸಿಲ್ಲ. ಮೊದಲ ಯೋಚನೆಗೆ ಬೇಕಾದೀತು ಎನ್ನಿಸಿತು. ಅವು ಹೆಚ್ಚೆನಿಸಿದರೆ ಕಡಿಮೆ ಮಾಡಬಹುದು.''

"ನೀವು ಭಿತ್ತಿಗಳ ಮೇಲಿನ ಹಂತಗಳಲ್ಲಿ, ಜಾಲಂಧ್ರಗಳ ಇಕ್ಕೆಲಗಳಲ್ಲಿನಂತೆ ಅರ್ಧ ವೃತ್ತದ ಕಂಭಗಳನ್ನು ಹೊಂದಿಸಿದ್ದೀರಲ್ಲವೆ ?''

"ಹೌದು, ಇಲ್ಲದೆ ಇದ್ದಿದ್ದರೆ ಇಡೀ ಭಿತ್ತಿ ಚಪ್ಪಟೆಯೆನಿಸಿ ಬೋಳು ಬೋಳೆನಿಸುತ್ತಿತ್ತು. ಕಂಬಗಳ ಈ ಉಬ್ಬಿನಿಂದಾಗಿ ಅಲ್ಲಿ ಒಂದು ವೈವಿಧ್ಯ ಮೂಡಿ ಭಿತ್ತಿಯ ಸೌಂದರ್ಯ ಹೆಚ್ಚುತ್ತದೆ.''

"ಆ ಕಂಭಗಳ ಮೇಲ್ತುದಿಗೆ ಈ ವಿಗ್ರಹಗಳನ್ನು ಹೊಂದಿಸಿದರೆ ಹೇಗೆ ?''

ಸ್ಥಪತಿ ಕ್ಷಣಕಾಲ ಮೌನವಾಗಿ ಆಲೋಚಿಸಿದ.

"ಭವ್ಯವಾಗುತ್ತದೆ. ಆ ರೀತಿ ಯೋಜಿಸಿದರೆ ಇಪ್ಪತ್ನಾಲ್ಕು ಸಾಲದು. ಮುವ್ವತ್ತಾರು ವಿಗ್ರಹಗಳು ಬೇಕಾಗುತ್ತದೆ'' ಎಂದ.

"ಕಲ್ಪಿಸಿಕೊಂಡು ಉಳಿದವಕ್ಕೂ ಚಿತ್ರ ಮೂಡಿಸಬಹುದಲ್ಲ'' ಎಂದಳು ಶಾನ್ತಲದೇವಿ.

"ಕಲ್ಪನೆಗೂ ವ್ಯಕ್ತಿಗತವಾದ ಮಿತಿಯಿರುತ್ತದೆ. ಇಲ್ಲಿ ಸಂಖ್ಯೆಯಷ್ಟೇ ಅಲ್ಲ ವೈವಿಧ್ಯವೂ ಇರಬೇಕು, ಆಕರ್ಷಣೆಯೂ ಇರಬೇಕು. ಸಾಧ್ಯವಾದೆಡೆಯಲ್ಲಿ ಕ್ರಿಯೆ, ಭಾವಗಳೂ ಮೂಡಬೇಕು. ಹಾಗಾದಾಗಲೇ ಈ ವಿಗ್ರಹಗಳಿಗೆ ಮೌಲ್ಯ ಬರುತ್ತದೆ. ನನ್ನ ಕಲ್ಪನೆಗೆ ಹೊಳೆದವನ್ನು ಚಿತ್ರೀಕರಿಸಿದ್ದೇನೆ. ಉಳಿದವನ್ನು ಸನ್ನಿಧಾನ ಸೂಚಿಸಿದರೆ ನನಗೆ ಹಗುರವಾಗುತ್ತದೆ.''

ಶಾನ್ತಲದೇವಿ ಕುವರ ಬಿಟ್ಟಿಗನ ಕಡೆ ನೋಡಿದಳು. ಅವನು ನನ್ನ ಮಂಡೆಗೇನು ಹೊಳೆಯುವುದಿಲ್ಲ ಎಂಬಂತೆ ತಲೆಯಲ್ಲಾಡಿಸಿದ. ತುಸು ಹೊತ್ತಾದ ಮೇಲೆ, "ಚಿತ್ರಗಳ ನಿಮ್ಮ ಈ ಕಡತ ನನ್ನ ಬಳಿ ಇರಲಿ. ನಾನು ಯೋಚಿಸಿ ಹೇಳುವ ಪ್ರಯತ್ನ ಮಾಡುತ್ತೇನೆ. ಹಾಗೆಂದು ನೀವು ನಿಶ್ಚಿಂತರಾಗಬೇಕಾಗಿಲ್ಲ. ನೀವೂ ಸಹ ಹೊಸ ಕಲ್ಪನೆಗೆ ಪ್ರಯತ್ನಿಸಿ'' ಎಂದು ಹೇಳಿ ಅವನಿಂದ ಚಿತ್ರಗಳ ಕಡತವನ್ನು ತೆಗೆದುಕೊಂಡಳು.

ಸ್ಥಪತಿ ಅಪ್ಪಣೆ ಪಡೆದು ಹೊರಟುಹೋದ. ಕುವರ ಬಿಟ್ಟಿಯಣ್ಣ ಮನ್ತ್ರಣ ಸಾಲೆಗೆ ಹೋದ.

ಶಾನ್ತಲದೇವಿ ಆ ಕಡತದೊಂದಿಗೆ ತನ್ನ ಸೆಜ್ಜೆವನೆಗೆ ಹೋದಳು. ಒಂದೊಂದಾಗಿ ಚಿತ್ರಗಳನ್ನು ವಿಮರ್ಶಕ ದೃಷ್ಟಿಯಿಂದ ನೋಡಿದಳು. ಅವುಗಳಲ್ಲಿ ಕೆಲವು ಅವಳಿಗೆ ಬೇಡವೆನಿಸಿತು. ದೇವಮಂದಿರ

ಭವ್ಯವಾಗುವುದರ ಜೊತೆಗೆ ಅದು ಸುಂದರವೂ ಆಗಬೇಕೆಂದು ಅವಳು ಭಾವಿಸಿ ತನ್ನ ಮನಸ್ಸಿನಲ್ಲಿ ಯಾವು ಯಾವುದೋ ಭಾವಭಂಗಿಗಳನ್ನು ಕಲ್ಪಿಸಿಕೊಂಡಳು. ಅವು ಹೇಗಿದ್ದೀತೆಂದು ತಾನೇ ಕಣ್ಣಿಂದ ಕಾಣಲು ನಿಲುಗನ್ನಡಿಯ ಮುಂದೆ ತನ್ನ ಕಲ್ಪನೆಯಲ್ಲಿ ಮೂಡಿದ ಭಾವ ಭಂಗಿಯಂತೆ ತಾನೇ ನಿಂತು ನೋಡಿಕೊಳ್ಳತೊಡಗಿದಳು.

ರಾಜಧಾನಿಯಲ್ಲಿ ರಾಜನಿಲ್ಲದುದರಿಂದ ಕುವರ ಬಿಟ್ಟಿಯಣ್ಣನಿಗೆ ಅಂತಃಪುರದಲ್ಲಿ ಸಹ ಸಲಿಗೆ ಹೆಚ್ಚಿತ್ತು. ಅವನು ಮನ್ತ್ರಣಸಾಲೆಯಿಂದ ನೇರವಾಗಿ ಪಟ್ಟಮಹಾದೇವಿಯ ಸೆಜ್ಜೆವನೆಗೆ ಬಂದ. ಇದಿರಿಗೆ ಪಟ್ಟಮಹಾದೇವಿಯವರು ನಿಖರ ನಿಲುವಿನಲ್ಲಿ ಸ್ಥಾಯಿಭಾವಭಂಗಿಯನ್ನು ರೂಪಿಸಿ ನಿಂತುದನ್ನು ಕಂಡ. ಸದ್ದಿಲ್ಲದೆ ನಿಂತ. ಉಸಿರನ್ನು ಸಹ ಎಳೆದುಕೊಳ್ಳುವುದರಲ್ಲಿ ಬಿಡುವುದರಲ್ಲಿ ಎಚ್ಚರಿಕೆ ವಹಿಸಿದ. ಮೌನವಾಗಿ ಶಾನ್ತಲದೇವಿ ಮಾಡುತ್ತಿದ್ದುದನ್ನೆಲ್ಲ ಕುವರ ಬಿಟ್ಟಿಯಣ್ಣನೂ ಸಹ ಅನುಕರಿಸತೊಡಗಿದ. ಬಹುಶಃ ಅರ್ಧ ಪ್ರಹರ ಕಾಲವಾದರೂ ಈ ರಚನೆ, ಅನುಕರಣೆ ನಡೆದಿರಬೇಕು. ಆಗ ಇದ್ದಕ್ಕಿದ್ದ ಹಾಗೆಯೇ ಶಾನ್ತಲದೇವಿಗೆ ಬಿಟ್ಟಯಣ್ಣನ ಭಂಗಿಯ ಪೂರ್ಣವಾದ ಬಿಂಬ ನಿಲುಗನ್ನಡಿಯಲ್ಲಿ ಕಂಡು ಬಂದಿತು. ಥಟ್ಟನೆ ಅವನತ್ತ ತಿರುಗಿದಳು.

"ನಿನಗೇಕೆ ಬೇಕಿತ್ತು ಬಿಟ್ಟ ಈ ಭಾವ ಭಂಗಿಯ ಕೆಲಸ. ಇದರಿಂದ ತೋಳ ತೀಟೆಯೇನೂ ತೀರುವುದಿಲ್ಲವಲ್ಲ" ಎಂದಳು. ತುಸು ಅಸಮಾಧಾನ ಅವಳ ಧ್ವನಿಯಲ್ಲಿ ಕಂಡು ಬಂತು. ಹೇಳದೆ ಬಂದು ತಾನು ಮಾಡುತ್ತಿದ್ದುದನ್ನು ನೋಡಿ ಬಿಟ್ಟನಲ್ಲಾ ಎಂದಿರಬೇಕು. ಹಾಗೆಂದು ನೇರವಾಗಿ ಅವನಿಗೆ ಹೇಳುವಂತಿಲ್ಲ. ತನ್ನ ತೊಡೆಯ ಮೇಲೆ ಮಡಿಲಲ್ಲಿ ಬೆಳೆದವನಲ್ಲವೆ ? ಕುಮಾರ ಬಲ್ಲಾಳ, ಚಿಕಬಿಟ್ಟಿ ವಿನಯಾದಿತ್ಯರಂತೆ ಇವನೂ ಒಬ್ಬ ಮಗನಂತೆ ತಾನೆ ?

"ನನಗೂ ಗೊತ್ತು, ಇದೂ ಸಹ ತೀಟೆ ತೀರಿಸಿಕೊಳ್ಳುವ ಕ್ರಿಯೆ ಎಂದು" ಎಂದ ಬಿಟ್ಟಿಯಣ್ಣ.

"ಏನು ಹಾಗಂದರೆ ?"

"ಹಾಗಂದರೆ.....ಹಾಗಂದರೆ.....ಆಗ ನನ್ನ ಮೇಲೇಕೆ ಕೆಂಗಣ್ಣು ಬೀರಬೇಕಾಗಿತ್ತು ?"

"ಯಾವಾಗ ?"

"ಆ ಸ್ಥಪತಿಗಳಿದಿರಿಗೆ ಚಿತ್ರರಚಿಸಲು ಭಂಗಿಯನ್ನು ಸನ್ನಿಧಾನವೇ ಕೊಡಬಹುದು ಎಂದಾಗ."

"ಈಗ ಹಾಗೆಲ್ಲ ಮಾಡಲು ಸಾಧ್ಯವೆ ಬಿಟ್ಟ ? ಅದು ಉಚಿತವೆ ?"

"ಒಳಗೆ ಬಯಕೆ ಇದೆ. ಮಾಡಲು ಸ್ಥಾನಾದಿಗಳ ಬಂಧನ. ಅದಕ್ಕೆ ಈ ರೀತಿ, ಆ ಅಂತರಂಗದ ಬಯಕೆಯ ಪೂರೈಕೆ ಅಲ್ಲವೆ ?"

ಶಾನ್ತಲದೇವಿ ಮೌನವಾದಳು. ಹೌದ ? ಬಿಟ್ಟಿಗ ಹೇಳಿದ ಮಾತು ಸರಿಯೆ ? ನನ್ನಂತರಂಗದ ಬಯಕೆಯನ್ನು ರಾಣಿಯಾಗಿ ನಾನು ನಡೆಸಲಾರದೆ ಹೀಗೆ ಮಾಡಿದೆನೆ ? ಛೆ, ಛೆ. ಸ್ಥಪತಿ ನನ್ನ ನೆರವು ಕೋರಿದ್ದರಿಂದ ನಾಳೆ ಅವರಿಗೆ ಏನು ಹೇಳಬೇಕೆಂದು ನನಗೆ ನಾನೇ ಖಚಿತಪಡಿಸಿಕೊಳ್ಳಲು ಪರೀಕ್ಷಿಸಿಕೊಂಡ ಪ್ರಕಾರಗಳು ಇವು. ಅಷ್ಟೆ. ಆದರೆ ನಾನು ಬೇರಾವ ಕೆಲಸಕ್ಕೂ ಗಮನ ಕೊಡದೆ ಇದಕ್ಕೇ ಏಕೆ ಇಷ್ಟು ಆತುರದಲ್ಲಿ ಗಮನ ಕೊಟ್ಟೆ ? ಅವನ ಮಾತಿಗೂ ಅರ್ಥವಿದೆಯೇನೋ ? ಅಸ್ಪದವಿದೆಯೇನೋ ? ಎಂದು ಮುಂತಾಗಿ ಅವಳು ಯೋಚಿಸತೊಡಗಿದಳು.

"ಅಪ್ಪೆ. ನಿಜವಾಗಿ ನೀವು ಕಲ್ಪಿಸಿಕೊಂಡ ಭಾವಭಂಗಿಗಳು ಬಲು ರಮ್ಯ. ಸ್ಥಪತಿಯನ್ನು ನಾನು ನಾಳೆ ಅರಮನೆಗೆ ಬರಮಾಡುತ್ತೇನೆ. ನೀವು ಭಂಗಿ ನೀಡಿ. ಅವರು ಚಿತ್ರಿಸಿಕೊಳ್ಳಲಿ" ಎಂದ ಬಿಟ್ಟಿಯಣ್ಣ.

"ಆ ವಿಷಯ ನೋಡೋಣ. ಅದು ಸರಿಯೆ ತಪ್ಪೇ ಎಂದು ಯೋಚಿಸಬೇಕು. ಈಗ ನಾನು ಒಂದು ತೀರ್ಮಾನಕ್ಕೆ ಬಂದಿದ್ದೇನೆ. ನಾಳೆ ಎಲ್ಲ ರೂವಾರಿಗಳನ್ನೂ ಕರೆಸಿ ಸ್ಥಪತಿಗಳ ಈ ಸಲಹೆ ಬಹಳ ಸಮಂಜಸ, ಅದರಿಂದ ನೀವುಗಳು ಸಹ ನಿಮ್ಮ ಕಲ್ಪನೆಯ ಚಿತ್ರಗಳನ್ನು ಮೂಡಿಸಿ ತನ್ನಿ. ಎಲ್ಲ ಚಿತ್ರಗಳಿಂದ ಆಯ್ದುಕೊಳ್ಳೋಣ. ಎಂದು ಹೇಳಬೇಕೆಂದಿದ್ದೇನೆ."

"ಈ ವಿಷಯಕ್ಕೆ ಸ್ಥಪತಿ ಒಪ್ಪಬೇಡವೆ ?"

"ಅದೂ ನಿಜವೇ ? ಮೊದಲು ಅವರನ್ನು ಕರೆಸಿ ಅವರಿಗೆ ಈ ಸೂಚನೆ ಕೊಡೋಣ. ಅವನ ನಿಲುವನ್ನು ತಿಳಿದು ಮುಂದೆ ಏನೆಂದು ತೀರ್ಮಾನಿಸೋಣ. ಅದು ಸರಿ, ಅದೇನು ಇಷ್ಟು ಬೇಗ ಮನ್ತ್ರಣಸಾಲೆಯಿಂದ ಬಂದುಬಿಟ್ಟೆ"

"ಮಹಾಸನ್ನಿಧಾನ ತಲಕಾಡಿನಲ್ಲಿ ಅದರ ಮೇಲ್ವಿಚಾರಣೆಗೆ ಮಾಚಣ ದಂಡನಾಥರನ್ನು ಬಿಟ್ಟು ತಾವು ಇಷ್ಟರಲ್ಲೇ ಅಲ್ಲಿಂದ ಹೊರಟು ಇತ್ತ ಬಿಜಯ ಮಾಡಿಸುತ್ತಾರೆಂಬ ಸುದ್ದಿ ಬಂತು. ತಿಳಿಸೋಣವೆಂದು ಬಂದೆ."

"ಅಂತಹ ಸಂತಸದ ಸುದ್ದಿ ತಿಳಿಸಲು ಇಷ್ಟು ತಡಮಾಡುವುದೆ ?"

"ಗುರುವಿನಂತೆ ಶಿಷ್ಯ. ನಾನೂ ಸಹ ನನ್ನ ತೀಟೆ ತಡೆದು ಕೊಳ್ಳಲಾರದೆ ಭಾವಭಂಗಿಗಳ ಅನುಕರಣೆಯಲ್ಲಿ ತೊಡಗಿಬಿಟ್ಟೆ ಇದನ್ನು ಕೈ ಬಿಡಬಾರದೆಂದೂ ಸ್ವಲ್ಪ ಸ್ವಲ್ಪ ಇಟ್ಟುಕೊಂಡಿರಬೇಕೆಂದೂ ಸನ್ನಿಧಾನದ ಅಪ್ಪಣೆಯಾಗಿತ್ತಲ್ಲ. ಅದರಿಂದ ಹಾಗಾಗಿಬಿಟ್ಟಿತು."

"ಭವ್ಯ ಸ್ವಾಗತಕ್ಕೆ ಸಿದ್ಧಮಾಡಬೇಕು ಬಿಟ್ಟಿ ರಾಣಿ ರಾಜಲದೇವಿಯರಿಗೆ ಓಲೆ ಕಳುಹಿಸಿ ಇಲ್ಲಿಗೆ ಒಡನೆಯೇ ಬರಮಾಡಬೇಕು" ಎಂದಳು ಶಾನ್ತಲದೇವಿ.

"ರಾಜಲದೇವಿಯವರಿಗೆ ಅಲ್ಲಿಂದಲೇ ನೇರವಾಗಿ ಓಲೆ ಹೋಗಿದೆಯಂತೆ. ಅವರು ಇಲ್ಲಿಗೆ ಬರುತ್ತಾರೆಯಂತೆ" ಎಂದ ಬಿಟ್ಟಿಯಣ್ಣ.

"ಸರಿ. ಹಾಗಾದರೆ ನಾಳೆ ಬೊಪ್ಪದೇವ, ಇತರ ಅಧಿಕಾರಿಗಳನ್ನೆಲ್ಲ ಕರೆಸು. ಒಂದು ಸಲ, ಎಲ್ಲರೊಡನೆ ಸಮಾಲೋಚನೆ ಮಾಡಿ ಸ್ವಾಗತಕ್ಕೆ ಸಿದ್ಧತೆಯನ್ನು ಮಾಡೋಣ" ಎಂದಳು ಶಾನ್ತಲದೇವಿ.

"ಹಾಗಾದರೆ ರೂವಾರಿಗಳ ಕೂಡುಹ ?"

"ನಾಳೆ ಬೆಳಿಗ್ಗೆಯೇ ಸ್ಥಪತಿಗಳೊಂದಿಗೆ ಮಾತನಾಡೋಣ."

ಅದೇ ರೀತಿ ವ್ಯವಸ್ಥೆ ಆಯಿತು. ಸ್ಥಪತಿ ಕೂಡಲೇ ಪಟ್ಟಮಹಾದೇವಿಯವರ ಸಲಹೆಯನ್ನು ಒಪ್ಪಿಕೊಂಡ. ಅದರಂತೆ ಆ ಸಂಜೆಯೇ ರೂವಾರಿಗಳ ಕೂಡುಹ ಸೇರಿತು. ಪಟ್ಟಮಹಾದೇವಿಯೇ ಸಲಹೆ ಮಂಡಿಸಿದಳು.

ಎಲ್ಲವನ್ನೂ, ಕೇಳಿದ ರೂವಾರಿಗಳು ಕೂಡಲೇ ಏನೂ ಉತ್ತರಿಸಲಿಲ್ಲ. "ಸ್ಥಪತಿಗಳು ಈ ಭವ್ಯ ಮಂದಿರವನ್ನು ಕಲ್ಪಿಸಿದ್ದಾರೆ. ಅವರ ಕಲ್ಪನಾಸಾಮರ್ಥ್ಯ ಅದ್ವಿತೀಯವಾದದ್ದು. ಅವರೇ ಚಿತ್ರ ಮೂಡಿಸಿಕೊಟ್ಟರೆ ನಾವು ಕಲ್ಲಿನಲ್ಲಿ ಅದಕ್ಕೆ ಮೂರ್ತರೂಪ ಕೊಡುತ್ತೇವೆ" ಎಂದು ದಾಸೋಜ ಹೇಳಿದ. ಮಾತಿನಲ್ಲಿ ಕುಹಕವೇನೂ ಇರಲಿಲ್ಲ.

ಸ್ಥಪತಿಯೇ ಮತ್ತೊಮ್ಮೆ ಹೇಳಿದ. "ಇವೆಲ್ಲ ತನಿ ವಿಗ್ರಹಗಳು. ಇಡೀ ಮಂದಿರ ನಿರ್ಮಾಣವಾದ ಮೇಲೆ ಒಂದೊಂದನ್ನೂ ಉಬ್ಬು ಕಂಭಗಳ ಮೇಲೆ ಇಳಿಜಾರು ಛಾವಣಿಯ ಕೆಳಗೆ ಹೊಂದಿಸಿಡಲಾಗುತ್ತದೆ. ಆದರಿಂದ ಪ್ರಮಾಣ ನಿರ್ದೇಶದಂತೆ ಒಬ್ಬೊಬ್ಬರೂ ಒಂದೊಂದು ಎರಡೆರಡು ಚಿತ್ರಗಳನ್ನು ಕಲ್ಪಿಸಿ ಮೂಡಿಸಿದರೆ ಒಟ್ಟು ಮಂದಿರದ ಏಕತೆಗೇನು ಕುಂದು ಬರುವುದಿಲ್ಲ. ಈಗ ನಿಮಗೆ ತಿಳಿದಂತೆ ನವರಂಗದ ಯಾವ ಎರಡು ಕಂಬಗಳೂ ಒಂದು ರೀತಿಯವಲ್ಲ. ಅಲ್ಲಿ ವೈವಿಧ್ಯವಿದ್ದರೂ ಏಕತೆ ಇಲ್ಲವೆ ? ಇದೂ ಹಾಗೆಯೇ. ನಿಮ್ಮಗಳ ಕಲ್ಪನೆಗಳನ್ನು ನನ್ನ ಮೂಲ ಕಲ್ಪನೆಯೊಂದಿಗೆ ಸೇರಿಸುವ ಗೌರವವನ್ನು ನನಗೆ ಕೊಡಿ" ಎಂದು ಆಸ್ತೆಯಿಂದ ಹೇಳಿದ.

ಆದರೆ ರೂವಾರಿಗಳು ಕಡೆಗೂ ಒಪ್ಪಲಿಲ್ಲ. "ಯಾವುದೇ ಕಾರಣದಿಂದ ಯಾರಾದರೂ ರಚಿಸಿದ ಚಿತ್ರ ಒಪ್ಪಿತವಾಗದಿದ್ದರೆ ಆಮೇಲೆ ಅದು ಅಸಮಾಧಾನಕ್ಕೆ ಬೀಜಾಂಕುರ ಮಾಡಿದಂತೆ ಆಗುತ್ತದೆ, ಆ ಗೊಡವೆಯೇ ಬೇಡ. ಸ್ಥಪತಿಗಳು ಚಿತ್ರಿಸಿದ್ದನ್ನು ಮಾಡುವುದು ನಮ್ಮ ಕೆಲಸ" ಎಂಬುದಷ್ಟೇ ಆ ಕೂಡುಹದ ಫಲವಾಯಿತು.

ಮತ್ತೆ ವಿಷಯ ಎಲ್ಲಿತ್ತೋ ಅಲ್ಲಿಗೇ ಮುಟ್ಟಿತ್ತು. ಮುಂದುವರಿದಂತೆ ಆಗಲಿಲ್ಲ. ಕೂಡುಹವನ್ನು ವಿಸರ್ಜಿಸಿದ ನಂತರ ಶಾನ್ತಲದೇವಿ ಬಿಟ್ಟಿಯಣ್ಣನೊಂದಿಗೆ ಆ ವಿಚಾರ ಮಾತು ತೆಗೆದಳು. "ನೋಡು ಬಿಟ್ಟಿ ಈಗ ಸ್ಥಪತಿಗಳು ರೂಪಿಸಿರುವ ಎಲ್ಲ ಚಿತ್ರಗಳೂ ನನ್ನ ಮನಸ್ಸಿಗೆ ಒಪ್ಪಿತವಾಗಿಲ್ಲ. ಅದರಿಂದ ಕೆಲಸ ಸ್ವಲ್ಪ ತೊಡಕಿನದಾಗುತ್ತದೆ. ಜೊತೆಗೆ ಮಹಾಸನ್ನಿಧಾನದ ಸ್ವಾಗತ ಬೇರೆ ಈಗ ಆತುರವಾಗಿ ನಮ್ಮ ಮುಂದೆ ನಿಂತಿದೆ. ಏನು ಮಾಡೋಣ ?"

"ಸ್ಥಪತಿಗಳು ಈ ರಾತ್ರಿ ಏನೆಲ್ಲ ಯೋಚಿಸುತ್ತಾರೆ ಎಂಬುದು ನಾಳೆ ತಿಳಿಯುತ್ತದೆ. ಆ ಮೇಲೆ ವಿಚಾರ ಮಾಡಿದರೆ ಆದೀತಲ್ಲವೆ ?"

"ಅವರು ಒಂದು ಬಗೆಯ ಸ್ವಾಭಿಮಾನಿ. ಈಗ ಅವರ ಕೆಲಸ ಹಗುರ ಮಾಡುವುದು ಒಳಿತೆಂದು ನನಗನ್ನಿಸುತ್ತದೆ."

"ಹಾಗಾದರೆ ಅಪ್ಪ, ನೀವು ಕಲ್ಪಿಸಿಕೊಳ್ಳುತ್ತಿದ್ದಿರಲ್ಲ ಭಂಗಿಗಳು ಅವುಗಳ ಚಿತ್ರವನ್ನು ನೀವೇ ರೂಪಿಸಿಬಿಟ್ಟರೆ."

"ಭಂಗಿ ಕಲ್ಪಿಸಿ ನಿಲ್ಲುವಷ್ಟು ರೂಪಿಸುವುದು ಸುಲಭವಲ್ಲ ಬಿಟ್ಟ ನನಗೆ ಅದು ಬರದೆಂದಲ್ಲ. ಆದರೆ ನನ್ನ ತಿಳಿವಳಿಕೆಯನ್ನು ಈಗ ಪ್ರಯೋಗಿಸ ಹೊರಡುವುದು ಮುರ್ಖತನವಾಗುತ್ತದೆ. ಅದೆಲ್ಲ ಬೇಡ."

"ಒಂದು ಕೆಲಸ ಏಕೆ ಮಾಡಬಾರದು ಅಪ್ಪ" ಎಂದು ಹೇಳಿದ ಬಿಟ್ಟಿಯಣ್ಣ ಮತ್ತೆ ಹಾಗೆಯೇ ಮೌನವಾದ.

"ಏಕೆ ಸುಮ್ಮನಾದೆ ಬಿಟ್ಟ ? ಏನದು ?"

"ಮಹಾ ಸನ್ನಿಧಾನ ಬಂದ ಮೇಲೆ ಈ ವಿಷಯ ಅವರೊಂದಿಗೆ ಪ್ರಸ್ತಾಪಿಸಿ ನಂತರ ಏನು ಮಾಡಬಹುದೆಂದು ನಿರ್ಣಯಿಸಬಹುದಲ್ಲವೆ."

"ಆಲೋಚಿಸಲು ಸಮಯ ಸಿಕ್ಕ ಹಾಗೆ ಆಗುತ್ತದೆ. ಆದರೂ ಕೆಲಸ ಅವರು ಬರುವಷ್ಟರಲ್ಲಿ ಆಗಿದ್ದರೆ ಚೆನ್ನವಿತ್ತು. ಚಿತ್ರ ಸಿದ್ಧವಾದರೆ ಈ ಸಿದ್ಧಹಸ್ತರಾದ ರೂವಾರಿಗಳು ಮಹಾಸನ್ನಿಧಾನ ಬಿಜಯ ಮಾಡಿಸುವಷ್ಟರಲ್ಲಿ ಕಡೆದು ಮುಗಿಸಿರುತ್ತಾರೆ."

"ಅದೇನೋ ಸರಿ. ಹಾಗಾಗಬೇಕಾದರೆ ನೀವು ಭಾವಭಂಗಿ ನಿರೂಪಿಸಿ ನಿಲ್ಲಬೇಕು. ಸ್ಥಪತಿ ಅದನ್ನು ಚಿತ್ರಿಸಬೇಕು."

"ಅದು ಸರಿಯಾಗಲಾರದು. ನೀನು ಹೇಳಿದಂತೆ ನಾಳೆ ಬೆಳಗ್ಗೆ ಸ್ಥಪತಿಗಳು ಏನು ಹೇಳುತ್ತಾರೆಯೋ ನೋಡೋಣ. ನಂತರ ಯೋಚಿಸೋಣ" ಎಂದು ಶಾನ್ತಲದೇವಿ ಆ ಮಾತಿಗೆ ವಿರಾಮ ಹಾಕಿದಳು.

ಬೆಳಿಗ್ಗೆ ಸ್ಥಪತಿ ತನ್ನ ದಿನನಿತ್ಯದ ಸುತ್ತು ಸುತ್ತಿ ತನ್ನ ಕೆಲಸದ ತಾಣಕ್ಕೆ ಬರುವ ಹೊತ್ತಿಗೆ ಸರಿಯಾಗಿ ಶಾನ್ತಲದೇವಿ, ಕುವರ ಬಿಟ್ಟಿಯಣ್ಣ ಅಲ್ಲಿಗೆ ಬಂದರು. ಸ್ಥಪತಿ ಏಳುವುದರಲ್ಲಿದ್ದ. "ಕೂಡಿ, ಕೂಡಿ" ಎಂದಳು ಶಾನ್ತಲದೇವಿ. ಅಲ್ಲಿಪಟ್ಟಮಹಾದೇವಿ ಮತ್ತು ಮರಿ ದಣ್ಣಾಯಕನ ಸಲುವಾಗಿ ಸದಾ ಬೇರೆ ಆಸನಗಳು ಸಿದ್ಧವಾಗಿ ಇರುತ್ತಿದ್ದವು. ಅವುಗಳ ಮೇಲೆ ಅವರಿಬ್ಬರೂ ಕುಳಿತರು.

ಕಾಲ ವ್ಯಯ ಮಾಡದೆ, "ಸ್ಥಪತಿಗಳು ರಾತ್ರಿ ನಿದ್ದೆ ಮಾಡಿದಿರೋ ಇಲ್ಲ ಚಿತ್ರ ಬಿಡಿಸುತ್ತ ಜಾಗರಣೆ ಮಾಡಿದಿರೋ" ಎಂದು ಶಾನ್ತಲದೇವಿ ಕೇಳಿದಳು.

"ನಾನು ಏನು ಮಾಡಿದರೂ, ಮಾಡದಿದ್ದರೂ ಸನ್ನಿಧಾನಕ್ಕೆ ಸುದ್ದಿ ಮುಟ್ಟಿರುತ್ತದೆಯಲ್ಲ" ಎಂದ ಸ್ಥಪತಿ.

"ಆ ಸುದ್ದಿಯನ್ನು ನಿಮ್ಮ ಕಣ್ಣು ನೋಡಿ ನಾವು ಗ್ರಹಿಸಿದ್ದಾಗಿದೆ" ಎಂದಳು ಶಾನ್ತಲದೇವಿ. ಅವನು ಪಟ್ಟಮಹಾದೇವಿಯತ್ತ ಬೆರಗುಗಣ್ಣಿಂದ ಈಕ್ಷಿಸಿದ. ಮಾತನಾಡಲಿಲ್ಲ. "ಎಷ್ಟು ಹೊಸ ಕಲ್ಪನೆಗಳು ಮೂಡಿವೆ ?" ಎಂದು ಮತ್ತೆ ಪ್ರಶ್ನಿಸಿದಳು.

"ಸಂಖ್ಯೆಗೇನು ? ಬೇಕಾದುದಕ್ಕಿಂತ ಎರಡರಷ್ಟಿದೆ. ಆದರೆ ಅವಕ್ಕಿಂತ ಉತ್ತಮವಾದವು ಬೇಕೆಂಬುದು ನನ್ನ ಆಸೆ. ನನ್ನ ತಂದೆ ಹೇಳುತ್ತಿದ್ದರು 'ಮಗು ಕಲೆಗಾರನ ಕಣ್ಣು ಸದಾ ತೆರೆದಿರಬೇಕು. ಏಕಾಗ್ರತೆ ತನ್ಮಯತೆಗಳ ಸಿದ್ಧಿಯಿಂದ ಕಣ್ಣಿನ ಶಕ್ತಿಯನ್ನು ವೃದ್ಧಿ ಪಡಿಸಿಕೊಳ್ಳಬೇಕು. ಅದರ ಫಲವಾಗಿ ನೋಡಿದುದನ್ನು ಕ್ಷಣಾರ್ಧದಲ್ಲಿ ಗ್ರಹಿಸಿ ಚಿತ್ತದಲ್ಲಿ ಶಾಶ್ವತವಾಗಿ ಮೂಡಿಸಿಟ್ಟುಕೊಳ್ಳಬೇಕು. ಹಾಗೆ ಮೂಡಿನಿಂತ ಚಿತ್ರಗಳು ನೆನೆದಾಗ ಮತ್ತೆ ರೂಪಧರಿಸಿ ಮೂಡಿ ಬರುವಂತಾಗಬೇಕು. ಅವನು ನಿಜವಾದ ಕಲೆಗಾರನಾಗುತ್ತಾನೆ. ಮತ್ತು ಅವನ ಸೃಷ್ಟಿಯಲ್ಲಿ ಏಕತಾನ ಇಲ್ಲದೆ, ವೈವಿಧ್ಯ ತುಂಬಿ ತುಳುಕುತ್ತದೆ. ಅದರಿಂದ ಕಣ್ಣು ಶಿಲ್ಪಿಗೆ ಎಲ್ಲಕ್ಕಿಂತ ಪ್ರಮುಖವಾದುದು ಎಂದು. ಆದರೆ ನನ್ನ ಬಾಳಿನ ಬಹಳ ಮುಖ್ಯ ಕಾಲದಲ್ಲಿ ನಾನು ನನ್ನ ದೃಷ್ಟಿಯನ್ನು ಬೆಳೆಯಗೊಡಲಿಲ್ಲ. ಮಂದ ಮಾಡಿಬಿಟ್ಟೆ ಅದು ನಾನು ಬಯಸಲಿ ಬಿಡಲಿ ತನ್ನ ಕೆಲಸವನ್ನು ತಾನು ಮಾಡುತ್ತಿತ್ತು ಮೊದಲು. ಈಚೆಗೆ ಈ ಅಪೇಕ್ಷೆ ಲುಪ್ತವಾಗಿ, ಹೊಸದು ಕಲ್ಪನೆಯಿಂದ ಮೂಡಿಬರಲು ಕಷ್ಟವೆನಿಸಿದೆ" ಎಂದ.

"ನಷ್ಟ ಯಾರಿಗೆ ?" ಎಂದು ಶಾನ್ತಲದೇವಿ ಕೇಳಿದಳು.

"ನನಗೆ ನಷ್ಟದ ಯೋಚನೆ ಇಲ್ಲ. ಬಾಳೇ ಹೊರೆಯೆನಿಸಿದವನಿಗೆ ನಷ್ಟದ ಚಿಂತೆಯೇಕೆ?"

"ಅಪ್ರಸ್ತುತ ಎಂದು ಭಾವಿಸಬೇಡಿ. ದೇವ ಸೃಷ್ಟಿಯಲ್ಲಿ ಅನಂತತೆ ರೂಪ ತಳೆದು ನಿಂತಿದೆ. ಆದರೆ ಎಲ್ಲಕ್ಕೂ ಒಂದೇ ಮೌಲ್ಯವಿಲ್ಲ. ಎಲ್ಲಕ್ಕೂ ಒಂದೇ ಬಗೆಯ ಮನ್ನಣೆಯಿಲ್ಲ."

"ಅದು ತಪ್ಪಲ್ಲವೆ ? ದೇವರೇಕೆ ಬೇರೆ ಬೇರೆ ಮೌಲ್ಯ ಕೊಡಹೋಗುತ್ತಾನೆ. ಅದೆಲ್ಲ ನಾವು ಮಾನವರು, ಸ್ವಾರ್ಥಿಗಳು, ಮಾಡಿಕೊಂಡುದಿರಬೇಕು."

“ನಮ್ಮ ಹುಟ್ಟಿಗೆ, ಬದುಕಿಗೆ, ಸಾಯುಜ್ಯಕ್ಕೆ ದೇವರು ಕಾರಣ ಎಂದು ನಂಬಿದವರಿಗೆಲ್ಲ ಒಂದೇ ಬಗೆಯ ಫಲವಿಲ್ಲವಲ್ಲ.''

“ಅದನ್ನೇ ನಾವು ಕರ್ಮ ಫಲ ಎನ್ನುತ್ತೇವೆ.''

“ಹಾಗಾದರೆ ನೀವು ನಿಮ್ಮ ವೀಕ್ಷಕ ಪ್ರವೃತ್ತಿಯನ್ನು ಮಂದ ಮಾಡಿಬಿಟ್ಟದ್ದು ನಿಮ್ಮ ಕರ್ಮವೆ ?''

ಸ್ಥಪತಿ ಒಡನೆಯೇ ಉತ್ತರಿಸಲಿಲ್ಲ.

ಕೂಡಲೆ ಶಾನ್ತಲದೇವಿ, “ಕ್ಷಮಿಸಿ, ಮಾತು ಎತ್ತಲೋ ಹೋಯಿತು. ನಾವು ಆಡುತ್ತಿರುವ ಮಾತು ಕಲೆ–ಕಲೆಗಾರ ಸಂಬಂಧವಾದುದು; ಭಗವಂತನ ಸೃಷ್ಟಿಯಲ್ಲಿನ ಭಿನ್ನ ಮೌಲ್ಯಗಳು; ಇವುಗಳಿಗೆ ಸಂಬಂಧಿಸಿದವು ಅಲ್ಲವೆ ? ನಾನು ಅನೇಕ ಸಲ ಈ ಕಲೆಯ ಬಗೆಗೆ ಚಿಂತನ ಮಾಡಿದ್ದೇನೆ. ಧ್ಯಾನ ನಮಗೆ ಸಾಯುಜ್ಯಕ್ಕೆ ಒಂದು ಸಾಧನ ಮಾರ್ಗವಾದರೆ ಕಲೆಯೂ ಇನ್ನೊಂದು ಸಾಧನ ಮಾರ್ಗ. ಆದರೆ ಇದರ ರೀತಿ ಸೌಂದರ್ಯದ ರೀತಿ. ಇಂತಹ ಸುಂದರ ಕಲ್ಪನೆಗಳನ್ನು ರೂಪಿಸುವ ಕಲಾವಿದನ ಹೃದಯ ನಿರ್ಮಲವಾಗಿರಬೇಕಲ್ಲವೆ ? ಪೂರ್ವಗ್ರಹಗಳಿಂದ ದೂರವಿರಬೇಕಲ್ಲವೆ ?''

“ಹೌದು ?''

“ಎಂದಾಗ ತನ್ನ ಕ್ರಿಯೆಯಲ್ಲಿ ಅವನ ಸಹಜ ತೊಡಗುವಿಕೆ ಲುಪ್ತವಾಗಲು ಹೇಗೆ ಸಾಧ್ಯ? ಕಲಾವಿದ ಆ ತೊಡಗುವಿಕೆಯನ್ನು ಲುಪ್ತಮಾಡಿಕೊಳ್ಳುವುದು ಕಲಾದ್ರೋಹವಲ್ಲವೆ? ಸಾಧಾರಣ ಮನುಷ್ಯ ಹುಟ್ಟುತ್ತಾನೆ, ದುಡಿಯುತ್ತಾನೆ, ಉಣ್ಣುತ್ತಾನೆ, ಮಡಿಯುತ್ತಾನೆ. ಅಂತಹವನ ಹುಟ್ಟು ಸಾವು ಯಾವುದೂ ಲೆಕ್ಕಕ್ಕೆ ಬರುವುದಿಲ್ಲ. ಏಕೆಂದರೆ ಅವನು ತನ್ನದಾಗಿ ಲೋಕಕ್ಕೆ ಏನನ್ನೂ ಕೊಡಲಾರದವನು; ಏನನ್ನೂ ಶಾಶ್ವತವಾಗಿ ಬಿಟ್ಟು ಹೋಗಲಾರದವನು. ಆದರೆ ಕಲಾವಿದ ಅಂತಹವನಲ್ಲ. ಅವನ ಕೊಡುಗೆ, ಪೀಳಿಗೆ ಪೀಳಿಗೆಗೆ ಆನಂದ ತಂದುಕೊಡುತ್ತದೆ. ಅವನ ಪಾರ್ಥಿವ ಶರೀರ ಇಲ್ಲದಿದ್ದರೂ, ಅವನ ಸೃಷ್ಟಿಯಿಂದ ಅವನು ಸದಾ ಜೀವಂತ. ಇಂತಹವನ ವೀಕ್ಷಕ ಪ್ರವೃತ್ತಿ ಲುಪ್ತವಾಗುವುದೆಂದರೆ ಘೋರಾತಿ ಘೋರ ಅನ್ಯಾಯ. ನಿಮ್ಮ ಸ್ವಬಾಳಿನ ಕಷ್ಟ ನೋವುಗಳು ಕಲೆಗೆ ಎಂದೂ ಅಡ್ಡಗಾಲು ಹಾಕಬಾರದು. ನಿಮಗೇನೂ ಎನ್ನಿಸದಿರಬಹುದು. ನಿಮ್ಮ ಕೊಡುಗೆ ಹೊಮ್ಮದೆ ಜನತೆಗೆ ಲಭ್ಯವಾಗಬೇಕಾದುದು ಸೃಷ್ಟಿಯಾಗದೆ ಹೋಗುತ್ತದೆ. ಅದು ಮಹಾನಷ್ಟ. ಅಂತಹ ನಷ್ಟ ನಿಮ್ಮಿಂದ ದೇಶಕ್ಕೆ ಆಗಬಾರದು. ನಿಮ್ಮ ಸ್ವಂತ ನೋವು ಬೇರೆ. ಅದು ಈ ಕೆಲಸಕ್ಕೆ ಎಂದೂ ಅಡ್ಡಿಯಾಗದಂತೆ ನೋಡಿಕೊಳ್ಳಿ. ಮಾತು ತುಂಬಾ ಉದ್ದವಾಯಿತು.... ಎಲ್ಲಿ, ನಿದ್ದೆಗೆಟ್ಟು ತಾವೇನು ಸೃಷ್ಟಿಸಿದ್ದೀರೆಂಬುದನ್ನು ನೋಡೋಣ'' ಎಂದಳು ಶಾನ್ತಲದೇವಿ.

ಸ್ಥಪತಿ ಕಡತ ಕೊಡುತ್ತಾ, “ಇವುಗಳು ಗುರಿ ಮುಟ್ಟುವುದಿಲ್ಲ. ಬೇಡ ಎಂದು ಸನ್ನಿಧಾನ ಅಪ್ಪಣೆ ಮಾಡಿದರೆ ನನಗೆ ಅಸಮಾಧಾನವಿಲ್ಲ. ಆದರೆ ಒಂದ ಬಿನ್ನಹ. ಈ ಕೆಲಸ ಮಾಡಲು ಸನ್ನಿಧಾನ ಮಾತ್ರ ನೆರವನ್ನು ನಿರಾಕರಿಸದಿರುವ ಕೃಪೆದೋರಬೇಕು'' ಎಂದು ಸ್ಥಪತಿ ಮೆದುವಾಗಿ ಸೂಚಿಸಿದ.

“ನಾನು ಮಹಾಸನ್ನಿಧಾನಕ್ಕೆ ಮತ್ತು ಶ್ರೀಮದಾಚಾರ್ಯರಿಗೆ ವಚನ ಕೊಟ್ಟಿದ್ದೇನೆ. ಈ ಮಂದಿರ ಭವ್ಯಾತಿಭವ್ಯವಾಗುವುದಕ್ಕೆ ನನ್ನಿಂದಾಗುವುದೆಲ್ಲವನ್ನೂ ಮಾಡುತ್ತೇನೆ ಎಂದು. ಅದರಿಂದ ಮಂದಿರದ ಕೆಲಸ ಸುಂದರವಾಗಲು ನಾನು ಎಂದೂ ಹಿಂತೆಗೆಯುವುದಿಲ್ಲ. ಈ ಸಂದರ್ಭದಲ್ಲಿ ನಾನು ಒಂದು

ಮಾತನ್ನು ಸ್ಥಪತಿಗಳಿಗೆ ವಿಧಿಯಿಲ್ಲದೆ ತಿಳಿಸಬೇಕಾಗಿದೆ'' ಎಂದು ಮಾತನ್ನು ಅಷ್ಟಕ್ಕೇ ನಿಲ್ಲಿಸಿದಳು ಶಾನ್ತಲದೇವಿ.

ಆಸಕ್ತಿಯಿಂದ ಅವಳ ಮಾತನ್ನು ಆಲಿಸುತ್ತಿದ್ದ ಸ್ಥಪತಿ ಮತ್ತು ಬಿಟ್ಟಿಯಣ್ಣರ ಮುಖಗಳಾಗ ಒಮ್ಮೆಲೇ ಪ್ರಶ್ನಾರ್ಥಕವಾಗಿಬಿಟ್ಟವು.

ಶಾನ್ತಲದೇವಿ ಮಾತನ್ನು ನಿಲ್ಲಿಸಿದುದಕ್ಕೆ ಕಾರಣವಿರಬೇಕು. ಎಂತಲೆ ಅವಳು ಸ್ಥಪತಿಯನ್ನು ಪರೀಕ್ಷಕ ದೃಷ್ಟಿಯಿಂದ ಒಮ್ಮೆ ವೀಕ್ಷಿಸಿ ನಂತರ ಮಾತು ಮುಂದುವರಿಸದೆ ಅವನಿತ್ತಿದ್ದ ಕಡತವನ್ನು ನೋಡತೊಡಗಿದಳು. ಬಿಟ್ಟಿಗನೂ ಅದರತ್ತ ಕಣ್ಣು ಹಾಯಿಸಿದ. ಮತ್ತು ಮೆದುವಾಗಿ ತನ್ನಾಸನವನ್ನು ಪಟ್ಟಮಹಾದೇವಿಯ ಬದಿಗೆ ಸರಿಸಿಕೊಂಡ. ನೋಡುವ ಕ್ರಿಯೆ ಮುಗಿಯಿತು. ಕಡತ ಮುಚ್ಚಿದ ಶಾನ್ತಲದೇವಿ ಅದೇ ಭಂಗಿಯಲ್ಲಿ ಕುಳಿತಿದ್ದ ಸ್ಥಪತಿಯನ್ನು ನೋಡಿ, "ಮುಂದೆ ?'' ಎಂದಳು.

ರೂವಾರಿ ಕಕ್ಕುವಿಕ್ಕಾದಂತೆ ಕಂಡು ಬಂತು. ಅತ್ತ ಇತ್ತ ನೋಡಿ, "ಅಪ್ಪಣೆ ಕೊಡಿಸಬೇಕು'' ಎಂದ.

ಅಷ್ಟು ಹೊತ್ತಿಗೆ ಸರಿಯಾಗಿ ಹೊರಗಡೆ ನಾಲ್ಕಾರು ಅಶ್ವಗಳು ಒಟ್ಟಿಗೇ ಬಂದು ನಿಂತ ಶಬ್ದ ಕೇಳಿಸಿತು.

ಎಂದೂ ದೇವಮಂದಿರ ನಿರ್ಮಾಣ ತಾಣಕ್ಕೆ ಅಶ್ವಗಳು ಬಂದಿರಲಿಲ್ಲವಾದ್ದರಿಂದ "ಬಿಟ್ಟಿ, ಏನದು ನೋಡು'' ಎಂದು ಶಾನ್ತಲದೇವಿ ಹೇಳಿದಳು.

ಕುವರ ಬಿಟ್ಟಿಯಣ್ಣ ಎದ್ದುಹೋಗಿ ನೋಡುವಷ್ಟರಲ್ಲಿ ಮಾಯಣ, ಚಟ್ಟಲದೇವಿಯರು ಒಳಕ್ಕೆ ಬಂದರು.

"ಓಹ್, ಯಾವಾಗ ಬಂದಿರಿ ?'' ಎಂದು ಶಾನ್ತಲದೇವಿ ಆಶ್ಚರ್ಯದಿಂದ ಕೇಳಿದಳು.

"ಇನ್ನೂ ಬರುತ್ತಿದ್ದೇವೆ. ಸನ್ನಿಧಾನ ಇಲ್ಲಿರುವುದು ಅರಮನೆಯಲ್ಲಿ ತಿಳಿಯಿತು. ನಾವು ಇಲ್ಲಿಗೇ ನೇರವಾಗಿ ಬಂದೆವು'' ಎಂದ ಮಾಯಣ.

"ಎಲ್ಲ ಕುಶಲವಷ್ಟೆ ? ಮಹಾಸನ್ನಿಧಾನ ಎಂದು ಇಲ್ಲಿಗೆ ಬಿಜಯ ಮಾಡಿಸುತ್ತಾರೆ ?'' ಎಂದು ಬಿಟ್ಟಿಯಣ್ಣ ಕೇಳಿದ.

"ಮಹಾಸನ್ನಿಧಾನ ಯಾದವಪುರಿಯನ್ನು ಮುಟ್ಟಿದ ಮೇಲೆ ನಿರ್ಣಯಿಸಿ ಇಲ್ಲಿಗೆ ಬೇಹು ಕಳಿಸುತ್ತಾರೆ. ನಾವು ದುಡುದುಡನೆ ತಲಕಾಡಿನಿಂದ ನೇರವಾಗಿ ಬಂದೆವು.''

"ದಾರಿಯಲ್ಲಿ ಕಿಕ್ಕೇರಿಯ ಅಜ್ಜಿಯನ್ನು ಕಂಡು ಬಂದಿರಾ ?'' ಎಂದು ಶಾನ್ತಲದೇವಿ ಚಟ್ಟಲೆಯತ್ತ ತಿರುಗಿ ಕೇಳಿದಳು.

"ಆಗಿನ ಹಾಗೆ ಈಗ ನನಗೇನೂ ಬಂಧನವಿರಲಿಲ್ಲವಲ್ಲ. ಅದರಿಂದ ಕಿಕ್ಕೇರಿಯ ಸ್ಮರಣೆಯೇ ಬರಲಿಲ್ಲ. ಎಂದಾಗ ಇಲ್ಲದ ಆ ಅಜ್ಜಿಯ ಸ್ಮರಣೆ ಹೇಗೆ ತಾನೇ ಬಂದೀತು ?'' ಎಂದಳು ಚಟ್ಟಲದೇವಿ.

"ಅಜ್ಜಿಯ ಸ್ಮರಣೆ ಇಲ್ಲದಿದ್ದರೆ ಹೋಗಲಿ ಬಲ್ಲುವಿನ ಸ್ಮರಣೆಯಾದರೂ ಬಂದಿತೋ ?'' ಎಂದಳು ಶಾನ್ತಲದೇವಿ.

"ಹಾಗಾದರೆ ಇವರು ಚಟ್ಟಲದೇವಿ ಮಾಯಣರೆ ?'' ಎಂದು ಸ್ಥಪತಿ ನಡುವೆ ಥಟ್ಟನೆ ಬಾಯಿಹಾಕಿದ.

ಮಾಯಣ ಚಟ್ಟಲೆಯರಿಬ್ಬರೂ ಆಗ ಸ್ಥಪತಿಯತ್ತ ನೋಡಿದರು.

"ಇವರು ಸ್ಥಪತಿಗಳು" ಎಂದಳು ಶಾನ್ತಲದೇವಿ.

"ಇವರವರೆಗೂ ನಮ್ಮ ವಿಚಾರ ಮುಟ್ಟಿದೆಯೆ ?" ಎಂದು ಚಟ್ಟಲದೇವಿ ಕೇಳಿದಳು.

"ಆತ್ಮೀಯರೆಲ್ಲ ಒಬ್ಬರನ್ನೊಬ್ಬರು ಅರಿತಿರಬೇಕು. ಎಂತಲೇ ನಾನು ನಿಮ್ಮ ಬಗೆಗೂ ಇವರಿಗೆ ತಿಳಿಸಿದ್ದೇನೆ. ನಮ್ಮ ಸ್ಥಪತಿಗಳು ಸಿದ್ಧಹಸ್ತರು. ಈ ದೇವಮಂದಿರ ನಿರ್ಮಾಣದಲ್ಲಿ ಅವರ ಚಿತ್ತ ಚೇತನಗಳು ತನ್ಮಯವಾಗಿವೆ. ಅವರ ಆತ್ಮೀಯತೆಯೆಲ್ಲ ಇದಕ್ಕೆ ಮುಡುಪಾಗಿದೆ. ಇರಲಿ. ಮುಂದೆ ನೀವು ನೀವೆ ಎಲ್ಲ ಪರಸ್ಪರ ತಿಳಿದುಕೊಳ್ಳುತ್ತೀರಿ. ನಡೆಯಿರಿ. ಅರಮನೆಗೆ ಹೋಗೋಣ. ಮೊದಲು ಬಲ್ಲುವನ್ನು ನೋಡಿ" ಎಂದಳು ಶಾನ್ತಲದೇವಿ.

"ಅವನು ಉಂಡು ಮಲಗಿದ್ದನೆಂದು ಇತ್ತ ಬಂದೆವು" ಎಂದಳು ಚಟ್ಟಲದೇವಿ.

"ನೀವಿಬ್ಬರೂ ಚೋಳರಿಗೆ ಸೆರೆಸಿಕ್ಕಿದ್ದಿರಂತೆ ?" ಎಂದಳು ಶಾನ್ತಲದೇವಿ.

"ಸೆರೆ ಸಿಕ್ಕಿದ್ದರಿಂದಲೇ ಬೇಗ ಗೆಲವು ನಮ್ಮದಾಯಿತು. ಅವರ ಬಲವನ್ನು ಅರಿಯಲು ನಾವು ಬಂಧನವನ್ನು ಉಪಯೋಗಿಸಿಕೊಂಡೆವು. ಆದರೂ ಗಂಡಾಂತರವನ್ನೇ ದಾಟಿ ಬಂದ ಹಾಗೆ ಆಯಿತು" ಎಂದಳು ಚಟ್ಟಲದೇವಿ.

"ಇಲ್ಲಿಂದ ತಲಕಾಡಿನೊಳಕ್ಕೆ ಬಂದ ಹೇರಿಗರಿಂದ ನಿಮಗೇನಾದರೂ ನೆರವು ದೊರೆಯಿತೆ?"

"ಅವರು ಹರಡುತ್ತಿದ್ದ ಸುದ್ದಿ ಬ್ರಹ್ಮಾಂಡ ಕೆಲಸ ಮಾಡಿತು. ಪಟ್ಟಮಹಾದೇವಿಯವರಿಂದ ಮಾರ್ಗದರ್ಶನ ಪಡೆದವರೆಂದ ಮೇಲೆ ಹೇಳುವುದು ಬೇರೇನಿದೆ ?" ಎಂದ ಮಾಯಣ.

"ಯಾಕೆ ಮಾಯಣ ? ನಿನಗೇನೋ ಹೊಸ ಜಾಡ್ಯ ಅಂಟಿದ ಹಾಗೆ ಕಾಣುತ್ತದೆ ?" ಎಂದು ಶಾನ್ತಲದೇವಿ ಕೇಳಿದಳು. ಮಾಯಣ ತುಸು ಬೆಪ್ಪಾಗಿ ಶಾನ್ತದೇವಿಯತ್ತ ನೋಡಿದ. "ಯಾಕೆ ಹಾಗೆ ನೋಡುತ್ತೀ" ಎಂದು ಶಾನ್ತಲದೇವಿ ಮತ್ತೆ ಕೇಳಿದಳು.

"ಸನ್ನಿಧಾನ ಹೇಳಿದುದು ತಿಳಿಯಲಿಲ್ಲ....ಅದರಿಂದ...." ಎಂದು ರಾಗ ಎಳೆದ.

"ಮಹಾ ಸನ್ನಿಧಾನ ನಿನ್ನನ್ನು ಹೊಸದಾಗಿ ಹೊಗಳುಭಟ್ಟಂಗಿ ಕೆಲಸಕ್ಕೆ ನೇಮಕ ಮಾಡಿದ್ದಾರೇನು?"

"ಓ, ಅರ್ಥವಾಯಿತು. ಏನು ಮಾಡಲಿ ? ನನ್ನ ಬಾಳು ಸಾರ್ಥಕವಾಗಲು, ಕಹಿ ದೂರವಾಗಿ ಅಲ್ಲಿ ಸಿಹಿ ಮೂಡಲು, ಸನ್ನಿಧಾನ ಮಾಡಿದುದೆಲ್ಲದರ ಅರಿವಿರುವ ನನಗೆ ಅದು ಸಹಜ. ನಾನು ಹೊಗಳು ಭಟ್ಟಂಗಿಯ ಕೆಲಸ ಮಾಡಲಿಲ್ಲ, ವಸ್ತು ಸ್ಥಿತಿಯನ್ನು ನಿವೇದಿಸಿದೆ" ಎಂದ ಮಾಯಣ.

"ಸರಿ, ಸರಿ. ಏಳಿ ಹೋಗೋಣ. ಪಾಪ ಬಲ್ಲು ನಿಮ್ಮನ್ನು ನೋಡಿ ಹಿಗ್ಗುವುದನ್ನು ತಡಮಾಡ ಬಾರದು. ಸ್ಥಪತಿಗಳೆ, ವಿಗ್ರಹದ ವಿಚಾರ ಮತ್ತೆ ಆಲೋಚಿಸೋಣ" ಎಂದು ಶಾನ್ತಲದೇವಿ ಎದ್ದು ಹೊರಟಳು. ಸ್ಥಪತಿಯನ್ನು ಬಿಟ್ಟು ಉಳಿದವರೆಲ್ಲ ಅರಮನೆಯತ್ತ ಹೊರಟುಹೋದರು.

ಸ್ಥಪತಿ ತನ್ನ ಕೆಲಸದ ತಾಣಕ್ಕೆ ಹೋಗಿ ಕುಳಿತ. ಮಾಯಣನ ಮಾತು ಅವನ ಮನದಾಳದಲ್ಲಿ ನಿಂತು ಕೆದಕುತ್ತಿತ್ತು. ಮಾಯಣ ಚಟ್ಟಲೆಯರ ಬಾಳು ಎಷ್ಟು ಕಹಿಯಾಗಿದ್ದಿರಬಹುದೆಂದು ಅವನು ಊಹಿಸಲಾರದಂಥಹವನೇನಲ್ಲ ಎಂದಾಗ ಅಂತಹ ಬಾಳಿನಲ್ಲಿಯೂ ಸಿಹಿ ಮೂಡಿಸಿದ ಶಾನ್ತಲದೇವಿಯ ವ್ಯಕ್ತಿತ್ವ ಎಂತಹುದು ? ಅವಳ ಯೋಚನೆ ಬರುತ್ತಿದ್ದ ಹಾಗೆಯೇ ಅವಳು ಹೇಳಿದ ಮಾತುಗಳು ಮತ್ತೆ

ಇದಿರು ನಿಂತವು. ಲೋಕಕ್ಕೆ ನೀಡಬೇಕಾದುದಕ್ಕೆ ಸ್ವಂತ ನೋವು ಅಡ್ಡಿಯಾಗಬಾರದು. ಕಲಾ ಸೃಷ್ಟಿಗಾಗಿಯೇ ಹುಟ್ಟಿದ ಪ್ರತಿಭಾವಂತ, ಕಲೆ ಪ್ರಭಾವಯುತವಾಗಿ ಮೂಡಲು ಸದಾ ಎಚ್ಚೆತ್ತಿರಬೇಕು. ಕಣ್ಣು, ಕಿವಿ, ಮಿದಿಳು ಸದಾ ಕೆಲಸ ಮಾಡುತ್ತಿರಬೇಕು. ತನ್ನ ನೋವನ್ನು ಮುಂದೆ ಮಾಡಿ ಲೋಕದ ಕೆಲಸಕ್ಕೆ ಎರವಾಗುವುದು ಪ್ರತಿಭೆಗೆ ಮಾಡುವ ದ್ರೋಹ. ನಿಜ. ಆದರೆ ಆ ನೋವು ಒಳಗೇ ಅಡಗಿ ಕುಳಿತು ತಿನ್ನುತ್ತಿರುವಾಗ, ಅದು ಮಾಡಬಯಸುವ ಕೆಲಸಗಳಿಗೆ ಇದಿರಾಗಿ ಬೃಹತ್ತಾಗಿ ಅಡ್ಡಬಂದಾಗ, ಪರಿಸ್ಥಿತಿ ತೀರ ಅಸಹಾಯಕವಾಗುತ್ತದೆಯಲ್ಲ. ಆ ನೋವನ್ನು ಕಿತ್ತು ಆಚೆಗೆ ಹಾಕಬೇಕು. ಮುಚ್ಚಿಟ್ಟರೆ ಅದು ಒಳಗೇ ದಹಿಸುವ ಕೆಂಡವಾಗುತ್ತದೆ. ಆತ್ಮೀಯರೆದುರಿಗಾದರೂ ಅದನ್ನು ಬಿಚ್ಚಿ ಹೇಳಿದರೆ ಹಗುರವಾಗುತ್ತದೆ ಎಂದು ಒಮ್ಮೆ ಪಟ್ಟಮಹಾದೇವಿಯವರು ಹೇಳಿದ್ದರು. ಹಾಗೆ ಮಾಡಿದರೆ ಹೇಗೆ ? ಈವರೆಗೆ ಬಿಗಿ ಹಿಡಿದಿದ ನನ್ನ ಮನೆತನದ ಗುಟ್ಟು ಬಯಲಾಗಿ ಮಾನ ಮೂರಾಬಟ್ಟೆಯಾಗಿ ಬಿಡುತ್ತದೆಯಲ್ಲ. ಹೀಗೆಯೇ ಸ್ಥಪತಿಯ ಆಲೋಚನೆ ಅಡ್ಡ ದಾರಿಯಲ್ಲಿ ಅತ್ತ ಇತ್ತ ದಾಟುಗಾಲು ಹಾಕುತ್ತಿತ್ತು. ಅದಕ್ಕೆ ಚಾವುಣನ ಬರವಿನಿಂದ ತಡೆ ಬಂತು.

"ಏನು ರೂವಾರಿಗಳೆ ? ಏನಾದರೂ ತೊಡಕು ಉದ್ಭವವಾಗಿದೆಯೆ ?" ಎಂದು ಸ್ಥಪತಿ ಕೇಳಿದ.

"ತೊಡಕೇನು ಇಲ್ಲ. ಹುಡುಗುತನ. ಅರಮನೆಯಲ್ಲಿ ಬಂದ ಸಲಹೆಗೆ ಹಿರಿಯರು ಒಪ್ಪಲಿಲ್ಲ. ಒಂದು ರೀತಿಯಲ್ಲಿ ಅವರು ಹೇಳಿದ್ದು ಸರಿ. ತಮ್ಮ ಸೂಚನೆಯಂತೆ ಕೆಲಸ ಮಾಡಿದರೆ ತೊಡಕಿಗೆ ಕಾರಣವಿರುವುದಿಲ್ಲ ಎಂಬುದು. ನನಗೇನು ನಾನು ಮಾಡಿದ್ದೆಲ್ಲ ಸರಿಯೆಂಬ ಅಹಂಕಾರವಿಲ್ಲ. ಅಹಂಕಾರ ಕಲಾವಿದನಿಗೆ ಮೊದಲನೆಯ ಶತ್ರು ಎಂದು ನಮ್ಮ ತಂದೆ ಹೇಳುತ್ತಿದ್ದರು. ನಮ್ಮ ತಾತಂದಿರು ರಾಮೋಜರೂ ಹಾಗೆಯೇ ಹೇಳುತ್ತಿದ್ದರು. ಇವು ನಾನು ರಾತ್ರಿ ಚಿತ್ರಿಸಿದ ಚಿತ್ರಗಳು. ತಮಗೆ ಒಪ್ಪಿಗೆಯಾಗದಿದ್ದರೆ ನನಗೇನು ಬೇಸರವಿಲ್ಲ. ಆದರೆ ತಾವು ಅದನ್ನು ನೋಡಿ ಅಭಿಪ್ರಾಯ ಸೂಚಿಸಿಬೇಕು. ತಮ್ಮ ಮನಸ್ಸಿಗೆ ಬಂದರೆ ಅದನ್ನು ಶಿಲ್ಪದಲ್ಲಿ ಇಳಿಸಲು ಅನುಮತಿ ದಯಪಾಲಿಸಬೇಕು" ಎಂದು ತಾನು ರೂಪಿಸಿದ ಕೆಲವು ಚಿತ್ರಗಳನ್ನು ಸ್ಥಪತಿಯ ಮುಂದೆ ಹಿಡಿದ.

ಸ್ಥಪತಿ ಅವನ್ನೆಲ್ಲ ಮನಸ್ಸಿಟ್ಟು ನೋಡಿ, "ಇವನ್ನು ಪಟ್ಟಮಹಾದೇವಿಯವರ ಸನ್ನಿಧಾನಕ್ಕೆ ತೋರಿಸಿ, ಅವರ ಇಚ್ಛೆಯಂತೆ ನಡೆಯೋಣ" ಎಂದ.

"ಅಲ್ಲಿಯವರೆಗೆ ಹೋಗಬೇಕೆ ? ತಾವೇ ನಿರ್ಣಯಿಸಿದರೆ ಆಗಿತ್ತು."

"ನಾನು ನಿರ್ಣಯಿಸಿದರೆ ಅವರು ಬೇಡವೆನ್ನುವುದಿಲ್ಲ. ನಾನೇ ಈಗ ಅವರಿಗೆ ನನ್ನ ಕಲ್ಪನೆಯ ಚಿತ್ರಗಳನ್ನು ಆಯಲು ಕೊಟ್ಟಿದ್ದೇನೆ. ಪ್ರತಿ ಕಲಾವಿದನಿಗೂ ತನ್ನ ಕಲ್ಪನೆ ಶ್ರೇಷ್ಠ, ಚೊಕ್ಕ ಚೆನ್ನ ಎನ್ನಿಸುವುದು ಸಹಜ. ಬೇರೊಬ್ಬರು ಸಹೃದಯ ಕಲಾವಿದರು ಮೆಚ್ಚಿದರೆ ಕೃತಿಗೆ ಬೆಲೆ ಜಾಸ್ತಿ."

ನಡುವೆಯೇ, "ಎಂತಲೇ ನಾನು ತಮ್ಮಲ್ಲಿಗೆ ಅದನ್ನು ತಂದೆ" ಎಂದ ಚಾವುಣ.

"ನಿಮ್ಮ ತಂದೆಯವರಿಗೆ ತೋರಿಸಿದಿರಾ ?"

"ಇಲ್ಲ."

"ಏಕೆ ? ಅವರ ಅನುಭವದ ಮುಂದೆ ನನ್ನ ಅನುಭವವೇನು ? ವಾಸ್ತವವಾಗಿ ನಾನು ಅವರ ಮುಂದೆ ಕಿರಿಯ."

“ಎಂತಲೇ ತಮ್ಮ ಬಳಿಗೆ ಬಂದೆ. ಸಭೆಯಲ್ಲಿ ಉಳಿದ ರೂವಾರಿಗಳು ಏನೂ ಚಿತ್ರಿಸುವುದು ಬೇಡ ಎಂದು ನಿರ್ಣಯವಾದುದಕ್ಕೆ ನಮ್ಮ ತಂದೆಯವರು ಸಹಮತ ಹೊಂದಿದವರು. ಅದರಿಂದ ಅವರು ನನ್ನ ಈ ಕೆಲಸಕ್ಕೆ ಬೆಂಬಲ ನೀಡಲಾರರೆಂದು ನನ್ನ ಅನುಮಾನ.''

“ಅನುಮಾನ ಒಳ್ಳೆಯದಲ್ಲ. ಒಮ್ಮೆ ಅವರಿಗೇ ತೋರಿಸಿ. ಆಮೇಲೆ ಪಟ್ಟಮಹಾದೇವಿಯವರೊಂದಿಗೆ ಈ ವಿಷಯದಲ್ಲಿ ನಿರ್ಣಯ ತೆಗೆದುಕೊಳ್ಳೋಣ.''

“ಹಾಗೆ ತಾವು ಅಪ್ಪಣೆ ಮಾಡಿದರೆ ಬೇರೆ ಉಪಾಯವಿಲ್ಲ. ಆದರೆ ತಮ್ಮ ಅಭಿಪ್ರಾಯ ತಿಳಿಸಲೇ ಇಲ್ಲವಲ್ಲ''

“ಒಳ್ಳೆಯ ಕೃತಿ ನೋಡುವವನ ಅಂತರಂಗಕ್ಕೆ ನೇರವಾಗಿ ಸಂದೇಶ ಮುಟ್ಟಿಸುತ್ತದೆ. ನನಗೆ ಆ ಸಂದೇಶ ಮುಟ್ಟದೆ ಇದ್ದಿದ್ದರೆ ಪಟ್ಟಮಹಾದೇವಿಯವರಿಗೆ ತೋರಿಸುವ ಸೂಚನೆ ಕೊಡುತ್ತಿದ್ದೆನೆ? ಒಂದು ವಿಷಯ ನಾವು ಕಲಾವಿದರು ನೆನಪಿನಲ್ಲಿಟ್ಟುಕೊಳ್ಳಬೇಕು. ಪರಂಪರೆಯೇ ಕ್ರಮಕ್ರಮವಾಗಿ ಹೊಸತನ್ನು ರೂಪಿಸುತ್ತ ಹೋದರೆ ಕಲೆಗೆ ಹೊಸ ರೂಪ, ಹೊಸ ಜೀವಂತಿಕೆ ಕೊಟ್ಟ ಹಾಗೆ ಆಗುತ್ತದೆ. ಈಗ ಬಲಿಪುರದ ಸಂಪ್ರದಾಯವನ್ನು ಪರಿಗಣಿಸೋಣ. ಶ್ರೇಷ್ಠ ಪರಂಪರೆಯ ಜೊತೆಗೆ ಹೊಸತನ ರೂಪಿಸುತ್ತ ಬಂದಿದೆ ಅಲ್ಲಿನ ಸಂಪ್ರದಾಯ. ನಿಮ್ಮ ತಾತಂದಿರು ತೋರಿಸಿದ ಪರಂಪರೆಯ ಆಧಾರದಿಂದ ನಿಮ್ಮ ತಂದೆಯವರು ಹೊಸತನ್ನು ರೂಪಿಸಿದರು. ಬಲಿಪುರದ ನೀರು ಗಾಳಿಗಳೇ ಹಾಗೆ. ನಿಮ್ಮ ಮನೆತನವೇ ಅದಕ್ಕೆ ಸಾಕ್ಷಿ. ಇನೇಜರು, ಚಿಕ್ಕಹಂಪರು, ಮಲ್ಲಿಯಣ್ಣನವರು, ಪದರಿ ಮಲ್ಲೋಜರು ಮೊದಲಾದ ಶ್ರೇಷ್ಠ ರೂವಾರಿಗಳನ್ನು ಇತ್ತ ಊರು ಬಲಿಪುರ. ನವರಂಗದ ಕೆತ್ತನೆಯಲ್ಲಿ ಚಿಕ್ಕಹಂಪರ ಕುಸುರಿ ಕೆಲಸ, ಮಲ್ಲಿಯಣ್ಣನವರ ಜಾಣ್ಮೆಗಳನ್ನು ಮೀರಿಸುವುದು ಸುಲಭವಲ್ಲ. ಹೀಗೆಯೇ ಗದಗಿನ ರೂವಾರಿಗಳ ಕೈಚಳಕಕ್ಕೇ ಒಂದು ಪರಂಪರೆ ಇದೆ. ಬೆಳುಗೊಳದವರಿಗೆ ಒಂದು ವೈಶಿಷ್ಟ್ಯವಿದೆ. ಆದರೂ ಅವರಲ್ಲಿಯೂ ಬಲಿಪುರದ ಪ್ರಭಾವ ತುಂಬ ಇದೆ.''

“ಅದಕ್ಕೆ ಕಾರಣ ಬಲಿಪುರದವರೆ ಒಂದು ಕಾಲಕ್ಕೆ ಬೆಳಗೊಳದಲ್ಲಿ ಬಂದು ನೆಲೆಸಿದರು.''

“ಎರಡು ಪರಂಪರೆಗಳು ಬೇರೆತಾಗ ಅಲ್ಲಿ ಒಂದು ಹೂಸ ಸೃಷ್ಟಿ ಆಗುತ್ತದೆ.''

“ತಪ್ಪು ಭಾವಿಸಬಾರದು. ಒಳಗೆ ಎದ್ದು ನಿಂತಿರುವ ಆಸೆಯನ್ನು ತಡೆ ಹಿಡಿಯಲು ಸಾಧ್ಯವಾಗುತ್ತಿಲ್ಲ. ಸ್ಥಪತಿಗಳ ಸ್ಥಳ ಹಾಗು ವೈಯಕ್ತಿಕ ವಿಚಾರಗಳ ಬಗೆಗೆ ಯಾರೂ ಏನೂ ಕೇಳಬಾರದೆಂಬ ಕಟ್ಟಪ್ಪಣೆಯಿದೆ. ತಮ್ಮ ಪ್ರತಿಭೆ ಕಂಡಾಗಿನಿಂದ ನನಗೂ ನಮ್ಮ ತಂದೆಯವರಿಗೂ ತಮ್ಮ ಮೂಲಸ್ಥಾನದ ಅರಿವನ್ನು ಪಡೆಯಬೇಕೆಂಬ ಬಯಕೆ ಉತ್ಕಟವಾಗಿದೆ. ಆದರೂ ಕೇಳುವುದಕ್ಕೆಡೆಯಿಲ್ಲದೆ ಅದನ್ನು ಅದುಮಿ ಹಿಡಿದಿದ್ದೇವೆ.''

“ಅದರಿಂದ ಯಾರಿಗೂ ಯಾವ ಲಾಭವೂ ಇಲ್ಲ. ಆ ಕುರಿತು ಕೇಳಬೇಡಿ.''

“ಚಿತ್ತ.''

“ಹಾಗಾದರೆ ಇವನ್ನು ಮೊದಲು ನಿಮ್ಮ ತಂದೆಯವರಿಗೆ ತೋರಿಸಿ ಅವರ ಒಪ್ಪಿಗೆ ಪಡೆದು ತನ್ನಿ. ನಾನು ನಂತರ ಅವನ್ನು ಪಟ್ಟಮಹಾದೇವಿಯವರಿಗೆ ಕೊಡುತ್ತೇನೆ.''

“ನನ್ನ ಮಾತಿನಿಂದ ಅಸಮಾಧಾನವಾಗಿಲ್ಲ ತಾನೆ'' ಒಂದು ಬಗೆಯ ದೈನ್ಯಭಾವದಿಂದ ಚಾವುಣ ಕೇಳಿದ.

"ಇಲ್ಲ. ಏನೂ ಇಲ್ಲ."

"ಈ ವಿಷಯ....."

"ಹೇಳುವುದಿಲ್ಲ. ಯಾರಿಗೂ ಹೇಳುವುದಿಲ್ಲ."

"ಸರಿ" ಎಂದು ಚಾವುಣ ಅಲ್ಲಿಂದ ಹೊರಟುಹೋದ.

ಸ್ಥಪತಿ, ಚಾವುಣನ ಚಿತ್ರಗಳನ್ನು ಸ್ಮರಿಸಿಕೊಂಡ. ಅವನ ಆಲೋಚನಾಲಹರಿ ಮತ್ತೆ ಪರಿಸ್ಫುಟಗೊಂಡಿತು. 'ಅವರ ವಂಶದ ಪರಂಪರೆಯ ಅಚ್ಚು ಇಲ್ಲಿ ಮೂಡಿದೆ. ರಾಮೋಜ, ದಾಸೋಜ, ಚಾವುಣರ ಮಾತು ಶಿಲ್ಪ ಸಾಮ್ರಾಜ್ಯದಲ್ಲಿ ಶಾಶ್ವತವಾಗಿ ನಿಲ್ಲುವ ಮಾತು. ಅವರ ಕೃತಿಗಳೂ ಹಾಗೆ. ಮುಂದಿನ ಪೀಳಿಗೆಗೆ ಬಲಿಪುರದ ಶಿಲ್ಪ ಬೆಳೆದು ಬಂದ ರೀತಿಗೆ ಶಾಶ್ವತ ಸಾಕ್ಷಿಯಾಗಿ ನಿಲ್ಲುತ್ತವೆ. ಅವರ ವಂಶ ಸತ್ಸಂತಾನದಿಂದ ಹೀಗೆಯೇ ಪರಂಪರೆಯನ್ನು ಬೆಳೆಸುತ್ತ ಹೋಗುತ್ತದೆ. ಆದರೆ.....ನನ್ನ ವಂಶದ ಪರಂಪರೆ....ಅದು ನನ್ನ ತೀರ್ಥರೂಪರಿಗೇ ನಿಂತು ಹೋಗುತ್ತದೆ. ಸಿರಿನಾಡಿನ ಭವ್ಯ ಪರಂಪರೆ ಅಲ್ಲಿಗೆ ಸ್ಥಗಿತವಾಗಬೇಕಾಯಿತಲ್ಲ. ಏನು ಕರ್ಮ ಮಾಡಿ ನಾನು ಜನ್ಮಧಾರಣೆ ಮಾಡಿದೆ. ನಮ್ಮ ವಂಶದ ಶಿಲ್ಪ ಪ್ರತಿಭೆಗೆ ನಾನೇ ಇತಿಶ್ರೀ ಮಾಡುವಂತಾಯಿತಲ್ಲಾ. ನಾನು ಅದೃಷ್ಟಶಾಲಿಯಾಗಿದ್ದಿದ್ದರೆ ನನ್ನ ಸಂಸಾರ ಎಲ್ಲರ ಸಂಸಾರದಂತೆ ನಾಣ್ಯವಾಗಿ ಸಾಗುತ್ತಿತ್ತು. ಅದು ನಾಣ್ಯವಾಗಿ ಸಾಗಿದ್ದಿದ್ದರೆ, ನನ್ನ ವಂಶವನ್ನು ಸತ್ಸಂತಾನದಿಂದ ವರ್ಧಿಸಲು ನಾನು ಕಾರಣನಾಗಿದ್ದಿದ್ದರೆ....ಛೆ, ಛೆ...ಎಲ್ಲ ಹುಚ್ಚು ಕಲ್ಪನೆ. ಅಸಾಧ್ಯವಾದುದರತ್ತ ಮನಸ್ಸು ಹೋಗುತ್ತಿದೆ. ಏಕೋ ಮನಸ್ಸು ಎತ್ತೆತ್ತಲೋ ಓಡುತ್ತಿದೆ ಇಂದು. ಕೈಯಿ ಕೃತಿಗಿಳಿಯಲಾರದು. ಕುಳಿತು ಯೋಚಿಸುವುದಕ್ಕಿಂತ ಒಮ್ಮೆ ಸುತ್ತಿ ಬರೋಣ' ಎಂದು ಅವನು ಅಲ್ಲಿಂದೆದ್ದು ಹೊರಟುಬಿಟ್ಟ ಅಸಂಖ್ಯಾತ ರೂವಾರಿಗಳು ಮಾಡುತ್ತಿದ್ದ ಕುಸುರಿ ಕೆಲಸಗಳನ್ನು ನೋಡುತ್ತ ಹೊರಟ.

ಒಂದು ಕಡೆ ಹೊಯಿಸಳಾಚಾರಿ, ಅವನ ಮಗ ವರ್ಧಮಾನಾಚಾರಿ, ಇನ್ನೊಂದು ಕಡೆ ಗದಗಿನ ಕಾಟೋಜ, ಅವನ ಮಗ ನಾಗೋಜ, ಮತ್ತೊಂದು ಕಡೆ ದಾಸೋಜ, ಅವನ ಮಗ ಚಾವುಣ, ಮಗದೊಂದು ಕಡೆ ಗಂಗಾಚಾರಿ ಅವನ ಸೋದರ ಕಾಂವಾಚಾರಿ, ಹಾಗೆಯೇ ಮಲ್ಲಣ್ಣ, ಅವನ ಮಗ ಮಸದ, ಇನೇಜ, ಅವನ ಮಗ ಚಿಕ್ಕಹಂಪ ಮೊದಲಾದ ರೂವಾರಿ ಕುಟುಂಬಗಳು ಏಕಾಗ್ರತೆಯಿಂದ ಈ ನವಸೃಷ್ಟಿಯ ಕೆಲಸದಲ್ಲಿ ತೊಡಗಿರುವುದನ್ನು ನೋಡುತ್ತ ನೋಡುತ್ತ ಸಾಗಿದಾಗ ಯಾವುದೋ ಅವ್ಯಕ್ತವಾದ ಒಂದು ಅಂತರಂಗಿಕ ಪ್ರೇಮದ ಒತ್ತಡ ನುಗ್ಗಿ ಬಂತು. ಅವನ ಇಡೀ ಶರೀರವನ್ನು ದಾರುಣವಾದ ಒಂದು ಸ್ಪಂದನಕ್ಕೆ ಒಳಗು ಮಾಡಿತು. ನಿಯತ ಕಾಲಕ್ಕೆ ಮುಂಚೆಯೇ ಅಂದು ಅವನು ತನ್ನ ನಿವಾಸಕ್ಕೆ ಹೊರಟುಹೋದ.

ನಿವಾಸಕ್ಕೆ ಹೋದವನೇ ಕೈ ಕಾಲು ಮುಖ ತೊಳೆದುಕೊಂಡು ಮಂದಳಿಗೆಯ ಮೇಲೆ ಕಾಲು ಚಾಚಿ ಮಲಗಿದ. ತುಸು ಹೊತ್ತಿನಲ್ಲಿಯೇ ಮಂಚಣ ಆರೋಗಣೆಗೆ ಸಿದ್ಧಪಡಿಸಿ ಕರೆಯಲು ಬಂದ.

"ಮಂಚಣ. ಏನೋ ಸ್ವಲ್ಪ ಕಸಿವಿಸಿ ಎನಿಸಿದೆ. ನಾನು ಆಹಾರ ತೆಗೆದುಕೊಳ್ಳುವುದಿಲ್ಲ. ಸ್ವಲ್ಪ ಬಿಸಿ ನೀರು, ನಿಂಬೆಹಣ್ಣು ಕೊಡು. ನೀನು ಆರೋಗಣೆ ಮುಗಿಸಿದ ನಂತರ ನನಗೆ ಬಿಸಿ ನೀರು ತಂದುಕೊಟ್ಟರೆ ಸಾಕು" ಎಂದು ಹೇಳಿದ.

"ವೈದ್ಯರನ್ನು ಕರೆದು ತರಲೆ" ಎಂದು ಮಂಚಣ ಮೆದುವಾಗಿ ಕೇಳಿದ.

"ಏನೂ ಬೇಡ. ಅರ್ಧ ಪ್ರಹರ ವಿಶ್ರಾಂತಿ ಮಾಡಿದರೆ ಸಾಕು. ನೀನು ಹೋಗು" ಎಂದ ಸ್ಥಪತಿ.

ಮಂಚಣ ಹೋಗಿ ತುಸು ಹೊತ್ತಿನಲ್ಲಿ ಬಿಸಿ ನೀರು, ಹೆಚ್ಚಿದ ನಿಂಬೆ ಹಣ್ಣಿನ ಹೋಳುಗಳನ್ನು ತಂದ.

"ನಿನ್ನ ಆರೋಗಣೆ ಆಯಿತೆ ?'' ಎಂದು ರೂವಾರಿ ಕೇಳಿದ.

"ಈಗ ಮಾಡುತ್ತೇನೆ'' ಎಂದು ಹೇಳಿದ ಮಂಚಣ, ನಿಂಬೆ ಹಣ್ಣು ಹಿಂಡ ತೊಡಗಿದ.

"ಇದಕ್ಕೇನು ಆತುರವಾಗಿತ್ತು. ನಾನು ಹೇಳಿರಲಿಲ್ಲವೆ ?'' ಎಂದು ಸ್ಥಪತಿ ತುಸು ಅಸಮಾಧಾನದ ಧ್ವನಿಯಲ್ಲಿ ಹೇಳಿದ.

"ನಾನು ದಿವಸವೂ ಆರೋಗಿಸುವ ವೇಳೆ ಇನ್ನೂ ಬಂದಿಲ್ಲ.ತಾವು ಇಂದು ಬೇಗ ನಿವಾಸಕ್ಕೆ ಬಂದಿದ್ದೀರಿ. ತೆಗೆದುಕೊಳ್ಳಿ'' ಎಂದು ಬೆಳ್ಳಿಯ ಕೋಶಿಕೆ ಮುಂದೆ ಹಿಡಿದ

ಮಾತು ಬೆಳೆಸಬಾರದೆನ್ನಿಸಿತು ಸ್ಥಪತಿಗೆ. ಮರು ಮಾತನಾಡದೆ ಅದನ್ನು ಕುಡಿದು ಮಗ್ಗುಲಾದ.

ಅವನ ಮೈ ಮುಟ್ಟಿನೋಡಬೇಕೆನ್ನಿಸಿತು ಮಂಚಣನಿಗೆ. ಆದರೆ ಧೈರ್ಯ ಸಾಲದೆ ಅಲ್ಲಿಂದ ಮೆಲ್ಲಗೆ ಹೊರಟುಹೋದ.

ಮಧ್ಯಾಹ್ನಾನ್ತರ ಸ್ಥಪತಿ ತನ್ನ ಕೆಲಸದ ತಾಣಕ್ಕೆ ಬಂದ. ಚಾವುಣ ತಾನು ರಚಿಸಿದ ಚಿತ್ರಗಳನ್ನು ಸ್ಥಪತಿಗೆ ಕೊಟ್ಟು ಹೋದ. ನಂತರ ಸ್ಥಪತಿ ತನ್ನ ಕೆಲಸದಲ್ಲಿ ತೊಡಗಿದ ಪಟ್ಟಮಹಾದೇವಿ, ಬಿಟ್ಟಿಯಣ್ಣರೂ ಬಂದರು. ಬರುತ್ತಿದ್ದ ಹಾಗೆಯೇ ಸ್ಥಪತಿಯನ್ನು ನೋಡಿ, "ದೇಹಸ್ಥಿತಿ ಸರಿಯಿಲ್ಲದವರು ಏಕೆ ಬಂದಿರಿ ಸ್ಥಪತಿಗಳೆ ?'' ಎಂದು ಶಾನ್ತಲದೇವಿ ಕೇಳಿದಳು.

ಅವನು ಥಟ್ಟನೆ ಉತ್ತರಿಸಲಿಲ್ಲ. "ಏಕೋ ಸ್ವಲ್ಪ ಕಸಿವಿಸಿ ಎನಿಸಿತಷ್ಟೆ, ಈಗೇನಿಲ್ಲ'' ಎಂದು ಮೆಲ್ಲನುಸುರಿದ.

ಅಷ್ಟರಲ್ಲಿ ಪಟ್ಟಮಹಾದೇವಿ, ಬಿಟ್ಟಿಯಣ್ಣ ತಮ್ಮಾಸನಗಳಲ್ಲಿ ಕುಳಿತಿದ್ದರು.

ಸ್ಥಪತಿ, ಚಾವುಣ ರಚಿಸಿದ ಚಿತ್ರಗಳನ್ನು ಪಟ್ಟಮಹಾದೇವಿಯ ಕೈಗಿತ್ತು, "ಇವು ಚಾವುಣರ ರಚನೆಗಳು. ಯಾವು ಯಾವುದನ್ನು ರೂಪಿಸಬೇಕು ಎಂಬ ಬಗೆಗೆ ಸನ್ನಿಧಾನ ನಿರ್ಧರಿಸಿದ್ದರೆ ಅಪ್ಪಣೆ ಕೊಡಿಸಬೇಕು. ಇವುಗಳಲ್ಲಿಯೂ ಏನಾದರೂ ಆಯುವುದಾದರೆ ಅದೂ ಸೇರಿಸಬಹುದು'' ಎಂದು ಉತ್ತರ ನಿರೀಕ್ಷಿಸುತ್ತ ಕುಳಿತ ರೂವಾರಿ.

ಶಾನ್ತಲದೇವಿ, ಬಿಟ್ಟಿಗರು ಚಾವುಣನ ಚಿತ್ರಗಳನ್ನು ನೋಡಿದರು. ನೋಡಿ ಆದ ಮೇಲೆ, "ನಿಮ್ಮ ಅಭಿಪ್ರಾಯ ಏನು?'' ಎಂದು ಶಾನ್ತಲದೇವಿ ಕೇಳಿದಳು.

"ನನಗೂ ಯೋಗ್ಯ ಅನ್ನಿಸದೆ ಇದ್ದಿದ್ದರೆ ನಾನು ಸನ್ನಿಧಾನಕ್ಕೆ ತೋರಿಸುತ್ತಲೇ ಇರಲಿಲ್ಲ. ಹೇಗೂ ನಾನು ಬರೆದಿರುವ ಚಿತ್ರಗಳಲ್ಲಿ ಆಯ್ಕೆಯಾಗಬೇಕಲ್ಲ. ಆ ಆಯ್ಕೆಯಲ್ಲಿ ಇವೂ ಸೇರಬಹುದು'' ಎಂದು ಸ್ಥಪತಿ ಸೂಚಿಸಿದ.

"ಹಾಗೆಯೇ ಆಗಲಿ.''

"ಸನ್ನಿಧಾನ ಆಯ್ಕೆ ಮಾಡಿರುವ ಚಿತ್ರಗಳನ್ನು ಸೂಚಿಸಿದರೆ ಕೆಲಸವನ್ನು ಹಂಚ ಬಹುದು'' ಎಂದು ಮೆದುವಾಗಿ ಬಿನ್ನವಿಸಿಕೊಂಡ ಸ್ಥಪತಿ.

"ಒಂದು ರೀತಿಯಲ್ಲಿ ಕೆಲವು ಸಮರ್ಪಕವೆನಿಸಿವೆ. ಆದರೂ ನಿಮ್ಮ ಯೋಜನೆಯಂತೆ ಬೇಕಾಗುವ ಎಲ್ಲ ವಿಗ್ರಹಗಳೂ ದೊರಕುವುದೆಂದು ನಾನು ಹೇಳಲಾರೆ.''

“ಸನ್ನಿಧಾನಕ್ಕೆ ಸಮರ್ಪಕವೆನ್ನಿಸಿದವನ್ನು.....'' ಎಂದು ಸ್ಥಪತಿ ಹೇಳುತ್ತಿದ್ದ, ನಡುವೆಯೇ “ಮಹಾಸನ್ನಿಧಾನ ಹೇಗೂ ಬೇಗ ಬಂದು ಬಿಡುತ್ತಾರೆ. ಅವರು ಬಂದ ನಂತರವೇ ಈ ವಿಷಯದಲ್ಲಿ ತೀರ್ಮಾನ ಕೈಕೊಳ್ಳೋಣ'' ಎಂದಳು ಶಾನ್ತಲದೇವಿ.

“ಚಿತ್ತ.''

ಮಾತು ಅಲ್ಲಿಗೆ ನಿಂತಂತಾಯಿತು.

ಶಾನ್ತಲದೇವಿ ಮತ್ತೆ ಚಾವುಣ ರಚಿಸಿದ್ದ ಚಿತ್ರಗಳನ್ನು ನೋಡತೊಡಗಿದಳು. ಎಲ್ಲವನ್ನೂ ನೋಡಿಯಾದ ಮೇಲೆ, “ಸ್ಥಪತಿಗಳೇ, ಚಾವುಣರನ್ನು ಬರಮಾಡುತ್ತೀರಾ?'' ಎಂದು ಕೇಳಿದಳು.

ಸ್ಥಪತಿ, “ಅಪ್ಪಣೆ'' ಎಂದು ಹೊರಗೆ ಹೋಗಿ ಚಾವುಣನನ್ನು ಕರೆದು ತರಲು ಊಳಿಗದವನೊಬ್ಬನಿಗೆ ಹೇಳಿ ಬಂದು ನಿಂತುಕೊಂಡ.

“ಕೂಡಿ'' ಎಂದು ಹೇಳಿ ಅವನು ಕೂಡುತ್ತಲೂ ಶಾನ್ತಲದೇವಿ ತನ್ನ ಬಳಿಯಿದ್ದ ಚಿತ್ರಗಳಲ್ಲಿ ಒಂದನ್ನು ತೆಗೆದು ಸ್ಥಪತಿಯ ಕೈಗೆ ಕೊಟ್ಟು “ಈ ಕಲ್ಪನೆ ನಿಮಗೆ ಹೇಗೆನ್ನಿಸಿತು ಎಂಬುದನ್ನು ಸ್ವಲ್ಪ ವಿವರಿಸಬಲ್ಲಿರಾ?'' ಎಂದು ಕೇಳಿದಳು.

“ರಚಯಿತರ ಮನಸ್ಸಿನಲ್ಲಿ ಏನು ಭಾವವಿದೆಯೋ ನಾನು ಹೇಳಲಾರೆ. ಅವರನ್ನು ನಾನು ಕೇಳಿಯೂ ಇಲ್ಲ. ನನ್ನ ದೃಷ್ಟಿಯಲ್ಲಿ ಇದು ಅವರ ಮನೋಕಲ್ಪನೆಯಲ್ಲಿ ಮೂಡಿದ ಜ್ಞಾನ ದೇವತೆ ಎಂದೆನ್ನಬಹುದು.''

“ಜ್ಞಾನದೇವತೆ ಎಂದರೆ ನಿಮ್ಮ ಅಭಿಪ್ರಾಯದಲ್ಲಿ ಸರಸ್ವತಿ ತಾನೆ ? ಈ ರೀತಿ ಭಾವಿಸಲು ನೀವು ಇದರಲ್ಲಿ ಕಂಡುದೇನನ್ನು? ನಾಲ್ಕು ಕೈಗಳಿರುವುದರಿಂದ ಆ ರೀತಿ ಭಾವಿಸಿದಿರಾ?''

“ನಾಲ್ಕು ಕೈಗಳನ್ನು ನಾವು ಎಲ್ಲ ದೇವರುಗಳಿಗೂ ಕಲ್ಪಿಸುತ್ತೇವೆ.ಆದಷ್ಟರಿಂದ ನಾವು ಆ ನಿರ್ಣಯ ತೆಗೆದುಕೊಳ್ಳುವ ಹಾಗಿಲ್ಲ. ಊರ್ಧ್ವ ಬಾಹುಗಳಲ್ಲಿ ನೃತ್ಯ ವಿನ್ಯಾಸ ರೂಪಿತವಾಗಿ ನಿಲುವಿನಲ್ಲಿ ನಾಟ್ಯ ಭಂಗಿ ಇರುವುದರಿಂದ ಅವರ ಕಲ್ಪನೆಯ ದೇವತೆ ನೃತ್ಯ ರೂಪದಲ್ಲಿ ಇಲ್ಲಿ ವಿರಾಜಿಸಿದ್ದಾಳೆ. ನಿಖರವಾಗಿ ಈ ದೇವತೆ ಯಾರು ಎನ್ನುವುದನ್ನು ಉಳಿದ ಎರಡು ಕೈಗಳನ್ನು ನೋಡಿ ಊಹಿಸಿಕೊಳ್ಳಬಹುದಾಗಿದೆ. ಎಡಹಸ್ತದಲ್ಲಿ ಲೇಖನ ಮೂಡಿಸುವ ತಾಳೆ ಓಲೆಗಳು ಇವೆ. ಅದು ಜ್ಞಾನದ ಸಂಕೇತ. ಬಲಗೈಯಲ್ಲಿ ಮಣಿಮಾಲೆ ಇದೆ. ಮನನ ಮಾಡುವುದಕ್ಕೆ ಈ ಮಣಿಮಾಲೆ—ಜಪ ಮಾಲೆ ಇದೆ. ಅದರಿಂದ ಇದು, ಅವರು ಕಲ್ಪಿಸಿರುವ ನಾಟ್ಯ ಸರಸ್ವತಿ ಎಂದೆನ್ನಬಹುದು. ಸನ್ನಿಧಾನದ ಅಭಿಪ್ರಾಯ'' ಎಂದ ಸ್ಥಪತಿ.

“ಇದು ನಾಟ್ಯ ನಾದ ಸರಸ್ವತಿಯಾದರೆ ಹೇಗೆ?'' ಎಂದು ಪ್ರಶ್ನಿಸಿದಳು ಶಾನ್ತಲ ದೇವಿ.

“ಹೌದು. ಇದರಲ್ಲಿ ಜ್ಞಾನ ದೇವತೆ ವೀಣಾಪಾಣಿಯಾಗಿಲ್ಲ. ಅದರಿಂದ ಸನ್ನಿಧಾನದ ಸಲಹೆ ಯುಕ್ತವಾದುದೆ.''

“ಅಂದರೆ ಈ ನೃತ್ಯ ಸರಸ್ವತಿಯ ಕೈಗೆ ವೀಣೆ ಕೊಡಬೇಕೆಂಬುದು ನಿಮ್ಮ ಅಭಿಪ್ರಾಯವೆ? ಹಾಗೆ ಮಾಡಲು ಸಾಧ್ಯವೆ, ಸ್ಥಪತಿಗಳೆ?''

“ಈ ಭಂಗಿಯಲ್ಲಿ ಸಾಧ್ಯವಿಲ್ಲ?''

"ಈ ಭಂಗಿ ತುಂಬ ಭಾವ ಪೂರ್ಣವಾಗಿದೆ ಮತ್ತು ಅಷ್ಟೇ ಸಾಂಕೇತಿಕವಾಗಿಯೂ ಇದೆಯಲ್ಲವೆ?''

"ಹೌದು.''

"ಇದು ನಾದ ಪ್ರತೀಕವೂ ಆದರೆ ಚೆನ್ನ ಎಂದು ನನ್ನ ಮನಸ್ಸಿಗನ್ನಿಸುತ್ತದೆ.''

"ಒಳ್ಳೆಯ ಯೋಚನೆ. ಹೇಗೆ ಮಾಡಬೇಕೆಂದು ಯೋಚಿಸಬೇಕು. ಇದನ್ನು ಕಲ್ಪಿಸಿದವರನ್ನೇ ಕೇಳಬಹುದಲ್ಲವೆ?''

"ಅವರನ್ನೂ ಕೇಳೋಣ. ಮೊದಲು ಅವರ ಕಲ್ಪನೆ ಏನೆಂಬುದನ್ನು ತಿಳಿಯೋಣ. ನಂತರ ಚರ್ಚಿಸೋಣ. ಆದರೆ ನಾವು ಹೊಸ ಸೂಚನೆ ಕೊಡುತ್ತಿದ್ದೇವೆ ಎಂದೆನಿಸಿದಾಗ ಥಟ್ಟನೆ ಅವರಿಗ ಏನೂ ಹೊಳೆಯದೆ ಹೋಗಬಹುದು. ನಾವೂ ಸಹ ಆ ಕುರಿತು ಯೋಚಿಸಿ ಏನಾದರೂ ಸಲಹೆ ಕೊಟ್ಟರೆ ತಪ್ಪೇನಿಲ್ಲವಲ್ಲ.''

"ಏನೂ ಇಲ್ಲ.''

"ನೀವೂ ಯೋಚಿಸಿ. ನಾನೂ ಯೋಚಿಸುತ್ತೇನೆ. ಬಿಟ್ಟ ನೀನೂ ಯೋಚಿಸು. ಯೋಚನೆ ಒಂದು ಕಡೆ ಸಾಗಿರಲಿ. ಇನ್ನೊಂದು ವಿಷಯ. ನನಗೆ ಇದು ತುಂಬ ಮನಸ್ಸಿಗೆ ಹಿಡಿಸಿದೆ. ಆದರೆ ಇದು ನೀವೆಂದುಕೊಂಡಿರುವಂತೆ ಮೇಲೆ ಛಾವಣಿಯ ತಳಭಾಗದಲ್ಲಿ ಓರೆಯಾಗಿ ಅಳವಡಿಸಲು ಆಗಲಾರದು. ಅದರಿಂದ ಇದಕ್ಕೆ ಕೊಂಚ ವಿಸ್ತಾರವಾದ ಪ್ರತಿಮಾರೂಪ ಕೊಟ್ಟು ಈ ದೇವಮಂದಿರದ ಉತ್ತರಭಿತ್ತಿಯಲ್ಲಿ ಅಳವಡಿಸಿದರೆ ಹೇಗೆ?''

"ಅದೂ ಸೂಕ್ತವೆ. ಉತ್ತರದ ದ್ವಾರವನ್ನು ನಾವು ಸ್ವರ್ಗದ್ವಾರವೆಂದು ಕರೆಯುತ್ತೇವೆ. ಜ್ಞಾನಾಧಿದೇವತೆಯ ಬಲವಿಲ್ಲದೆ ನಮಗೆಲ್ಲಿ ಸಾಯುಜ್ಯ ? ಹಾಗೆಯೇ ಮಾಡೋಣ. ಆದರೆ ಅದಕ್ಕೆ ಹೊಂದಿಕೆಯಾಗುವ ಮತ್ತೊಂದು ಮೂರ್ತಿಯನ್ನು ಸಹ ದ್ವಾರದ ಇನ್ನೊಂದು ಬದಿಗೆ ಅಳವಡಿಸಿಬೇಕಾಗುತ್ತದೆ.''

ಸ್ಥಪತಿಯ ಮಾತು ಮುಗಿಯುವ ಹೊತ್ತಿಗೆ ಚಾವುಣ ಅಲ್ಲಿಗೆ ಬಂದ. ಅವನ ಮನಸ್ಸಿಗೆ ಆಗಲೇ ಹೊಳೆದಿತ್ತು. ತನ್ನ ಚಿತ್ರಗಳು ಪಟ್ಟಮಹಾದೇವಿಯ ದೃಷ್ಟಿಗೆ ಬಿದ್ದಿರಬೇಕು ಎಂದು. ಉತ್ಸಾಹ, ಕೂತೂಹಲ ಬೆರೆತವನಾಗಿ ಅವನು ಬಂದು ಬಾಗಿ ವಂದಿಸಿದ.

ಶಾನ್ತಲದೇವಿ ಅವನನ್ನು ಕೂಡಲು ಹೇಳಿದಳು.

ಅವನು ಕುಳಿತ ಬಳಿಕ, "ಸ್ಥಪತಿಗಳೆ ಈವರೆಗೆ ನಡೆದ ಮಾತು ಕಥೆಯನ್ನು ರೂವಾರಿಗಳಿಗೆ ತಿಳಿಸಿ'' ಎಂದಳು ಶಾನ್ತಲದೇವಿ.

ಸ್ಥಪತಿ ಯಥಾವತ್ತಾಗಿ ಹೇಳಿದ. ತನ್ನ ಚಿತ್ರದ ಬಗೆಗೆ ಇಷ್ಟೆಲ್ಲ ಚರ್ಚೆ ನಡೆದಿರಬಹುದೆಂಬುದು ಅವನ ಕಲ್ಪನೆಗೆ ಮೀರಿದ ವಿಷಯವಾಗಿತ್ತು. ಆದರೂ ಅವನು ಮೌನವಾಗಿ ಸ್ಥಪತಿ ಹೇಳಿದುದನ್ನು ಕೇಳಿದನೆ ವಿನಾ ಏನೂ ಪ್ರತಿಕ್ರಿಯೆಯನ್ನು ತೋರಿಸಲಿಲ್ಲ.

ಏನಾದರೂ ಅವನು ಹೇಳಬಹುದೆಂದು ಕಾದು, ನಂತರ ಸ್ಥಪತಿ, "ಈಗ ನಾವುಗಳು ಅಭಿಪ್ರಾಯಪಡುವಂತೆ ಅದು ನಾಟ್ಯ ಸರಸ್ವತಿ ತಾನೆ ?'' ಎಂದು ಕೇಳಿದ.

"ನಾನು ಅದಕ್ಕೆ ಉತ್ತರಿಸಬೇಕೆ ? ಕೃತಿ ನಿರ್ಣಯದಲ್ಲಿ ತಾವು ಮತ್ತು ಸನ್ನಿಧಾನ ಪರಿಣತಮತಿಗಳು. ಸನ್ನಿಧಾನ ಸೂಚಿಸಿದಂತೆ ಇದಕ್ಕೆ ವಿಸ್ತಾರವಾದ ಪ್ರತಿಮಾರೂಪಕೊಟ್ಟು ಇದಕ್ಕೆ ಪ್ರಭಾವಳಿ, ಛತ್ರಗಳನ್ನು ಅಳವಡಿಸಿದರೆ ಭಿತ್ತಿಯಲ್ಲಿ ಅಳವಡಿಸಲು ಅನುಕೂಲವಾಗುತ್ತದೆ.''

"ಹಾಗಾದರೆ ಬೇರೊಂದು ಚಿತ್ರವನ್ನು ರೂಪಿಸುತ್ತೀರಾ ?'' ಎಂದು ಸ್ಥಪತಿ ಕೇಳಿದ.

"ಈಗ ರೂಪಿಸಲೇ ಬೇಕಾಯಿತಲ್ಲ'' ಎಂದ ಚಾವುಣ.

"ಹಾಗೆಯೇ ಅದು ನಾದ ಪ್ರತೀಕವೂ ಆಗಬೇಕೆನ್ನುತ್ತಾರೆ ಸನ್ನಿಧಾನ'' ಎಂದ ಸ್ಥಪತಿ.

"ಅದು ಯುಕ್ತವಾದುದೇ. ಆದರೆ ಅದನ್ನು ಶಿಲೆಯಲ್ಲಿ ತುಂಬುವುದು ಹೇಗೆ ಎಂಬುದು ನನಗೆ ತಿಳಿಯದು. ತಾವಾಗಲಿ, ಸನ್ನಿಧಾನವಾಗಲಿ ಸೂಚಿಸಬೇಕು.''

"ನಾದ ಹೇಗೆ ಹುಟ್ಟುತ್ತದೆ ರೂವಾರಿಗಳೆ ?''

"ಸ್ಪಂದನದಿಂದ.''

"ಈ ವಿಗ್ರಹದ ಕೆತ್ತನೆಗೆ ಸ್ಪಂದನಗೊಳ್ಳುವ ಶಿಲೆಯನ್ನು ಉಪಯೋಗಿಸೋಣ.''

"ಶಿಲೆ ಸ್ಪಂದನಗೊಳ್ಳುತ್ತದೆಯೆ ?''

"ಎಲ್ಲಿ ಗತಿ, ಲಯ ಇದೆಯೋ ಅಲ್ಲೆಲ್ಲ ಸ್ಪಂದನವಿರಲೇಬೇಕು.''

"ಶಿಲೆ ಜಡ ವಸ್ತು. ಅಲ್ಲಿ ಲಯ, ಗತಿ ಹೇಗೆ ಸಾಧ್ಯ ?'' ಎಂದು ಈವರೆಗೆ ಮೌನವಾಗಿದ್ದ ಬಿಟ್ಟಿಯಣ್ಣ ಕೇಳಿದ.

"ಅದು ಜಡ ವಸ್ತುವೇ ಆಗಿದ್ದರೆ ಅದರಲ್ಲಿ ಸೌಂದರ್ಯವನ್ನು ಕಾಣಲು ಸಾಧ್ಯವಿರಲಿಲ್ಲ. ಜಡತೆಯಲ್ಲಿ ಚೇತನ ತುಂಬಿದಲ್ಲದೆ ಅಲ್ಲಿ ಸೌಂದರ್ಯ ಕಾಣಸಿಗುವಂತೆಯೇ ಇಲ್ಲ. ಚೇತನ ಇದ್ದಲ್ಲಿ ಸ್ಪಂದನ. ಸ್ಪಂದನ ಇದ್ದಲ್ಲಿ ಗತಿ, ಲಯ'' ಎಂದ ಸ್ಥಪತಿ.

"ಲಯದ ಅನುಭವವಾಗದೆ ಅದನ್ನು ಊಹೆಯ ಮೇಲೆ ಒಪ್ಪಿಕೊಳ್ಳುವುದು ಹೇಗೆ ?'' ಎಂದು ಮತ್ತೆ ಪ್ರಶ್ನಿಸಿದ ಬಿಟ್ಟಿಯಣ್ಣ.

"ಅನುಭವವನ್ನು ಡಣ್ಣಾಯಕರು ಹೇಗೆ ಗುರುತಿಸುತ್ತೀರಿ'' ಎಂದು ಸ್ಥಪತಿ ಪ್ರಶ್ನಿಸಿದ.

"ನೋಡಿ, ಕೇಳಿ, ಮೆದುಳಿನ ಸಹಾಯದಿಂದ ಅನುಭವ ಗುರುತಿಸುತ್ತೇವೆ.''

"ಎಲ್ಲರ ಕಿವಿಯ, ಕಣ್ಣಿನ ಚುರುಕು ಒಂದೇ ಸಮನಾಗಿ ಇರುತ್ತದೆಯೇ ?''

"ಅದು ಹೇಗೆ ಸಾಧ್ಯ ?''

"ಎಂದಾಗ ಒಬ್ಬನ ಕಣ್ಣಿಗೆ ಸ್ಫುಟವಾಗಿ ಕಂಡು ಅವನಿಗುಂಟಾಗುವ ಅನುಭವ ಅವನಷ್ಟು ಚುರುಕು ಕಣ್ಣಿಲ್ಲದವನಿಗೆ ಆಗಲು ಸಾಧ್ಯವೇ ?''

"ಇಲ್ಲ.''

"ಆದರೆ ಒಬ್ಬನಿಗಾದ ಅನುಭವ ಅನುಭವವಲ್ಲವೆ ?''

"ಅದನ್ನು ಯಾರಲ್ಲವೆನ್ನುತ್ತಾರೆ ?''

"ಅದರ ಅನುಭವವನ್ನು ಪಡೆಯದವನು ಅಲ್ಲವೆನ್ನುತ್ತಾನೆ ಅಲ್ಲವೆ ?''

"ಹೌದು.''

"ಅದರಿಂದ ಪ್ರಕೃತಿ ಸಹಜವಾಗಿ ನಮ್ಮ ಪಂಚೇಂದ್ರಿಯಗಳ ಅನುಭವಕ್ಕೆ ಬರಲಾರದ ಆದರೂ ಇರಬಹುದಾದಂತಹ ಅನೇಕ ಅನುಭವಗಳು ಇರಲು ಸಾಧ್ಯ ಎಂಬುದನ್ನು ಒಪ್ಪಬಹುದಲ್ಲವೆ ?''

"ಒಪ್ಪಬಹುದೂಂತ ಕಾಣುತ್ತದೆ."

"ಆ ಸೂತ್ರದಂತೆ ಇಲ್ಲಿ ನಮಗೆ ಪ್ರಕೃತಿ ಸಹಜವಾಗಿ, ಗತಿ, ಲಯ ನಾವೆಂದು ಕೊಂಡಿರುವಂತೆ ಗೋಚರವಾಗದೆ ಇದ್ದರೂ ಇರುತ್ತದೆ ಎಂಬುದನ್ನು ಒಪ್ಪಿಕೊಳ್ಳಬೇಕು. ಅದರಿಂದ ನಾವು ಕಡೆಯುವ ಶಿಲೆಯಲ್ಲಿ ಸ್ಪಂದನ ಮೂಡಿಸಿದರೆ ಅದು ನಾದಭರಿತವಾಗುತ್ತದೆ" ಎಂದ ಸ್ಥಪತಿ.

"ಶಿಲೆಯಲ್ಲಿ ನಾದ ಅನುರಣಿತ ಮಾಡುವುದು ಹೇಗೆ ಎಂಬುದನ್ನು ತಾವೇ ತಿಳಿಸಬೇಕು" ಎಂದ ಚಾವುಣ.

"ಶಿಲೆ ಶಿಲೆ ಕುಟ್ಟಿದರೆ ಏನಾಗುತ್ತದೆ ?"

"ಶಬ್ದ ಬರುತ್ತದೆ."

"ಆ ಶಬ್ದ ಬರುವುದೂ ಸ್ಪಂದನದಿಂದಲೇ. ನಮ್ಮ ಗಂಟಲಿನ ತಂತುಗಳ ಸ್ಪಂದನದಿಂದ ನಾದ ಹೊಮ್ಮುತ್ತದೆ. ಆ ನಾದ ಹೊಮ್ಮುವುದರಿಂದ ಅಕ್ಷರ, ಮಾತು ಹೇಳಲು ಸಾಧ್ಯವಾಯಿತು. ಒಂದೊಂದು ಅಕ್ಷರ ನುಡಿವಾಗಲೂ ಅದಕ್ಕೆ ಮುನ್ನ ಬೇರೆ ಬೇರೆ ರೀತಿಯ ನಾದ ಸ್ಪಂದನ ಗಂಟಲಿನ ನಾದ ತಂತುಗಳಲ್ಲಿ ನಮ್ಮ ಉಸಿರಿನಿಂದ ಆಗುತ್ತದೆ. ಎಂದರೆ ನಮಗೆ ಯಾವ ನಾದ ಬೇಕೋ ಆ ನಾದವನ್ನು ಹೊಮ್ಮಿಸಲು ಸಾಧ್ಯ ಎಂದಾಯಿತಲ್ಲವೆ ? ಹಾಗೆಯೇ ಶಿಲೆಯಲ್ಲಿ ಶಬ್ದ ಹುಟ್ಟಲು ಸಾಧ್ಯವಿರುವಾಗ ಅಲ್ಲಿ ನಮಗೆ ಬೇಕಾದ ನಾದ ಹೊಮ್ಮಿಸಲು ಅದನ್ನು ರೂಪಿಸುವ ಜಾಣತನವಷ್ಟು ನಮಗೆ ಬೇಕು. ನನ್ನ ಮಾತು ರೂವಾರಿಗಳ ಮನಸ್ಸಿಗೆ ಸರಿಯೆನಿಸಿತೆ ?"

"ತಮ್ಮ ಮಾತನ್ನು ಕೇಳಿದಾಗ ಅದು ಸರಿ ಎಂಬ ಭಾವನೆ ಮನಸ್ಸಿಗೆ ಮೂಡುತ್ತದೆ. ನಿಜ. ಆದರೆ ಆ ಭಿನ್ನ ಭಿನ್ನ ನಾದ ಹೊಮ್ಮಿಸಲು ಏನು ಮಾಡಬೇಕು ? ಮತ್ತು ಈ ಮೂರ್ತಿ ನಾದಮೂರ್ತಿ ಆಗಬೇಕು ಎಂದು ಸನ್ನಿಧಾನ ಬಯಸಿದಾಗ ಅಲ್ಲಿ ಯಾವ ಯಾವ ನಾದ ತುಂಬಬೇಕು ಎನ್ನುವುದನ್ನು ತಿಳಿಯಬೇಕಲ್ಲ. ಸನ್ನಿಧಾನ ಯಾವ ಯಾವ ನಾದ ತುಂಬಬೇಕು ಎನ್ನುವುದನ್ನು ಸೂಚಿಸಿ, ಅದನ್ನು ಶಿಲೆಯಲ್ಲಿ ರೂಪಿಸುವುದು ಹೇಗೆ ಎಂಬುದಕ್ಕೆ ತಾವು ಮಾರ್ಗದರ್ಶನವಿತ್ತರೆ ಪ್ರಯತ್ನಿಸುತ್ತೇನೆ." ಎಂದ ಚಾವುಣ.

ಸ್ಥಪತಿ ಪಟ್ಟಮಹಾದೇವಿಯತ್ತ ನೋಡಿದ.

ಅವಳು, "ಸರಸ್ವತಿ ಸಂಗೀತ–ಸಾಹಿತ್ಯಕ್ಕೆ ಅಧಿದೇವತೆ ಅಥವಾ ವ್ಯಾಪಕಾರ್ಥದಲ್ಲಿ ಹೇಳುವುದಾದರೆ ಜ್ಞಾನ ಮತ್ತು ಕಲೆಗಳ ಅಧಿದೇವತೆ. ಅದರಿಂದ ಈ ನಾಟ್ಯ ಸರಸ್ವತಿ ವೀಣಾರಹಿತಳಾಗಿರುವುದರಿಂದ ಅವಳ ಇಡೀ ಶರೀರವೇ ಸಂಗೀತಕ್ಕೆ ಆಧಾರ ಭೂತವಾಗಿರುವ ಸಪ್ತ ಸ್ವರಗಳ ಆಗರವಾಗಬೇಕೆಂಬುದು ನನ್ನ ಇಷ್ಟ" ಎಂದಳು.

"ಆಯಿತು. ಪಟ್ಟಮಹಾದೇವಿಯವರ ಇಚ್ಛೆಯನ್ನು ಕಾರ್ಯಗತ ಮಾಡಲು ಪ್ರಯತ್ನಿಸುತ್ತೇವೆ. ಸಫಲತೆ ದೊರೆತೀತೆಂದು ಹೇಳುವಂತಿಲ್ಲ. ಒಂದೊಂದು ಶಿಲೆಯಲ್ಲಿ ಒಂದೊಂದು ನಾದ ಬಂದೀತೆಂಬುದು ಸರಿ ಆದರೆ ಏಳು ನಾದಗಳು ಒಂದೇ ಶಿಲೆಯಲ್ಲಿ ಬರುವುದು ಸಾಧ್ಯವೆ ಎಂದು ಪ್ರಯೋಗ ಮಾಡಿ ನೋಡಬೇಕಾಗಿದೆ" ಎಂದ ಸ್ಥಪತಿ.

"ವೀಣೆಯ ಒಂದೇ ತಂತಿಯಲ್ಲಿ ಏಳು ಸ್ವರಗಳು ಮಿಡಿವಾಗ ಕಲ್ಲಿನಲ್ಲೂ ಮಿಡಿಯ ಬೇಕಲ್ಲವೆ?" ಎಂದು ಶಾನ್ತಲದೇವಿ ಪ್ರಶ್ನಿಸಿದಳು.

"ಸ್ಪಂದನ ಭಾಗದ ಉದ್ದ ಕಡಿಮೆಯಾದಂತೆ ಸ್ವರಸ್ಥಾನ ಏರುತ್ತ ಹೋಗುತ್ತದೆ ಎಂಬುದು ವೀಣಾ ತಂತಿಯ ಸ್ಪಂದನ ಸೂತ್ರ.''

"ತಂತಿಯೇಕೆ ? ಎಲ್ಲವೂ ಅಷ್ಟೆ. ನಮ್ಮ ಗಂಟಲಿನ ನಾದ ತಂತುಗಳು ನಮಗರಿವಿಲ್ಲದಂತೆ ಉದ್ದಗಿಡ್ಡವಾಗಿ ಸ್ಥಾಯಿ ಬದಲಾವಣೆಗೆ ಸ್ವರಗಳ ಸ್ಫುಟವಾದ ಹೊಮ್ಮಿಕೆಗೆ ನೆರವಾಗುತ್ತದೆ. ಅದರಿಂದ ಶಿಲೆಯಲ್ಲೂ ಅದನ್ನು ಸಾಧಿಸಲು ಸಾಧ್ಯವಾಗಬಹುದು ಎನ್ನಿಸುತ್ತದೆ. ಆದರೆ ಶಿಲೆಯ ಎಲ್ಲ ವಿಚಾರವೂ ನಿಮಗೇ ಗೊತ್ತು. ನಾನು ಹೇಳುವುದು ಸರಿಯಾಗಲಾರದು.''

"ಪ್ರಯತ್ನ ಮಾಡೇ ತೀರುತ್ತೇವೆ.''

"ಸಂತೋಷ. ಇನ್ನೊಂದು ವಿಷಯ ಅದನ್ನು ಕೇಳಲೆಂದೇ ನಾವು ರೂವಾರಿಗಳನ್ನು ಇಲ್ಲಿಗೆ ಬರಮಾಡಿದೆವು'' ಎಂದು ಮಾತನ್ನು ನಿಲ್ಲಿಸಿದಳು.

ಚಾವುಣ, ಸ್ಥಪತಿಯರು ಅವಳತ್ತ ನಿರೀಕ್ಷಕ ದೃಷ್ಟಿ ಬೀರಿದರು.

"ರೂವಾರಿಗಳೇ ಈ ನಾಟ್ಯ ಸರಸ್ವತಿಯ ಚಿತ್ರ ನಿಮ್ಮ ಮನೋ ಕಲ್ಪನೆಯಿಂದ ಮೂಡಿ ಬಂದದ್ದೋ, ಇಲ್ಲ ಯಾವುದೋ ವ್ಯಕ್ತಿಯನ್ನು ಮನಸ್ಸಿನಲ್ಲಿಟ್ಟುಕೊಂಡು ರೂಪಿಸಿದ್ದೋ ?'' ಎಂದು ಶಾನ್ತಲದೇವಿ ಕೇಳಿದಳು.

ಚಾವುಣ ಏನೋ ಹೇಳಬೇಕೆಂದು ಬಾಯಿ ತೆಗೆದು ಮತ್ತೆ ಬಾಯಿ ಬಿಗಿದು ಸ್ಥಪತಿಯತ್ತ ದೃಷ್ಟಿಯನ್ನು ಹೊರಳಿಸಿದ.

"ಸಂಕೋಚ ಪಡುವ ಕಾರಣವಿಲ್ಲ. ಹೇಳಿ ರೂವಾರಿಗಳೆ. ಸನ್ನಿಧಾನದ ಗುರಿ ಕಲೆಯನ್ನು ಮೇಲಕ್ಕೆತ್ತುವುದು ಎಂಬುದನ್ನು ಮರೆಯಬೇಡಿ.''

"ಸನ್ನಿಧಾನ ಈ ಪ್ರಶ್ನೆ ಕೇಳಲು ಚಿತ್ರದಲ್ಲಿ ಅವರು ಏನನ್ನೋ ಗುರುತಿಸಿರಬೇಕು'' ಎಂದು ಮತ್ತೆ ಸುಮ್ಮನಾದ.

"ಹೌದು. ಅದರಿಂದಲೇ ಕೇಳಿದೆ.''

"ಅದೇನು ಸನ್ನಿಧಾನಕ್ಕೆ ಗೋಚರವಾಯಿತೆಂಬುದು ತಿಳಿಸಬಹುದಾದರೆ...'' ರಾಗ ಎಳೆದ ಚಾವುಣ.

"ಮುಚ್ಚಿಡಲು ಅಲ್ಲೇನಿದೆ. ಜ್ಞಾನದೇವತೆ ಸರಸ್ವತಿಯು ಇಲ್ಲಿ ಇಬ್ಬಗೆಯಾಗಿ ಕಂಡುಬಂದಳು. ಕಂಠದಿಂದ ತಳಭಾಗ ಅಂದರೆ ಶರೀರ ಕೈಕಾಲುಗಳು ಪ್ರೌಢೆಯದಾಗಿಯೂ ಮುಖ ಮಾತ್ರ ಪುಟ್ಟ ಕನ್ನೆಯ ಮುಖದಂತೆಯೂ ಇದೆ. ಅಲ್ಲವೆ ಸ್ಥಪತಿಗಳೆ ?''

"ಹೌದು.''

"ಆದುದರಿಂದಲೇ ಹೊಸದಾಗಿ ಮನದಲ್ಲಿ ಮೂಡಿದ ಕಲ್ಪನೆ ಹಳೆಯ ಸ್ಮರಣೆಯೊಂದರ ಅವ್ಯಕ್ತ ಮೇಳದಿಂದ ಈ ಚಿತ್ರ ರೂಪಧಾರಣೆ ಮಾಡಿದೆ ಎನ್ನಿಸಿತು.''

"ಆದರೂ ಇಲ್ಲಿ ಬಾಲ್ಯ ನಿರ್ಮಲತ್ವವಿರುವುದರಿಂದ ಚಿತ್ರಭೂಷಣವಾಗಿಯೇ ಇದೆಯಲ್ಲವೆ?'' ಎಂದು ಸ್ಥಪತಿ ಪ್ರಶ್ನಿಸಿದ.

"ನಾನು ಚಿತ್ರದ ಒಟ್ಟು ಸ್ವರೂಪದ ಬಗೆಗೆ ಯೋಚಿಸಲಿಲ್ಲ. ಈ ಚಿತ್ರ ಮೂಡಲು ಏನು ಪ್ರೇರೇಪಣೆ ಈ ಚಿತ್ರಕಾರನಿಗೆ ಇರಬಹುದು ಎಂದು ಯೋಚಿಸಿದಾಗ ನನಗನ್ನಿಸಿದ್ದನ್ನು ತಿಳಿಸಿದೆ. ಅದಿರಲಿ ರೂವಾರಿಗಳು ಏನೂ ಹೇಳುತ್ತಿಲ್ಲವಲ್ಲ'' ಎಂದು ಶಾನ್ತಲದೇವಿ ಚಾವುಣನತ್ತ ದೃಷ್ಟಿ ಹರಿಸಿದಳು.

ಅವನು ಮೆಲುದನಿಯಲ್ಲಿ ತುಸು ಸಂಕೋಚ ಬೆರೆಸಿ, "ಹೌದು ಸನ್ನಿಧಾನ ಹೇಳುವುದು ಸರಿ. ನಾಟ್ಯ ಸರಸ್ವತಿ ಚಿತ್ರದ ಕಲ್ಪನೆ ನನ್ನ ಮನಸ್ಸಿನಲ್ಲಿ ಮೂಡಿದ್ದು ಬಲಿಪುರದಲ್ಲಿ. ಸನ್ನಿಧಾನ ನಮ್ಮೊಂದಿಗೆ ಒಬ್ಬರಾಗಿ ಬಾಳುತ್ತಿದ್ದಾಗ. ಅವರ ನೃತ್ಯ ವೈಖರಿಯನ್ನು ನೋಡಿದ ನನಗೆ ಆ ಚಿತ್ರ ಭಿತ್ತಿಯಲ್ಲಿ ಅಚ್ಚೊತ್ತಿ ಮೂಡಿಬಿಟ್ಟಿತ್ತು. ಆದರೆ ಅದು ಮನೋಕಲ್ಪನೆಯಿಂದ ರೂಪಧರಿಸಿದುದು ಕೇವಲ ಈಗೆರಡು ದಿವಸಗಳ ಕೆಳಗೆ. ಸನ್ನಿಧಾನದ ಬಾಲ್ಯದ ಆ ಮುಖವೇ ನನ್ನ ಚಿತ್ರದಲ್ಲಿ ನೆಲೆ ನಿಂತಿತ್ತು'' ಎಂದು ಹೇಳಿದ.

ಶಾನ್ತಲದೇವಿಗೆ ಆ ಬಲಿಪುರವಾಸದ ಘಟನೆಗಳೆಲ್ಲ ಒಂದೊಂದಾಗಿ ಮರುಕಳಿಸಿದವು. ಅದರಲ್ಲಿಯೂ ಯುವರಾಣಿ ಏಚಲದೇವಿಯವರು, ರಾಜಕುಮಾರದ್ವಯದೊಂದಿಗೆ ಅಲ್ಲಿ ಬಿಡಾರ ಮಾಡಿದ್ದಾಗಿನ ಒಂದೊಂದು ಘಟನೆಯೂ ಕಣ್ಣು ಮುಂದೆ ಹಾದು ಹೋದಂತಾಯಿತು. ಮುತ್ತಿನಂತಹ ಆ ಅಮೃತದ ದಿನಗಳು ಬರಲಾರವು. ಕಲ್ಮಷವೇ ಅರಿಯದ ಮನೋಭಾವದ ಬಾಲ್ಯ, ಆ ನಿರ್ವ್ಯಾಜ ಪ್ರೀತಿ, ಅದೆಷ್ಟು ಮಹತ್ತರ ? ವಯಸ್ಸು ಹೆಚ್ಚಿದಂತೆಲ್ಲ ಏನೇನೋ ಆಸೆಗಳು, ಏನೇನೋ ಸ್ವಾರ್ಥಗಳು ಮನಸ್ಸಿನಲ್ಲಿ ಮನೆ ಮಾಡಿಕೊಂಡು ಮನುಷ್ಯನನ್ನು ಕಲ್ಮಷದ ದಾರಿಯಲ್ಲಿ ಸೆಳೆದೊಯ್ಯುತ್ತವೆ ಎಂದು ಮುಂತಾಗಿ ಅವಳ ಯೋಚನೆಗಳು ಎತ್ತೆತ್ತಲೋ ಹರಿದವು.

ಅಲ್ಲಿ ಮೌನವಾರಿಸಿತು.

ಚಾವುಣ ತಾನು ಏನಾದರೂ ತಪ್ಪು ಮಾತನಾಡಿಬಿಟ್ಟೆನೇನೋ ಎಂದು ಶಂಕಿಸತೊಡಗಿದ. ಹಾಗೆ ತಪ್ಪಾಡಿದ್ದರೆ ಮುಂದೆ ಏನು ಪರಿಣಾಮವಾಗಬಹುದು ಎಂಬ ಬಯ ಸಹ ಮನಸ್ಸಿನಲ್ಲಿ ಇಣಿಕು ಹಾಕಿತು. ಆದರೂ ಸ್ವಲ್ಪ ಧೈರ್ಯ ತಂದುಕೊಂಡು, "ನನ್ನದೇನಾದರೂ ತಪ್ಪಿದ್ದರೆ ಕ್ಷಮಿಸಬೇಕು'' ಎಂದು ಉಸುರಿದ.

"ಅದೇಕೆ ನಿಮ್ಮಲ್ಲಿ ಈ ಭಾವನೆ ಬಂತು ?'' ಎಂದು ಶಾನ್ತಲದೇವಿ ಪ್ರಶ್ನಿಸಿದಳು.

"ನನ್ನ ಮನಸ್ಸಿನಲ್ಲಿ ನೆಲೆನಿಂತುದು ಬಲಿಪುರದ ಹೆಗ್ಗಡೆಗಳ ಪುತ್ರಿಯದು. ಆದರೆ ಈಗ ಅವರು ಪೊಯ್ಸಳ ರಾಜ್ಯದ ಪಟ್ಟಮಹಾದೇವಿ. ಬಾಲ್ಯದ ಆ ಸಲಿಗೆ ಈಗ ಸಲ್ಲದೆಂದು ನನಗೆ ಚಿತ್ರ ಬರೆದಾಗ ಅನ್ನಿಸಲಿಲ್ಲ. ಅದರಿಂದ ನನ್ನ ತಪ್ಪು ಕ್ಷಮೆಗೆ ಅರ್ಹ.''

"ನಿಮ್ಮ ಪಟ್ಟಮಹಾದೇವಿ ಈಗ ನಿರ್ಮಿತವಾಗುತ್ತಿರುವ ಈ ದೇವಮಂದಿರದ ನಿರ್ಮಾಣ ಕೆಲಸದಲ್ಲಿ ಸಂಪೂರ್ಣ ಸಹಕಾರ ನೀಡುವುದಾಗಿ ಪೊಯ್ಸಳ ದೊರೆಗೆ, ಅವರ ಗುರುಗಳಿಗೆ ವಚನವಿತ್ತಿದ್ದಾರೆ. ಎಂದಾಗ ಈ ಚಿತ್ರ ರಚನೆಯಲ್ಲಿ ನಿಮ್ಮ ಕಲ್ಪನೆಗೆ ನನ್ನದೂ ಒಂದು ಗುಲಗಂಜಿ ಸೇವೆ ಸಂದಾಯವಾಗಿರುವಾಗ ನನಗೆ ತೃಪ್ತಿಯೇ ವಿನಾ, ಅದು ಕೋಪಕ್ಕೆಡೆಕೊಡುವ ವಿಚಾರವಲ್ಲ. ಅದರಿಂದ ನೀವು ಈ ಬಗೆಗೆ ಏನೂ ಶಂಕೆ ತಾಳಬೇಕಾಗಿಲ್ಲ'' ಎಂದು ಶಾನ್ತಲದೇವಿ ಸಮಾಧಾನದ ಮಾತನ್ನು ಹೇಳಿದಳು.

ಕೂಡಲೇ, "ಹಾಗಾದರೆ ಈ ಮಂದಿರದ ಹೊರ ಮೈಯಲ್ಲಿ ಅಳವಡಿಸಬೇಕಾಗಿರುವ ಸುಂದರ ಮೂರ್ತಿಗಳ ಭಾವಭಂಗಿಗಳು ರೂಪಿತವಾಗಲು ಸನ್ನಿಧಾನ ಈಗಲೂ ಭಾವಪೂರಿತ ನಿಲವು ಭಂಗಿಗಳ ಕೊಡುವಿರಲ್ಲವೆ ?'' ಎಂದು ಕೇಳಿಯೇ ಬಿಟ್ಟ ಬಿಟ್ಟಿಯಣ್ಣ.

ಶಾನ್ತಲದೇವಿ ಒಂದು ಬಗೆಯಾಗಿ ಅವನತ್ತ ನೋಡಿದಳು.

ಪರಿಸ್ಥಿತಿ ಬೇರೆತ್ತಲಾದರೂ ತಿರುಗೀತೆಂದು ಸ್ಥಪತಿ, "ನಮ್ಮ ಡಣ್ಣಾಯಕರು ಬಹಳ ಆತುರದ ಸ್ವಭಾವದವರು. ಇನ್ನೂ ತುಂಬಿ ತುಳುಕುವ ಯೌವನ. ಯಾವ ಮಾತು ಆಡಬೇಕು, ಯಾವ ಮಾತು ಆಡಬಾರದು, ಎಲ್ಲಿ ಆಡಬೇಕು, ಎಲ್ಲಿ ಆಡಬಾರದು, ಎಂಬುದರ ಪೂರ್ಣ ಅರಿವಿಲ್ಲವೆಂದು ಭಾವಿಸಬೇಕಷ್ಟೆ" ಎಂದ.

"ಇಲ್ಲ, ನಮ್ಮ ಬಿಟ್ಟಿಗೆ ನನ್ನಲ್ಲಿ ಸಲಿಗೆ. ನನ್ನ ತೊಡೆಯ ಮೇಲೆ ಬೆಳೆದವನಲ್ಲವೆ ? ಇದೇ ಮೊದಲಸಲವಲ್ಲ ಅವನು ಆ ಮಾತು ಹೇಳುತ್ತಿರುವುದು. ಅವನು ಹೇಳಿದನೆಂದು, ಅವನಲ್ಲಿ ನಮಗೆ ತುಂಬ ಅಕ್ಕರೆಯೆಂದು, ನಾವು ಎಲ್ಲವನ್ನೂ ಮಾಡಲು ಸಾಧ್ಯವೆ ?"

"ನಿಜ, ನಿಜ."

"ಈಗ ರಚಿತವಾಗಿರುವ ಚಿತ್ರಗಳಲ್ಲಿ ಕೆಲವಕ್ಕೆ ಕೂಡಲೇ ಮೂರ್ತರೂಪ ಕೊಡುವ ಕೆಲಸ ಆರಂಭಿಸಿ. ಅಂತಹವನ್ನು ನಾನು ಆರಿಸಿ ಕಳಿಸುತ್ತೇನೆ. ಉಳಿದ ವಿಚಾರ ನಂತರ ಯೋಚಿಸೋಣ. ರೂವಾರಿಗಳೇ ನೀವು ಈಗಿನ ಚರ್ಚೆಯ ಆಧಾರದ ಮೇಲೆ ಹೊಸ ಚಿತ್ರವೊಂದನ್ನು ರೂಪಿಸಿ. ನಡಿ ಬಿಟ್ಟಿ, ಮಾಯಣ ಚಟ್ಟಲೆಯರಿಂದ ಅರಿಯಬೇಕಾದ ವಿಷಯ ಬಹಳವಿದೆ" ಎಂದು ಶಾನ್ತಲದೇವಿ ಎದ್ದು ಬಿಟ್ಟಿಗನೊಂದಿಗೆ ಅರಮನೆಗೆ ಹೊರಟಳು.

# ೭. ಶಿಲ್ಪಕಲಾ ಶಾಲೆಗೆ ಬೀಜಾಂಕುರ

ದೇವಮಂದಿರದ ಕೆಲಸ ಸಾಗಿತ್ತು. ಮಾಯಣನಿಗೂ ಸ್ಥಪತಿಗೂ ಬೇಗಲೇ ಸ್ವಲ್ಪ ಹೆಚ್ಚಿನ ಬಳಕೆ ಮೂಡಿ ನಿಂತಿತು. ಮಾಯಣನಿಗೆ, ಸ್ಥಪತಿಗೆ ಜ್ಯೋತಿಷ್ಯ ಚೆನ್ನಾಗಿ ಗೊತ್ತೆಂಬುದರ ಸಾಕ್ಷಾತ್ಕಾರವಾಗಿತ್ತು. ಮಹಾಸನ್ನಿಧಾನ ಜೈತ್ರಯಾತ್ರೆ ಆರಂಭ ಮಾಡಿದ ಮುಹೂರ್ತದ ಮೇಲೆ ಸ್ಥಪತಿ ಹೇಳಿದಂತೆಯೇ ವಿಜಯ ಸಾಧನೆಯಾಗಿತ್ತು. ಅದರಿಂದ ಮಾಯಣ ಬಲ್ಲುವಿನ ಜಾತನಕವನ್ನು ತಂದು ಒಂದು ದಿವಸ ಅದರ ಭವಿಷ್ಯದ ಬಗೆಗೆ ಸ್ಥಪತಿಯನ್ನು ಕೇಳಲೆಂದು ಅವನ ನಿವಾಸಕ್ಕೆ ಚಟ್ಟಲೆಯೊಂದಿಗೆ ಬಂದ.

ಸ್ಥಪತಿಗೆ ಈ ಭೇಟಿ ಅನಿರೀಕ್ಷಿತವಾಗಿತ್ತು.

ಭವಿಷ್ಯದ ಮಾತನ್ನು ತೆಗೆದ ಕೂಡಲೇ ಸ್ಥಪತಿ, "ಆ ವಿಷಯಗಳನ್ನು ಮಾತ್ರ ದಯವಿಟ್ಟು ನನ್ನನ್ನು ಕೇಳಬೇಡಿ. ನಾನು ಏನನ್ನೂ ಹೇಳುವುದಿಲ್ಲ" ಎಂದ.

"ನಾವು ಎಲ್ಲ ಕಷ್ಟ, ಸುಖ, ನೋವು ಕಂಡವರು. ವಿಷ, ಅಮೃತ ಎರಡನ್ನೂ ಸವಿದವರು. ನಿಮಗೆ ಸನ್ನಿಧಾನ ನಮ್ಮ ಕಥೆಯನ್ನು ತಿಳಿಸುವುದರಿಂದ ನಮ್ಮ ಬಾಳಿನ ಸಮಗ್ರ ಚಿತ್ರಣ ನಿಮ್ಮ ಮನದಲ್ಲಿ ಇದೆ. ಆದರೆ ನಾವು ಪಡೆದ ಈ ನಮ್ಮ ಸಂತಾನದ ಭವಿಷ್ಯ ಸುಗಮವಾಗಿರಲಿ ಎಂಬುದು ನಮ್ಮ ಆಸೆ. ಅದರಿಂದ ಸ್ವಲ್ಪ ನೋಡಿ ಹೇಳಿ. ಹಾಳು ಬಾಳು ಸಾಗಿಸಿದವಳ ಹೊಟ್ಟೆಯಲ್ಲಿ ಹುಟ್ಟಿದ ಮಗುವಿನ ಬಗೆಗೇನು ಹೇಳುವುದೆಂದು ಅನಾದರ ಮಾಡಬೇಡಿ" ಎಂದು ಚಟ್ಟಲದೇವಿ ವಿನಯದಿಂದ ಹೇಳಿದಳು.

"ಅಮ್ಮ, ಕಾಲಗರ್ಭದಲ್ಲಿ ಯಾರಿಗೆ ಎಂತಹ ಬಾಳು ಒದಗುತ್ತದೆಯೆಂಬುದನ್ನು ಹೇಳಲು ಬರುವುದಿಲ್ಲ. ಕೆಲವರಿಗೆ ಹೊರಗಿನಿಂದ ತೊಂದರೆಗಳು ಅಡ್ಡಿ ಬಂದರೆ, ಕೆಲವರು ತಾವಾಗಿಯೇ ಅದನ್ನು ತಂದುಕೊಳ್ಳುತ್ತಾರೆ. ನಿಮ್ಮ ಬಾಳು ಪ್ರವಾಹದಲ್ಲಿ ಸಿಕ್ಕಿಕೊಂಡ ಬಾಳು. ಸನ್ನಿಧಾನ ನಿಮ್ಮನ್ನು ಅದರಿಂದ ಉದ್ಧಾರ ಮಾಡಿದರು. ಆ ಉದ್ಧಾರದಿಂದ ನೀವೆಂದಂತೆ ನಿಮ್ಮದು ಪುನರ್ಜನ್ಮವೇ. ನಿಮ್ಮ ಮಗು ನೀವಿಬ್ಬರು ತನುಮನಗಳನ್ನು ಒಂದು ಮಾಡಿ ಪಡೆದುಕೊಂಡ ಫಲ. ಅದರಿಂದ ನೀವು ಅವನ ಭವಿಷ್ಯದ ಬಗೆಗೆ ಶಂಕೆ ಇಟ್ಟುಕೊಳ್ಳಬೇಡಿ. ಈಗ ನೀವು ಕೇಳಬಂದಿರುವ ಈ ಸಮಯ ತುಂಬ ಪ್ರಶಸ್ತವಾದ ಸಮಯ. ನಿಮ್ಮ ಮಗು ಮುಂದೆ ಕೀರ್ತಿಶಾಲಿಯಾಗಿ ಬಾಳುತ್ತಾನೆ. ಅಷ್ಟು ನಿಮಗೆ ಸಾಕು. ಅದರಿಂದ ಆ ವಿಷಯದಲ್ಲಿ ಒತ್ತಾಯ ಮಾಡಬೇಡಿ" ಎಂದು ಸ್ಥಪತಿ ಹೇಳಿದ.

"ನಿಮ್ಮ ಬಾಯಿ ಹರಕೆಯೇ ನಮಗೆ ಸಾಕು. ನಮಗೆ ಭಗವಂತ ಕರುಣಿಸಿರುವ ಈ ಒಂದು ಸಂತಾನ ಕೀರ್ತಿಶಾಲಿಯಾಗಿ ಬಾಳಿದರೆ ಸಾಕು. ನಾವುಗಳು ಹೇಗೆ ಈ ರಾಜಮನೆತನಕ್ಕೆ ನಮ್ಮ ಬಾಳನ್ನು ಮಿಸಲು ಮಾಡಿದ್ದೇವೆಯೋ ಅವನೂ ಹಾಗೆ ಮಾಡಿದರೆ ಸಾಕು" ಎಂದಳು ಚಟ್ಟಲೆ.

"ಭಗವಂತನಿಗೆ ಆ ಇಚ್ಛೆ ಇದ್ದುದರಿಂದಲೇ ನಿಮ್ಮ ದಾಂಪತ್ಯ ನೇರಮಾಡಿ ನಿಮಗೆ ಸತ್ಸಂತಾನದ ಭಾಗ್ಯ ಕರುಣಿಸಿದ. ನಿವು ಭಾಗ್ಯಶಾಲಿಗಳು."

"ಎಲ್ಲ ನನ್ನ ಈ ಪತಿದೇವರ ಔದಾರ್ಯವಿಲ್ಲದಿದ್ದರೆ ನಾನೊಂದು ಹಳಸಿದ ಅನ್ನದ ಮುದ್ದೆಯಾಗಿ ಬಿಡುತ್ತಿದ್ದೆ. ಅವರ ನಿಷ್ಕಲ್ಮಷ ಪ್ರೇಮದಿಂದ ನನಗೇ ಹೇಸಿಗೆ ತಂದಿದ್ದ ಈ ನನ್ನ ದೇಹವನ್ನು ಅವರು ಪವಿತ್ರ ಮಾಡಿದರು. ಅದೇ ನನ್ನ ವಿಶೇಷ ಭಾಗ್ಯ. ತಾನು ನಿಜವಾಗಿ ಪ್ರೇಮಿಸಿದವನಿಂದಲೇ ಹೆಣ್ಣಿಗೆ ಸಾರ್ಥಕತೆ ದೊರೆಯುವುದು. ಗಂಡು ಹೆಣ್ಣಿನ ಬಾಳನ್ನು ಸಾರ್ಥಕ ಮಾಡಬಲ್ಲ. ಇಲ್ಲ ಅದನ್ನು ಸುಟ್ಟು ಬೂದಿ ಮಾಡಬಲ್ಲ. ನಾನೆಂತಹ ಉರಿಯಲ್ಲಿ ತೊಳಲುತ್ತಿದ್ದೆ ಎಂಬುದು ಹೆಣ್ಣಿಗೆ ಅರಿವಾದೀತೇ ವಿನಾ ಯಾವ ಗಂಡಿಗೂ ಅರಿವಾಗುವುದಿಲ್ಲ" ಎಂದಳು ಚಟ್ಟಲದೇವಿ.

"ಅದರಿಂದಲೇ ಪಟ್ಟಮಹಾದೇವಿಯವರು ನಮ್ಮಿಬ್ಬರಲ್ಲಿ ಆತ್ಮವಿಶ್ವಾಸ ಮೂಡಿಸಿದರು. ಪರಸ್ಪರ ನಂಬಿಕೆ ಮೂಡಿಸಿದರು. ಆ ಮಹಾತಾಯಿಯೇ ನಮ್ಮ ಬಾಳನ್ನು ಸ್ವರ್ಗ ಮಾಡಿದವರು" ಎಂದು ಮಾಯಣ ಚಟ್ಟಲದೇವಿಯ ಮಾತಿಗೆ ದನಿಗೂಡಿಸಿದ.

"ಅವರದು ಒಂದು ಅಪರೂಪ ವ್ಯಕ್ತಿತ್ವ. ಪೂರ್ವಜನ್ಮದ ಸಂಸ್ಕಾರದ ಪುಣ್ಯ ಫಲ ಅವರು. ಹೆಗ್ಗಡೆ ದಂಪತಿಗಳಂತಹ ಭಾಗ್ಯಶಾಲಿಗಳು ಯಾರು ? ಮಕ್ಕಳನ್ನು ಹೆತ್ತರೆ ಹಾಗೆ ಹೆರಬೇಕು. ಮಕ್ಕಳನ್ನು ಹೆರಬೇಕೆಂಬುದಷ್ಟೇ ಗುರಿ ಸಾಧಿಸಿದರೆ ಅದು ಜನಸಂಖ್ಯೆಯನ್ನು ಹೆಚ್ಚಿಸಲು ಸಹಾಯವಾಗುತ್ತದೆಯೇ ವಿನಾ ದಾಂಪತ್ಯದ ಕರ್ತವ್ಯ ಮಾಡಿದಂತೆ ಆಗುವುದಿಲ್ಲ."

"ನಿಮಗೆಷ್ಟು ಜನ ಮಕ್ಕಳು ಸ್ಥಪತಿಗಳೆ ?" ಎಂದು ಚಟ್ಟಲೆ ಇದ್ದಕ್ಕಿದ್ದ ಹಾಗೆ ಕೇಳಿಬಿಟ್ಟಳು.

ಅವಳಿಗೆ ಅತ್ತ ಗಮನವೇ ಇಲ್ಲ. ಏನೋ ಉತ್ಸಾಹ ತುಂಬಿ ಬಂದಿತ್ತು. ಅವಳು, "ನಿಮ್ಮ ಕಲೆ ಉಳಿಯಬೇಕಾದರೆ" ಎಂದು ಇನ್ನೂ ಏನನ್ನೂ ಹೇಳಬೇಕೆಂದಿದ್ದಳು.

ಅಷ್ಟರಲ್ಲಿ ಸ್ಥಪತಿ ಅವಳ ಮಾತನ್ನು ತಡೆದು, "ನೋಡಿ ಇಲ್ಲಿ ನಿರ್ಮಾಣವಾಗುವ ಈ ದೇವಮಂದಿರವೇ ನನ್ನ ಕಲೆಯ ಉಳಿವಿಗೆ ಮಾರ್ಗದರ್ಶಕವಾಗಿ ಸಾವಿರಾರು ವರ್ಷ ಇರುತ್ತದೆ" ಎಂದ, ಮಾತನ್ನು ಬೇರೆ ತಿರುಗಿಸಬೇಕೆಂದು.

"ಅದು ನಿಮ್ಮ ಕಲೆಯ ಪ್ರತೀಕವಾಗಿ ಉಳಿಯುತ್ತದೆ. ಆದರೆ ಈ ಪರಂಪರೆ ಬೆಳೆದು ಇದರ ಮೇಲೆ ಹೊಸ ಹೊಸ ರೂಪ ಹುಟ್ಟಬೇಕಾದರೆ ನಿಮ್ಮ ಕಲೆಯನ್ನು ಬೆಳೆಸುವ ಸಂತಾನ, ಶಿಷ್ಯವೃಂದ ಬೆಳೆಯಬೇಡವೆ ?"

"ಯೋಚಿಸಬಹುದಾದ ವಿಚಾರ. ಒಂದು ಕೆಲಸ ಮಾಡು ಚಟ್ಟಲದೇವಿ. ಸನ್ನಿಧಾನಕ್ಕೆ ಒಂದು ಶಿಲ್ಪಕಲಾ ಶಾಲೆಯನ್ನು ತೆರೆಯುವಂತೆ ಸಲಹೆ ಮಾಡು. ಹಾಗಾದರೆ ನಾನು ಉತ್ಸಾಹೀ ರೂವಾರಿತನಯರಿಗೆ ವಿದ್ಯಾದಾನ ಮಾಡಬಹುದು."

"ಈಗ ಹೇಗೂ ನೃತ್ಯ, ಸಂಗೀತ, ಸಾಹಿತ್ಯಗಳ ಶಾಲೆಗಳು ಇವೆ. ಜೊತೆಗೆ ಶಿಲ್ಪ ಕಲಾ ಶಾಲೆಯನ್ನೂ ಸ್ಥಾಪಿಸುವುದು ಯುಕ್ತವೆ. ಪಟ್ಟಮಹಾದೇವಿಯವರು ಖಂಡಿತ ಇದನ್ನು ಮಾನ್ಯ ಮಾಡುತ್ತಾರೆ" ಎಂದಳು ಚಟ್ಟಲದೇವಿ.

"ಸ್ಥಪತಿಗಳೆ ನೀವೇ ಸೂಚಿಸುವುದು ಒಳ್ಳೆಯದು. ನಾವುಗಳು ಎಷ್ಟಾದರೂ ಊಳಿಗದವರು" ಎಂದ ಮಾಯಣ.

"ನಿಮ್ಮ ಪಟ್ಟಮಹಾದೇವಿಯವರಲ್ಲಿ ಆ ಭೇದ ಭಾವನೆಯೇ ಇಲ್ಲ. ಅವರು ವಿಷಯವನ್ನು ಪರಿಗಣಿಸುವವರೇ ವಿನಾ ವಿಷಯ ಸೂಚಿಸಿದ ವ್ಯಕ್ತಿ ಯಾರೆಂಬುದರತ್ತ ಅವರ ಗಮನ ಹೋಗುವುದೇ ಇಲ್ಲ'' ಎಂದ ಸ್ಥಪತಿ.

"ನಿಮ್ಮ ಮಾತು ಬಹಳ ಸರಿ. ನಾವು ಬಂದುದು ಯಾತಕ್ಕೊ ? ಆದರೆ ಮಾತನಾಡಿದುದು ಬೇರೆಯೇ ಆಯಿತು'' ಎಂದ ಮಾಯಣ.

"ಏನಿಲ್ಲ. ನೀವು ಬಂದುದಕ್ಕೂ ಉತ್ತರಿಸಿಯಾಯಿತು. ಉಳಿದ ವಿಷಯವನ್ನು ಮಾತನಾಡಿದೆವು ಅಷ್ಟೆ. ತಪ್ಪೇನು ?'' ಎಂದು ಸ್ಥಪತಿ ಪ್ರಶ್ನಿಸಿದ.

"ಈಗ ತಪ್ಪಿಲ್ಲ ಎಂದು ಭಾವಿಸಬೇಕು. ಏಕೆಂದರೆ ನನ್ನ ಪತ್ನಿ ನಿಮ್ಮ ಸಂತಾನದ ಬಗೆಗೆ ಇದ್ದಕ್ಕಿದ್ದ ಹಾಗೆ ಕೇಳಿದ್ದು ವಾಸ್ತವವಾಗಿ ಮಹಾ ತಪ್ಪು ಆಗಿತ್ತು'' ಎಂದ ಮಾಯಣ.

"ಏನೋ ಅದು ಎಲ್ಲರೂ ಕೇಳುವ ಸಹಜವಾದ ಪ್ರಶ್ನೆ. ಅದರಲ್ಲಿ ತಪ್ಪೇನು ?'' ಎಂದ ಸ್ಥಪತಿ.

"ಅದೇನೋ ನಮಗೇನು ಗೊತ್ತು ? ನಿಮ್ಮನ್ನು ನಿಮ್ಮ ಸಂಸಾರದ, ನಿಮ್ಮ ಸ್ವಂತ ವಿಚಾರದ ಬಗೆಗೆ, ಯಾರೂ ಏನನ್ನೂ ಯಾವಾಗಲೂ ಕೇಳಬಾರದೆಂಬುದು ಅರಮನೆಯ ಕಟ್ಟಾಜ್ಞೆ'' ಎಂದ ಮಾಯಣ.

ಸ್ಥಪತಿ ಮೊದಲು ಆಶ್ಚರ್ಯದಿಂದ ಕಣ್ಣರಳಿಸಿದ ಮತ್ತೆ ತನ್ನಷ್ಟಕ್ಕೆ ತಾನೇ ನಕ್ಕ.

"ಏಕೆ ? ನನ್ನ ಮಾತಿನಲ್ಲಿ ನಗುವಂತಹುದೇನಿತ್ತು ?'' ಎಂದು ಮಾಯಣ ಕೇಳಿದ.

"ನಿಮ್ಮ ಮಾತಿಗೆ ನಗು ಬರಲಿಲ್ಲ. ನನ್ನ ನಡವಳಿಕೆ ನನ್ನಲ್ಲಿ ನಗು ಹುಟ್ಟಿಸಿತು ಅಷ್ಟೆ. ಇರಲಿ. ನನಗೊಂದು ಉಪಕಾರ ಮಾಡುವಿರಾ ?'' ಎಂದ ಸ್ಥಪತಿ.

"ನಮ್ಮ ಕೈಯಲಾಗುವಂತಾದರೆ ನಮ್ಮ ಭಾಗ್ಯ ಎಂದು ಭಾವಿಸುತ್ತೇವೆ'' ಎಂದ ಮಾಯಣ.

"ನಿಮ್ಮಿಂದ ಸಾಧ್ಯ. ನಾನು ಪಟ್ಟಮಹಾದೇವಿಯವರನ್ನು ಸಂಪೂರ್ಣ ಏಕಾಂತದಲ್ಲಿ ಕಾಣಬೇಕಾಗಿದೆ. ನನ್ನ ಪ್ರಾರ್ಥನೆ ನಿರಾಕೃತವಾದರೂ ನನಗೆ ವ್ಯಥೆಯೇನೂ ಇಲ್ಲ. ದಯವಿಟ್ಟು ಚಟ್ಟಲದೇವಿಯವರು ಮನಸ್ಸು ಮಾಡಿ ನನ್ನ ಬೇಡಿಕೆಯನ್ನು ಪಟ್ಟಮಹಾದೇವಿಯವರಲ್ಲಿ ಮಂಡಿಸಿ ಒಪ್ಪಿಗೆ ದೊರಕಿಸಿಕೊಡಬೇಕು'' ಎಂದು ಕೇಳಿದ ಸ್ಥಪತಿ.

"ಪಟ್ಟಮಹಾದೇವಿಯವರ ದರ್ಶನ ನಿಮಗೇನು ಅಲಭ್ಯವಾದುದಲ್ಲ. ಆದರೆ ಸಂಪೂರ್ಣ ಏಕಾಂತ ಎಂದರೆ ಮಾತ್ರ ಸಾಧ್ಯವಾಗಲಾರದೇನೊ. ಮಹಾಸನ್ನಿಧಾನ, ಪಟ್ಟಮಹಾದೇವಿಯವರ ಸಂತಾನ, ದಣ್ಣಾಯಕ ಬಿಟ್ಟಿಯಣ್ಣ ಹೊರತು ಬೇರಾವ ಗಂಡಸಿಗೂ ಏಕಾಂತ ದರ್ಶನಕ್ಕೆ ಅವಕಾಶವಿಲ್ಲ'' ಎಂದಳು ಚಟ್ಟಲದೇವಿ.

ಅಲ್ಲಿ ಮೌನವಾವರಿಸಿತು. ಸ್ಥಪತಿ ಆಲೋಚನಾ ಮಗ್ನನಾಗಿ ಕುಳಿತ.

ತುಸು ಸಮಯಾನಂತರ ಮಾಯಣ ಚಟ್ಟಲೆಯರು ಪರಸ್ಪರ ನೋಡಿಕೊಂಡರು. ಅಲ್ಲಿಂದ ಕಾಲ್ತೆಗೆಯೋಣವೆಂದು ಸನ್ನೆಗಳಿಂದಲೇ ತೀರ್ಮಾನಿಸಿಕೊಂಡರು.

ಎದ್ದು ನಿಂತು, "ನಮಗೆ ಅಪ್ಪಣೆಕೊಟ್ಟರೆ.....'' ಎಂದು ಕೈಮುಗಿದರು.

ಸ್ಥಪತಿ, "ಆ ! ಹೊರಟಿರಾ ? ಒಳ್ಳೆಯದು. ಹೋಗಿಬನ್ನಿ. ನನ್ನ ಹೊರೆಯಿಳಿಸಿಕೊಳ್ಳುವ ಕಾಲ ಬಂದಿಲ್ಲಾಂತ ಕಾಣುತ್ತದೆ. ಮಹಾಸನ್ನಿಧಾನ ಎಂದು ಬರುತ್ತಾರೆಂಬ ಬಗ್ಗೇನಾದರೂ ಸುದ್ದಿ ಬಂದಿದೆಯೆ?"

"ನಮ್ಮವರೆಗೆ ಏನೂ ಸುದ್ದಿ ಮುಟ್ಟಿಲ್ಲ. ನಮಗಿಂತ ನಿಮಗೆ ಆ ಸುದ್ದಿ ಮೊದಲು ಮುಟ್ಟುತ್ತದೆ. ಹಾಗೇನಾದರೂ ಸುದ್ದಿ ಬಂದಿದ್ದರೆ, ಬರೋಣವೆ ?" ಎಂದ ಮಾಯಣ.

"ಒಳ್ಳೆಯದು" ಎಂದ ಸ್ಥಪತಿ ಏಳುತ್ತಾ.

"ಕೂಡಿ, ಕೂಡಿ. ನಾವು ಬರುತ್ತೇವೆ" ಎಂದ ಮಾಯಣ.

"ಅದು ಸೌಜನ್ಯವಲ್ಲ. ಬೀದಿಯವರೆಗಾದರೂ ಬಂದು, ಬಂದ ಅತಿಥಿಗಳನ್ನು ಬೀಳ್ಕೊಡಬೇಕು ಎಂಬುದು ಸಂಪ್ರದಾಯ" ಎಂದು ಅವರೊಂದಿಗೆ ಬೀದಿಯವರೆಗೆ ಬಂದು ಬೀಳ್ಕೊಟ್ಟ

ಒಳಗೆ ಬಂದವನು ಸುಮ್ಮನೆ ಶತಪಥ ಹಾಕತೊಡಗಿದ. ಆ ಕೆಲಸ, ಮಂಚಣ ಬಂದು ಆರೋಗಣೆಗೆ ಕರೆಯುವರೆಗೂ ನಡೆದೇ ಇತ್ತು. ಏನೋ ಗಾಢವಾದ ಯೋಚನೆಯಲ್ಲಿ ಸ್ಥಪತಿ ಮಗ್ನನಾಗಿದ್ದಾನೆಂಬುದು ಮಂಚಣನಿಗೆ ಅನುಭವದಿಂದ ಅರಿವಾಗಿತ್ತು. ಅವನು ಸಮಯ ಕಾದು ಸ್ಥಪತಿಯ ಗಮನವನ್ನು ತನ್ನ ಕಡೆ ಸೆಳೆದ.

"ಓಹೋ ! ಆರೋಗಣೆಗೆ ಸಿದ್ಧವಾಗಿದೆಯೋ. ಬಂದೆ, ಕೈಕಾಲು ಮುಖ ತೊಳೆದು ಬರುತ್ತೇನೆ" ಎಂದಿನಂತೆ ಸಾಗಿತು. ಅದು ಮುಗಿದ ಮೇಲೆ ಸ್ಥಪತಿ, "ಮಂಚಣ ಇಂದು ರಾತ್ರಿ ನನಗಾಗಿ ಏನೂ ಮಾಡಬೇಡ. ನಾನು ವೇಲಾಪುರಿಯಿಂದ ಹೊರಗೆ ಹೋಗಿಬರಬೇಕಾಗಿದೆ. ಒಂದು ವೇಳೆ ನಾನು ರಾತ್ರಿ ಬರದಿದ್ದರೂ ಹೆದರುವ ಕಾರಣವಿಲ್ಲ. ನಾಳಿನ ಸೂರ್ಯೋದಯಕ್ಕೆ ಸರಿಯಾಗಿ ಹಿಂತಿರುಗುತ್ತೇನೆ" ಎಂದ.

"ಅರಮನೆಯಿಂದ ಏನಾದರೂ ಕರೆ ಬಂದರೆ ?"

"ಆ ಸಂಭವವೇನೂ ಇಲ್ಲ."

"ಒಂದು ಸಮಯ ಕರೆ ಬಂದರೆ ನಾನು ಏನೆಂದು ಹೇಳಬೇಕು ?"

"ನಾನು ನಿನಗೆ ಏನು ಹೇಳಿದ್ದೇನೋ ಅದನ್ನೇ ಹೇಳು. ಮುಚ್ಚುಮರೆಯೇನು ಅದರಲ್ಲಿ?"

"ಸರಿಯೆ...ಆದರೆ ?...."

"ಏನು ರಾಗ ಎಳೆಯುತ್ತೀ ?"

"ನಾನು ಎಷ್ಟಾದರೂ ಊಳಿಗದವನು. ಅರಮನೆಗೆ ಸುದ್ದಿ ಮುಟ್ಟಿಸಿ ಹೊರಟರೆ ಉತ್ತಮ ಪಕ್ಷವೇನೋ ಎಂದು ನನಗೆ ತೋರುತ್ತದೆ."

"ನನ್ನನ್ನು ಯಾರೂ ಕೊಂಡುಕೊಂಡಿಲ್ಲ." ಮಾತು ಸ್ವಲ್ಪ ಗಡುಸಾಗಿತ್ತು.

ಮಂಚಣ ಪೆಚ್ಚಾದ. ಆದರೂ ಒಂದೆರಡು ಕ್ಷಣ ತಡೆದು, "ಪಟ್ಟಮಹಾದೇವಿಯವರಿಗೆ ನೀವೆಂದರೆ ತುಂಬಾ ಗೌರವ. ನಿಮ್ಮನ್ನು ಹೂವಿನ ಹಾಗೆ ನೋಡಿಕೊಳ್ಳಬೇಕೂಂತ ನನಗೆ ಅಪ್ಪಣೆ ಮಾಡಿದ್ದಾರೆ. ನೀವು ಒಬ್ಬಂಟಿಗರಾಗಿ ಬೇರೆಲ್ಲಿಗೋ ಹೋಗಿಬಿಟ್ಟರೆ ನಾನು ನನ್ನ ಕರ್ತವ್ಯ ಮಾಡಲಿಲ್ಲ ಎಂದು ಅವರು ಸಿಟ್ಟಾಗಬಹುದು. ಅದರಿಂದ ಬಿನ್ನವಿಸಿಕೊಂಡೆ. ಇದರ ಮೇಲೆ ತಮ್ಮ ಚಿತ್ತ. ಇತ್ತ ಪುಲಿ, ಅತ್ತ ದರಿ ನನ್ನ

ಸ್ಥಿತಿ. ಇಬ್ಬರು ಯಜಮಾನರು. ಇಬ್ಬರ ಮನಸ್ಸಿಗೂ ತೃಪ್ತಿ ತಂದುಕೊಡಬೇಕು. ಈ ಸೇವಾ ಕಾರ್ಯ, ಅದರಲ್ಲಿಯೂ ಅರಮನೆಯ ಅಥವಾ ಕಲೆಗಾರರ ಸೇವಾಕಾರ್ಯ ಬಹಳ ತೊಡಕಿನದು. ಸೂಜಿ ಮುಂಭಾರ, ಸೂಜಿ ಹಿಂಭಾರ'' ಎಂದು ತುಸು ಉದ್ದವಾಗಿಯೇ ತೋಚಿದ್ದೆಲ್ಲಾ ಹೇಳಿಬಿಟ್ಟ

"ಅಂದರೆ ನನ್ನಿಂದ ನಿನಗೆ ಕಿರುಕುಳವಾಗಿದೆಯೇನು ?''

"ನಿಮ್ಮ ಮನಸ್ಸು ಎಲ್ಲೆಲ್ಲೋ ಇರುತ್ತೆ. ಏನೇನೋ ಯೋಚಿಸುತ್ತಾ ಇರುತ್ತೆ. ಏನೇನೋ ಕಲ್ಪಿಸುತ್ತಾ ಇರುತ್ತೆ. ಅಂತಹ ಹೊತ್ತಿನಲ್ಲಿ ನಿಮ್ಮನ್ನ ಮಾತನಾಡಿಸಿದರೆ ಹೇಗೋ, ಬಿಟ್ಟರೆ ಹೇಗೋ ಎಂದು ಅನುಮಾನ ಬಂದು ಪ್ರಾಣ ಕಳೆದುಕೊಳ್ಳೋಹಾಗೆ ಆಗುತ್ತೆ. ಆದರೆ ನಿಮಗೆ ಅವೆಲ್ಲ ಗೊತ್ತಾಗುವುದಿಲ್ಲ. ಊಳಿಗ ಮಾಡಿದವರಿಗೆ ಮಾತ್ರ ಅನುಭವವಾಗುತ್ತೆ.''

"ಈಗೇನು ಮಾಡಬೇಕೂಂತೀ ?''

"ತಾವು ಹೇಗೆ ಅಪ್ಪಣೆ ಮಾಡಿದರೆ ಹಾಗೆ.''

"ನಾನಂತೂ ಆಗಲೇ ಹೇಳಿದ ಹಾಗೆ ಹೊರಡತೀನಿ. ಆಮೇಲೆ ನೀನು ಹೋಗಿ ಎಲ್ಲಿದ್ದರೂ ಬೆಳಗ್ಗೆ ಇಲ್ಲಿರುತ್ತಾರೇಂತ ಅರಮನೆಗೆ ಸುದ್ದಿ ಮುಟ್ಟಿಸಿಬಿಡು.''

ಮಂಚಣ ಏನೂ ಮಾತನಾಡಲಿಲ್ಲ.

"ಯಾಕೆ ? ಮಾತನಾಡಲಿಲ್ಲ. ನಾನು ಹೇಳಿದ್ದು ಸರಿತಾನೆ ?''

"ತಮ್ಮ ದೃಷ್ಟಿಯಲ್ಲಿ ಸರಿಯೆ.''

"ಅಂದರೆ.....ಸರಿಯಲ್ಲಾಂತ ನಿನ್ನ ಅಭಿಪ್ರಾಯವೇನು ?''

ಹೊರಗೆ ಕುದುರೆ ಬಂದು ನಿಂತ ಶಬ್ದ ಕೇಳಿಸಿತು.

ಮಂಚಣ ಸರಸರನೆ ಹೊರಕ್ಕೆ ಓಡಿದ. ಅರಮನೆ ಓಲೆಕಾರ ಬೀರಣ ಕುದುರೆಯಿಂದ ಇಳಿದು ಬಾಗಿಲಿನತ್ತ ಬರುತ್ತಿದ್ದ. ಮಂಚಣನನ್ನು ನೋಡಿ, "ಸ್ಥಪತಿಗಳು ಏನು ಮಾಡುತ್ತಿದ್ದಾರೆ? ಅವರ ಆರೋಗಣೆ ವಿಶ್ರಾಂತಿ ಆಗಿದ್ದರೆ ಸನ್ನಿಧಾನವನ್ನು ಬಂದು ಕಾಣಬೇಕಂತೆ'' ಎಂದ ಬೀರಣ.

"ಒಳಿತಾಯಿತು. ನಾನು ಬದುಕಿದೆ'' ಎಂದು ಮನಸ್ಸಿನಲ್ಲಿ ಅಂದುಕೊಂಡು, "ಇದ್ದಾರೆ ಬಾ, ಅವರೂ ಇನ್ನೇನು ಹೊರಡುವ ಸಿದ್ಧತೆಯಲ್ಲಿ ಇದ್ದರು. ನೀನು ಸಮಯಕ್ಕೆ ಸರಿಯಾಗಿ ಬಂದೆ. ಬಾ'' ಎಂದು ಮಂಚಣ ಒಳಕ್ಕೆ ನಡೆದ.

ಓಲೆಕಾರ ಬೀರಣ ಅವನನ್ನು ಹಿಂಬಾಲಿಸಿದ.

ಸ್ಥಪತಿಗೆ ಸುದ್ದಿ ಗೊತ್ತಾಯಿತು. ಮಂಚಣನತ್ತ ನೋಡಿದ. ಅವನು ದೃಷ್ಟಿಯನ್ನು ನೆಲದತ್ತ ಹೊರಳಿಸಿದ.

"ಮಂಚಣ ನಿನ್ನ ನಾಲಿಗೆಯ ಮೇಲೆ ಮಚ್ಚೆ ಇರಬೇಕೂಂತ ಕಾಣುತ್ತದೆ. ನೋಡಿದೆಯಾ ನಿನ್ನ ಮಾತು ಹೇಗೆ ನಿಜವಾಯಿತು ? ಹೇಗೂ ಅರಮನೆಗೆ ಹೋಗುತ್ತೇನಲ್ಲ. ನಾನೇ ಸನ್ನಿಧಾನಕ್ಕೆ ವಿಷಯ ತಿಳಿಸುತ್ತೇನೆ. ಅದರಿಂದ ನೀನು ಹೆದರುವ ಕಾರಣವಿಲ್ಲ'' ಎಂದು ಮಂಚಣನಿಗೆ ಹೇಳಿ ಬೀರಣನತ್ತ ತಿರುಗಿ, "ನೀನು ನಡಿ. ನಾನು ಹಿಂದೆಯೇ ಬಂದೆ'' ಎಂದ ಸ್ಥಪತಿ.

"ಆತುರ ಏನು ಇಲ್ಲ. ಬೇಕಾದರೆ ಇನ್ನೂ ಸ್ವಲ್ಪ ತಡೆದು ಬರಬಹುದು'' ಎಂದ ಬೀರಣ.

"ಈಗಲೇ ಬಂದರೆ ಸನ್ನಿಧಾನಕ್ಕೇನಾದರೂ ತೊಂದರೆಯೆ ?''

"ಅಲ್ಲಿ ಅಪ್ಪಣೆ ಆದದ್ದು ಇಷ್ಟು ಆರೋಗಣೆ, ವಿಶ್ರಾಂತಿ ಆದ ಮೇಲೆ ಸ್ಥಪತಿಗಳು ಇಲ್ಲಿಗೆ ಬರಲೀಂತ.''

"ಅದು ಸರಿ. ಈಗ ಅವರ ವಿಶ್ರಾಂತಿ ಸಮಯ ಆಗಿದ್ದರೆ ?''

"ಅವರು ವಿಶ್ರಾಂತಿ ತೆಗೆದುಕೊಳ್ಳುವುದು ರಾತ್ರಿ ಮಾತ್ರ. ಹು. ಏನಪ್ಪಣೆ ?''

"ನೀನು ನಡಿ. ನಾನು ಹಿಂದೆಯೇ ಬಂದೆ.''

ನಿಮ್ಮ ಆರೋಗಣೆ ವಿಶ್ರಾಂತಿ ಆಗಿದೆ ತಾನೆ ?''

"ಹು. ಎಲ್ಲಾ ಆಗಿದೆ.''

ಓಲೆಕಾರ ಬೀರಣ ಹೊರಟುಹೋದ. ಕೆಲವು ಕ್ಷಣಗಳಲ್ಲಿಯೇ ಸ್ಥಪತಿಯೂ ಆರಮನೆಯತ್ತ ಹೋದ.

ಅವನನ್ನು ಮನ್ತ್ರಣಸಾಲೆಗೆ ನೇರವಾಗಿ ಕರೆದೊಯ್ಯಲಾಯಿತು. ಅಲ್ಲಿದ್ದ ಹಡಿಯಾರ ತೆರೆ ಎತ್ತಿ ಸ್ಥಪತಿಯನ್ನು ಒಳಕ್ಕೆ ಬಿಟ್ಟು ಬಾಗಿಲೆಳೆದುಕೊಂಡು ತೆರೆ ಬಿಟ್ಟ ಸ್ಥಪತಿ ಒಳಗೆ ಪ್ರವೇಶಿಸಿದಾಗ ಅಲ್ಲಿ ಯಾರೂ ಇರಲಿಲ್ಲ. ಅವನಿಗೆ ಅದೊಂದು ಹೊಸ ಅನುಭವವನ್ನು ತಂದುಕೊಟ್ಟಿತು. ವಾಸ್ತವವಾಗಿ ಅವನು ಈವರೆಗೆ ಮನ್ತ್ರಣಸಾಲೆಯೊಳಕ್ಕೆ ಬಂದೇ ಇರಲಿಲ್ಲ. ತುಸು ಎತ್ತರದಲ್ಲಿ ಎರಡು ಆಸನಗಳು ಇದ್ದವು. ಮತ್ತೆ ಉಳಿದ ಕೆಲವು ಆಸನಗಳು ಅರ್ಧ ವರ್ತುಲಾಕಾರದಲ್ಲಿ ಆ ಎರಡು ಆಸನಗಳಿಗೆ ಇದಿರಾಗಿ ಜೋಡಿಸಲಾಗಿತ್ತು. ಎತ್ತರವಾಗಿದ್ದ ಆಸನಗಳ ಹಿಂಬದಿಯ ಭಿತ್ತಿಯಲ್ಲಿ ತುಸು ಎತ್ತರದ ಮೇಲೆ ಪೊಯ್ಸಳ ಲಾಂಛನ ಎದ್ದು ಕಾಣುತ್ತಿತ್ತು. ಅದರ ಇಕ್ಕೆಲಗಳಲ್ಲಿ ಎರಡು ದೀವಿಗೆಗಳು ಪ್ರಕಾಶಿಸುತ್ತಿದ್ದವು. ರೂವಾರಿ, ಕೂಡಲೋ, ನಿಂತೇ ಇರಲೋ ಎಂದು ಯೋಚಿಸುತ್ತಿದ್ದ. ಅಷ್ಟರಲ್ಲಿ ಕಂಸಾಳದ ಶಬ್ದ ಕೇಳಿಸಿತು.

ಪೊಯ್ಸಳ ಲಾಂಛನದ ತಳಭಾಗದಲ್ಲಿದ್ದ ದ್ವಾರ ತೆರೆಯಿತು. ಪಟ್ಟಮಹಾದೇವಿ ಶಾನ್ತಲದೇವಿ ಮತ್ತು ದಣ್ಣಾಯಕ ಬಿಟ್ಟಿಯಣ್ಣ ಒಳಕ್ಕೆ ಬಂದರು. ದ್ವಾರ ಮುಚ್ಚಿತು. ಶಾನ್ತಲದೇವಿ ಕುಳಿತ ಮೇಲೆ ಅರ್ಧ ವರ್ತುಲವಾಗಿ ಇರಿಸಿದ್ದ ಅಸನದ ಮೇಲೆ ಬಿಟ್ಟಿಯಣ್ಣ ಕುಳಿತ.

"ಕೂಡಿ ಸ್ಥಪತಿಗಳೆ'' ಎಂದಳು ಶಾನ್ತಲದೇವಿ.

ಸ್ಥಪತಿ ಕುಳಿತ.

"ವಿಶ್ರಾಂತಿಯ ದಿವಸವೂ ವಿಶ್ರಾಂತಿಗೆ ಬಿಡಲಿಲ್ಲವೆಂದು ಬೇಸರವಿಲ್ಲ ತಾನೆ ?'' ಎಂದು ಶಾನ್ತಲದೇವಿ ಕೇಳಿದಳು.

"ನನಗೆ ವಾಸ್ತವವಾಗಿ ವಿಶ್ರಾಂತಿ ಬೇಕಿಲ್ಲ.''

"ನಮಗನ್ನಿಸಿದಂತೆ ನಿಮಗೂ ಅನ್ನಿಸಬೇಡವೆ ?''

"ಕೆಲವರಿಗೆ ವಿಶ್ರಾಂತಿಯ ಬಯಕೆ ಇರುತ್ತದೆ...''

"ಎಲ್ಲರಿಗೂ ಆ ಬಯಕೆ ಇರುತ್ತದೆ ಎನ್ನಿ'' ಎಂದು ನಡುವೆಯೇ ಶಾನ್ತಲದೇವಿ ಹೇಳಿದಳು.

"ಹಾಗೆಯೇ ಭಾವಿಸೋಣ. ಕೆಲವರಿಗೆ ವಿಶ್ರಾಂತಿಯಿಂದ ಪುನಶ್ಚೇತನ ಉಂಟಾಗುತ್ತದೆ. ಕೆಲವರಿಗೆ, ಅದು ಚೇತನವನ್ನು ನಿರ್ಬಲಗೊಳಿಸುತ್ತದೆ. ನಾನು ಎರಡನೆಯ ಗುಂಪಿಗೆ ಸೇರಿದವನು. ನನಗೆ ಇಲ್ಲಿಗೆ ಬಂದಾಗಿನಿಂದ ಮಂದಿರದ ವಿಷಯ ಬಿಟ್ಟು ಬೇರಾವ ಆಲೋಚನೆಗೂ ಅವಕಾಶ ಇಲ್ಲದಂತಾಗಿ, ವಾಸ್ತವವಾಗಿ ಯಾವುದೋ ಹಿಂದಿನ ಚೇತನವೊಂದು ಮತ್ತೆ ಮೈದುಂಬಿದಂತಾಗಿದೆ. ಅದು ಹಾಗೆಯೇ ಉಳಿಯುವುದು ನನ್ನ ಸ್ವಂತ ದೃಷ್ಟಿಯಿಂದ, ನನಗೂ, ನಾನು ಕೈಕೊಂಡಿರುವ ಕೆಲಸಕ್ಕೂ ಒಳಿತು."

"ಒಂದು ರೀತಿಯಲ್ಲಿ ನೀವು ಹೇಳಿದ್ದು ಸರಿ. ಸಂಶಯ, ಭಯ, ಅಸೂಯೆ, ಮಹತ್ವಾಕಾಂಕ್ಷೆ, ರಾಗ, ದ್ವೇಷಾದಿಗಳು ನಮ್ಮ ಮನಸ್ಸಿನಲ್ಲಿ ಬೇರೂರಿಬಿಟ್ಟರೆ ವಿಶ್ರಾಂತಿಯಿಂದ ಅಂತಹವರಿಗೆ ಏನೂ ಉಪಯೋಗವಿಲ್ಲ. ಆದರೆ ಈ ದೇಹಕ್ಕೆ ಶ್ರಮವನ್ನು ಸಹಿಸುವ ಒಂದು ಮಿತಿ ಇದೆ. ಅದನ್ನು ಮೀರಿ ಶ್ರಮಿಸಿದಾಗ ಶರೀರಕ್ಕೆ ನಮ್ಮರಿವಿಗೆ ಬಾರದಂತೆ ಒಳಗೆ ಅದು ತೊಂದರೆ ಕೊಡುತ್ತದೆ. ಅದರಿಂದ ವಿಶ್ರಾಂತಿಯಿಂದ ಪುನಶ್ಚೇತನಗೊಳ್ಳಲಾರದ ವ್ಯಕ್ತಿಯ ಆಯುಷ್ಯ ಕಡಿಮೆಯಾಗುತ್ತದೆ. ನೀವು ಅದಕ್ಕೆ ಅವಕಾಶ ಮಾಡಿಕೊಳ್ಳಬಾರದು."

"ತಮ್ಮ ಸ್ವಂತಕ್ಕೆ ಸಂಬಂಧಿಸಿಲ್ಲದೆ ಯಾವುದೇ ವಿಷಯವನ್ನೂ ಎಲ್ಲರೂ ವಿಶ್ಲೇಷಿಸಬಲ್ಲರು. ಅಲ್ಲಿ ರಾಗದ್ವೇಷಗಳು ಸಲ್ಲ ಎಂದು ಉಪದೇಶ ಮಾಡಬಲ್ಲರು. ಆದರೆ ಯಾರು ಅದರಲ್ಲಿ ವಾಸ್ತವವಾಗಿ ಸಿಕ್ಕಿಕೊಂಡಿರುತ್ತಾರೋ ಅವರ ಅಂತರಂಗ ಹೊಕ್ಕು ನೋಡಲು ಬೇರೊಬ್ಬರಿಂದ ಸಾಧ್ಯವಾಗುವುದಿಲ್ಲ."

"ಇದು ಅಭಿಪ್ರಾಯದ ಮಾತು."

"ಅದು ಸಿದ್ಧಾಂತವೆಂದು ನನ್ನ ಅನಿಸಿಕೆ."

"ಅದು ಸಿದ್ಧಾಂತವೆಂದು ನನಗನ್ನಿಸಬಹುದಾದ ಯಾವುದಾದರೂ ಪ್ರಸಂಗವನ್ನು ನೀವು ನಿರೂಪಿಸಬಹುದೆ ?"

"ನಿರೂಪಿಸಬಹುದು. ಆದರೆ..."

"ಅದರೇನು ? ಯಾಕೆ ಮಾತು ನಿಲ್ಲಿಸಿದಿರಿ ?" ಎಂದು ಬಿಟ್ಟಿಯಣ್ಣನತ್ತ ದೃಷ್ಟಿ ಹೊರಳಿಸಿ, "ಓಹೋ ಅರ್ಥವಾಯಿತು. ನಾವು ನಿಮಗೆ ಹೇಳಿ ಕಳಿಸಿದ್ದೇಕೆ ಗೊತ್ತೆ ?" ಎಂದು ಶಾನ್ತಲದೇವಿ ಕೇಳಿದಳು.

"ಕರೆ ಬಂತು, ಬಂದೆ. ವಿಷಯವನ್ನು ಸನ್ನಿಧಾನ ಇನ್ನೂ ತಿಳಿಸಿಲ್ಲವಲ್ಲ ?"

"ಮಹಾಸನ್ನಿಧಾನದ ಓಲೆ ಬಂದಿದೆ. ನಾನು ಕೂಡಲೇ ಯಾದವಪುರಿಗೆ ಹೋಗಿ ಅಲ್ಲಿ ಅವರ ಜೊತೆಗೂಡಬೇಕಾಗಿದೆ. ಅದರಿಂದ ಮಂದಿರದ ಎಲ್ಲ ಕೆಲಸ ಪೂರ್ತಿ ಈಗ ನಿಮ್ಮ ಹೊಣೆಗಾರಿಕೆಯ ಮೇಲೆ ನಿಲ್ಲುತ್ತದೆ. ಮಹಾಸನ್ನಿಧಾನ ಇಲ್ಲಿಗೆ ಬಿಜಯ ಮಾಡಿಸುವಷ್ಟರಲ್ಲಿ ಈ ಮಂದಿರ ಪೂರ್ಣಗೊಂಡಿದ್ದರೆ, ದೇವವಿಗ್ರಹ ಸ್ಥಾಪನೆಯನ್ನೂ ಬೇಗ ಮಾಡಿಸಿಬಿಡಬಹುದು. ನಿಮ್ಮ ಅಭಿಪ್ರಾಯದಲ್ಲಿ ಈ ಮಂದಿರದ ಕೆಲಸ ಯಾವಾಗ ಮುಗಿಯುತ್ತದೆ ?"

"ಮಂದಿರದ ಹೊರಭಾಗದಲ್ಲಿ ಭಿತ್ತಿಯ ಉಬ್ಬುಗಂಬಗಳ ಮೇಲೆ ಭಾವಣಿಯ ಕೆಳಗೆ ನಿಲ್ಲಿಸಬೇಕೆಂದು ಇಚ್ಛೆಪಟ್ಟಿರುವ ವಿವಿಧ ಭಂಗಿಗಳ ಸುಂದರ ಪ್ರತಿಮೆಗಳಷ್ಟು ಉಳಿದು, ಬಾಕಿ ಎಲ್ಲವನ್ನೂ ಇನ್ನೊಂದು ಪಕ್ಷದಲ್ಲಿ ಮುಗಿಸಿಬಿಡಬಹುದು. ಕೆತ್ತನೆಯ ಕೆಲಸವೆಲ್ಲ ಮುಗಿದಿದೆ. ಜೋಡಿಸುವುದೊಂದು ಮಾತ್ರ ಉಳಿದಿದೆ."

“ಮೂಲದೇವರ ವಿಗ್ರಹ ?”

“ಅದನ್ನು ನಾನು ಮುಗಿಸಿಕೊಡುತ್ತೇನೆ.”

“ಶಿಲ್ಪಶಾಸ್ತ್ರದಲ್ಲಿ ನಿಯೋಜಿತವಾಗಿರುವ ಪ್ರಮಾಣಕ್ಕಿಂತ ತುಸು ಎತ್ತರವಾಗಿ ಮಾಡಿದರೆ ತಪ್ಪಾಗುತ್ತದೆಯೆ ?”

“ಒಟ್ಟು ಎತ್ತರವನ್ನು ಆಯಾದಿ ಪ್ರಕಾರ ನಿರ್ಣಯಿಸಲಾಗುತ್ತದೆ. ಮೂರ್ತಿಯ ಪರಸ್ಪರ ಅಂಗಾಗಗಳಲ್ಲಿ ಮೇಳವಿರುವುದು ಮುಖ್ಯ.”

“ಶುಕ್ರ ನೀತಿಸಾರದಲ್ಲಿ ಪ್ರತಿಮಾ ಲಕ್ಷಣವನ್ನೂ ಹೇಳುತ್ತ ಯುಗಯುಗಕ್ಕೂ ಭಿನ್ನ ಭಿನ್ನ ಅಳತೆಗಳನ್ನು ಕೊಟ್ಟಿದ್ದಾರಲ್ಲ ಏಕೆ ?”

“ಆಯಾಯಕಾಲದ ಮಾನವರ ಆಕಾರಕ್ಕೆ ಆಯಾಯ ಕಾಲದ ದೇವದೇವತೆಗಳ ಆಕಾರದ ಹೊಂದಿಕೆಯಾಗಬೇಕು.”

“ಅದರಿಂದಲೇ ಕೃತಯುಗದ ಪ್ರತಿಮೆ ಹತ್ತು ತಾಲ ಇದ್ದರೆ, ತ್ರೇತೆಯದು ಒಂಬತ್ತು, ದ್ವಾಪರೆಯದು ಎಂಟು ತಾಲ ಆಗಿರುವುದು..... ಸರಿ. ನಿಮ್ಮ ಬೇಡಿಕೆಯನ್ನು ಚಟ್ಟಲೆ ತಿಳಿಸಿದಳು. ಅವಳು ನಿಮಗೆ ಹೇಳಿದುದೂ ಲೌಕೀಕವಾಗಿ ಸರಿ. ಆದರೂ ನಾನು ನಿಮ್ಮ ಬೇಡಿಕೆಗೆ ಈಗ ಅಸ್ತು ಎನ್ನುಲು ವೇಳೆ ಇಲ್ಲ. ಕ್ಷಮಿಸಿ” ಎಂದು ಕಂಸಾಳ ಬಾಜಿಸಿದಳು. ತೆರೆದ ದ್ವಾರದಿಂದ ಸ್ಥಪತಿ ಹೊರಟುಹೋದ.

# ೮. ಲಕ್ಷ್ಮೀದೇವಿ ರಾಣಿಯಾದಳು

ಯಾದವಪುರಿಯ ಅರಮನೆಯಲ್ಲಿ ಬಿಟ್ಟಿದೇವ–ಲಕ್ಷ್ಮೀದೇವಿಯರ ಪಾಣಿಗ್ರಹಣೋತ್ಸವ ಪಟ್ಟಮಹಾದೇವಿ ಶಾನ್ತಲದೇವಿಯ ಇಚ್ಛೆಯಂತೆ ನಿರಾಡಂಬರವಾಗಿ ನೆರವೇರಿತು.

ರಾಣಿಯರಿಬ್ಬರೂ ಪರಿಸ್ಥಿತಿಗೆ ಹೊಂದಿಕೊಂಡು ವರ್ತಿಸಿದರೂ ವಂಶ ತಿಳಿಯದ ಹೆಣ್ಣು ರಾಣಿಯಾಗುವಂತಾಯಿತಲ್ಲಾ ಎಂದು ಮನಸ್ಸಿನಲ್ಲಿ ಅಂದುಕೊಂಡರು. ಎಲ್ಲ ಕಾರ್ಯ ಮುಗಿದ ಮೇಲೆ ಪಟ್ಟಮಹಾದೇವಿಯೊಂದಿಗೆ ತಮಗನ್ನಿಸಿದ್ದನ್ನು ಹೇಳಿಯೂ ಹೇಳಿದರು.

ಅದಕ್ಕೆ ಶಾನ್ತಲದೇವಿ, "ಇದರಲ್ಲಿ ಬಹುಮುಖ್ಯವಾದ ಅಂಶ ಆ ಕನ್ಯೆಯು ಸನ್ನಿಧಾನದ ಹೃದಯವನ್ನು ಚಿವುಟಿದುದು. ಅವಳ ವಂಶ ಯಾವುದೇ ಇರಲಿ, ರಾಣಿಯಾಗುವ ಯೋಗ ಅವಳ ಜನ್ಮಕಾಲದಲ್ಲಿ ಅವಳಿಗೆ ಇದ್ದೇ ತೀರಬೇಕು. ನನಗನ್ನಿಸುವುದೇನೆಂದರೆ ಇದರಲ್ಲಿ ಈ ತಿರುಮಲೆಯ ತಿರುವರಂಗದಾಸರ ಕೈವಾಡ ಬಹಳವಿದ್ದಂತೆ ಇದೆ. ಶ್ರೀಮದಾಚಾರ್ಯರಂತೆ, ಅವರ ಶಿಷ್ಯರು ಅಂಡಾನ್‌ರವಂತೆ, ಈತ ನಿಷ್ಕಲ್ಮಷ ಪ್ರಕೃತಿಯವರಲ್ಲ. ಅವರ ಹಣೆಯ ಮೇಲಿನ, ದೇಹದ ಮೇಲಿನ, ಆ ಬೃಹತ್ ಲಾಂಛನಗಳನ್ನು ಆತ ವ್ಯಾಪಾರ ಮಾಡುವವರು ಎಂಬುದಂತೂ ಖಚಿತ. ಎಂತಲೇ ಎಷ್ಟೋ ವಿಷಯಗಳನ್ನು ಆತ ಶ್ರೀಮದಾಚಾರ್ಯರ ಗಮನಕ್ಕೂ, ಅವರ ಶಿಷ್ಯರ ಗಮನಕ್ಕೂ ತಂದಿರಲಾರದು. ಎಂದು ಮೇಲೆ ಸನ್ನಿಧಾನದ ಗಮನಕ್ಕೂ ತಂದಿರಲು ಸಾಧ್ಯವಿಲ್ಲ. ಆ ಕನ್ಯೆ ಆತನ ಮಗಳೇ ಇದ್ದರೂ ಇರಬಹುದು. ತನ್ನ ಮಗಳು ಎಂದು ಹೇಳಿಕೊಂಡರೆ ತನ್ನ ಆಸೆ ಫಲಿಸಲಾರದೆಂದು ಆತ ಭಾವಿಸಿರಬಹುದು. ಅಂದು ದೇವಸ್ಥಾನದಲ್ಲಿ ಆತ ಕೊಟ್ಟ ವಿವರಣೆ ನೆನಪಿದೆಯಲ್ಲ ಬಮ್ಮಲದೇವಿ. ಆತನದು ಕೂಪ ಮಂಡೂಕ ಸ್ವಭಾವ. ತನ್ನ ಧರ್ಮಬಿಟ್ಟು ಅನ್ಯ ಧರ್ಮವಿಲ್ಲ ಎನ್ನುವವರು" ಎಂದಳು.

"ಆತನ ಮಗಳಾಗಲಿ ಬಿಡಲಿ ಆತನ ಪ್ರಭಾವವಂತೂ ಇನ್ನು ಪ್ರಖರವಾಗ ತೊಡಗುತ್ತದೆ ಎಂಬುದಂತೂ ನಿರ್ವಿವಾದ. ನನಗೆ ಅಂದೇ ಆತನಲ್ಲಿ ಸಂಶಯ ಬಂತು. ಸೂಚಿಸಿಯೂ ಸೂಚಿಸಿದೆ" ಎಂದಳು ಬಮ್ಮಲದೇವಿ.

"ಆ ಭಯ ನಿಮಗಿದ್ದರೆ ಎಚ್ಚರಿಕೆಯಿಂದ ಆತನ ಚಲನವಲನದ ಮೇಲೆ ಕಣ್ಣಿಟ್ಟು ಸನ್ನಿಧಾನಕ್ಕೆ ವರದಿ ಮುಟ್ಟಿಸಿ ಆತನ ಆಟ ನಡೆಯದಂತೆ ಮಾಡಿದರಾಯಿತು" ಎಂದಳು ಪಟ್ಟಮಹಾದೇವಿ.

ಆ ಮಾತು ಅಲ್ಲಿಗೆ ನಿಂತಿತು. ಯಾದವಪುರಿಯಿಂದ ಗಂಗರಾಜ, ಪುನೀಸಮಯ್ಯ, ಮಾಯಣ, ಚಟ್ಟಲೆಯರು ಪಾಣಿಗ್ರಹಣ ಸಮಾರಂಭವಾದ ವಾರದಲ್ಲಿಯೇ ವೇಲಾಪುರಿಗೆ ಪ್ರಯಾಣ ಬೆಳೆಸಿದರು.

ಮತ್ತೊಂದು ವಾರದಲ್ಲಿ ಶಾನ್ತಲದೇವಿ ತಾನೂ ಹೊರಡುವುದಾಗಿ ಮಹಾರಾಜನಿಗೆ ಸೂಚಿಸಿದಳು.

"ಎಲ್ಲರೂ ಒಟ್ಟಿಗೆ ಹೋದರಾಗದೆ ?"

"ಅಲ್ಲಿ ದೇವಮಂದಿರದ ಕೆಲಸ ಏನಾಗಿದೆಯೋ ಗೊತ್ತಿಲ್ಲ. ಇಲ್ಲಿಗೆ ಬಂದು ಹತ್ತಿರ ಹತ್ತಿರ ಒಂದು ಮಾಸಕ್ಕೆ ಬಂತು. ನಾವೆಲ್ಲ ಹೋಗಿ ನೂತನ ರಾಣಿಯ ಸ್ವಾಗತಕ್ಕೆ, ಹಾಗೆಯೇ ವಿಜಯೋತ್ಸವದ ಸಿದ್ಧತೆಗೆ ವ್ಯವಸ್ಥೆ ಮಾಡಿದರೆ ಒಳಿತು. ಅದೂ ಅಲ್ಲದೆ ಸ್ಥಪತಿಯ ವಿಷಯ ಸನ್ನಿಧಾನಕ್ಕೆ ತಿಳಿಯದೇ ಇಲ್ಲ. ನಾನು ಅಲ್ಲಿರುವುದು ತುಂಬಾ ಉತ್ತಮ ಪಕ್ಷ. ಅನುಮತಿ ಕೊಟ್ಟರೆ ಕೃತಕೃತ್ಯಳಾಗುತ್ತೇನೆ. ಅದೂ ಅಲ್ಲದೆ ನಾನು ದಾರಿಯಲ್ಲಿ ಬಾಹುಬಲಿಯ ದರ್ಶನ ಮಾಡಿಕೊಂಡು ಹೋಗಬೇಕು. ಸನ್ನಿಧಾನದ ಜೊತೆಯಲ್ಲಿಯಾದರೆ ಅದು ಸಾಧ್ಯವಾಗಲಾರದು."

"ಏಕೆ ?"

"ನೂತನ ರಾಣಿ ನೂರಕ್ಕೆ ನೂರು ಹುಟ್ಟು ವೈಷ್ಣವರು. ಅವರಿಗೆ ಬಾಹುಬಲಿಯ ಬಗೆಗೇನು ಕಲ್ಪನೆ ಇದೆಯೋ ನಾವರಿಯೆವು. ಅಜ್ಞಾನದಿಂದ ಸ್ವಾಮಿಗೆ ಅವಮಾನವಾಗಬಾರದು."

"ಅಂದರೆ ಈ ರಾಣಿಗೆ ಮತ ಸಹಿಷ್ಣುತೆ ಇಲ್ಲವೆ ?"

"ನಾನು ಹೇಗೆ ಹೇಳಲಿ ? ಆಕೆಯ ಪೋಷಕರಂತೂ ಸಹಿಷ್ಣುತೆ ಸಾಲದವರು. ಅದರಿಂದ ಈಕೆಯ ಮನಸ್ಸಿನಲ್ಲಿ ಬಾಲ್ಯದಿಂದ ಏನು ಭಾವನೆ ಮೂಡಿದೆಯೆಂಬುದು ತಿಳಿಯದೆ, ಅಲ್ಲಿಗೆ ಅವರೊಂದಿಗೆ ಹೋಗುವುದು ಒಳಿತಲ್ಲ ಎಂಬುದು ನನ್ನ ಭಾವನೆ."

"ಆತನ ವಿಷಯದಲ್ಲಿ ಈ ಅಭಿಪ್ರಾಯವಿದೆಯೆಂದು ನಮಗೇಕೆ ಮೊದಲೇ ಹೇಳಲಿಲ್ಲ?"

"ಸನ್ನಿಧಾನ ಅತ್ತ ಒಲವು ತೋರಿರುವ ಸೂಚನೆ ಇದ್ದಾಗ ನಾವು ಏನು ಹೇಳಿದ್ದರೂ ಅದಕ್ಕೆ ಹೆಚ್ಚಿನ ಬೆಲೆ ಬರುತ್ತಿರಲಿಲ್ಲ. ಆಲ್ಲದೆ ಸನ್ನಿಧಾನ ಈ ಕುರಿತು ನಮ್ಮ ಯಾರ ಜೊತೆಯಲ್ಲಿಯೂ ಮೊದಲು ಆಲೋಚಿಸಲಿಲ್ಲ. ಎಂದಾಗ ನಾವು ಸನ್ನಿಧಾನದ ಇಚ್ಛೆಗೆ ಶಿರಬಾಗುವುದಕ್ಕಿಂತ ಬೇರೆ ಮಾರ್ಗವಿರಲಿಲ್ಲ. ಈಗ ಆತ ವೇಲಾಪುರಿಗೆ ಬರುವ, ಅಲ್ಲಿ ನಿರ್ಮಾಣವಾಗುತ್ತಿರುವ ದೇವಮಂದಿರದ ಧರ್ಮದರ್ಶಿಯಾಗುವ ಆಸೆಯನ್ನೂ ಸನ್ನಿಧಾನಕ್ಕೆ ಸೂಚಿಸಿರಬಹುದು."

ಬಿಟ್ಟಿದೇವ ಅವಾಕ್ಕಾದ. ಆಶ್ಚರ್ಯದಿಂದ ಶಾನ್ತಲದೇವಿಯನ್ನು ಈಕ್ಷಿಸಿದ. ಮಾತನಾಡಲಿಲ್ಲ.

"ಮೌನ ಸಮ್ಮತಿ ಎಂದು ಭಾವಿಸಲೇ ?"

"ನಿಮ್ಮ ಬಳಿ ಆತ ಹಾಗೆ ಕೇಳಿದ್ದರೆ ?"

"ಇಲ್ಲ. ಎಲ್ಲಿ ಕಾರ್ಯಸಾಧನೆ ಆಗಬಹುದೋ ಅಲ್ಲಿ ಮಾತ್ರ ಆತ ತನ್ನ ಜಾಲ ಹರಡುತ್ತಾನೆ."

"ಅಂದರೆ ಆತನ ಬಗೆಗೆ ಒಳ್ಳೆಯ ಅಭಿಪ್ರಾಯವಿಲ್ಲ ಎಂದಾಯಿತು ?"

"ಹೌದು. ಅದರಿಂದಲೇ ನನ್ನ ಮನಸ್ಸಿನಲ್ಲಿದ್ದುದನ್ನು ಸನ್ನಿಧಾನಕ್ಕೆ ನಿವೇದಿಸಿದ್ದೇನೆ."

"ಈಗೇನು ಮಾಡಬೇಕು ?"

"ಇರುವಲ್ಲಿ ಇರಲಿ. ಅದು ಇಷ್ಟವಿಲ್ಲದಿದ್ದರೆ ತಿರುಮಲೆಗೆ ಹಿಂತಿರುಗಲಿ" ನಿರ್ಣಾಯಕವೆಂಬಂತೆ ಶಾನ್ತಲದೇವಿ ಹೇಳಿದಳು.

"ಅಂದರೆ ಈ ಸಂಬಂಧ ಆರಂಭದಿಂದಲೇ ತೊಡಕಿನದಾಯಿತು. ರಾಣಿ ಲಕ್ಷ್ಮೀದೇವಿ ಪರ್ಯಾಯವಾಗಿ ಆ ರೀತಿ ಸೂಚಿಸಿದಳು. ಎಷ್ಟಾದರೂ ಸಾಕು ತಂದೆ. ಬೇರಾರೂ ಬಂಧುಗಳಿಲ್ಲ. ಬಂದರೇನಂತೆ ಎಂದು ನಾವು ಅದಕ್ಕೇನೂ ಅಭ್ಯಂತರ ಬರಲಾರದು ಎಂದು ಹೇಳಿದ್ದೆವು. ಮತ್ತೆ ಆ ಮಾತು ಬಂದಾಗ ತಾನೆ?''

"ವಿಜಯೋನ್ಮಾದ ವೀರರನ್ನು ಅಡ್ಡದಾರಿಗೆಳೆಯುತ್ತದೆ ಎಂಬುದಕ್ಕೆ ಇದಕ್ಕಿಂತ ಬೇರೆ ನಿದರ್ಶನವಿಲ್ಲ. ಸನ್ನಿಧಾನ ನನ್ನನ್ನು ಕ್ಷಮಿಸಬೇಕು. ಈ ದುಡುಕು ಮುಂದೆ ತೊಡಕಿಗೆ ಕಾರಣವಾಗುತ್ತದೆ ಎಂದು ನನಗನ್ನಿಸತೊಡಗಿದೆ. ಸನ್ನಿಧಾನಕ್ಕೆ ನನ್ನ ಭಾವನೆ ಬಿಚ್ಚು ಮನಸ್ಸಿನಿಂದ ತಿಳಿಸಬೇಕಾದುದು ನನ್ನ ಧರ್ಮ. ತಿಳಿಸಿದ್ದೇನೆ. ಸನ್ನಿಧಾನ ಯಾವುದೇ ನಿರ್ಣಯ ಮಾಡಿದರೂ ಸಮ್ಮತ. ಈಗ ಮಾತ್ರ ನಮ್ಮಗಳ ಪ್ರಯಾಣಕ್ಕೆ ಸನ್ನಿಧಾನ ಅಪ್ಪಣೆ ಕೊಡಬೇಕು.''

"ನಾವೂ ನಿಮ್ಮೊಂದಿಗೇ ಹೊರಟುಬಿಡುತ್ತೇವೆ. ಬಾಹುಬಲಿಯ ಬಗೆಗೆ ನಾವೇ ರಾಣಿಗೆ ತಿಳಿಯಹೇಳುತ್ತೇವೆ.''

"ಒಂದು ಪುಟ್ಟ ಉಪನ್ಯಾಸದಲ್ಲಿ ಅರ್ಥವಾಗುವ ವಿಷಯವಲ್ಲ ಅದು. ಸನ್ನಿಧಾನದ ಧಮನಿಗಳಲ್ಲಿ ಹರಿಯುವುದು ಜೈನ ಸಂಸ್ಕಾರದ ರಕ್ತ. ಅಂತಹ ಸನ್ನಿಧಾನವೇ ಮನಸ್ಸು ಬದಲಾಯಿಸಿದಾಗ ಇನ್ನೂ ಹೆಚ್ಚು ಪ್ರಪಂಚ ಜ್ಞಾನವಿಲ್ಲದ ಕಿರಿಯ ರಾಣಿಗೆ ಅರ್ಥವಾಗುವುದು ಸಾಧ್ಯವೆ ?''

"ನಾವು ಧರ್ಮ ಬದಲಾಯಿಸಿದುದು ಹಾಗಾದರೆ ಪಟ್ಟಮಹಾದೇವಿಯಲ್ಲಿ ಶಾಶ್ವತವಾದ ಅಸಮಾಧಾನ ಬೇರೂರಿಸಿದೆ ಎಂದಾಯಿತು.''

"ವಿಷಯ ಎಂತಹ ಕ್ಲಿಷ್ಟವಾದುದು ಎಂಬುದು ಸನ್ನಿಧಾನಕ್ಕೆ ವೇದ್ಯವಾಗಲಿ ಎಂದು ಆ ವಿಷಯ ಹೇಳಿದನೇ ವಿನಾ ಅಸಮಾಧಾನದಿಂದಲ್ಲ. ನಾನು ಅಸಮಾಧಾನ ಪಟ್ಟಿದ್ದರೆ ಮತಾಂತರಕ್ಕೇ ಅವಕಾಶವಿರುತ್ತಿರಲಿಲ್ಲ. ಈಗ ಆ ವಿಷಯಗಳೆಲ್ಲ ಬೇಕಿಲ್ಲ. ನಾನಿನ್ನೊಂದು ಮಾತು ಹೇಳಲೆ ?''

"ಏನದು ?''

"ಕಿರಿಯ ರಾಣಿಗೆ ಏಕಾಂತದ ಸುಖ ನಿರ್ಬಾಧಿತವಾಗಿ ಆರಂಭದ ಹಲವು ಕಾಲ ದೊರೆಯಬೇಕು. ನಾವುಗಳು ಇದಿರಿಗಿದ್ದರೆ ಅವರಿಗೆ ಒಂದು ಬಗೆಯೆನಿಸಬಹುದು. ಅದರಿಂದ ರಾಜದಂಪತಿಗಳಿಬ್ಬರೇ ಈ ಯಾದವಪುರಿಯಲ್ಲಿ ಒಂದೆರಡು ಮೂರು ಮಾಸಗಳನ್ನು ಕಳೆಯುವಷ್ಟರಲ್ಲಿ, ಅಲ್ಲಿ ದೇವಮಂದಿರದ ಕೆಲಸವನ್ನೂ ಮುಗಿಸಿ, ನೂತನ ರಾಣಿಗೆ ರಾಜಧಾನಿಯ ಸ್ವಾಗತ, ವಿಜಯೋತ್ಸವ ಹಾಗು ವಿಜಯನಾರಾಯಣ ಸ್ಥಾಪನೆ ಎಲ್ಲವನ್ನೂ ಒಟ್ಟಿಗೆ ಮಾಡಿಸೋಣ. ಈ ವೇಳೆಗೆ ಶ್ರೀಮದಾಚಾರ್ಯರನ್ನೂ ಆಹ್ವಾನಿಸೋಣ.''

"ಹಾಗಾದರೆ ಹೊರಡುವವರು ಯಾರು ಯಾರು ?''

"ಎಲ್ಲರೂ. ನಾವು ಮೂವರು, ಉದಯಾದಿತ್ಯರಸರು, ಬಿಟ್ಟಿ–ಸುವ್ವಲೆಯರು, ನಮ್ಮ ಮಕ್ಕಳು, ಮತ್ತು ರೇವಿಮಯ್ಯ'' ಎಂದಳು.

"ಇಲ್ಲಿ ನಮ್ಮೊಂದಿಗೆ ?''

"ಅರಮನೆಯ ವೈದ್ಯರು ಸೋಮನಾಥ ಪಂಡಿತರು ಇರುತ್ತಾರೆ.''

"ರೇವಿಮಯ್ಯ ಇದ್ದಿದ್ದರೆ ಒಳಿತಾಗುತ್ತಿತ್ತು.''

"ಅಲ್ಲಿ ಅವನ ಅವಶ್ಯಕತೆ ಬಹಳವಿದೆ.''

"ಹಳಬರು ಯಾರಾದರೂ ಇದ್ದಿದ್ದರೆ ಒಳಿತಾಗುತ್ತಿತ್ತು."

"ಇಲ್ಲದಿರುವುದೇ ಒಳಿತು. ಏಕೆಂದರೆ ತಿರುವರಂಗದಾಸರಿಗೆ ಇಲ್ಲಿ ಪೂರ್ಣ ಸ್ವಾತಂತ್ರ್ಯವಿರುತ್ತದೆ. ಆಗ ಸನ್ನಿಧಾನ ಅಪರನ್ನು ಅರ್ಥ ಮಾಡಿಕೊಳ್ಳಲೂ ಅನುವಾಗುತ್ತದೆ."

"ಅಂದರೆ ಎಲ್ಲ ನಿರ್ಣಯ ಮಾಡಿಯೇ ವಿಷಯ ಮಂಡನೆಯೇ ?"

"ಸನ್ನಿಧಾನವೇ ಕಲಿಸಿದ ಪಾಠವಲ್ಲವೆ ?"

"ನಿನ್ನಿಷ್ಟ"

ಎರಡೇ ದಿನಗಳಲ್ಲಿ ಶಾನ್ತಲದೇವಿ ಯೋಚಿಸಿದಂತೆ ಪ್ರಯಾಣ ಸಾಗಿತು.

ದಾರಿಯಲ್ಲಿ ಬಾಹುಬಲಿ ಸಾನ್ನಿಧ್ಯದಲ್ಲಿ ಶಾನ್ತಲದೇವಿ ಎರಡು ದಿವಸ ಕಳೆದಳು. ಅದೇ ಅರ್ಚಕ ಇನ್ನೂ ಇದ್ದ. ಪಟ್ಟಮಹಾದೇವಿ ಅದೇ ಆ ಜಿನಸ್ತುತಿಯನ್ನು ಹಾಡಿದಳು.

"ಸನ್ನಿಧಾನದ ಇಂದಿನ ಈ ಸ್ತುತಿಯಲ್ಲಿ ಸಂವೇದನೆ ತುಂಬಿದಂತೆ ಭಾಸವಾಯಿತು. ಆ ಮೊದಲು ಇದ್ದ ಮುಗ್ಧಭಕ್ತಿ, ಲಾಲಿತ್ಯಕ್ಕಿಂತ ಅನುಭವಪೂರ್ಣವಾದ ಸಂವೇದನೆ ತುಂಬಿ ತೀವ್ರವಾದ ಅನುಕಂಪ ಹುಟ್ಟಿಸಿತು. ಆಗ ಆನಂದ ದೊರೆತಿತ್ತು. ಈಗ ಅನುಕಂಪ ಸ್ಪಂದಿಸುತ್ತಿದೆ" ಎಂದ ಅರ್ಚಕ.

"ಒಂದು ಹೃದಯದ ಸಂವೇದನೆ ಬೇರೊಂದು ಹೃದಯಕ್ಕೆ ಮುಟ್ಟಿದರೆ ಅದೇ ಕಲೆಯ ಪರಾಕಾಷ್ಠೆ. ನನ್ನ ಕಲೆಗೆ ಸಿದ್ಧಿಸಿಗುವ ಸೂಚನೆ ಇದು" ಎಂದಳು ಶಾನ್ತಲದೇವಿ.

"ಇದೀಗ ಅಧ್ಯಾತ್ಮಕ್ಕೂ ಕಲೆಗೂ ಹಾಕಿದ ಏಕಸೂತ್ರತೆ. ಕಲೆಯಿಂದಲೂ ಆಧ್ಯಾತ್ಮ ಸಾಧಿಸಬಹುದೆಂಬುದಕ್ಕೆ ಸನ್ನಿಧಾನದ ಮಾತು ನಿಜವಾದ ಸಾಕ್ಷಿ."

ನಂತರ ವಿಶೇಷ ಪೂಜಾದಿಗಳು ಜರುಗಿದವು. ಶಾನ್ತಲದೇವಿ ಹಾಗೂ ಉಳಿದವರೆಲ್ಲ ಬೇಗ ವೇಲಾಪುರಿಯನ್ನು ಮುಟ್ಟಿದರು. ಈ ಸಲ ಶಾನ್ತಲದೇವಿ ದಾರಿಯಲ್ಲಿ ದೋರಸಮುದ್ರಕ್ಕೆ ಹೋಗಿ ತನ್ನ ಮಾತಾಪಿತೃಗಳನ್ನು ವೇಲಾಪುರಿಗೆ ಕರೆದೊಯ್ದುಳು.

ತನ್ನ ಅನುಪಸ್ಥಿತಿಯಲ್ಲಿಯೂ ಕೆಲಸವು ಸಾಕಷ್ಟು ಸಾಗಿಸಿರುವುದನ್ನು ಗಮನಿಸಿದ ಶಾನ್ತಲದೇವಿಯ ಮನಸ್ಸಿಗೆ ಸಮಾಧಾನವಾಯಿತು.

ಉದಯಾದಿತ್ಯನಂತೂ ತನ್ನ ಕಣ್ಣನ್ನು ತಾನೇ ನಂಬದಾದ. "ಭವ್ಯ, ಕಲ್ಪನಾತೀತ" ಎಂದು ಉದ್ಗರಿಸಿದ.

ಮತ್ತೆ ಶಾನ್ತಲದೇವಿಯ ಕಾರ್ಯಕ್ರಮಗಳು ಆ ಮೊದಲಿನಂತೆ ಆರಂಭವಾದವು. ಈಗ ಉದಯಾದಿತ್ಯ ಸಹ ಮೇಲ್ವಿಚಾರಣೆಯ ಕೆಲಸದಲ್ಲಿ ತೊಡಗಿದ.

ಚಾವುಣ ನಾಟ್ಯ ಸರಸ್ವತಿಯ ವಿಗ್ರಹವನ್ನು ಕಡೆದು ಮುಗಿಸಿದ್ದ. ಅದರ ರಚನೆಯ ಬಗೆಗೆ ನಡೆದ ಚರ್ಚೆಯನ್ನೆಲ್ಲ ಶಾನ್ತಲದೇವಿ ಉದಯಾದಿತ್ಯನಿಗೆ ಹೇಳಿದಳು. "ಎಂದರೆ ಈ ನಾಟ್ಯ ಸರಸ್ವತಿಯು ಸಪ್ತ ಸ್ವರಗಳನ್ನೂ ಮೈವೆತ್ತಿ ಸೃಷ್ಟಿಗೊಂಡಿರುವಳೇನು ?" ಎಂದು ಉದಯಾದಿತ್ಯ ಕೇಳಿದ.

ಹತ್ತಿರವೇ ಇದ್ದ ಚಾವುಣ, ಸ್ಥಪತಿಯತ್ತ ನೋಡಿದ.

ಸ್ಥಪತಿ "ಇದರಲ್ಲಿ ಸ್ವರಗಳನ್ನು [illegible] ತಿಳಿದಿರುವಂತೆ ಅಳವಡಿಸುವ ಪ್ರಯತ್ನವನ್ನು ಮಾಡಲಾಗಿದೆ" ಎಂದು ಹೇಳಿದ.

"ಎಂದ ಮೇಲೆ ಸರಿಯಾಗಿರಬೇಕು" ಎಂದಳು ಶಾನ್ತಲದೇವಿ.

"ಆ ನಂಬಿಕೆಗೆ ನಾನು ಕೃತಜ್ಞ. ಆದರೆ ಅದು ಸರಿಯಾಗಿದೆಯೆಂದು ನಾನು ಧೈರ್ಯವಾಗಿ ಹೇಳಲಾರೆ. ಒಮ್ಮೆ ಅದರ ಪ್ರಯೋಗ ಮಾಡಿ ಸರಿಯೆಂದು ಸನ್ನಿಧಾನಕ್ಕೆ ತೋರಿದರೆ ಆಗ ನಮಗೆ ತೃಪ್ತಿ" ಎಂದ ಸ್ಥಪತಿ.

ಹತ್ತಿರ ಇದ್ದ ಬಿಟ್ಟಿಯಣ್ಣ, "ಇದರಲ್ಲಿರುವ ಸಪ್ತ ಸ್ವರಗಳ ಆಧಾರಷಡ್ಜವನ್ನು ಹೇಗೆ ಗುರುತಿಸಿದಿರಿ?" ಎಂದು ಕೇಳಿದ.

"ನಾರದೀಯ ಶಿಕ್ಷಾ ಗ್ರಂಥದಲ್ಲಿ ಸೂಚಿತವಾಗಿರುವಂತೆ ಸಪ್ತ ಸ್ವರಗಳನ್ನೂ ಇದರಲ್ಲಿ ಅಳವಡಿಸಲಾಗಿದೆ. ಚಾವುಣರೆ ಈ ವಿಗ್ರಹದಲ್ಲಿನ ಸ್ವರ ಸ್ಥಾನಗಳನ್ನು ಸ್ಪಂದಗೊಳಿಸಿ" ಎಂದು ಸ್ಥಪತಿ ಹೇಳಿದ.

ಚಾವುಣ ವಿಗ್ರಹದ ಒಂದು ಭಾಗವನ್ನು ತನ್ನ ಕೈಯೊಳಗಿನ ಚಾಣದಿಂದ ಮೆದುವಾಗಿ ತಾಡಿಸಿದ.

"ಮಯೂರ" ಎಂದ ಬಿಟ್ಟಿಯಣ್ಣ.

ಎರಡನೆಯ ಸ್ಥಾನವನ್ನು ಚಾವುಣ ತಾಡಿಸಿದ.

"ವೃಷಭ" ಎಂದ.

ಹೀಗೆಯೇ ತಾಡನಾನುಕ್ರಮದಲ್ಲಿಯೇ ಅಜ, ಕ್ರೌಂಚ, ಕೋಕಿಲ, ಅಶ್ವ, ಕುಂಜರ ಎಂಬುದನ್ನು ಬಿಟ್ಟಿಯಣ್ಣ ವ್ಯಕ್ತವಾಗಿ ಗುರುತಿಸಿದ.

ಶಾನ್ತಲದೇವಿಯ ಮುಖ ಸಂತಸದಿಂದ ಅರಳಿತು.

ಅದನ್ನು ಗಮನಿಸಿದ ಸ್ಥಪತಿ, ಚಾವುಣರಿಗೆ ಸಮಾಧಾನವೆನಿಸಿತು.

ಉದಯಾದಿತ್ಯ ನಾಟ್ಯ ಸರಸ್ವತಿಯನ್ನು ತದೇಕ ಚಿತ್ತದಿಂದ ಈಕ್ಷಿಸುತ್ತಿದ್ದ. ಪ್ರಯೋಗ ಮುಗಿದ ಆ ಸಂಬಂಧದ ಮಾತು ಮುಗಿದ ಮೇಲೆ ಅವನು, "ಈ ನಾಟ್ಯ ಸರಸ್ವತಿ ಮುಖದ ಹೋಲಿಕೆ ಎಲ್ಲ ಪಟ್ಟಮಹಾದೇವಿಯವರಂತೆ ಇದೆಯೆನಿಸುತ್ತದೆ" ಎಂದ.

"ಸ್ವಲ್ಪ ಛಾಯೆ ಇದೆ. ಅದಕ್ಕೆ ಕಾರಣ, ಚಾವುಣರು ಮೊದಲು ರೂಪಿಸಿದ ಚಿತ್ರಕ್ಕೆ ನನ್ನದೇ ಬಾಲ್ಯದ ಚಿತ್ರವನ್ನು ಮೂಡಿಸಿಕೊಂಡಿದ್ದರಿಂದ ಆ ಛಾಯೆ ಉಳಿದುಕೊಂಡಿದೆ. ಏಕೆಂದರೆ ಅವರು ಚಿತ್ರಿಸಿದ್ದ ಚಿತ್ರ ಉಳಿದೆಲ್ಲ ಭಾಗಗಳಲ್ಲಿ ಸರಿಯಾಗಿದ್ದರೂ ಮುಖ ತುಂಬ ಎಳಸು ಎನ್ನಿಸುತ್ತಿತ್ತು. ಅದಕ್ಕೆ ಪ್ರೌಢತೆ ಕೊಡಿ ಎಂದು ಸೂಚಿಸಿದ್ದೆ" ಎಂದಳು ಶಾನ್ತಲದೇವಿ.

"ಇದರ ಬಗೆಗೆ ಪಟ್ಟಮಹಾದೇವಿಯವರ ಅಭಿಪ್ರಾಯ" ಎಂದು ಸ್ಥಪತಿ ಮೆಲ್ಲನುಸುರಿದ.

"ಇದನ್ನು ದೇವಮಂದಿರದ ಉತ್ತರ ದ್ವಾರಕ್ಕೆ ಅಳವಡಿಸುವುದೆಂದು ಯೋಚಿಸಿತ್ತಲ್ಲವೆ ?" ಎಂದಳು.

"ಸುತ್ತಲೂ ಬರುವ ವಿಗ್ರಹಗಳು ಎಷ್ಟಾಗಿವೆ ?" ಎಂದು ಬಿಟ್ಟಿಯಣ್ಣ ಕೇಳಿದ.

"ಕೆಲವು ಆಗಿವೆ. ಒಪ್ಪಿಗೆಯಾದವನ್ನು ನಾನು ಬೇರೆ ಬೇರೆ ರೂವಾರಿಗಳಿಗೆ ಕಡೆಯಲು ಕೊಟ್ಟಿದ್ದೆ. ಅವನ್ನು ಈಗ ನೋಡಬಹುದು. ಆದರೆ ಇನ್ನೂ ಕೆಲವು ಬೇಕಾಗಿವೆ. ಅವುಗಳ ರೂಪಚಿತ್ರ, ಕಲ್ಪನೆಗೆ ಮೂಡಿ ಬಂದಿಲ್ಲ. ಏನು ಮಾಡುವುದೆಂದು ತೋರದೆ ಸನ್ನಿಧಾನದ ಆಗಮನ ನಿರೀಕ್ಷೆಯಲ್ಲಿಯೇ ಇದ್ದೆ.

ಈಗ ಸನ್ನಿಧಾನ ಹಿಂತಿರುಗಿರುವುದರಿಂದ ಮಹಾಸನ್ನಿಧಾನ ಇಲ್ಲಿಗೆ ಆಗಮಿಸುವುದರೊಳಗೆ ಅವುಗಳನ್ನು ಮಾಡಿ ಮುಗಿಸಬೇಕು. ಅದಕ್ಕೆ ಸನ್ನಿಧಾನ ನನಗೆ ಏಕಾಂತ ಸಂದರ್ಶನವನ್ನು ದಯಪಾಲಿಸಬೇಕು'' ಎಂದ.

''ನಿಮ್ಮ ಆ ಮನವಿ ನಾವು ಯಾದವಪುರಿಗೆ ಹೋಗುವ ಮುನ್ನವೇ ಬಂದಿತ್ತು. ಆದರೆ ಆ ಬಗೆಯ ಏಕಾಂತದ ಸಂದರ್ಶನವನ್ನು ಪೊಯ್ಸಳ ಅರಮನೆಯ ಹೆಂಗಸರು ನೀಡುವಂತಿಲ್ಲ. ಮಹಾಸನ್ನಿಧಾನ ಒಪ್ಪಿದರೆ ಆ ವಿಷಯ ಬೇರೆ'' ಎಂದಳು ಶಾನ್ತಲದೇವಿ.

''ಆವರೆಗೆ ಕಾಯುವಂತಿಲ್ಲ. ಸನ್ನಿಧಾನ ಒಪ್ಪಿದರೆ ನಾನು ಕೃತಾರ್ಥನಾಗುತ್ತೇನೆ. ಬಹುಶಃ ಅದರಿಂದ ನನ್ನ ಬಾಳು ಸಹ ಹೊಸ ಉತ್ಸಾಹವನ್ನು ರೂಪಿಸಿಕೊಳ್ಳಲು ಸಾಧ್ಯವಾಗಬಹುದು. ಈವರೆಗೆ ನನ್ನ ಹೃದಯದಲ್ಲಿ ತುಂಬಿಕೊಂಡಿದ್ದ ಶೂನ್ಯವನ್ನು ದೂರೀಕರಿಸಲು ಸಹ ಆ ಏಕಾಂತದ ಸಂದರ್ಶನ ನನಗೆ ನೆರವಾಗಬಹುದು. ನನ್ನಲ್ಲಿ ನಂಬಿಕೆ ಇದ್ದರೆ ಸನ್ನಿಧಾನ ಆ ಸಂದರ್ಶನವನ್ನು ದಯಪಾಲಿಸಬೇಕು.''

''ಪಟ್ಟಮಹಾದೇವಿಯವರೊಂದಿಗೆ ಯಾರಿದ್ದರೂ ನಿಮ್ಮ ಯಾವ ಗುಟ್ಟೂ ಬಯಲಾಗುವುದಿಲ್ಲ. ಅದರಿಂದ ಯಾರಿದ್ದರೆ ನಿಮಗೇನು ? ಅವರಲ್ಲಿ ಏನನ್ನು ನಿವೇದಿಸಬೇಕೆಂದು ನೀವು ಬಯಸಿದ್ದೀರೋ, ಧೈರ್ಯವಾಗಿ ಹೇಳಿ ಸ್ಥಪತಿಗಳೆ'' ಎಂದು ಉದಯಾದಿತ್ಯ ಸೂಚಿಸಿದ.

''ನನಗೆ ಸಂಪ್ರದಾಯ ಗೊತ್ತಿಲ್ಲವೆಂದು ಅರಸರಾಗಲಿ ಪಟ್ಟಮಹಾದೇವಿಯವರಾಗಲಿ ಭಾವಿಸಬಾರದು. ಈ ನನ್ನ ಬೇಡಿಕೆಯಲ್ಲಿ ನನಗೆ ಯಾವುದೇ ಬಗೆಯ ದುರುದ್ದೇಶವಿಲ್ಲ. ಕರುಣಿಸಿದರೆ ನನ್ನ ಭಾಗ್ಯ ಎಂದುಕೊಳ್ಳುತ್ತೇನೆ. ಇಲ್ಲದಿದ್ದರೆ ನನ್ನ ಬಾಳಿಗೆ ಬೇರೆ ಭವಿಷ್ಯವಿಲ್ಲ. ಈಗಿನ ರೀತಿಯೇ ಕಟ್ಟಿಟ್ಟ ಬುತ್ತಿ ಎಂದು ಭಾವಿಸಿಕೊಂಡು ಸುಮ್ಮನಾಗಿಬಿಡುತ್ತೇನೆ'' ಎಂದ.

''ನಿಮ್ಮ ಭವಿಷ್ಯ ಸುಂದರವಾಗಲು ನನ್ನ ನೆರವು ಸದಾ ಇರುತ್ತದೆ. ಆದರೆ ಲೌಕಿಕಗಳನ್ನು ನಾನು, ನನ್ನ ಸ್ಥಾನವತಿಯಿಂದ ಮೀರಲಾರದವಳು. ಅದರಿಂದ, ಇಲ್ಲಿ ಔಚಿತ್ಯದ ಪ್ರಶ್ನೆ ಬಂದಿರುವುದರಿಂದ, ಅರಮನೆಯ ನಡವಳಿಕೆಯ ರೀತಿಗೆ ಭಿನ್ನವಾದ ಬೇಡಿಕೆ ನಿಮ್ಮದಾಗಿರುವುದರಿಂದ ನಿಂತ ನಿಲುವಿನಲ್ಲಿ ನಾನು ಏನನ್ನೂ ಹೇಳಲಾರೆ. ನನ್ನ ಸ್ಥಾನದಲ್ಲಿ ನಾನು ನನ್ನ ಸ್ವಂತ ಅಂತರಂಗಕ್ಕೆ ಪರಿಪೂರ್ಣ ತೃಪ್ತಿಕೊಡುವಂತೆ ನಡೆದುಕೊಂಡುದಷ್ಟರಿಂದಲೇ ಸಮಾಧಾನ ಮಾಡಿಕೊಳ್ಳುವಂತಿಲ್ಲ. ನನ್ನ ನಡವಳಿಕೆಗೆ ಯಾವತ್ತಣಿಂದಲೂ ಬೇರೆ ಯಾವ ಧ್ವನಿಯೂ ಹುಟ್ಟಬಾರದ ರೀತಿಯಲ್ಲಿ ನನ್ನ ನಡವಳಿಕೆ ಇರಬೇಕು. ಅದರಿಂದ ಇದು ಆಳವಾಗಿ ಯೋಚಿಸಿ ನಿರ್ಣಯಿಸಬೇಕಾದ ಕಾರ್ಯ. ಆಲೋಚಿಸಿ ತಿಳಿಸಲಾಗುತ್ತದೆ. ಈಗ ಸಿದ್ಧವಾಗಿರುವ ಆ ಮೂರ್ತಿಗಳನ್ನು ನೋಡೋಣ ನಡೆಯಿರಿ'' ಎಂದಳು ಶಾನ್ತಲದೇವಿ.

ಮೊದಲು ದಾಸೋಜರು ಕೃತಿ ನಿರ್ಮಿಸುತ್ತಿದ್ದ ಹಂದರದತ್ತ ಸಾಗಿದರು. ಕೇಶ ಶೃಂಗಾರ, ಕಿರಾತಿಯರ ಮೂರ್ತಿಗಳು ಸಿದ್ಧವಾಗಿದ್ದವು. ಇನ್ನೊಂದನ್ನು ಅವರು ಸ್ಥೂಲವಾಗಿ ರೂಪಿಸಿ ಅದಕ್ಕೆ ಚೊಕ್ಕ ಆಕಾರ, ಹೊಳಪು, ಭಾವಾದಿಗಳನ್ನು ತುಂಬ ಬೇಕಾಗಿತ್ತು. ಸಿದ್ಧವಾಗಿದ್ದ ಮೂರ್ತಿಗಳು ಪಟ್ಟಮಹಾದೇವಿಯ ಮೆಚ್ಚುಗೆಯನ್ನು ಪಡೆದವು. ಅರೆ ಮುಗಿದಿದ್ದ ಮೂರ್ತಿಯ ವಸ್ತ್ರವನ್ನು ಕಪಿಯೊಂದು ದೂರ ನಿಂತು ಸೆಳೆಯುತ್ತಿರುವಂತೆ ರೂಪಿಸಲಾಗಿತ್ತು. ಕಪಿಯ ಚೇಷ್ಟೆಗೆ ಪ್ರತಿಕ್ರಿಯೆ ಎಂಬಂತೆ ಅದನ್ನು ತಾಡಿಸಲು ಬಲಗೈಯನ್ನು ಮೇಲೆತ್ತಲಾಗಿತ್ತು. ''ಇದರ ಉದ್ದೇಶವೇನು ?'' ಎಂದು ಶಾನ್ತಲದೇವಿ ಕೇಳಿದಳು.

''ಚಿತ್ರರಚಯಿತರು ವಿವರಿಸಬೇಕು'' ಎಂದ ದಾಸೋಜ.

ಸ್ಥಪತಿಗೆ ತುಸು ಸಂಕೋಚವೆನಿಸಿತು. ಈ ದೇವಮಂದಿರಲ್ಲಿ ಅದೆಷ್ಟೋ ಮೂರ್ತಿಗಳು ನಗ್ನ ರೂಪವನ್ನು ಹೊಂದಿವೆ. ಅವುಗಳಾವುಗಳ ಬಗೆಗೂ ಕೇಳದೆ ಇದರ ಬಗೆಗೇಕೆ ಪ್ರಶ್ನೆ ಎಂದು ಅವನಿಗನ್ನಿಸಿತು.

"ಶರೀರದ ನಗ್ನ ಸೌಂದರ್ಯ ನೋಡ ಬಯಸುವ ಮಾನವ ಚಪಲತೆ ಇಲ್ಲಿಯ ಕಪಿಕ್ರಿಯೆಯಲ್ಲಿ ಸಾಂಕೇತಿಕವಾಗಿ ರೂಪಿತವಾಗಿದೆ."

"ಅಂದರೆ ಇದು ನಗ್ನ ಸ್ತ್ರೀಯನ್ನು ತೋರಿಸಲು ಮಾಡಿದ ಪ್ರಯತ್ನವಲ್ಲ."

"ಹಾಗಿದ್ದರೆ ಒಂದು ನಗ್ನ ಸ್ತ್ರೀ ರೂಪಿಸಲು ಕಷ್ಟವೇನಿತ್ತು ? ಇಲ್ಲಿಯ ಈ ಕಪಿ ಗಂಡಿನ ಆಸೆಗೆ ಸಾಂಕೇತಿಕ ಸ್ವರೂಪ ಎಂತಲೇ ಅದರ ಆಕಾರ ಸಹ ಪುಟ್ಟದು. ಸಾಂಕೇತಿಕ."

"ಆದರೆ ಈ ಕಪಿಯ ಕ್ರಿಯೆ ಆ ಹೆಂಗಸಿನ ಮೇಲೆ ಏನು ಪ್ರತಿಕ್ರಿಯೆ ಮೂಡಿಸುತ್ತದೆ ಎಂಬುದು ಈ ಶಿಲ್ಪದಲ್ಲಿ ಮೂಡಬೇಕಲ್ಲವೆ ?" ಎಂದು ಶಾನ್ತಲದೇವಿ ಕೇಳಿದಳು.

"ಕಪಿ ಕ್ರಿಯೆಯಿಂದ ಶರೀರ ನಾಚುತ್ತದೆ. ಮನಸ್ಸಿನಲ್ಲಿ ಕೋಪ ಹುಟ್ಟುತ್ತದೆ."

"ಅದನ್ನು ರೂಪಿಸಿದರೆ ಇದು ಕ್ರಿಯಾತ್ಮಕ ಶಿಲ್ಪವಾಗುತ್ತದೆ. ಬರೀ ಭಂಗಿಯಾಗುವುದಿಲ್ಲ."

"ಪಟ್ಟಮಹಾದೇವಿಯವರ ಆಶಯವನ್ನು ದಾಸೋಜರು ಸಾರ್ಥಕಗೊಳಿಸುತ್ತಾರೆ ಎಂಬ ನಂಬಿಕೆ ನನಗಿದೆ" ಎಂದ ಸ್ಥಪತಿ.

"ಅಪ್ಪಣೆ" ಎಂದು ದಾಸೋಜ ತುಸು ತಲೆ ಬಾಗಿಸಿದ.

ಅವನ ಮನಸ್ಸಿನಲ್ಲಿ ಶಾನ್ತಲದೇವಿಯ ಮಾತು ಮತ್ತೆ ಮತ್ತೆ ಮರುಕಳಿಸುತ್ತಿತ್ತು. "ಕಲೆ ಬರೀ ಭಂಗಿಯಲ್ಲಿಲ್ಲ. ಅದು ಕ್ರಿಯಾತ್ಮಕವಾಗಿದ್ದಾಗ ಕಲೆ ಮೂಡುತ್ತದೆ" ಎಂಬ ಭಾವ ಅವನ ಮನಸ್ಸಿನಲ್ಲಿ ನಿಂತಿತು.

ಹಾಗೆಯೇ ಗದುಗಿನ ರೂವಾರಿ ಮಲ್ಲಿಯಣ್ಣನವರು ರೂಪಿಸಿದ್ದ ವೇಣುಧರೆಯನ್ನ, ರೂವಾರಿ ಜಗದಳ ಕಾಟೋಜನ ಪುತ್ರ, ಸರಸ್ವತಿ ಪಾದ ಕಮಲದುಂಬಿ ಎಂದು ಪ್ರಸಿದ್ಧನಾದ ನಾಗೋಜನ ಲಾಸ್ಯಮನೋಹರೆಯನ್ನ, ರೂವಾರಿ ಬೇಚಮನ ಡಮರು ನೃತ್ಯವನ್ನ, ಡಮರು ನೃತ್ಯ ಬೇರೆ ಬೇರೆ ಭಂಗಿಯಲ್ಲಿ ರೂಪಿಸಿದ ರೂವಾರಿ ಮಲ್ಲಣ್ಣನ ಶಿಲ್ಪವನ್ನ, ಹಾಗೆಯೇ ಬಿರುದ ರೂವಾರಿ ಗಂಡಗತ್ತರಿ ಎಂದು ಹೆಸರಾದ ಪದರಿ ಮಲ್ಲೋಜ, ಬಿರುದ ರೂವಾರಿ ಮುಖತಿಳಕ ಎಂದು ಪ್ರಸಿದ್ಧನಾದ ವರ್ಧಮಾನಾಚಾರಿ, ಕಲಿಯುಗ ವಿಶ್ವಕರ್ಮ ಎಂದು ಖ್ಯಾತನಾದ ಮಾಸನ, ರೂವಾರಿ ಪುಲಿ ಎಂದು ಹೆಸರುಗಳಿಸಿದ ಕುಮಾರಮಾಚಾರಿ, ಬಿರುದ ರೂವಾರಿಭ ಕಂಠೀರವನಾದ ಬಾಲರದೇವ, ಬಿರುದ ರೂವಾರಿಗಳ ಮಕುಟಮಣಿಯಾದ ಗಂಗಾಚಾರಿ ಹಾಗೂ ಅಷ್ಟು ಪ್ರಖ್ಯಾತರಲ್ಲದ ಆದರೂ ಶ್ರೇಷ್ಠ ಶಿಲ್ಪಗಳಾದ ಗುಮ್ಮ ಬೀರಣ, ಕಲ್ಕಣಿ ನಾಡಿನ ಮಾಚೋಜ, ಗಂಗಾಚಾರಿಯ ಸೋದರ ಕಾಂವಾಚಾರಿ, ಭಂಡಾರಿ ಮಧುವಣ್ಣ, ಯಲ್ಲಣನ ಮಗ ಮಸದ ಮೊದಲಾದ ರೂವಾರಿಗಳು ಕಡೆದಿದ್ದ, ಶುಕಭಾಷಿಣಿ, ತಾಂಡವೇಶ್ವರಿ, ಗಾನಲೋಲೆ, ವೀಣಾಪಾಣಿ, ನಗ್ನಪ್ರಿಯೆ, ಹಾವವಿಲಾಸಿನಿ, ಅಲಂಕಾರ ಪ್ರಿಯೆ, ದರ್ಪಣಾ ಮೋದೆ, ಕೊರವಂಜಿ, ನಾಗವೀಣಾಪ್ರಿಯೆ, ಶಕುನಶಾರದೆ, ಫಲಪುಳಕಿತೆ, ಮೊದಲಾದ ಮೂರ್ತಿಗಳನ್ನು ನೋಡಿ ಎಲ್ಲರೂ ಮೆಚ್ಚಿಕೆಯನ್ನು ವ್ಯಕ್ತಪಡಿಸಿದರು.

“ಸ್ಥಪತಿಗಳೆ, ಈ ವಿಗ್ರಹಗಳ ಜೋಡಣೆಯಿಂದ ದೇವಮಂದಿರದ ಹೊರಮೈ, ಅಲಂಕಾರ ಮಾಡಿಕೊಂಡ ಸುಂದರಿಯಂತೆ ಹೆಚ್ಚು ಆಕರ್ಷಕವೂ ಜೀವಂತವೂ ಎನ್ನಿಸುತ್ತದೆ'' ಎಂದು ಉದಯಾದಿತ್ಯ ಹೇಳಿದ.

“ಅಲಂಕಾರ ವೈವಿಧ್ಯಮಯವೂ ಕಲಾಪೂರ್ಣವೂ ಆದಾಗ ಅಲ್ಲಿ ಜೀವಂತಿಕೆ ರೂಪುಗೊಳ್ಳುತ್ತದೆ. ಈಗಿನ್ನೂ ಪರಿಕರಗಳು ಸಿದ್ಧವಾಗಿದೆ. ಅದು ಪರಿಪೂರ್ಣವಾಗ ಬೇಕಾದರೆ ಇನ್ನೂ ಕೆಲವು, ಪಟ್ಟಮಹಾದೇವಿಯವರು ಸೂಚಿಸಿದಂತೆ ಕ್ರಿಯಾತ್ಮಕವಾದ ಮೂರ್ತಿಗಳು ಆಗಬೇಕು ಅದಕ್ಕೆ ಸಲಹೆಯನ್ನು ಅವರಿಂದಲೇ ನಿರೀಕ್ಷಿಸುತ್ತಿದ್ದೇವೆ'' ಎಂದು ಸ್ಥಪತಿ ಹೇಳಿದ.

“ಆಗಲಿ, ಮತ್ತೊಮ್ಮೆ ಆ ವಿಚಾರ ಮಾಡೋಣ. ವೇಳೆ ಕಳೆದುದೇ ಗೊತ್ತಾಗಲಿಲ್ಲ ಆರೋಗಣೆಯ ಸಮಯ ಸಹ ಮೀರಿ ಹೋಯಿತು'' ಎಂದಳು ಶಾನ್ತಲದೇವಿ.

“ರೇವಿಮಯ್ಯ ಬಂದು ಆಗಲೇ ಅರ್ಧ ಪ್ರಹರವಾಗಿರಬಹುದು'' ಎಂದು ಜೊತೆಯಲ್ಲಿ ಇದ್ದ ಬಿಟ್ಟಿಯಣ್ಣ ಹೇಳಿದ.

“ನಾನು ಗಮನಿಸಲೇ ಇಲ್ಲ'' ಎಂದು ಶಾನ್ತಲದೇವಿ ಅವನತ್ತ ನೋಡಿ, “ನಡಿ ರೇವಿಮಯ್ಯ. ಮಕ್ಕಳು ಕಾಯುತ್ತಿರಬೇಕು ಪಾಪ'' ಎಂದು ಅರಮನೆಯತ್ತ ಹೊರಟಳು. ಉದಯಾದಿತ್ಯ, ಬಿಟ್ಟಿಯಣ್ಣ ಮತ್ತು ರೇವಿಮಯ್ಯ ಅವಳನ್ನು ಹಿಂಬಾಲಿಸಿದರು.

# ೯. ಹೊರೆ ಹಗುರಾಯಿತು

ಸ್ಥಪತಿಯು ಬಯಸಿದ ಏಕಾಂತ ಸಂದರ್ಶನದ ಬಗೆಗೆ ಅಂತಃಪುರದಲ್ಲಿ ಶಾನ್ತಲದೇವಿ ವಿಚಾರ ವಿನಿಮಯ ಮಾಡಿದಳು. ಅದರ ಬಗೆಗೆ ಮನದೆರೆದು ಎಲ್ಲರೂ ತಮ್ಮ ತಮ್ಮ ಅಭಿಪ್ರಾಯ ಸೂಚಿಸಿದ ಮೇಲೆ, ಈ ಕೆಲಸಕ್ಕೆ ತೊಡಗಿದಾಗಿನಿಂದ ಸ್ಥಪತಿ ನಡೆದುಕೊಂಡ ರೀತಿ, ಅವನಲ್ಲಿ ಕಂಡು ಬಂದ ಕೆಲವು ಬದಲಾವಣೆಗಳನ್ನು ಗುರುತಿಸಿದ ವಿಷಯಗಳನ್ನೆಲ್ಲವನ್ನೂ ಶಾನ್ತಲದೇವಿ ವಿವರಿಸಿದ ಮೇಲೆ ಪಟ್ಟಮಹಾದೇವಿಯವರು ಸಂದರ್ಶನ ನೀಡಬಹುದೆಂಬ ಅಭಿಪ್ರಾಯ ರೂಪಿತವಾಯಿತು. ಮಹಾರಾಜ ಉಪಸ್ಥಿತನಿದ್ದಿದ್ದರೆ ಅವನೊಂದಿಗೆ ವಿಚಾರಮಾಡಿ ಈ ವಿಷಯವನ್ನು ಸುಲಭವಾಗಿ ಇತ್ಯರ್ಥ ಪಡಿಸಬಹುದಾಗಿತ್ತು. ಆದರೆ ಅವನಿಲ್ಲದಿರುವುದರಿಂದ ತನ್ನ ಯಾವ ಕ್ರಿಯೆಯೂ ಬಣ್ಣ ಕಟ್ಟಿದ ರೀತಿಯಲ್ಲಿ ಅವನ ಕಿವಿಗೆ ಮುಟ್ಟಬಾರದೆಂದು ಶಾನ್ತಲದೇವಿ ಈ ರೀತಿ ಎಲ್ಲರೊಡನೆ ಚರ್ಚಿಸಿದಳು.

ಇತ್ಯರ್ಥವಾದ ಮೇಲೆ ಅದರಂತೆ ಸ್ಥಪತಿಗೆ ಪಟ್ಟಮಹಾದೇವಿಯೊಂದಿಗೆ ಏಕಾಂತ ಸಂದರ್ಶನ ದೊರಕಿತು. ವಾಸ್ತವವಾಗಿ ಅದು ಲಭ್ಯವಾಗಲಾರದೆಂದೇ ಅವನು ಅಂದು ಕೊಂಡಿದ್ದ. ಅದು ಲಭ್ಯವಾದುದರಿಂದ ಅವನಿಗೆ ಅತೀವ ಸಂತೋಷವಾಗಿತ್ತು. ಅವನಲ್ಲಿ ಉತ್ಸಾಹ ತುಂಬಿ ತುಳುಕುತ್ತಿತ್ತು. ಅವರ ಸಂದರ್ಶನ ಮನ್ತ್ರಣಸಾಲೆಯಲ್ಲಿ ವ್ಯವಸ್ಥಿತವಾಗಿತ್ತು. ದ್ವಾರದ ಹೊರಗೆ ಚಟ್ಟಲದೇವಿ. ರೇವಿಮಯ್ಯ ಇದ್ದರು.

ಈ ವಿಶೇಷ ಸಂದರ್ಶನಕ್ಕೆ ಮನ್ತ್ರಣಸಾಲೆಯ ಆಸನಾದಿಗಳನ್ನೆಲ್ಲ ಸ್ಥಳಾಂತರಿಸಿ ಪಟ್ಟಮಹಾದೇವಿಗೊಂದು, ಸ್ಥಪತಿಗೊಂದು ಎಂದು ಎರಡೇ ಆಸನಗಳನ್ನು ಇಡಲಾಗಿತ್ತು. ವಿಶಾಲವಾದ ಆ ಮನ್ತ್ರಣ ಸಾಲೆಯಲ್ಲಿ ಆಗ ಎರಡೇ ಆಸನಗಳಿದ್ದುದರಿಂದ ಏನೋ ಒಂದು ತರಹ ಕಳೆ ಕಳೆದುಕೊಂಡ ಮುಖದಂತೆ ಆ ತಾಣ ಕಾಣುತ್ತಿತ್ತು. ಎರಡೂ ಆಸನಗಳ ನಡುವೆ ಸಾಕಷ್ಟು ಅಂತರವಿತ್ತು. ಮತ್ತು ಸ್ಥಪತಿಯ ಆಸನ ಬಾಗಿಲಿಗೆ ಸನಿಯದಲ್ಲಿ ಇತ್ತು.

ಸ್ಥಪತಿ ಪ್ರವೇಶಿಸುವುದಕ್ಕೆ ಮುಂಚೆಯೇ ಪಟ್ಟಮಹಾದೇವಿ ಅಲ್ಲಿ ಆಸನಾಸೀನಳಾಗಿದ್ದಳು. ಸ್ಥಪತಿ ಒಳಗೆ ಪ್ರವೇಶಿಸಿ ವಂದಿಸಿದ.

"ಕೂಡಿ" ಎಂದು ಶಾನ್ತಲದೇವಿ ಆಸನವನ್ನು ತೋರಿಸಿದಳು.

ಅವನು ಕುಳಿತ. ಅವನ ಕೈಯಲ್ಲಿ ಕಡತಗಳು ಇದ್ದವು. ಅವುಗಳನ್ನು ತನ್ನ ತೊಡೆಯ ಮೇಲೆ ಇಟ್ಟುಕೊಂಡು ತನ್ನ ಬದಿಗಿದ್ದ ಬಾಗಿಲಿನತ್ತ ನೋಡಿದ.

"ಬಾಗಿಲು ಭದ್ರವಾಗಿದೆ. ನೀವು ಹೇಳಬಯಸಿದ ಯಾವ ವಿಚಾರವೂ ಬೇರಾರಿಗೂ ಕೇಳಿಸುವುದಿಲ್ಲ. ಅದರಿಂದ ಸಂಕೋಚ ಪಡದೆ ಹೇಳಿ'' ಎಂದಳು ಶಾನ್ತಲದೇವಿ.

"ಸನ್ನಿಧಾನ ದಯಪಾಲಿಸಿದ ಈ ಸಂದರ್ಶನಕ್ಕೆ ನಾನು ತುಂಬ ಕೃತಜ್ಞ.''

"ಅದೆಲ್ಲ ಇರಲಿ. ವಿಷಯ ಏನು ?''

"ನನ್ನ ಹೃದಯ ಒಂದು ಭಾರಿ ಹೊರೆಯನ್ನು ಹೊತ್ತಿದೆ. ಆ ಹೊರೆ ಇಳಿಯಬೇಕಾದುದು ಸನ್ನಿಧಾನದ ಇದಿರಿನಲ್ಲಿಯೇ ಎಂದು ನನ್ನಲ್ಲಿ ಭಾವನೆ ಮೂಡಿ ಕ್ರಮೇಣ ಅದು ಬಲವಾಗತೊಡಗಿತು. ಅದರೂ ವಿಚಾರವನ್ನು ಎತ್ತಲು ಸಹ ನನ್ನಲ್ಲಿ ಧೈರ್ಯವಿರಲಿಲ್ಲ, ಆದರೆ ಮಾಯಣ–ಚಟ್ಟಲೆಯರ ಬಾಳು ನಿಮ್ಮಿಂದ ಸುಂದರವಾಗಿ ಮರುರೂಪಿತವಾದ ರೋಮಾಂಚಕ ವಿಷಯ ತಿಳಿದು ಅವರೊಡನೆ ಎಷ್ಟೋ ವಿಷಯ ಚರ್ಚಿಸಿದ ಮೇಲೆ ನನ್ನಲ್ಲಿದ್ದ ಸನ್ನಿಧಾನದ ಏಕಾಂತ ಸಂದರ್ಶನದ ಆಸೆ ಬಲವಾಯಿತು.''

"ಅಂದರೆ ನಿಮ್ಮ ದಾಂಪತ್ಯ ಜೀವನದಲ್ಲಿಯೂ ಕಹಿ ಬಂದಿದೆಯೇ ?''

"ಕಹಿಯಲ್ಲ. ಅದು ಹಾಲಾಹಲ.'' ಅವನ ತುಟಿ ಕಂಪಿಸ ತೊಡಗಿತು. ಮುಖ ದುಮುಗುಟ್ಟ ತೊಡಗಿತು.

"ಅಂದರೆ ಅದು ಅಂತಹ ಭಯಂಕರವಾದುದೇ ?''

"ವಿಷಯ ನಿವೇದಿಸುತ್ತೇನೆ. ಸನ್ನಿಧಾನವೇ ನಿರ್ಣಯಿಸಬೇಕು.''

"ಹಾಗಾದರೆ ಸ್ವವಿಷಯ ಎತ್ತಿದರೆ ಕೈಕೊಂಡ ಕೆಲಸ ಬಿಟ್ಟು ಹೊರಟುಹೋಗುತ್ತೇನೆ ಎಂದು ನೀವು ಹೇಳಿದ್ದ ಮಾತು ?''

"ಅದು ವ್ಯರ್ಥದ ಮಾತು ಈಗ. ಅಂತರಂಗದ ಹೊರೆಯಿಳಿಯದೆ ಎಲ್ಲಿದ್ದರೂ ಒಂದೆ. ಅದರ ವಿಷಯ ಬಾಯಿಬಿಡುವುದೇ ಬಣ್ಣಗೇಡು ಎಂಬ ಭಾವನೆ ಮೂಡಿದ್ದರಿಂದ, ಅದು ನೀತಿ ಬಾಹಿರವಾದುದರಿಂದ ಆಡಿ ನನ್ನ ಬಗೆಗೆ ಅಗೌರವ ತಂದುಕೊಳ್ಳಲು ನಾನು ಇಷ್ಟಪಡುತ್ತಿರಲಿಲ್ಲ.''

"ಅದೇ ನೀವು ಮಾಡಿದ ಭಾರಿತಪ್ಪು. ಒಳಗೇ ಅದುಮಿಟ್ಟು ಅದು ಕೊಳೆತು ನಾರುವವರೆಗೆ ಅದಕ್ಕೆ ಆಶ್ರಯವಿತ್ತರೆ ನಿಮಗೆ ಎಂತಹ ನೆಮ್ಮದಿ ಸಿಕ್ಕೀತು ?''

"ಸನ್ನಿಧಾನದ ಮಾತು ನಿಜ. ಅದರ ಅರಿವು ನನಗಿರಲಿಲ್ಲವಲ್ಲ. ಯಾವುದೋ ಉನ್ಮಾದ ನನ್ನಲ್ಲಿ ಆವರಿಸಿ ನಾನು ಸಂಸಾರ ತ್ಯಾಗ ಮಾಡಿಬಿಟ್ಟೆ. ಆ ಸುದ್ದಿ ಯಾರಿಗೂ ತಿಳಿಯಬಾರದೆಂದು. ತಿಳಿದರೆ ನಾನು ಉಳಿದವರ ಕಣ್ಣಲ್ಲಿ ಸಣ್ಣವನಾಗುತ್ತೇನೆ ಎನ್ನಿಸಿತು. ಅದರೆ ಈಗ ಇಲ್ಲಿಗೆ ಬಂದ ಮೇಲೆ ಅನೇಕ ವಿಷಯಗಳು ತಿಳಿದು, ನಾನು ಮಾಡಿದುದು ವಿವೇಕವಲ್ಲ ಎನ್ನಿಸಿದೆ. ಅದರಿಂದ ನನ್ನ ಸ್ವವಿಷಯವನ್ನು ಈಗ ಸನ್ನಿಧಾನಕ್ಕೆ ತಿಳಿಸಿ ನನ್ನ ಹೊರೆಯನ್ನು ಇಳಿಸಿಕೊಳ್ಳಬೇಕೆಂದಿದ್ದೇನೆ.''

"ನೀವು ಸಂಸಾರ ತ್ಯಾಗ ಮಾಡಲು ಇದ್ದ ಅಂತಹ ಪ್ರಬಲವಾದ ಕಾರಣವೇನು ?''

"ನನ್ನ ಪತ್ನಿಯ ಶೀಲಗೆಟ್ಟ ನಡತೆ.''

"ಆ ಬಗೆಗೆ ನಿಮಗೆ ಖಚಿತವಾದ ಸಾಕ್ಷಿ ಇದೆಯೆ ?''

"ಇಲ್ಲದೆ ನಾನು ಸಂಸಾರ ತ್ಯಾಗ ಮಾಡುವಷ್ಟು ಮೂರ್ಖನಾದೇನೆಯೆ ?''

"ಆಯಿತು. ಒಪ್ಪಿಕೊಳ್ಳೋಣ. ಆದರೆ ಇದರಿಂದ ನಿಮಗಾದ ಲಾಭವೇನು ?''

"ಇವನಿಗ ಹೇಸಿಗೆಯನ್ನು ನೋಡುವುದು ನನ್ನಿಂದ ಅಸಾಧ್ಯವಾಯಿತು. ನಾನು ಸಂಸಾರ ತ್ಯಾಗ ಮಾಡದೆ ಇದ್ದಿದ್ದರೆ ಕೊಲೆಗಡುಕನಾಗಿ ಬಿಡುತ್ತಿದ್ದೆ. ಆ ದೋಷದಿಂದ ನಾನು ವಿಮುಕ್ತಿಯನ್ನು ಪಡೆದುಕೊಂಡೆ.''

"ನಿಜವಾಗಿ ಅದೇನೋ ಒಳ್ಳೆಯದೇ. ನಿಮ್ಮ ಪತ್ನಿಯನ್ನು ಹತ್ಯೆ ಮಾಡುವಷ್ಟು ಕ್ರೋಧ ಉದ್ಭವವಾಗಲು ಕಾರಣವೇನು ?''

"ಅದನ್ನೇ ಹೇಳ ಬಯಸುತ್ತೇನೆ. ಒಂದು ವಿಷಯವನ್ನು ಮೊದಲೇ ಬಿನ್ನವಿಸುತ್ತೇನೆ. ನನ್ನ ಊರು ಯಾವುದು ? ನನ್ನ ಪತ್ನಿಯು ಯಾರು ? ಈ ವಿವರಗಳನ್ನು ಮಾತ್ರ ನನ್ನನ್ನು ಕೃಪೆಯಿಟ್ಟು ಕೇಳಬಾರದು.''

"ಅಂದರೆ ಇನ್ನೂ ನಿಮ್ಮ ಜಿಗುಟು ಪೂರ್ಣವಾಗಿ ದೂರವಾಗಿಲ್ಲ. ಇರಲಿ. ಪರವಾಗಿಲ್ಲ ನಿಮಗೆ ಎಷ್ಟು ಹೇಳಬೇಕೆನಿಸ್ತುತದೆಯೋ ಅಷ್ಟನ್ನು ಹೇಳಿ. ನಾನು ಯಾವ ವ್ಯಕ್ತಿಯ ಯಾವ ಗುರುತಿನ ವಿಷಯವನ್ನೂ ಕೇಳುವುದಿಲ್ಲ. ಆಯಿತೆ ?''

"ನಾನು ಕೃತಜ್ಞ. ನಮ್ಮ ಮನೆತನ ಬಹಳ ಪ್ರಸಿದ್ಧವಾದ ರೂವಾರಿ ಮನೆತನ. ಒಳ್ಳೆಯ ನೀತಿಪರವಾದ ಸಂಪ್ರದಾಯಸ್ಥ ಮನೆತನ. ನಮ್ಮ ಹಿರಿಯರು ಚೋಳ, ಪಾಂಡ್ಯನಾಡುಗಳಲ್ಲಿ ತುಂಬಾ ಖ್ಯಾತಿಯನ್ನು ಸಂಪಾದಿಸಿದ್ದರು. ನಾನು ಅವರೊಂದಿಗೆ ಆ ನಾಡುಗಳನ್ನು ಬಾಲಕನಾಗಿ ಸುತ್ತಿದ್ದೇನೆ. ಚಿಕ್ಕಂದಿನಿಂದಲೂ ಹೊಸ ಹೊಸದನ್ನು ರೂಪಸಬೇಕೆನ್ನುವುದರತ್ತ ನನಗೆ ತುಂಬಾ ಚಪಲ. ಏಕೋ ಏನೋ ನಮ್ಮ ಹಿರಿಯರು ತಾವು ಹಿಡಿದ ಜಾಡನ್ನು ಬಿಟ್ಟು ನಾನು ಹೊಸದನ್ನು ರೂಪಿಸ ಹೊರಡುವುದನ್ನು ಒಪ್ಪಲಿಲ್ಲ. ನನ್ನ ಉತ್ಸಾಹಕ್ಕೆ ತಣ್ಣೀರೆರಚಿದಂತಾಯಿತು. ನನಗೆ ಯಾವ ಸ್ವಾತಂತ್ರ್ಯವೂ ಇರಲಿಲ್ಲ. ಅದರಿಂದ ಅವರ ಅಂಕೆಯಲ್ಲಿ ಅವರಿಟ್ಟಗೆರೆಯಂತೆ ನಾನು ನಡೆಯುತ್ತಿದ್ದೆ. ಹೋದಲ್ಲೆಲ್ಲ ನನ್ನ ಚುರುಕು ಕೈಗೆ ಮೆಚ್ಚಿಗೆ ದೊರೆಯಿತು. ಕರ್ನಾಟಕದಿಂದ ಚೋಳನಾಡಿಗೆ ವಲಸೆ ಹೋಗಿ ನೆಲೆಸಿದ್ದ ಒಂದು ಪಾಂಚಾಲ ಮನೆತನದ ಆತ್ಮೀಯತೆ ನಮಗೆ ದೊರೆಯಿತು. ಅದರ ಫಲವಾಗಿ ನನ್ನ ಲಗ್ನ ಆ ಮನೆತನದ ಕನ್ಯೆಯೊಡನೆ ಆಯಿತು.''

"ನೀವು ಕನ್ಯೆಯನ್ನು ನೋಡಿ ಮೆಚ್ಚಿ ಲಗ್ನವಾದಿರಾ ?''

"ನಾನು ಕನ್ಯೆಯನ್ನು ಲಗ್ನಕ್ಕೆ ಮೊದಲೇ ನೋಡಿದ್ದೆ. ಆದರೆ ಅವಳನ್ನು ಲಗ್ನವಾಗುತ್ತೇನೆಂದು ಭಾವಿಸಿರಲಿಲ್ಲ. ಆ ಬಯಕೆಯೂ ನನ್ನಲ್ಲಿ ಹುಟ್ಟಿರಲಿಲ್ಲ.''

"ಹೌದೆ ? ಏಕೆ ?''

"ಏಕೆ ಎಂದರೆ ನನಗಿನ್ನೂ ಲಗ್ನದ ಬಗೆಗೆ ಆಲೋಚನೆಯೇ ಮೂಡಿರಲಿಲ್ಲ. ಅದರಿಂದ ನಾನು ಆ ಕನ್ಯೆಯನ್ನು ನೋಡಿದ ದೃಷ್ಟಿಯೇ ಬೇರೆ. ಆದರೆ ಆಕೆಯ ತಂದೆ ನಮ್ಮ ತಂದೆಯೊಂದಿಗೆ ಮಾತನಾಡಿ ತಮ್ಮ ತಮ್ಮಲ್ಲಿ ಇತ್ಯರ್ಥ ಮಾಡಿಕೊಂಡು ಲಗ್ನವನ್ನೇ ನಿಶ್ಚಯಿಸಿ ನಂತರ ನನಗೆ ತಿಳಿಸಿದರು. ನನಗೆ ತಾಯಿ ಚಿಕ್ಕಂದಿನಲ್ಲೇ ತೀರಿ ಹೋಗಿದ್ದರಿಂದ ಸ್ವಗ್ರಾಮಕ್ಕೆ ಸುದ್ದಿ ಮುಟ್ಟಿಸುವ ಕೆಲಸವೂ ಇರಲಿಲ್ಲ. ಜಾತಕಾದಿ ಪರಿಶೀಲನೆ ನಡೆಸಿ ಮೂವ್ವತ್ತು ಗುಣಗಳು ಕೂಡಿದ್ದರಿಂದ ರಾಶಿ, ಗ್ರಹಮೈತ್ರಿ, ಯೋನಿ, ಗಣ ಕೂಟಾದಿಗಳು ಕೂಡಿದ್ದರಿಂದ ಒಳ್ಳೆಯ ಮುಹೂರ್ತದಲ್ಲಿ ಲಗ್ನ ನೆರವೇರಿಸಿದರು. ಲಗ್ನ ನಿಷ್ಕರ್ಷೆ ಮಾಡಿದ

ಜೋಯಿಸರು, 'ಇದು ಅಪರೂಪದ ದಾಂಪತ್ಯ. ಕೀರ್ತಿಶಾಲಿ ಸಂತಾನಕ್ಕೆ ಎಡೆ ಮಾಡಿಕೊಡುತ್ತದೆಯಷ್ಟೆ ಅಲ್ಲ, ಮುಂದೆ ಒಳ್ಳೆಯ ಶುಭಯೋಗಾದಿಗಳು ಇವೆ. ಆದರೆ ಅವು ಫಲಿಸಬೇಕಾದರೆ ಸ್ವನಾಡನ್ನು ಸೇರಬೇಕು.' ಎಂದು ತಮ್ಮ ಭವಿಷ್ಯ ವಾಣಿಯನ್ನು ನುಡಿದಿದ್ದರು. ನಮ್ಮಿಬ್ಬರನ್ನೂ ಹಾರ್ದಿಕವಾಗಿ ಆಶೀರ್ವದಿಸಿದ್ದರು.''

"ನೀವು ಈ ಕನ್ಯೆಯ ಜಾತಕಾದಿಗಳನ್ನ ನೋಡಿದ್ದಿರಾ ?''

"ಇಲ್ಲ, ಆಗ ನನಗಿನ್ನೂ ಜೋತಿಷ್ಯ ಶಾಸ್ತ್ರದಲ್ಲಿ ಅಷ್ಟು ಆಳವಾದ ತಿಳಿವಳಿಕೆ ಇರಲಿಲ್ಲ. ಮೇಲೆ ಮೇಲೆ ಸ್ವಲ್ಪ ಗೊತ್ತಿತ್ತು.''

"ಇದ್ದ ತಿಳಿವಳಿಕೆಯಲ್ಲಿಯೇ ನೋಡಿದಿರಾ ?''

"ಇಲ್ಲ.''

"ಏಕೆ ?''

"ಹಿರಿಯರೆಲ್ಲ ಪರಿಶೀಲಿಸಿದಾಗ ನಾನು ನೋಡುವುದೇನಿದೆ ಎಂದು ನೋಡಲಿಲ್ಲ.''

"ಆಯಿತು. ಹಾಗಾದರೆ ಲಗ್ನವಾದ ಮೇಲೆ ನೀವು ಸ್ವಗ್ರಾಮಕ್ಕೆ ಬಂದಿರಾ ?''

"ಕೂಡಲೇ ಬರಲಿಲ್ಲ. ನನ್ನ ಪತ್ನಿ ನಮ್ಮ ಮನೆಗೆ ಬರಬೇಕಾಗಿತ್ತಲ್ಲ. ಅದು ಆದ ಮೇಲೆ ನನ್ನ ತಂದೆಯವರು ಸ್ವಲ್ಪ ಕಾಲ ನನ್ನ ಜೊತೆಗೇ ಇರಿ. ನಂತರ ಈಗ ಕೈಕೊಂಡಿರುವ ಕೆಲಸ ಮುಗಿಸಿ ಸ್ವಗ್ರಾಮಕ್ಕೆ ಹೋಗಿ ಬಿಡೋಣ ಎಂದರು.''

"ಅಂದರೆ ನೀವು ನಿಲ್ಲಬೇಕಾಯಿತು ?''

"ಬೇರೆ ಉಪಾಯವೇ ಇರಲಿಲ್ಲ. ಅದು ನನ್ನ ಹೆಂಡತಿಗೂ ಸಂತೋಷವನ್ನು ತಂದಿತು.''

"ನಿಮ್ಮೊಂದಿಗೆ ಬರಲು ಅವರು ಉತ್ಸಾಹ ತೋರಿಸಿರಲಿಲ್ಲವೆ ?''

"ಏನೋ, ನಾನು ಹೇಳಲಾರೆ. ನನಗೆ ಅವಳ ಸಹವಾಸ ದೊರಕಿ ಅಮೂಲ್ಯವಾದ ಜೊತೆ ದೊರಕಿತೆಂಬ ತೃಪ್ತಿಯಿತ್ತು. ಊರಿನ ಸುದ್ದಿ ಎತ್ತಿದಾಗ, 'ಅಬ್ಬಾ, ಅಷ್ಟು ದೂರ ಹೋಗಲೇಬೇಕೆ ?' ಎಂದಿದ್ದಳು. ಬರುವುದಿಲ್ಲ ಎಂದೇನು ಹೇಳಿರಲಿಲ್ಲ. ಆದರೆ ನಮ್ಮ ತಂದೆಯ ಇಚ್ಛೆಯಂತೆ ನಾವಿರುವುದು ಸಧ್ಯಕ್ಕೆ ಅಲ್ಲೇ ಎಂದಾಗ ನಿಜವಾಗಿ ಅವಳು ಸಂತೋಷವನ್ನೇ ವ್ಯಕ್ತ ಪಡಿಸಿದಳು. 'ದೂರ ಹೋಗುವುದು ಮುಂದಕ್ಕೆ ಹೋಯಿತಲ್ಲ. ಅಷ್ಟೇ ಸಾಕು ಸಧ್ಯಕ್ಕೆ. ಮುಂದಕ್ಕೆ ನೋಡೋಣ' ಎಂದಳು.''

"ತವರು ಮನೆ ತೊರೆಯುವುದು ಹೆಣ್ಣಿಗಷ್ಟು ಸುಲಭವಲ್ಲ ಸ್ಥಪತಿಗಳೆ. ಸ್ವಲ್ಪ ವಿಚಾರ ಮಾಡಿ. ಸಾಕಿ, ಸಲಹಿ, ಅಕ್ಕರೆಯಿಂದ ಬೆಳೆಸಿದ ತವರು ಮನೆಯನ್ನು ತೊರೆದು, ಅಲ್ಲಿನ ಎಲ್ಲ ಬಗೆಯ ಸಂಬಂಧವನ್ನೂ ಕಡಿದುಕೊಂಡು, ಅದೆಲ್ಲವನ್ನೂ ತಾನು ಕೈ ಹಿಡಿದಾತನ ಕುಟುಂಬದತ್ತ ನೆನೆಸಿದ ತಕ್ಷಣ ತಿರುಗಿಸಬೇಕೆಂದರೆ ಅಷ್ಟು ಸುಲಭವೆ ? ಕೈ ಹಿಡಿದ ಗಂಡು ಯಾವ ಆಶೆ ಮೂಡಿಸಿ, ಅಗ್ನಿಸಾಕ್ಷಿಯಾಗಿ ಯಾವ ಪ್ರತಿಜ್ಞೆ ಮಾಡಿರುತ್ತಾನೆಯೋ ಆ ಆಶೆಯನ್ನು ಎಷ್ಟರ ಮಟ್ಟಿಗೆ ಈಡೇರಿಸುತ್ತಾನೆ, ಆ ಪ್ರತಿಜ್ಞೆಯನ್ನು ಎಷ್ಟರ ಮಟ್ಟಿಗೆ ನೆರವೇರಿಸುತ್ತಾನೆ, ಎಂಬುದು ಕಾಲಗರ್ಭದಲ್ಲಿ ಅಡಗಿರುವ ವಿಷಯ. ಆದರೂ ಯಾವ ಅನುಮಾನ, ಶಂಕೆಗಳಿಗೂ ತನ್ನಂತರಂಗದಲ್ಲಿ ಎಡಗೊಡದೆ ತನ್ನನ್ನು ತಾನು ಸಂಪೂರ್ಣವಾಗಿ ಅರ್ಪಿಸಿಕೊಳ್ಳುವ ಹೆಣ್ಣಿನ ತ್ಯಾಗಕ್ಕೇನು ಬೆಲೆಯಿಲ್ಲವೆ ?''

“ಇದೆ. ಮಹತ್ತರವಾದ ಬೆಲೆ ಇದೆ. ಯಾವಾಗ ? ಅವಳು ನೀತಿಪರಳಾಗಿ ಕ್ಷೇತ್ರ ಶುದ್ಧಿಯಿಂದ ಸತ್ಸಂತಾನ ವೃದ್ಧಿಗೆ ನೆರವಾದಾಗ. ಅವಳಿಗೆ ಆ ಹೊಣೆಗಾರಿಕೆ ಇರಬೇಡವೆ ?''

“ಇರಬೇಕು. ಯಾರಿಲ್ಲವೆನ್ನುತ್ತಾರೆ ? ಅದು ಒಮ್ಮುಖವಾದ ನಡವಳಿಕೆಯಾಗಿ ಗಂಡು ಸ್ವೇಚ್ಛಾಪ್ರವೃತ್ತವಾದರೆ ? ಕ್ಷೇತ್ರ ಆಗ ಅವನ ಮೂಲಕ ಅಶುದ್ಧವಾಗುವುದಿಲ್ಲವೆ ? ಮನಸ್ಸೊಂದು ಕಡೆ, ಕ್ರಿಯೆ ಮತ್ತೊಂದು ಕಡೆ ಆದರೆ ಒಳ್ಳೆಯ ಫಲ ಸಿಗುವುದು ಹೇಗೆ ?''

“ಹಾಗಿಲ್ಲದೆ ಗಂಡು ಅಗ್ನಿಸಾಕ್ಷಿಯಾಗಿ ಮಾಡಿದ ಪ್ರತಿಜ್ಞೆ ಪಾಲಿಸಿದಾಗಲೂ ಹೆಣ್ಣು ಕ್ಷೇತ್ರ ಕಲುಷಿತಳಾದರೆ ?''

“ತಪ್ಪು, ಆದರೆ ಅದಕ್ಕೆ ಅವಳೆಷ್ಟರ ಮಟ್ಟಿಗೆ ನೇರವಾಗಿ ಹೊಣೆಗಾರಳು ಎಂಬುದರ ಮೇಲೆ ನಿರ್ಣಯಿಸಬೇಕಾದ ವಿಷಯ. ಅವಳು ಅಬಲೆ ಎಂದು ಪರಿಗಣಿತಳಾಗಿದ್ದಾಳೆ. ಅದರ ದುರಪಯೋಗ ಆದಾಗ ಅದಕ್ಕೂ ಗಂಡೇ ತಾನೆ ಕಾರಣ. ಅದರಿಂದ ಈ ಕುರಿತು ಆತುರದ ಯಾವ ನಿರ್ಣಯವೂ ಸಲ್ಲದು. ಆದರೆ ಸಾಕ್ಷಿ ಬಲವಾಗಿರುವಾಗ ?

“ಆಗ ಹೆಣ್ಣು ಶಿಕ್ಷಾರ್ಹಳೆ. ನಿಮ್ಮ ಸ್ವಂತ ಕತೆಯ ವಿವರಕ್ಕೆ ಅಡ್ಡದಾರಿ ಹಿಡಿದು ಬೇರೇನೋ ಚರ್ಚೆ ಮಾಡಿದಂತಾಯಿತು. ಮುಂದೆ ಹೇಳಿ.''

“ಮುಂದೆರಡು ಸಂವತ್ಸರಗಳು ನಾವು ಅಲ್ಲಿಯೇ ಇದ್ದೆವು. ನಮ್ಮೊಂದಿಗೆ ವಾಸಿಸುತ್ತಿದ್ದ ಅವಳು ನಾವು ಕೆಲಸಕ್ಕೆ ಹೋದರೆ ತಾನು ತವರು ಮನೆಯತ್ತ ಕಾಲು ಹಾಕುತ್ತಿದ್ದಳು. ನಮಗೆ ಎಷ್ಟೋ ದಿವಸ ಇದು ಗೊತ್ತಿರಲಿಲ್ಲ. ಒಂದು ದಿವಸ ನನಗೆ ಕೆಲಸ ಮಾಡುತ್ತ ಮಾಡುತ್ತ ತಲೆ ಸುತ್ತು ಬಂತು. ನನ್ನ ತಂದೆ ನನ್ನನ್ನು ಜೊತೆಗೆ ಕರೆದುಕೊಂಡು ನಮ್ಮ ಬಿಡಾರಕ್ಕೆ ಬಂದಾಗ ನನ್ನ ಪತ್ನಿ ಇರಲಿಲ್ಲ. ನೆರೆಯಲ್ಲಿ ವಿಚಾರಿಸಿದಾಗ ಅವಳು ದಿನಾ ತವರು ಮನೆಗೆ ಹೋಗುತ್ತಾಳೆಂದೂ ಸಂಜೆ ಹಿಂತಿರುಗುತ್ತಾಳೆಂದೂ ತಿಳಿಯಿತು. ನಮ್ಮ ತಂದೆ ಹೋಗಿ ಸೊಸೆಯನ್ನು ಕರೆತಂದರು. ನಂತರ ತಾವು ಕೆಲಸದ ತಾಣಕ್ಕೆ ಹೊರಟುಹೋದರು. ಅವಳು ನನ್ನನ್ನು ನೋಡಿ ತುಂಬಾ ಹೆದರಿ ಬಿಟ್ಟಳು. ಅವಳ ಕೆಲಸಗಳೆಲ್ಲ ಎಡಚೆಡಚು ಆದವು. 'ಏಕೆ ಹೀಗೆ ?' ಎಂದು ಕೇಳಿದೆ. 'ಏಕೋ ಏನೂ ತೋಚಲಿಲ್ಲ. ಗಾಬರಿ ಗಾಬರಿಯಾಗುತ್ತದೆ. ಮಾವನವರು ಇದ್ದಿದ್ದರೆ ಚೆನ್ನವಿತ್ತು' ಎಂದಳು. 'ಗಾಬರಿ ಏಕೆ ?' ಎಂದು ಕೇಳಿದೆ. 'ನಿಮಗೆ ಹೀಗಾಗಿದೆಯೆಂದರೆ ಗಾಬರಿ ಆಗುವುದಿಲ್ಲವೆ? ಚೆನ್ನಾಗಿ ಕೇಳುತ್ತೀರಿ. ಏನು ಮಾಡಬೇಕೂಂತ ನನಗೆ ಗೊತ್ತಿಲ್ಲ. ಹಿರಿಯರು ಇದ್ದಿದ್ದರೆ ಅವರನ್ನು ಕೇಳಬಹುದಿತ್ತು' ಎಂದಳು. 'ಏನೂ ಹೆದರಬೇಡ. ನನಗೆ ಸ್ವಲ್ಪ ಪಿತ್ತವಾಗಿರಬೇಕು. ಮನೆಯಲ್ಲಿ ನಿಂಬೆ ಫಲವಿದ್ದರೆ ಕೊಂಚ ನೀರು ಕಾಯಿಸು. ನಾನು ಹೇಳುತ್ತೇನೆ ಏನು ಮಾಡಬೇಕೆಂದು' ಎಂದೆ. ಅವಳು ನೀರು ಕಾಯಿಸಿ ತಂದಳು. ನಿಂಬೆ ಹಣ್ಣನ್ನು ಹೋಳು ಮಾಡಿ ತಂದಳು 'ಸ್ವಲ್ಪ ಲವಣ ತಾ' ಎಂದೆ. ಬಿಸಿ ನೀರಿಗೆ ನಾಲ್ಕು ಹರಳು ಲವಣ ಹಾಕಿ ಹುಳಿರಸ ಹಿಂಡಿ ಸ್ವಲ್ಪ ಸ್ವಲ್ಪ ಗುಟುಕರಿಸಿದೆ. ಭಯಂಕರವಾದ ತೇಗು ಬಂತು. ಆ ಗುಟುರನ್ನು ಕೇಳಿ ಅವಳು ಬೆದರಿದಳು. ನನಗೆ ನಗು ಬಂತು. ತೇಗಿದರೆ ಹೆದರುವ ನೀನು ಏನು ಕೆಲಸ ಮಾಡಬಲ್ಲೆ ಎಂದೆ. ಅವಳು ನನ್ನನ್ನು ಒಂದು ಬಗೆಯಾಗಿ ನೋಡಿ ಮುಖ ತಗ್ಗಿಸಿದಳು. ಅಷ್ಟೆ. ಏನೂ ಆಡಲಿಲ್ಲ. ನನಗೂ ಸ್ವಲ್ಪ ಸುಧಾರಣೆ ಆದಂತೆ ಆಯಿತು. ಹಾಗೆಯೇ ಮಲಗಿದ್ದೆ. ಅವಳು ಸನಿಯದಲ್ಲಿ ಮಂದಲಿಗೆಯ ಮೇಲೆ ಏನನ್ನೋ ಧೇನಿಸುತ್ತ ಕುಳಿತಿದ್ದಳು. ನೆಲಕ್ಕೂರಿದ್ದ ಅವಳ ಎಡಗೈಯನ್ನು ನಾನು ಹಿಡಿದುಕೊಂಡೆ. ನನ್ನ

ಮೇಲೆ ಕುಸಿದಳು. ಗಾಬರಿಯಿಂದ ಕೊಂಚ ಮುಂದೆ ಸರಿದಳು. ನಾವಿಲ್ಲದಿದ್ದರೆ ನೀನು ತವರು ಮನೆಗೆ ಹೋಗಿ ಬಿಡುವಿಯಂತೆ. ಯಾಕೆ ?' ಎಂದು ಕೇಳಿದೆ. 'ಯಾರು ಹೇಳಿದರು ?' ಎಂದು ಅವಳು ಗಾಬರಿಯಲ್ಲಿ ಕೇಳಿದಳು. 'ಯಾರಾದರೂ ಹೇಳಲಿ ನೀನೇಕೆ ನಿನ್ನ ಮನೆಯಲ್ಲಿರದೆ ಹೊರಟು ಹೋಗುತ್ತಿ?' ಎಂದು ಕೇಳಿದೆ. 'ಇಲ್ಲೇನು ಮಾಡಲಿ? ಬರೀ ಗೋಡೆ ನೋಡುತ್ತಾ ಕೂತಿರಲೆ ? ಬೇಸರವಾಗುತ್ತದೆ. ಬೇರೆ ಕೆಲಸವೂ ಇಲ್ಲ. ಅದಕ್ಕೆ ಅಲ್ಲಿಗೆ ಹೋಗಿ ನೀವು ಬರುವಷ್ಟರಲ್ಲಿ ಬಂದು ಬಿಡುತ್ತಿದ್ದೆ' ಎಂದಳು. 'ಯಾಕೆ ನನಗಾಗಲಿ, ತಂದೆಯವರಿಗಾಗಲಿ ಹೇಳಲಿಲ್ಲ ?' ಎಂದು ಕೇಳಿದೆ. 'ಹೇಳಬೇಕೆಂದು ನನಗೆ ತೋಚಲಿಲ್ಲ' ಎಂದಳು. 'ಇಲ್ಲೇ ನೆರೆಯಲ್ಲಿ ಯಾರ ಸ್ನೇಹವೂ ನಿನಗಿಲ್ಲವೆ ?' ಎಂದೆ. 'ಇಲ್ಲ ಅಕ್ಕ ಪಕ್ಕದವರೆಲ್ಲ ಒಳ್ಳೆಯವರಲ್ಲ. ಅವರ ಸಹವಾಸ ನನಗೆ ಒಳ್ಳೆಯದಲ್ಲ ಎನಿಸಿತು' ಎಂದಳು. ಅಂದರೆ ನಿನಗೆ ನಿಮ್ಮ ತವರು ಮನೆಯಲ್ಲಿ ಒಳ್ಳೆ ಸಹವಾಸ ಸಿಗುತ್ತಿತ್ತೂಂತ ಹೋಗುತ್ತಿದ್ದೆಯಾ ?' ಎಂದು ಕೇಳಿದೆ. 'ಹೌದು. ಮೊದಲಿನಿಂದ ಅಲ್ಲಿ ನನಗೆ ಸಲಿಗೆ, ಎಲ್ಲ ಸ್ವಂತಿಕೆ ಎನಿಸುವಂತಹುದು' ಎಂದಳು. 'ಯಾರು ಯಾರು ಇದ್ದಾರೆ ನಿಮ್ಮ ಮನೆಯಲ್ಲಿ ?' ಎಂದು ಕೇಳಿದೆ. ಅವಳು ಎಲ್ಲ ಹೆಸರುಗಳನ್ನೂ ಹೇಳಿದಳು. ಅವಳ ಸೋದರ ಮಾವನ ಹೆಸರು ಹೇಳಿದಾಗ ಅವಳ ಉತ್ಸಾಹ ನೂರ್ಮಡಿ ಪ್ರಕಟವಾಯಿತು. ಏನೋ ನನಗೆ ಚುರ್ ಎಂದ ಹಾಗೆ ಆಯಿತು. ಆ ಮಾತು ಮುಂದುವರಿಸುವುದು ಬೇಡವೆನ್ನಿಸಿತು. ನಾನು ಅಲ್ಲಿಂದ ಒಂದು ಪಕ್ಷಕಾಲ ಕೆಲಸಕ್ಕೆ ಹೋಗಲಿಲ್ಲ. ಆ ನಡುವಿನಲ್ಲಿ ಅವಳ ಸೋದರಮಾವ ಒಂದೆರಡುಸಲ ಬಂದಿದ್ದ. ಅವನಿಗೆ ನಮ್ಮ ಮನೆಯ ಆದರಾತಿಥ್ಯ ತುಂಬಾ ಉತ್ಸಾಹದಿಂದ ನಡೆಯಿತು. ಈ ಊರು ಬಿಡುವುದು ಒಳಿತೆನಿಸಿತು. ತಂದೆಯವರಿಗೆ ಸೂಚಿಸಿದೆ. 'ನಾನು, ನನ್ನ ಪತ್ನಿ ಊರಿಗೆ ಹೋಗುತ್ತೇವೆ. ಇಲ್ಲಿಯ ಹವ ನನಗೆ ಈಚೆಗೇಕೋ ಒಗ್ಗುತ್ತಿಲ್ಲ' ಎಂದೆ. 'ಇನ್ನೊಂದು ಪಕ್ಷಕ್ಕೆ ಈಗಿನ ಕೆಲಸ ಮುಗಿಯುತ್ತದೆ, ನಂತರ ಒಟ್ಟಿಗೆ ಹೊರಟುಬಿಡೋಣ' ಎಂದರು 'ಬೇರೆ ಕೆಲಸ ಬಂದರೆ ನಿಮ್ಮ ಒಲವು ಅತ್ತ ಹೋಗುತ್ತದೆ. ನಮಗೆ ಒಪ್ಪಿಗೆ ಕೊಡಿ' ಎಂದೆ. 'ಯಾರ ಕಾಟವೂ ಇಲ್ಲದೆ ನೀವಿಬ್ಬರೇ ಇರಬೇಕೂಂತಲೋ. ನಿಮ್ಮ ಸುಖಕ್ಕೆ ನಾನೇಕೆ ಅಡ್ಡಿ ಬರಲಿ' ಎಂದು ಅವರು ನಮ್ಮ ಪ್ರಯಾಣಕ್ಕೆ ಅನುಮತಿಕೊಟ್ಟರು. ನಮ್ಮ ಸ್ವಗ್ರಾಮಕ್ಕೆ ಬಂದೆವು. ನನಗೆ ಮಾತುಕೊಟ್ಟದ್ದಂತೆ ನಮ್ಮ ತಂದೆ ಊರಿಗೆ ಹಿಂತಿರುಗಲಿಲ್ಲ. ಬೇರೊಂದು ಕೆಲಸಕ್ಕೆ ಅಂಟಿಕೊಂಡು ತೆಂಕದಲ್ಲಿಯೇ ಇದ್ದು ಬಿಟ್ಟರು.

"ಅವರು ಬಯಸಿದಂತೆ ನಿಮ್ಮ ಸಂಸಾರ ಸುಖ ಪರಿಪೂರ್ಣವಾಗಿರಬೇಕು ?''

"ಎರಡು ಜೀವ ಒಂದಾಗಿಯೇ ಬಾಳಿದೆವು. ಎರಡು ಸಂವತ್ಸರಗಳು. ನಿಜವಾಗಿ ಅವೇ ನನ್ನ ಬಾಳಿನ ಅತ್ಯಂತ ಶ್ರೇಷ್ಠ ಸಂವತ್ಸರಗಳು. ವಿಕ್ರಮ ಸಂವತ್ಸರ ಕಾಲಿಟ್ಟಿತು. ನನ್ನ ಬಾಳಿಗೆ ಅಕ್ರಮದ ಅವಾಹನೆಯಾಯಿತು. ಇದ್ದಕ್ಕಿದ್ದ ಹಾಗೆಯೇ ನನ್ನ ಪತ್ನಿಯ ಆ ಸೋದರಮಾವನ ಆಗಮನವಾಯಿತು. ನನ್ನ ಪತ್ನಿ ಜಿಂಕೆಯಂತೆ ಲವಲವಿಕೆ ತಾಳಿದಳು. ನನಗೆ ಅವಳ ಆ ಲವಲವಿಕೆ ತುಸು ಬೇಸರ ತಂದಿತು. ಮುಚ್ಚಿಟ್ಟುಕೊಳ್ಳುವ ಸ್ವಭಾವವೂ ಆಗಿರಲಿಲ್ಲ. ಕೇಳಿಯೂ ಬಿಟ್ಟೆ. 'ನಿಮಗೇನು ಗೊತ್ತು, ತೌರು ತೊರೆದು ಬಂದು ಎರಡು ಸಂವತ್ಸರಗಳ ಮೇಲಾಗಿದೆ. ಅತ್ತಣಿನವರು ಬಂದರೆ ನಾನು ಉತ್ಸಾಹ ತಾಳಬಾರದೆ ? ನನ್ನ ತವರು ಮನೆಯವರು ನಿಮಗೇನು ಆಗದವರೆ?' ಎಂದು ಕೇಳಿದಳು. ಆ ಮಾತನ್ನು ಅಲ್ಲಿಗೆ ಬಿಟ್ಟುಬಿಟ್ಟೆ ಅವನು ಮೂರು ನಾಲ್ಕು ದಿವಸ ಇದ್ದು ಹೊರಟುಹೋದ. ನಮ್ಮ ಸಂಸಾರ ಎಂದಿನಂತೆ ಸಾಗಿತು. ನಂತರ ಒಂದು ಮಾಸದ ನಂತರ ನಾನು ಸ್ವಗ್ರಾಮ ಬಿಟ್ಟು ಉತ್ತಮ ಶಿಲಾಸಂಗ್ರಹಕ್ಕಾಗಿ ಕೋನೇಹಳ್ಳಿಯತ್ತ ಒಂದು ಪಕ್ಷಕಾಲ ಹೋಗಿಬಂದೆ. ನಮ್ಮ ದೂರದ ಸಂಬಂಧಿ ವಿಧವೆ ಮುದುಕಿಯೊಬ್ಬರಿದ್ದರು. ನೀರು ನಿಡಿ

ಹಾಕಲು ಆಕೆ ನೆರವಾಗುತ್ತ ಇದ್ದರು. ಅವರನ್ನು ಜೊತೆಗಿರಲು ಹೇಳಿ ಹೊಗಿದ್ದೆ. ನನ್ನ ಕೆಲಸ ಮುಗಿಸಿಕೊಂಡು ನಾನು ಊರಿಗೆ ಹಿಂತಿರುಗಿ ಒಂದು ಮಾಸ ಕಳೆಯಿತು. ನನ್ನ ಪತ್ನಿಗೆ ಬೆಳಗಿನ ವಾಕರಿಕೆ ತಲೆದೋರಿತು. ಸೂಲಗಿತ್ತಿಯ ಪರೀಕ್ಷೆಯಿಂದ ನನ್ನ ಆಕೆ ಗರ್ಭಿಣಿ ಎಂದು ತಿಳಿದು ಬಂತು. ಆ ಸುದ್ದಿ ಕೇಳಿ. ನಮ್ಮಿಬ್ಬರಿಗೂ ನಿಜವಾಗಿ ತುಂಬಾ ಆನಂದವೆನಿಸಿತು, ಆ ಸಂತಸದಲ್ಲಿ ಕೆಲವು ಮಾಸಗಳು ಕಳೆದವು. ನನ್ನ ಪತ್ನಿಯ ಮನಸ್ಸು ತವರುಮನೆಯತ್ತ ಹೋಯಿತು. 'ಚೊಚ್ಚಲು ಹೆರಿಗೆಗೆ ಅಲ್ಲಿಗೆ ಹೋಗುತ್ತೇನೆ' ಎಂದಳು. 'ನಾನು ದೂರ ಪ್ರಯಾಣ, ಅದೂ ಅಲ್ಲದೆ ಜೊತೆಗೆ ಯಾರೂ ಇಲ್ಲದೆ ಕಳಿಸುವುದು ಹೇಗೆ' ಎಂದೆ. ಏನೋ ಕೆಲಸಕ್ಕೆ ಬಂದಿದ್ದ ವಿಧವೆ, 'ಅವಳ ಮಾವ ಇಷ್ಟರಲ್ಲೇ ಬರಬಹುದು, ಜೊತೆಮಾಡಿ ಕಳಿಸು' ಎಂದರು. 'ನೀವೆಲ್ಲಿ ನೋಡಿದ್ದಿರಿ ಅವರನ್ನ' ಎಂದರೆ. 'ಯಾಕೆ ? ಇಲ್ಲೇ. ನೀವು ಕೋನೇಹಳ್ಳಿಗೆ ಹೋದಾಗ ಇಲ್ಲಿಗೆ ಬಂದು ಒಂದು ವಾರ ಇದ್ದು ಹೋಗಲಿಲ್ಲವೆ ? ಹೋಗುವಾಗ ಮತ್ತೆ ಬರ್ತ್ತಿನೀಂತ ಹೇಳಿದ್ದ. ಅದರಿಂದ ಹೇಳಿದೆ' ಎಂದರು. ನನಗೆ ಏನೋ ಒಂದು ತರಹ ನಡುಕ ಬಂದ ಹಾಗೆ ಆಯಿತು. ಏನೂ ಮಾತನಾಡದಿದ್ದರೆ ಒಳಿತಲ್ಲ ಎಂಬ ಪ್ರಜ್ಞೆ ಬೇಗಲೇ ಮೂಡಿತು. 'ನೋಡೋಣ. ಅವರು ಮೊದಲು ಬರಲಿ' ಎಂದುಬಿಟ್ಟೆ ಹಾಗೆಯೇ ದಿನಗಳು ತಳ್ಳಿದವು. ನನ್ನ ಹೆಂಡತಿ ಉತ್ಸಾಹವಾಗಿಯೇ ಇದ್ದಳು. ನನ್ನಲ್ಲಿ ಉತ್ಸಾಹ ಮೂಡಲೇ ಇಲ್ಲ. ನನ್ನ ಪತ್ನಿಯ ಹಾಗೂ ಅವಳ ಸೋದರಮಾವನ ನಡವಳಿಕೆಯ ಬಗೆಗೆ ನನಗೆ ಶಂಕೆ ಮೂಡಿತು. ಅದರೂ ನಾನು ತಾಳ್ಮೆಗೆಡಲಿಲ್ಲ. ಅದನ್ನು ತೋರಿಸಿಕೊಳ್ಳಲೂ ಇಲ್ಲ. ಹೇಳಿದಂತೆ ಅವನೇನೋ ಬಂದ. ಆದರೆ ನಾನು ಕಳುಹಿಸುವುದಿಲ್ಲ ಎಂದು ಹೇಳಿ ಅವನನ್ನು ಕಳಿಸಿಬಿಟ್ಟೆ ನನ್ನ ಹೆಂಡತಿ ಮೂರು ದಿವಸ ಅನ್ನ ನೀರು ಬಿಟ್ಟಳು. ನಾನು ಯಾವುದನ್ನೂ ಲೆಕ್ಕಕ್ಕೆ ತೆಗೆದುಕೊಳ್ಳಲಿಲ್ಲ. ಕಲ್ಲಿನಲ್ಲಿ ಜೀವ ತುಂಬುವ ಕಲೆಯನ್ನು ಸಾಧಿಸ ಬಯಸಿದ ನನ್ನ ಜೀವಂತ ಹೃದಯ ಕಲ್ಲಾಯಿತು. ಜನನವಾಯಿತು. ನನ್ನ ಹೆಂಡತಿ ಗಂಡು ಮಗುವಿಗೆ ತಾಯಿಯಾಗಿದ್ದಳು. ಆದರೆ ನಾನು ರಚಿಸಿದ ಜನ್ಮಕುಂಡಲಿ ಆ ಮಗುವಿನ ತಂದೆಯನ್ನು ಗುರುತಿಸಲಾರದೆ ಹೋಯಿತು. ನಾಚಿಕೆ, ಅವಮಾನ ನನ್ನ ಶರೀರವನ್ನು ವ್ಯಾಪಿಸಿತು. ದಿಕ್ಕು ಕೆಟ್ಟವನಂತೆ ನಾನು ಯಾರಿಗೂ ಹೇಳದೆ ಕೇಳದೆ ಊರು ಬಿಟ್ಟೆ ನಮ್ಮ ತಂದೆಯವರ ಸಂದರ್ಶನ ಮಾಡುವುದೆಂದು ಅವರು ಕೆಲಸ ಒಪ್ಪಿಕೊಂಡಿದ್ದ ತೆಂಕದತ್ತ ಸಾಗಿದೆ. ನಾನು ಪೂರ್ವ ಜನ್ಮದಲ್ಲಿ ಪುಣ್ಯ ಮಾಡಿದ್ದೆನೆಂದು ಕಾಣಿಸುತ್ತದೆ. ನನ್ನ ತಂದೆಯ ಅಂತ್ಯದರ್ಶನವಾಯಿತು. ಆದರೆ ಮಾತುಕತೆಗೆ ಅವಕಾಶವಿರಲಿಲ್ಲ. ಅವರು ನನ್ನನ್ನು ಗುರುತಿಸಿದರು. ಮುಖದ ಮೇಲೆ ಸಂತಸದ ಛಾಯೆ ಮೂಡಿತು. ಅವರ ಗಂಟಲಿನಿಂದ ನಾದ ಬರಲಿಲ್ಲ. ತುಟಿ ಚಲನೆ ಏನನ್ನೋ ನುಡಿಯಲು ಪ್ರಯತ್ನಿಸಿದವು. ಎದೆಯ ಮೇಲಿದ್ದ ಅವರ ಕೈಗಳಲ್ಲಿ ಮಗುವೆಂಬ ಸಂಕೇತಮಾಡಿ ಕಡೆಯುಸಿರನ್ನು ಎಳೆದರು. ನಾನು ಅವರಿಗೆ ಏನನ್ನೂ ಉತ್ತರಿಸುವಂತಿರಲಿಲ್ಲ. ಅವರ ಅಂತ್ಯಸಂಸ್ಕಾರ ಮಾಡಿದೆ. ಅಲ್ಲಿಂದ ಮುಂದೆ ಅಲೆಮಾರಿಯಾಗಿದ್ದೇನೆ. ಹಾಗೆಂದು ಹೇಳಿಕೊಳ್ಳಲು ಅವಮಾನ. ಯಾತ್ರಿಕ ಎಂಬ ಹೆಸರಿಟ್ಟು ಕೊಂಡು ಕಾಲಯಾಪನೆ ಮಾಡಿದ್ದೇನೆ'' ಎಂದು ಹೇಳಿ ತನ್ನ ಕತೆ ಮುಗಿಸಿ ನಿಟ್ಟುಸಿರೊಂದನ್ನು ಬಿಟ್ಟ

ಅವನ ಒಂದೊಂದು ಮಾತನ್ನೂ ಪರಿಶೀಲಕಳಂತೆ ಆಲಿಸುತ್ತಿದ್ದ ಶಾನ್ತಲದೇವಿ ಸ್ಥಪತಿಯ ಮಾತು ನಿಂತ ಮೇಲೆ, ''ಛೆ, ಛೆ, ಹೀಗಾಗಬಾರದಾಗಿತ್ತು'' ಎಂದಳು.

''ಬಾರದಾಗಿತ್ತೋ, ಬಹುದಾಗಿತ್ತೋ, ಈಗಂತೂ ಆಗಿಬಿಟ್ಟದೆಯಾದ್ದರಿಂದ ಅದು ಮುಗಿದ ಕಥೆ.''

"ಅದು ನಿಮ್ಮ ಭಾವನೆ."

"ಅಂದರೆ ಸನ್ನಿಧಾನದ ಆಲೋಚನೆ ಹಾಗಾದರೆ....."

"ಬೇರೆಯೆ ಆಗಿದೆ. ಮುಗಿದಿರುವುದು ಕಥೆಯ ಒಂದು ಪರಿಚ್ಛೇದ. ಅದು ಎರಡನೆಯ ಪರಿಚ್ಛೇದಕ್ಕೆ ನಾಂದಿ. ಸ್ಥಪತಿಗಳೆ, ಮಾನವನ ಕತೆ ಹುಟ್ಟುವುದು ಅವನ ಹುಟ್ಟಿನೊಂದಿಗೆ. ಮುಗಿಯುವುದು ಅವನ ಅವಸಾನದೊಂದಿಗೆ. ಆದರೂ ಇದೆಲ್ಲ ಏಕೆ ಹೀಗೆ ಎಂದೇ ನನಗೆ ಅರ್ಥವಾಗುವುದಿಲ್ಲ."

"ಇಲ್ಲಿ ಅರ್ಥವಾಗದಿರುವುದು ಏನಿದೆ ? ಎಲ್ಲವೂ ಹಗಲಿನಂತೆ ಸುಸ್ಪಷ್ಟ"

"ಅಂದರೆ ನಿಮ್ಮ ಮನಸ್ಸಿನ ಸಂಶಯಕ್ಕೆ ಶಿಶುವಿನ ಲಗ್ನ ಕುಂಡಲಿ ಹೊನ್ನ ಕಲಶವಿಟ್ಟಿತೆ?"

"ಸಂಶಯ ನಿಖರ ಮಾಡಿತು."

"ಅಂದರೆ ನೀವು ನಿಮ್ಮೆಲ್ಲ ಕೆಲಸವನ್ನೂ ಜೋತಿಷ್ಯದ ಆಧಾರದ ಮೇಲೆಯೇ ಮಾಡುತ್ತೀರಾ?"

"ಯಾಕೆ ? ಅದರಲ್ಲಿ ತಪ್ಪೇನು ? ಶಾಸ್ತ್ರ ನಿಖರವಾಗಿರುವಾಗ."

"ಶಾಸ್ತ್ರ ನಿಖರವೆ ಆದರೆ ಅದರ ವಿಶ್ಲೇಷಣೆ ಮಾಡುವ ಮನಸ್ಸು, ವಿಶ್ಲೇಷಕರ ಜ್ಞಾನ, ಬುದ್ಧಿಶಕ್ತಿ ಇವು ವ್ಯತ್ಯಸ್ಥವಾಗಿದ್ದಾಗ ಗತಿಯೇನು ?"

"ಅಂದರೆ ಜೋತಿಷ್ಯದಲ್ಲಿ ನನ್ನ ತಿಳಿವಳಿಕೆ ಕಡಿಮೆ ಎಂದು ಸನ್ನಿಧಾನ ಭಾವಿಸಿರುವಂತೆ ಅನ್ನಿಸುತ್ತದೆ."

"ತಿಳಿವಳಿಕೆ ಕಡಿಮೆ ಎಂದು ನಾನು ಹೇಳುವುದಿಲ್ಲ ಆದರೂ ಪರಿಶೀಲನೆ ಕೂಲಂಕುಷವಾಗಿ ನಡೆದಿಲ್ಲ ಎಂದು ನನಗನ್ನಿಸುತ್ತಿದೆ."

"ಎರಡೂ ಒಂದೇ. ಪರಿಶೀಲನೆ ಕೂಲಂಕುಷವಾಗಲಿಲ್ಲ ಎಂದರೆ ಆತುರದ ತೀರ್ಮಾನ ಎಂದಾಯಿತು. ಜ್ಯೋತಿಷಿ ಹಾಗೆ ಆತುರದ ತೀರ್ಮಾನ ಮಾಡಬಾರದೆಂದು ಹಿರಿಯರು ಹೇಳುತ್ತಾರೆ. ಆ ವಿಷಯ ನನಗೆ ಗೊತ್ತು. ಆದ್ದರಿಂದ ನಾನು ಕೂಲಂಕುಷವಾಗಿಯೇ ನೋಡಿದೆ."

"ನಿಮ್ಮದು, ನಿಮಗೆ ಸಂಬಂಧಪಟ್ಟುದು ನೀವೇ ನೋಡಿಕೊಳ್ಳುವುದು ಒಳಿತಲ್ಲವೆಂದು ಸಹ ಹೇಳುತ್ತಾರಲ್ಲ ?"

"ಅಂದರೆ ನಮ್ಮಲ್ಲಿ ನಡೆದುದನ್ನು ಊರಿಗೆಲ್ಲ ತಿಳಿವಂತೆ ಮಾಡಬೇಕಾಗಿತ್ತೇನು ?"

"ಈಗ ಆಗಿರುವುದೇನು ?"

"ಈಗ ಯಾರಿಗೂ ಎಲ್ಲಿ ಹೋದೆ ? ಏಕೆ ಹೋದೆ ಎಂಬುದೇ ಗೊತ್ತಿಲ್ಲ."

"ಅಂದರೆ ನಿಮ್ಮ ಪತ್ನಿ ಆಕೆಯ ಗರ್ಭಸಂಜಾತನ ತಂದೆ ನೀವೆ ಎಂದು ಭಾವಿಸಿರಬೇಕಲ್ಲವೆ?"

"ಅದು ಹೇಗೆ ಸಾಧ್ಯ. ಅವಳು ಏನು ಮಾಡಿದ್ದಾಳೆಂಬುದು ಅವಳಿಗೆ ಗೊತ್ತೇ ಇರುತ್ತದೆಯಲ್ಲ."

"ಒಂದು ವೇಳೆ ನೀವೆಂದುಕೊಂಡಂತೆ ಏನೂ ಆಗಿಲ್ಲದಿದ್ದರೆ ?"

"ಜಾತಕ ಸುಳ್ಳಾಗುತ್ತದೆಯೇನು ?"

"ನಿಮ್ಮ ಪ್ರಶ್ನೆಗೆ ನಾನು ಉತ್ತರ ಹೇಳದೆ ನಾನೇ ಒಂದು ಪ್ರಶ್ನೆ ಕೇಳುತ್ತೇನೆ. ನೀವು ಉತ್ತರಿಸುವಿರಾ?"

"ಯಥಾಮತಿ ಪ್ರಯತ್ನಿಸುತ್ತೇನೆ."

ಪಟ್ಟಮಹಾದೇವಿ ಒಂದು ಕುಂಡಲಿಯ ಪೂರ್ವ ವಿವರಗಳನ್ನು ಕೊಟ್ಟಳು. ಅದರ ನವಾಂಶ ಕುಂಡಲಿಯನ್ನು ತಿಳಿಸಿದಳು. ನಂತರ, "ಇದರ ಬಗೆಗೆ ನಿಮಗೇನೇನು ಹೇಳಲು ಸಾಧ್ಯ, ಅವನ್ನೆಲ್ಲ ಹೇಳಿ" ಎಂದಳು.

"ಬಹಳ ವಿಸ್ತಾರವಾಯಿತು. ಸನ್ನಿಧಾನಕ್ಕೆ ಏನು ಬೇಕೆಂಬುದನ್ನು ಕೇಳಿದರೆ ಉತ್ತರಿಸಲು ಪ್ರಯತ್ನಿಸುತ್ತೇನೆ."

"ಈ ಜಾತಕನ ಸ್ಥಾನ ಮಾನವೇನು ?"

"ಈ ಜಾತಕ ಯಾರದು ?"

"ಅದು ನಿಮಗೆ ಅಮುಖ್ಯ. ನನ್ನ ಪ್ರಶ್ನೆಗೆ ಉತ್ತರ ನೀಡಿ"

ಸ್ಥಪತಿ ಸ್ವಲ್ಪ ಕಾಲ ಯೋಚಿಸಿದ. ನಂತರ, "ಒಂದು ಹಲಗೆ, ಬಳಪ ಬೇಕು" ಎಂದ.

ಮನ್ತ್ರಣಸಾಲೆಯಲ್ಲಿಯೇ ಇದ್ದ ಅದನ್ನು ಕೊಟ್ಟಳು ಶಾನ್ತಲದೇವಿ.

"ಎಂದರೆ ಸನ್ನಿಧಾನ ನನ್ನನ್ನು ಕುರಿತು ಪ್ರಶ್ನಿಸಬೇಕೆಂದು ಮೊದಲೇ ಆಲೋಚಿಸಿರಬೇಕು. ಎಂತಲೆ ಹಲಗೆ ಬಳಪವಿದೆ ?"

"ಇದು ಮನ್ತ್ರಣಸಾಲೆ. ಇಲ್ಲಿ ಇದು ಸದಾ ಇರುತ್ತದೆ. ನಾನು ಏನನ್ನೂ ಯೋಚಿಸಿರಲಿಲ್ಲ. ಜೋತಿಷ್ಯದಿಂದ ನಿರ್ಣಯ ಸಾಧ್ಯ ಎಂಬ ಮಾತು ನನ್ನಲ್ಲಿ ಈ ಬಯಕೆ ಹುಟ್ಟಿಸಿ ಕೇಳಿದೆ ಅಷ್ಟೆ"

ಸ್ಥಪತಿ ಜನ್ಮ, ನವಾಂಶ ಕುಂಡಲಿ ರಚಿಸಿಕೊಂಡ. ಭಾವಕುಂಡಲಿಯನ್ನೂ ಹಾಕಿದ. ದಶಾಂಶ, ದ್ವಾದಶಾಂಕ ಕುಂಡಲಿಯನ್ನು ರಚಿಸಿಕೊಂಡ. ಅಷ್ಟಕ ವರ್ಗ ಬಿಂದುಗಳನ್ನು ರೂಪಿಸಿದ. ಸರ್ವಾಷ್ಟಕ ವರ್ಗ ಸಾಧಿಸಿದ, ತ್ರಿಕೋಣಾಂಶ ಸಾಧಿಸಿದ. ಇಷ್ಟು ಆಗುವವರೆಗೆ ಶಾನ್ತಲದೇವಿ ಮೌನವಾಗಿ ಕುಳಿತಿದ್ದಳು. ಎಲ್ಲವನ್ನೂ ಚೆನ್ನಾಗಿ ಪರಿಶೀಲಿಸಿ, "ಈ ಜಾತಕನಿಗೆ ಒಬ್ಬ ಅಣ್ಣ, ಒಬ್ಬ ತಮ್ಮ ಇರಬೇಕು" ಎಂದು ಹೇಳಿದ.

"ಸರಿ. ಲಗ್ನ ?"

"ಆಗಿದೆ."

"ಯಾವಾಗ ?"

"ತಾರುಣ್ಯದಲ್ಲಿ ಮೊದಲ ಲಗ್ನ."

"ಅಂದರೆ ?"

"ಆ ಲಗ್ನದ ನಂತರವೇ ಈ ಜಾತಕದ ಪೂರ್ಣಫಲ ಲಭ್ಯವಾಗುವುದು. ಜನ್ಮದಲ್ಲಿನ ಪ್ರಭಾವೀ ಗ್ರಹಗಳು ಜಾತಕನಿಗೆ ಶ್ರೇಷ್ಠ ಪದವಿಯನ್ನು ಕೊಡಲೇಬೇಕು."

"ಅಂದರೆ ಸ್ವಲ್ಪ ಸ್ಪಷ್ಟವಾಗಿ ಹೇಳಬಹುದೆ ?"

"ವಂಶಪಾರಂಪರ್ಯವಾದ ಅಧಿಕಾರ ಅಗ್ರಜನಿಂದ ಅನುಜನಿಗೆ ಬರಬೇಕು."

"ಯಾವಾಗ ಬರುತ್ತದೆ ?"

ಸ್ಥಪತಿ ಯೋಚಿಸಿದ. "ಬಂದಿರಬೇಕಲ್ಲ. ಲಗ್ನಾತ್ಪರ ಒಂಭತ್ತು ವರ್ಷಗಳಲ್ಲಿಯೇ ಲಭ್ಯವಾಗಿರಬೇಕು. ಅಂದರೆ....." ಸ್ಥಪತಿ ಮಾತು ನಿಲ್ಲಿಸಿದ.

"ಯಾಕೆ ನಿಲ್ಲಿಸಿದಿರಿ ? ಅನುಮಾನವೇನು ?"

"ಸಾವಿನ ಪ್ರಶ್ನೆ ಕೇಳಬಾರದಂತಹದು. ಅದರಿಂದ..."

"ನಿಜ. ನಿಮ್ಮ ಊಹೆ ನಿಜ."

"ಊಹೆಯಲ್ಲ. ಕುಂಡಲಿ ಹೇಳುವ ಕಥೆ ಇದು."

"ಆಮೇಲೆ. ಕಳತ್ರದ ಮೇಲೆ ಕಳತ್ರದ ಯೋಗವಿದೆ."

"ಅಂದರೆ ಮೊದಲ ಪತ್ನಿ ?"

"ಸ್ವಲ್ಪ ತಾಳಿ" ಎಂದು ಮತ್ತೆ ಪರಿಶೀಲಿಸಿ, "ಜೀವಂತ ಇರುತ್ತಾರೆ. ಆದರೆ ಸಂಬಂಧ ಕಡಿದಂತೆ" ಎಂದ.

ಶಾನ್ತಲದೇವಿಯ ಮುಖದ ಮೇಲೆ ಒಂದು ಬಗೆಯ ನಗೆ ಸುಳಿದು ಮಾಯವಾಯಿತು. ಸ್ಥಪತಿ ಅದನ್ನು ಗಮನಿಸಿದ. "ಏಕೆ ? ಸನ್ನಿಧಾನಕ್ಕೆ ನನ್ನ ಮಾತು ಸರಿಯೆನಿಸಲಿಲ್ಲವೆ ?" ಎಂದು ಕೇಳಿದ.

"ನಾನು ಹಾಗೆಲ್ಲಿ ಹೇಳಿದೆ ? ಮುಂದೆ ?"

ಬೆರಳೆಣಿಸಿದ ಸ್ಥಪತಿ, "ಮೂರು, ನಾಲ್ಕು, ಐದು, ಆರು...." ಎಂದು ಬಾಯಲ್ಲಿ ಹೇಳುತ್ತಿದ್ದ.

"ಯಾಕೆ ಸ್ಥಪತಿಗಳೆ ಇದ್ದ ಒಬ್ಬ ಹೆಂಡತಿಯನ್ನು ಬಿಟ್ಟು ಬಂದ ನೀವು ಅನ್ಯರಿಗೆ ಇಷ್ಟು ಜನ ಹೆಂಡತಿಯರನ್ನು ಕೂಡಿಸುತ್ತಿದ್ದೀರಿ ?"

"ಕುಂಡಲಿಯಲ್ಲಿ ಕಾಣುವುದನ್ನು ಲೆಕ್ಕ ಹಾಕುತ್ತಿದ್ದೆ. ಕೂಡಿಸಲು ನಾನಾರು ?"

"ಈಗ ಎಷ್ಟು ಜನ ಪತ್ನಿಯರು ?"

"ದುರ್ಮುಖಿ ಸಂವತ್ಸರದ್ದೂ ಸೇರಿಸಿ ನಾಲ್ಕು ಜನ."

"ಇದರಲ್ಲಿ ಜೀವಂತ ಎಷ್ಟು ?"

"ಎಲ್ಲ ಜೀವಂತ ಇದ್ದಾರೆ."

"ಇಷ್ಟು ಮದುವೆಗಳ ಪರಿಣಾಮ ?"

"ಮನಃಕ್ಲೇಶ."

"ಯಾರಿಗೆ ?"

"ಸಂಬಂಧಿಸಿದ ಎಲ್ಲರಿಗೂ."

"ನಿಮ್ಮ ಈ ಮಾತಿಗೆ ಆಧಾರವೇನು ?"

"ಜೀವನಾನುಭವ."

"ನಾನು ಕೇಳಿದ್ದು ಜೋತಿಷ್ಯದ ಆಧಾರ."

"ಜೀವಾನುಭವ ಬಿಟ್ಟು ಜೋತಿಷ್ಯವೆಲ್ಲಿದೆ ?"

"ಅಂದರೆ ?"

"ಆ ಶಾಸ್ತ್ರದ ಸೂತ್ರೀಕರಣ ಆಗಿರುವುದೇ ಅನುಭವ ವೇದ್ಯವಾದ ಸಂಗತಿಗಳ ಆಧಾರದ ಮೇಲೆ."

"ಎಂದಾಗ ಕೆಲವೊಮ್ಮೆ ಫಲ ನಿರ್ಣಯ ತಪ್ಪಾಗಬಹುದಲ್ಲವೆ ?"

"ಆಗಬಹುದು. ಆದರೆ ಅಂತಹ ಸಂದರ್ಭ ತೀರ ವಿರಳ. ಸಾವಿರದಲ್ಲಿ ಒಂದು ಹಾಗಾಗಬಹುದು."

"ನಾವು ಯೋಚಿಸುವುದೇ ಹಾಗೆ ಸಾವಿರದಲ್ಲಿ ಒಂದಾಗಿಬಿಟ್ಟರೆ ?"

"ಅಂದರೆ ಈವರೆಗೆ ನಾನು ಹೇಳಿದುದು ಸನ್ನಿಧಾನಕ್ಕೆ ಸಮರ್ಪಕವಾಗಿಲ್ಲ ಎಂದಾಯಿತು. ವಾಸ್ತವವಾಗಿ ನಾನು ಜ್ಯೋತಿಷಿ ಅಲ್ಲ. ಸನ್ನಿಧಾನಕ್ಕೂ ಈ ಶಾಸ್ತ್ರ ಗೊತ್ತು. ಅದರಿಂದ ಈಗ ನಡೆದ ಈ ಮಾತುಕತೆಯನ್ನು ಬರೀ ವಿಚಾರ ವಿನಿಮಯ ಎಂದಷ್ಟೆ ಭಾವಿಸಬಹುದು. ಯಾವ ಅಂಶ ತಪ್ಪಾಗಿದೆಯೆಂದರೆ ಅದನ್ನು ಪುನಃ ಪರಿಶೀಲಿಸಿ ತಿಳಿಯಲು ಅನುಕೂಲವಾಗುತ್ತದೆ."

"ನಾನು ನಿಮ್ಮನ್ನು ಪರೀಕ್ಷಿಸುತ್ತಿಲ್ಲ. ಸಹಜವಾಗಿ ಕೇಳಿದೆ. ನೀವು ಅಷ್ಟೇ ಸಹಜವಾಗಿ ಉತ್ತರಿಸಿದಿರಿ."

"ಈ ಕುಂಡಲಿ ಯಾರದ್ದು ?"

"ಬರೀ ಊಹೆಯ ಕುಂಡಲಿ. ಈಗ ಒಂದು ತಿಳಿದ ಕುಂಡಲಿಯನ್ನು ಪರಿಶೀಲಿಸೋಣ. ಕರ್ಕಾಟಕ ಲಗ್ನ, ಲಗ್ನಾಧಿಪತಿ ಲಾಭದಲ್ಲಿ ಉಚ್ಚ. ತೃತೀಯದಲ್ಲಿ ಶನಿ. ಸಪ್ತಮದಲ್ಲಿ ಉಚ್ಚ ಕುಜ, ನೀಚಗುರು. ಅಷ್ಟಮದಲ್ಲಿ ರವಿ, ಶುಕ್ರ. ಭಾಗ್ಯದಲ್ಲಿ ನೀಚ ಬುಧ. ಕರ್ಮ, ಸುಖಸ್ಥಾನಗಳಲ್ಲಿ ರಾಹು ಕೇತುಗಳು. ಈ ಜನ್ಮಕುಂಡಲಿಯ ಫಲ ತಿಳಿಸಬಹುದೆ ?"

"ನಾಲ್ಕು ಪ್ರಬಲವಾದ ರಾಜಯೋಗಗಳು ಈ ಜಾತಕಕ್ಕೆ ಇವೆ. ಒಳ್ಳೆ ಕೀರ್ತಿ ಶಾಲಿಯಾಗಿ ಏಳಿಗೆ ಹೊಂದುವ ಜಾತಕ. ಆದರೆ ಮಾತಾಪಿತೃಗಳಿಬ್ಬರನ್ನೂ ಕಳೆದುಕೊಂಡು ಪರಾಶ್ರಯದಲ್ಲಿ ಬೆಳೆಯಬೇಕು.....ಅಂದರೆ ಇದು ದಣ್ಣಾಯಕ ಬಿಟ್ಟಿಯಣ್ಣನವರ ಜನ್ಮಕುಂಡಲಿಯೆ ?"

"ಹೌದು. ಈಗ ನೀವು ಹೇಳಿದ ನಿರ್ಣಯಕ್ಕೆ ಆಧಾರವೇನು ?"

"ಸ್ಥೂಲವಾಗಿ ಕುಜ, ಚಂದ್ರ, ಶನಿಗಳು ಪರಸ್ಪರ ಕೋಣಗಳಲ್ಲಿರುವುದು ಮಾತೃಸ್ಥಾನಾಧಿಪತಿಯೂ ಪಿತೃಕಾರಕನೂ ಆದ ರವಿಯು ಲಗ್ನಕ್ಕೆ ಅಷ್ಟಮದಲ್ಲಿರುವುದರಿಂದಲೂ ಅವೆರಡು ಗ್ರಹಗಳೂ ಶನಿಯೂ ಷಷ್ಠಾಷ್ಟಕವಾದುದರಿಂದಲೂ ನಷ್ಟವನ್ನೂ, ಗುರು ಲಗ್ನಾಧಿಪತಿಯನ್ನೂ, ಲಗ್ನವನ್ನೂ ವೀಕ್ಷಿಸುವುದರಿಂದ ಉತ್ತಮಾಶ್ರಯವನ್ನೂ ಸೂಚಿಸುತ್ತದೆ."

"ಅಂದ ಮೇಲೆ ನಿಮ್ಮ ಜೋತಿಷ್ಯದ ಬಗೆಗೆ ಮನ್ನಣೆ ಸಿಗಲೇಬೇಕು."

"ಸನ್ನಿಧಾನ ಹಾಗೆ ಭಾವಿಸಿದರೆ ನನ್ನ ಪುಣ್ಯ"

"ಅದೇನು ?"

"ನನ್ನ ನಿರ್ಣಯಕ್ಕೆ ಸನ್ನಿಧಾನ ಬೆಲೆ ಕೊಡಬಹುದು ಎಂದು."

"ಆದರೆ ನೀವು ಸಾವಿರದಲ್ಲಿ ಒಮ್ಮೆಯಾದರೂ ತಪ್ಪು ಮಾಡಬಹುದಲ್ಲ. ನಿಮ್ಮ ಬಾಳಿನ ವಿಚಿತ್ರ ಘಟನೆಗೆ ಕಾರಣವಾದ ಜನ್ಮಕುಂಡಲಿ ನೆನಪಿದೆಯೆ ?"

"ಇದೆ. ಅಲ್ಲಿ ಜನನ ದ್ವಿತೀಯ, ರವಿವಾರ, ಸ್ವಾತಿ ನಕ್ಷತ್ರ ಜೊತೆಗೆ ಚಂದ್ರ ಸೂರ್ಯ ಮತ್ತು ರಾಹು ಒಟ್ಟಿಗೆ ಇದ್ದಾರೆ. ಎಂದಾಗ ಆ ಶಿಶುವಿನ ಜನನಕ್ಕೆ, ಜನ್ಮದಾತೆಯ ಪತಿ ಕಾರಣನಲ್ಲ. ಪರಾಯ ಗಂಡಸು ಕಾರಣ. ಅನುಮಾನಕ್ಕೆಡೆಯೇ ಇಲ್ಲ."

"ಪೂರ್ತಿ ಕುಂಡಲಿ ಹೇಳಿ."

ಸ್ಥಪತಿ ಹೇಳಿದ.

"ಆದರೆ ಇಲ್ಲಿ ಗುರು ಲಗ್ನವನ್ನು ನೋಡುತ್ತಿದ್ದಾನಲ್ಲ. ಅದನ್ನೇಕೆ ನೀವು ಗಮನಿಸಲಿಲ್ಲ."

"ಆ !" ಎಂದ ಸ್ಥಪತಿ ಯೋಚಿಸಿ, "ಅವನು ನೀಚ ಗುರು" ಎಂದ.

"ನೀಚ ಗುರುವಿಗೆ ನೀಚ ಭಂಗ ರಾಜಯೋಗವಿದೆಯಲ್ಲ ಸ್ಥಪತಿಗಳೆ ?"

ಸ್ಥಪತಿ ಮಾತನಾಡಲಿಲ್ಲ. ಮೌನವಾಗಿ ಕುಳಿತ.

"ಆ ವಿಷಯ ಅಲ್ಲಿಗೆ ಬಿಡಿ. ದೈವೇಚ್ಛೆ ಮೀರುವವರಾರು ? ನೀವು ಬಯಸಿದ ಏಕಾಂತ ದರ್ಶನ ಬಹಳ ದೀರ್ಘಕಾಲ ಹಿಡಿಯಿತು. ನಿಮ್ಮ ಹೊರೆ ಇಳಿಯಿತು ತಾನೆ ?"

"ಒಳಗೆ ಮುಳ್ಳಿನ ಹಾಗೆ ಚುಚ್ಚುತ್ತಿದ್ದುದನ್ನು ಹೊರತೆಗೆಯಬೇಕೆಂದು ಇದ್ದೆ. ಈಗ ಆ ಮುಳ್ಳಿನ ಇನ್ನೊಂದು ತುದಿಯೂ ಚೂಪಾಗಿ ಬಿಟ್ಟಿತು. ಹೀಗೂ ಚುಚ್ಚುತ್ತದೆ ಹಾಗೂ ಚುಚ್ಚುತ್ತದೆ."

"ಚುಚ್ಚಿ ಚುಚ್ಚಿ ಅದೇ ಮೊಂಡಾಗಿ ಬಿಡುತ್ತದೆ. ನೀವು ಸ್ವಲ್ಪ ದಿವನಸ ಆ ಕುರಿತು ಚಿಂತಿಸಬೇಡಿ. ನನಗೆ ಮನಸ್ಸು ತೆರೆದು ಎಲ್ಲವನ್ನು ವಿವರಿಸಿದುದು ಒಳಿತಾಯಿತು. ಮುಂದಿನ ವಿಚಾರ ನನಗೆ ಬಿಡಿ" ಎಂದು ಇನ್ನು ಹೊರಡಬಹುದು ಎಂದು ಸೂಚಿಸಲು ಶಾನ್ತಲದೇವಿ ಎದ್ದಳು.

ಎದ್ದು ನಿಲ್ಲುತ್ತಾ ಸ್ಥಪತಿ, "ಒಂದು ನಮ್ರ ಅರಿಕೆ. ಅನುಗ್ರಹಿಸಬೇಕು" ಎಂದ.

"ಏನದು ?"

"ದೇವಮಂದಿರದ ಬಾಹ್ಯ ಸೌಂದರ್ಯ ಹೆಚ್ಚಿಸಲು ಈಗ ಕೈಕೊಂಡಿರುವ ಶಿಲಾ ವಿಗ್ರಹಗಳಲ್ಲಿ ವೈವಿಧ್ಯಮಯ ಜೀವಂತಿಕೆಯನ್ನು ತುಂಬಲು ನನಗೆ ಸನ್ನಿಧಾನ ಕೆಲವು ಮಾದರಿ ಭಂಗಿಗಳನ್ನು ಭಾವ ಮುದ್ರಾಂಕಿತ ಮಾಡಿ ತೋರಿಸಿ ಕೊಡಬೇಕು. ನಾನು ಸನ್ನಿಧಾನ ತೋರುವಂತೆ ಏಕಾಂತದಲ್ಲಿ ಚಿತ್ರಿಸಿಕೊಳ್ಳುತ್ತೇನೆ."

"ಓಹೋ ಆ ಬಿಟ್ಟಿಗನ ಸಲಹೆ ನಿಮ್ಮ ತಲೆಯಲ್ಲಿ ಇನ್ನೂ ಗುಂಗಿಯಂತೆ ಕೊರೆಯುತ್ತಿರಬೇಕು. ಅದೆಲ್ಲ ಸರಿಯಾದೀತೆ ಸ್ಥಪತಿಗಳೆ ? ಶಿಲ್ಪಿಗೆ ಬೇಕಾದ ಭಾವ ಭಂಗಿಗಳನ್ನು ಪಟ್ಟಮಹಾದೇವಿ ಏಕಾಂತದಲ್ಲಿ ನೀಡಿದರು ಎಂದು ತಿಳಿದರೆ ಅದರ ಪರ್ಯವಸಾನ ಏನಾದೀತೆಂದು ನೀವು ಊಹಿಸಲಾರಿರಾ?"

"ಸನ್ನಿಧಾನ ಅನುಗ್ರಹಿಸಿದರೆ ದೇವಮಂದಿರಕ್ಕೆ ಶಾಶ್ವತ ಪ್ರಭೆ ಮೂಡಿ ನಿಲ್ಲುತ್ತದೆ. ಅನುಗ್ರಹಿಸಲಾಗದಿದ್ದರೆ ಅದು ನಾಡಿನ ದುರದೃಷ್ಟ. ನಾನು ತೀರ ಸಣ್ಣವನು. ಹೆಚ್ಚಿಗೆ ಹೇಳಲಾರೆ."

"ನಾಡಿಗಾಗಿ ನಾನು ಯಾವ ತ್ಯಾಗಕ್ಕಾದರೂ ಸಿದ್ಧ. ಆದರೆ ಈ ಜಗತ್ತಿನಲ್ಲಿ ಪ್ರತಿಯೊಬ್ಬರಿಗೂ ಅವರವರ ಮಟ್ಟಿಗೆ ಲೌಕಿಕಗಳುಂಟು. ಅವನ್ನು ಮೀರುವುದು ಸುಲಭವಲ್ಲ. ಅದರಿಂದ ಆತುರದ ಯಾವ ತೀರ್ಮಾನವೂ ಸಾಧ್ಯವಿಲ್ಲ. ನಿಮಗೇನು ಬೇಕೆಂಬುದು ನನಗೆ ಅರ್ಥವಾಗಿದೆ. ಅದನ್ನು ಯಾವ ರೀತಿ

ನಿಮಗೆ ದೊರಕಿಸಿಕೊಡಬೇಕೆಂಬುದನ್ನು ಆಲೋಚಿಸಬೇಕು. ಈಗಿನ್ನು ನೀವು ನಿಮ್ಮ ಕೆಲಸಕ್ಕೆ ಹೋಗಬಹುದು'' ಎಂದು ಕಂಸಾಳ ಬಾಜಿಸಿದಳು. ಸ್ಥಪತಿ ವಂದಿಸಿದ.

ಬಾಗಿಲು ತೆರೆಯಿತು. ಚಟ್ಟಲೆ ಒಳಗೆ ಬಂದು ನಿಂತಳು. ಹೊರಹೋಗುತ್ತಿದ್ದ ಸ್ಥಪತಿ ಅವಳತ್ತ ದೃಷ್ಟಿ ಹೊರಳಿಸಿದ. ಅವಳು ಮುಗುಳು ನಕ್ಕು ತೆರೆಯನ್ನು ಪಕ್ಕಕ್ಕೆ ಸರಿಸಿ ನಿಂತಳು.

ರೇವಿಮಯ್ಯ ಒಳಕ್ಕೆ ಬಂದು ನಿಂತುಕೊಂಡ.

"ಬಹಳ ಸಮಯವಾಗಿ ಬಿಟ್ಟಿತಲ್ಲವೆ ರೇವಿಮಯ್ಯ ? ಸ್ಥಪತಿಗಳ ಕಥೆ ಕೇಳುವುದರಲ್ಲಿ ಸಮಯವೇ ತಿಳಿಯಲಿಲ್ಲ. ಈಗ ಆತನ ಆತ್ಮ ಹಣ್ಣಾಗಿದೆ. ಅದರಿಂದ ಇನ್ನೂ ಅನೇಕ ಒಳ್ಳೆಯ ವಾಸ್ತುರೂಪಗಳು ರೂಪಿತವಾಗುತ್ತವೆ. ಬಗೆಬಗೆಯ ಸುಂದರ ಕಲ್ಪನೆಗಳು ಮೂಡಲು ಈಗ ಅನುವಾಗಿದೆ. ಏಕೆಂದರೆ ಅವರ ಮಿದಿಳಿನಲ್ಲಿ ಕೂತಿದ್ದ ಹೊರೆ ಹಗುರಾಗಿದೆ. ನಡಿ'' ಎಂದಳು. ಅವನು ಮುಂದಡಿ ಇಟ್ಟ. ಶಾನ್ತಲದೇವಿ ಅವನನ್ನು ಹಿಂಬಾಲಿಸಿದಳು. ಚಟ್ಟಲೆಯೂ ಜೊತೆಗೂಡಿದಳು.

# ೧೦. ತಿರುವರಂಗದಾಸ

ಅತ್ತ ಯಾದವಪುರಿಯಲ್ಲಿ ಬಿಟ್ಟಿದೇವ–ಲಕ್ಷ್ಮೀದೇವಿಯರ ದಾಂಪತ್ಯ ಜೀವನ ಒಂದು ಬಗೆಯ ಉತ್ಸಾಹದಿಂದಲೇ ಸಾಗಿತು. ಲಕ್ಷ್ಮೀದೇವಿ ತನ್ನ ಆವರೆಗಿನ ಬಾಳಿನಲ್ಲಿ ಯಾವ ಬಗೆಯ ವೈಭವದ ಬಾಳನ್ನೂ ಕಂಡವಳಲ್ಲ. ದೇವಸ್ಥಾನದ ಪ್ರಸಾದದಿಂದಲೇ ಬೆಳೆದವಳು. ಭಕ್ತಾದಿಗಳು ಬಂದಾಗ ಅವರಲ್ಲಿ ಕೆಲವರಲ್ಲಿನ ಶ್ರೀಮಂತಿಕೆಯನ್ನು ಕಂಡು ಕರುಬಿದುದೂ ಉಂಟು. ತನಗದು ಲಭ್ಯವಾದರೆ ! ಎಂದು ಆಸೆಪಟ್ಟದ್ದೂ ಉಂಟು.

ಈಗ ತನ್ನನ್ನು ನೋಡಿ ಇನ್ನೊಬ್ಬರು ಕರುಬುವಷ್ಟರ ಮಟ್ಟಿಗೆ ತನ್ನಾಸೆ ಫಲಿಸಿದೆ. ಕನಸು ಮನಸ್ಸಿನಲ್ಲಿ ತಾನು ಯೋಚಿಸಲಾಗದಿದ್ದ ರಾಣಿ ಪಟ್ಟ ಸಿಕ್ಕಿದೆ. ಎಂದಾಗ ತಾನು ನಿಜವಾಗಿ ಈಗ ಸ್ವರ್ಗದಲ್ಲಿದ್ದೇನೆ ಎಂದು ಅವಳು ಭಾವಿಸಿದ್ದರೆ ತಪ್ಪೇನು ? ಇನ್ನೂ ಕಿರಿಯ ವಯಸ್ಸು. ಕಲ್ಪನಾತೀತ ಗೌರವ ದೊರೆಯುವಿಕೆ. ಹುಬ್ಬು ಕುಣಿಸಿದರೆ, ತುಟಿ ಅಲುಗಿಸಿದರೆ ನೆರವಿಗೆ ಊಳಿಗದವರು ಸಿದ್ಧ. ಬೇಕು ಬೇಕಾದಾಗ ಬಯಸಿದ ಆಹಾರ ದೊರಕುತ್ತದೆ. ಮೈ ಹೊರುವಷ್ಟು ವೈವಿಧ್ಯಮಯ ವೇಷಭೂಷಣ ಧರಿಸಬಹುದು. ವಾಸ್ತವವಾಗಿ ತನಗೆ ದೊರೆವುದೆಲ್ಲವನ್ನೂ ಹೇಗೆ ಉಪಯೋಗಿಸಬೇಕು, ಉಪಭೋಗಿಸಬೇಕು ಎಂಬುದು ಸಹ ಅವಳಿಗೆ ತಿಳಿಯದಂತಹ ಪರಿಸ್ಥಿತಿಯಲ್ಲಿ ಅವಳು ಯಾದವಪುರದ ಅರಮನೆಯ ಅಂತಃಪುರದಲ್ಲಿ ವಾಸ ಮಾಡುತ್ತಿದ್ದಾಳೆ. ಜೀವನದ ಅಖಂಡ ಸುಖ, ತೃಪ್ತಿಗಳು ತನ್ನ ಪಾಲಿನದೆಂದು ಅವಳು ಭಾವಿಸಿದ್ದಾಳೆ. ಎಂದಾಗ ಅವಳ ಉತ್ಸಾಹಕ್ಕೆ ಮಿತಿಯಲ್ಲಿರಲು ಸಾಧ್ಯ ?

ಅವಳ ಸಾಕು ತಂದೆ ತಿರುವರಂಗದಾಸನೂ ಸಹ ಅವಳ ರಾಣಿಗಿರಿಯ ಲಾಭ ಪಡೆದುಕೊಳ್ಳಲು ತೊಡಗಿದ. ಯಾದವಪುರಿಯಲ್ಲಿ ಅವನ ಪ್ರತಿಷ್ಠೆ ತುಸು ಹೆಚ್ಚಿತ್ತು. ಈಗ ತನ್ನ ಸಾಕು ಮಗಳನ್ನು ಕಾಣುವ ನೆವದಿಂದ ಪದೇ ಪದೇ ಅರಮನೆಗೆ ಹೋಗುವುದು ಬರುವುದು ಹೆಚ್ಚಿತ್ತು. ಅರಮನೆಯಲ್ಲಿ ಅವನೇನು ಮಾಡುತ್ತಿದ್ದನೆಂಬುದು ಯಾರಿಗೂ ತಿಳಿಯುತ್ತಿರಲಿಲ್ಲ. ಆದರೆ ಅವನ ಹೇಳಿಕೆಯನ್ನು ನಂಬಿದ್ದ ಊರ ಜನರಲ್ಲಿ ಅವನು ವಾಸ್ತವವಾಗಿ ಮಹಾರಾಜನ ಆಪ್ತ ಸಲಹೆಗಾರನಾಗಿ ಬಿಟ್ಟಿದ್ದ, ಎಂದ ಮೇಲೆ ಅವನು ಮೆಲ್ಲನೆ ತನ್ನ ಪಾರುಪತ್ಯವನ್ನು ಕ್ರಮ ಕ್ರಮವಾಗಿ ಹಬ್ಬತೊಡಗಿದ. ಅದರ ಕಾವು ಕೆಲವು ಜನರಿಗೂ ತಟ್ಟಿತು. ಒಬ್ಬ ಸಾಮಾನ್ಯ ಧರ್ಮದರ್ಶಿಯ ಪಾರುಪತ್ಯ ಹೆಚ್ಚಿದರೆ ಕೆಲವರ ಸಹನೆಗೆ ಅದು ಪಥ್ಯವಾಗಲಿಲ್ಲ. ಸಣ್ಣಪುಟ್ಟ ದೂರುಗಳ ರೂಪದಲ್ಲಿ ಸಚಿವ ನಾಗಿದೇವಣ್ಣನವರೆಗೆ ಮುಟ್ಟಿತು. ಅವನು ದೂರು ತಂದವರಿಗೇ ಉಪದೇಶ ಮಾಡಿಬಿಟ್ಟ "ಮಹಾ ಸನ್ನಿಧಾನ, ಧರ್ಮದರ್ಶಿಯ ಮಗಳ ಕೈ ಹಿಡಿದಿರುವಾಗ ನಾವುಗಳು ನಾಲಿಗೆ ಬಿಗಿ ಹಿಡಿದು ಸಹಿಸಿಕೊಳ್ಳಬೇಕು. ಇದನ್ನು ಹೆಚ್ಚಿಸ ಹೊರಟರೆ ಆತ

ರಾಣಿಯ ಮುಖಾಂತರ ಸನ್ನಿಧಾನದ ಕಿವಿ ತಿರುಗಿಸಬಹುದು. ಆಗ ನಾವುಗಳು ವೃಥಾ ರಾಜಕೋಪಕ್ಕೆ ಒಳಗಾಗಬೇಕಾಗಬಹುದು. ಹೇಗೂ ಸನ್ನಿಧಾನ ರಾಜಧಾನಿಗೆ ಬೇಗಲೇ ಬಿಜಯ ಮಾಡಿಸುತ್ತಾರೆ. ಆಗ ಧರ್ಮದರ್ಶಿಯೂ ಅಲ್ಲಿಗೆ ಹೋಗಿಬಿಡುತ್ತಾರೆ. ಅವರೆಗೆ ಸುಮ್ಮನಿದ್ದು ಬಿಡುವುದು ಜಾಣತನ'' ಎಂದು.

ಸಚಿವನೇ ಹಾಗೆ ಅಭಿಪ್ರಾಯ ಪಟ್ಟ ಮೇಲೆ ಸಾಮಾನ್ಯರು ಏನು ಮಾಡಲು ಸಾಧ್ಯ ? ಆದರೂ ದೂರು ತಂದವರಲ್ಲಿ ಒಬ್ಬ ಗಣ್ಯ, "ಸಚಿವರು ತಪ್ಪು ತಿಳಿಯಬಾರದು. ನಮ್ಮ ರಾಜಮನೆತನದವರು ಈವರೆಗೆ ಯಾವಾಗಲೂ ವ್ಯಕ್ತಿಯ ಪ್ರಭಾವಕ್ಕೆ ಒಳಗಾಗಿ ನಡೆದುಕೊಂಡಿಲ್ಲ. ಯಾವುದೇ ವಿಷಯ ಅವರ ಗಮನಕ್ಕೆ ಬಂದರೂ ವಸ್ತುನಿಷ್ಠವಾಗಿ ವರ್ತಿಸಿದ್ದಾರೆ. ಅದರಿಂದ ಸನ್ನಿಧಾನಕ್ಕೆ ಸುದ್ದಿ ಮುಟ್ಟಿಸಿ ಬಿಡುವುದು ಒಳಿತೆಂದು ನನ್ನ ಅಭಿಪ್ರಾಯ'' ಎಂದ.

"ನನಗೆ ಸೂಕ್ತವೆಂದು ತೋರಿದುದನ್ನು ತಿಳಿಸಿದ್ದೇನೆ. ಇದರ ಮೇಲೆ ನಿಮ್ಮ ಇಷ್ಟ. ಸನ್ನಿಧಾನ ಈಗ ಅತ್ಯಂತ ಕಿರಿಯ ರಾಣಿಯವರ ನವ ವಿಲಾಸದಲ್ಲಿ ತೊಡಗಿದ್ದಾರೆ. ಬಹುಶಃ ಅದರಿಂದಲೇ ಪಟ್ಟಮಹಾದೇವಿಯವರಾಗಲೀ, ಉಳಿದ ರಾಣಿಯರಾಗಲೀ, ಇಲ್ಲಿ ನಿಲ್ಲದೆ ರಾಜಧಾನಿಗ ಹೊರಟುಹೋಗಿದ್ದಾರೆ. ಎಂದಾಗ ನಾನು ಹೆಚ್ಚಿಗೆ ವಿವರಿಸುವುದು ಅನುಚಿತ.''

"ಅಂದರೆ ಸಚಿವರ ಅಭಿಪ್ರಾಯದಲ್ಲಿ ಈಗ ಸನ್ನಿಧಾನ ಕಿರಿಯ ನವರಾಣಿಯವರ ಕೈಗೊಂಬೆಯೇನು ?''

"ಛೆ, ಛೆ. ನಾನೆಲ್ಲಿ ಹಾಗೆ ಹೇಳಿದೆ ?''

"ಹೇಳಲಿಲ್ಲ. ಆದರೆ ಪರ್ಯಾಯವಾಗಿ ಅದೇ ಅರ್ಥ ಧ್ವನಿಸುತ್ತದೆ.''

"ನಾನು ತಿಳಿಸಿದುದು ಕೇವಲ ತಾತ್ಕಾಲಿಕ ಲೌಕಿಕ ದೃಷ್ಟಿ. ಇದರ ಮೇಲೆ ನಾನು ಹೆಚ್ಚಿಗೆ ಏನನ್ನೂ ಹೇಳಲಾರೆ. ಸನ್ನಿಧಾನ ಒಂದು ವೇಳೆ ಯಾರದಾದರೂ ಕೈಬೊಂಬೆಯಾಗುವುದಿದ್ದರೆ ಪಟ್ಟಮಹಾದೇವಿಯವರ ಕೈಗೊಂಬೆ ಆಗಬಹುದಿತ್ತು. ಆದರೆ ಪಟ್ಟಮಹಾದೇವಿಯವರ ಸ್ವಭಾವವೇ ಒಂದು ಬಗೆ. ಅವರ ವಿಶಾಲದೃಷ್ಟಿ ಯಾರಿಗೂ ಬರುವುದಿಲ್ಲ. ಎಂತಲೇ ಕಿರಿಯ ರಾಣಿಗೆ ಈಗಿನ ವಯಸ್ಸಿನಲ್ಲಿ ವಿಲಾಸದ ಅವಶ್ಯಕತೆ ಇದೆಯೆಂದು ಭಾವಿಸಿ ತಾವೇ ದೂರ ಸರಿದಿದ್ದಾರೆ. ಅದು ಅನುಭವಿಗಳ ಮಾರ್ಗ. ಅದರಿಂದ ನಾವುಗಳು ಈಗ ಸನ್ನಿಧಾನದ ಏಕಾಂತತೆಗೆ ಚಿಂತೆ ತುಂಬುವುದು ಒಳಿತಲ್ಲ ಎಂದು ನನಗನ್ನಿಸುತ್ತದೆ.''

"ಹಾಗಿದ್ದರೆ ನಾವೂ ಕಾಯುತ್ತೇವೆ. ಆದರೂ ತಮಗೆ ಸರಿ ತೋರಿದರೆ ಆ ಧರ್ಮದರ್ಶಿಗಳಿಗೆ ಆತನ ಧೋರಣೆ ಬದಲಾಯಿಸಿಕೊಳ್ಳುವಂತೆ ಸೂಚಿಸಿ.''

"ಅದಕ್ಕೇನು ? ಸೂಚಿಸೋಣ. ಅವರೂ ಇಲ್ಲಿಯವರಲ್ಲ. ಹೊರಗಿನಿಂದ ಬಂದವರು. ನಮ್ಮ ರಾಜ್ಯದ ರೀತಿ ನೀತಿ ತಿಳಿದಿರಲಾರದು'' ಎಂದು ಆ ವಿಚಾರಕ್ಕೆ ನಾಗಿದೇವಣ್ಣ ಅಂದು ಪೂರ್ಣವಿರಾಮ ಹಾಕಿದ.

ಈ ಯಾವ ವಿಷಯವೂ ಮಹಾರಾಜನಿಗೆ ಗೊತ್ತೇ ಇಲ್ಲ. ಪ್ರತಿ ದಿನ ಧರ್ಮದರ್ಶಿ ಮಾತ್ರ ಲಕ್ಷ್ಮೀನಾರಾಯಣಸ್ವಾಮಿಯ ತೀರ್ಥ ಪ್ರಸಾದವನ್ನು ತಂದು ಮಹಾರಾಜರಾಣಿಯರಿಗೆ ಕೊಡುತ್ತಿದ್ದ. ವಿಶೇಷ ಯಾವ ಮಾತುಕತೆಗೂ ಅವಕಾಶವಿಲ್ಲದೆ ಅದು ಒಂದು ನಿತ್ಯ ಕಟ್ಟಳೆಯ ವಿಧಿಯಷ್ಟೇ ಆಗಿತ್ತು. ಮಹಾರಾಜನ ಬಳಿಯಂತೂ ಅವನಿರುತ್ತಿದ್ದುದು ಕೇವಲ ಕೆಲವು ಕ್ಷಣಗಳಷ್ಟೇ ಆದರೂ ರಾಣಿಯ ಬಳಿ ಸ್ವಲ್ಪ ಕಾಲ ಕಳೆಯುತ್ತಿದ್ದ. ಊರಿನ ಗಣ್ಯರಿಂದ ಬಂದ ಸೂಚನೆಯನ್ನು ಒಮ್ಮೆ ನಾಗಿದೇವಣ್ಣ ಮೆಲ್ಲನೆ

ಧರ್ಮದರ್ಶಿಗೆ ಉಸುರಿ, ಪೊಯ್ಸಳ ರಾಜ್ಯದ ರೀತಿ, ನಡುವಳಿಕೆಗಳ ಬಗೆಗೆ ಕೊಂಚ ತಿಳಿವಳಿಕೆ ಕೊಟ್ಟು "ಜನಸಾಮಾನ್ಯರಲ್ಲಿ ಅರಮನೆಯ ವಿಷಯ ಮಾತನಾಡುವುದಾಗಲಿ, ಸ್ವಪ್ರತಿಷ್ಠೆಯನ್ನು ಹೆಚ್ಚಿಸುಕೊಳ್ಳುವ ರೀತಿಯಲ್ಲಿ ವರ್ತಿಸುವುದಾಗಲಿ, ಒಳಿತಾಗುವುದಿಲ್ಲ. ಈಗೇನೋ ರಾಣಿಯವರು ತಮಗೆ ಸಂಬಂಧವೆಂದು ನನ್ನನ್ನೂ ಮೀರಿ ಅವರು ಸನ್ನಿಧಾನದವರೆಗೆ ಹೋಗುವ ಪರಿಸ್ಥಿತಿ ಉಂಟುಮಾಡಿಕೊಳ್ಳಬೇಡಿ" ಎಂದು ಸಲಹೆ ಮಾಡಿದ. ಧರ್ಮದರ್ಶಿಗೆ ಮಾತು ಅಷ್ಟು ಪಥ್ಯವೆನಿಸಲಿಲ್ಲವಾದರೂ ಸಚಿವನ ಮಾತನ್ನು ವಿರೋಧಿಸುವ ಧೈರ್ಯ ಅವನಿಗೆ ಉಂಟಾಗಲಿಲ್ಲ. 'ಅಪ್ಪಣೆ' ಎಂದಷ್ಟು ಹೇಳಿ ನಂತರ ಈ ವಿಷಯವನ್ನು ರಾಣಿಯ ಬಳಿ ತೆಗೆಯ ಬಯಸಿ, "ಮಗು, ನಾನು ಮಹತ್ತರವಾದ ಆಸೆ ಇಟ್ಟುಕೊಂಡು ನಿನ್ನನ್ನು ರಾಣಿಯಾಗುವಂತೆ ಮಾಡಿದೆ" ಎಂದ.

"ಶ್ರೀಮದಾಚಾರ್ಯರು ನಿಮ್ಮನ್ನು ಇಲ್ಲಿಗೆ ಕರೆಸಿಕೊಂಡಿದ್ದರಿಂದ ತಾನೆ ಆ ಯೋಚನೆ ನಿಮ್ಮಲ್ಲಿ ಬಂದುದು" ಎಂದಳು ಲಕ್ಷ್ಮೀದೇವಿ.

"ಲಕ್ಷ್ಮೀ ನೀನು ನನ್ನ ಸ್ವಂತ ಮಗಳಲ್ಲ. ದೇವರು ಕರುಣಿಸಿದ ಮಗು. ಸ್ವಂತ ಮಗಳ ಹಾಗೆ ನಿನ್ನನ್ನು ಸಾಕಿದೆ. ನಿನಗೆ ನಿನ್ನ ಮಾತಾಪಿತೃಗಳು ಯಾರೆಂದು ಗೊತ್ತಿಲ್ಲ; ನನಗೂ ತಿಳಿಯದು. ಸರ್ವಲಕ್ಷಣ ಪಡೆದ ನೀನು ಉತ್ತಮ ಕುಲ ಪ್ರಸೂತೆಯೆಂದೇ ಭಾವಿಸಿ ನಾನು ನಿನ್ನನ್ನು ಬೆಳೆಸಿದೆ, ಹುಟ್ಟಾ ಶ್ರೀವೈಷ್ಣವಿಯಂತೆ. ಪೊಯ್ಸಳ ರಾಜ್ಯದ ವಿಚಾರ ನನಗೆ ತಿರುಮಲೆಗೆ ಬರುತ್ತಿದ್ದ ಯಾತ್ರಿಕರಿಂದ ತಿಳಿಯುತ್ತಿತ್ತು. ರಾಜರು ಶ್ರೀಮದಾಚಾರ್ಯರ ಶಿಷ್ಯತ್ವ ವಹಿಸಿದುದೂ ಸೂಕ್ಷ್ಮವಾಗಿ ನನಗೆ ತಿಳಿದು ಬಂತು. ಆಗ ನನ್ನಲ್ಲಿ ಒಂದು ಆಸೆ ಅಂಕುರಿಸಿತು. ಏಕೆ ಆ ಆಸೆ ಅಂಕುರಿಸಿತು ಎಂದು ಹೇಳಲಾರೆ. ಆದರೆ ಆ ಆಸೆ ಅಂಕುರಿಸಿದ್ದು ನಿಜ. ಅದರ ಫಲವೇ ನೀನೀಗ ರಾಣಿಯಾಗಿರುವುದು. ನನ್ನಾಸೆಯೂ ಅದೇ ಆಗಿತ್ತು. ಅದಕ್ಕಾಗಿಯೇ ನಾನೇ ಇತ್ತ ನಿನ್ನನ್ನು ಕರೆದುಕೊಂಡು ಬಂದುಬಿಟ್ಟೆ. ಶ್ರೀಮದಾಚಾರ್ಯರು ನನ್ನನ್ನೇನು ಕರೆಸಲಿಲ್ಲ. ನಾನೂ ಅವರ ಶಿಷ್ಯ. ಬಂದ ಮೇಲೆ ನನಗೊಂದು ವೃತ್ತಿಯ ಅವಶ್ಯಕತೆ ಇತ್ತು. ಈ ಧರ್ಮದರ್ಶಿತ್ವ ದೊರಕಿತು. ಯಥಾಮತಿ ಶ್ರೀಮದಾಚಾರ್ಯರ ಆದೇಶದಂತೆ ನಡೆಸಿಕೊಂಡು ಬರುತ್ತಾ ನನ್ನಾಸೆಯನ್ನು ಕೈಗೂಡಿಸಿಕೊಂಡೆ. ಹೇಗೆ ಏನೇನು ಮಾಡಿದೆ ಎಂದೇನನ್ನೂ ಕೇಳಬೇಡ. ಏಕೆಂದರೆ ನನಗೆ ನಿನ್ನ ಸುಖ ಎಲ್ಲಕ್ಕಿಂತ ಮುಖ್ಯವಾಗಿತ್ತು. ನಿನ್ನನ್ನು ನಾನು ಯಾರಿಗೆ ಲಗ್ನ ಮಾಡಿಕೊಡಬೇಕೆಂಬುದು ಸಮಸ್ಯೆಯಾಗಿತ್ತು. ನಿನ್ನ ಮಾತಾಪಿತೃಗಳು ನನ್ನ ಹಾಗೆ ಜನ್ಮತಃ ಶ್ರೀವೈಷ್ಣವ ಬ್ರಾಹ್ಮಣರಾಗಿದ್ದರೋ ಇಲ್ಲವೋ ತಿಳಿಯದು. ಅದರಿಂದ ನಿನ್ನನ್ನು ನಾನು ಶ್ರೀವೈಷ್ಣವ ಬ್ರಾಹ್ಮಣನಿಗೆ ಕನ್ಯಾದಾನ ಮಾಡುವಂತಿರಲಿಲ್ಲ. ಹಾಗೆಂದು ಬೇರೆ ಎಲ್ಲೋ ನಿನ್ನ ಬಾಳನ್ನು ತೇಯಿಸಲು ನನಗೆ ಇಷ್ಟವಾಗಲಿಲ್ಲ. ವಾಸ್ತವವಾಗಿ ನನ್ನ ಹೊಟ್ಟೆಯ ಮಗಳಂತೆ ನೀನು ನನ್ನನ್ನು ಪ್ರೀತಿಸುತ್ತ ಬಂದಿದ್ದೀಯೆ. ನಿನ್ನ ಬಾಳು ಸುಖಮಯವಾಗಬೇಕೆಂಬ ನನ್ನ ಬಯಕೆ ಅಸಾಧುವಾದುದಾಗಿರಲಿಲ್ಲ ನಿನ್ನನ್ನು ರಾಣಿಯಾಗಿ ಮಾಡಲು ನಾನು ಮಾಡಿದ ಪ್ರಯತ್ನವೇನೋ ಫಲಿಸಿತು. ಆದರೂ ನನ್ನಲ್ಲಿ ಇತ್ತೀಚೆಗೆ ಒಂದು ಶಂಕೆ ಮೂಡಿ ಬಂದಿದೆ. ಅದರಿಂದ ನೀನು ಈವರೆಗೆ ಅರಮನೆಯಲ್ಲಿ ಕಳೆದ ನಿನ್ನ ಬಾಳು ನಿನಗೆ ಹೇಗೆನ್ನಿಸಿದೆ ಎಂದು ನಾನು ತಿಳಿಯಬೇಕಾಗಿದೆ."

"ಇನ್ನಿದಕ್ಕಿಂತ ಭಾಗ್ಯ ದೊರೆಯಲು ಸಾಧ್ಯವೆ ಅಪ್ಪ ? ನಾನು ನಿಮ್ಮ ಕೈಗೆ ಸಿಕ್ಕದೆ ಬೇರಾರ ಕೈಗೋ ಸಿಕ್ಕಿದ್ದರೆ ನನ್ನ ಬಾಳು ಏನಾಗುತ್ತಿತ್ತೋ ಯಾರು ಬಲ್ಲರು ?" ಎಂದಳು ಲಕ್ಷ್ಮೀದೇವಿ.

"ನಿನ್ನ ಅದೃಷ್ಟವನ್ನು ಬದಲಾಯಿಸಲು ಅದೃಷ್ಟ ಬರೆದ ಬ್ರಹ್ಮನಿಗೇ ಸಾಧ್ಯವಿಲ್ಲ ಮಗು. ಅದರಿಂದಲೇ ನೀನು ಬೇರಾರ ಕಣ್ಣಿಗೂ ಬೀಳದಂತೆ ನನ್ನ ಕಣ್ಣಿಗೇ ಬೀಳುವಂತೆ ದೇವರು ಮಾಡಿದ."

"ಅಪ್ಪ ನಿಜವಾಗಿ ಮಹಾರಾಜರು ತುಂಬಾ ಒಳ್ಳೆಯವರು. ಅವರು ನನ್ನನ್ನು ತುಂಬಾ ಪ್ರೀತಿಸುತ್ತಾರೆ. ನಾನೇನು ಕೇಳಿದರೂ ಇಲ್ಲವೆನ್ನುವುದಿಲ್ಲ. ಆದರೆ ನನಗೇ ಕೇಳುವುದಕ್ಕೆ ತೋಚುವುದಿಲ್ಲ."

"ಅದೇನೋ ಸರಿ. ಮಹಾರಾಜರು ತುಂಬಾ ಉದಾರಿಗಳು. ಅವರಿಗೆ ಶ್ರೀಮದಾಚಾರ್ಯರ ಮಾತು ಎಂದರೆ ವೇದವಾಕ್ಯ. ನಾನು ಕೇಳಿದುದು ಅದಲ್ಲ. ಅರಮನೆಯಲ್ಲಿ ನಿನ್ನನ್ನು ಹೇಗೆ ಕಾಣುತ್ತಾರೆ ?"

"ಹೇಗೆ ಕಾಣುತ್ತಾರೆ ಎಂದರೆ ? ರಾಣಿಯ ಹಾಗೆ ಕಾಣುತ್ತಾರೆ. ತುಂಬಾ ಗೌರವಿಸುತ್ತಾರೆ."

"ಅಂದರೆ ನಿನ್ನ ಮನಸ್ಸಿಗೆ ನೋವಾಗುವಂತಹದು ಏನೂ ನಡೆದಿಲ್ಲ ತಾನೆ ?"

"ಯಾಕೆ ನಡೆಯುತ್ತದೆ ? ಅವರಿಗೇನು ಗೊತ್ತಿಲ್ಲವೆ, ನಾನು ರಾಣಿ, ಮೇಲಾಗಿ ಮಹಾರಾಜರಿಗೆ ತುಂಬಾ ಬೇಕಾದವಳು ಎಂದು."

"ಅದೀಗ ಜಾಣತನದ ಮಾತು ಮಗು. ಅರ್ಚಕ ಮನೆತನದ ವಾತಾವರಣದಲ್ಲಿ ಬೆಳೆದ ನಿನಗೆ ಇಲ್ಲಿ ಒಗ್ಗುತ್ತದೆಯೋ ಹೇಗೋ ಎಂದು ನನಗೆ ಸ್ವಲ್ಪ ಅನುಮಾನವಿತ್ತು. ಮಗು, ಹೊಸ ದಾಂಪತ್ಯದ ಬಾಳು ಯಾವಾಗಲೂ ಒಂದು ಬಗೆ. ತುಂಬ ರಸಮಯವೆನ್ನಿಸುತ್ತದೆ. ಅದೇ ಗುಂಗಿನಲ್ಲಿ ಎಚ್ಚರ ತಪ್ಪಬಾರದು. ಅದರಿಂದ ನೀನು ಮಹಾರಾಜರಿಗೆ ತುಂಬಾ ಬೇಕಾದವಳಾಗಿಯೇ ವರ್ತಿಸಬೇಕು"

"ಅಂದರೆ ?"

"ಅವರಿಗೆ ನೀನು ಸದಾ ಬೇಕೆನ್ನಿಸಿದಾಗಲೇ ಅವರು ನೀನು ಹೇಳಿದಂತೆ ಕೇಳುವುದು. ಆ ಮೋಡಿ ನಿನ್ನಲ್ಲಿರಬೇಕು."

"ಇದೇಕೆ ಈವರೆಗೆ ಇಲ್ಲದ ಈ ಮಾತು ಇವತ್ತು ನಿಮ್ಮಿಂದ ?"

"ಈಗ ನಾನು ನಿನಗೇನಮ್ಮ ಆಗಬೇಕು ?"

"ತಂದೆ."

"ಮಹಾರಾಜರಿಗೆ ?"

"ಮಾವ."

"ಅಂದರೆ ನನಗೆ ಆ ಸಲಿಗೆ ಇಲ್ಲವೆ."

"ಇಲ್ಲ ಎಂದು ಯಾರು ಹೇಳುತ್ತಾರೆ ?"

"ಸಚಿವರು ಇವತ್ತು ಒಂದು ಉಪನ್ಯಾಸವನ್ನೇ ಬಿಗಿದರು. ನಾನು ಮಹಾರಾಜರ ಮಾವ ಎಂಬ ವಿಷಯ ಹೇಳಿಕೊಳ್ಳಬಾರದಂತೆ."

"ಯಾಕಂತೆ ?"

"ಹಾಗೆ ಹೇಳಿಕೊಂಡರೆ ಸ್ವಪ್ರತಿಷ್ಠೆ ಹೆಚ್ಚಿಸಿಕೊಂಡಂತೆಯಂತೆ. ಅದರಿಂದ ಅದನ್ನು ಹೇಳಬಾರದಂತೆ. ಅರಮನೆಯ ವಿಷಯವನ್ನು ಮಾತನಾಡಬಾರದಂತೆ."

"ಅದೇನೋ ನನಗೆ ಈ ವಿಷಯ ತಿಳಿಯದು ಅಪ್ಪ. ಒಮ್ಮೆ ಮಹಾರಾಜರೇ ನನಗೆ ಹೇಳಿದ್ದರು.

ಅರಮನೆಯ ಯಾವುದೇ ವಿಚಾರ ಕೇಳಿದ ಕಿವಿಯಲ್ಲಿ ಮಾತ್ರ ಉಳಿಯಬೇಕೇ ವಿನಾ ಯಾರ ಬಾಯಲ್ಲೂ ಸುಳಿಯಬಾರದು ಎಂದು.''

''ಕೇಳಿಕೊಂಡು ಸುಮ್ಮನಿದ್ದು ಬಿಟ್ಟೆಯೇನಮ್ಮ ?''

''ಇಲ್ಲ. 'ಯಾಕೆ' ಎಂದು ಕೇಳಿದೆ. 'ಒಂದು ವಿಷಯ ಹೇಳಿದರೆ ಅದಕ್ಕೆ ನೂರಾರು ರೂಪ ಕೊಟ್ಟು ಜನ ಬಾಯಿ ಚಪಲವನ್ನು ತೀರಿಸಿಕೊಳ್ಳುತ್ತಾರೆ. ಅದರಿಂದ ಅದಕ್ಕೆ ಅವಕಾಶ ಕೊಡಬಾರದು' ಎಂದರು. ನನಗೂ ಸರಿ ಎನ್ನಿಸಿತು.''

''ಹಾಗೆಬಿಟ್ಟರೆ ನಾವು ಒಪ್ಪರ ಹಾಕಿದ ಕುದುರೆಯಂತೆ ಆಗುತ್ತೇವೆ. ಸ್ವಾತಂತ್ರ್ಯವೆಂಬುದು ಹೆದರಿ ದೂರ ಓಡಿರುತ್ತದೆ. ಅದೊಂದು ಬಾಳಾದೀತೇನಮ್ಮ ?''

''ಮನುಷ್ಯ ಎಂದ ಮೇಲೆ ಯಾವುದಾದರೂ ಕಟ್ಟುಪಾಡಿನಲ್ಲಿ ಇರಬೇಕಲ್ಲವೇನಪ್ಪ. ಆ ಕಟ್ಟುಪಾಡಿಲ್ಲದಿದ್ದರೆ ಸಮಾಜ ಎಂಬುದೇ ಅಸ್ತಿತ್ವದಲ್ಲಿ ಇರುತ್ತಿರಲಿಲ್ಲವಲ್ಲವೇನಪ್ಪ ?''

''ಅಂದರೆ ನಿನಗೆ ಆಗಲೇ ಏನೇನೋ ಶಿಕ್ಷಣ ಆಗಿದೇಂತ ಆಯಿತು. ಮಗು, ನೀನು ಪ್ರಜ್ಞಾವಂತಳಾಗುವುದಕ್ಕೆ ನಾನು ಬೇಡವೆನ್ನುವುದಿಲ್ಲ. ಆದರೆ ಪ್ರಜ್ಞಾವಂತೆ ಎಂಬ ಬುರುಡೆಯ ಮಾತಿಗೆ ಬೆರಗಾಗಿ, ತ್ಯಾಗ ಎನ್ನುವ ಹೆಸರಿನಲ್ಲಿ ನಿನ್ನ ಅಸ್ತಿತ್ವವನ್ನು ಕಳೆದುಕೊಳ್ಳಬೇಡ. ಮೊದಲು ನೀನು ಶ್ರೀವೈಷ್ಣವಳು. ನಂತರ ನೀನು ರಾಣಿ. ನಿನ್ನ ಯಾವುದೇ ಕ್ರಿಯೆಯಲ್ಲಿ ನಿನ್ನ ಶ್ರೀವೈಷ್ಣವಿಕೆಗೆ ಸೋಲನ್ನು ತಂದುಕೊಳ್ಳಬೇಡ. ಶ್ರೀವೈಷ್ಣವತ್ವದಲ್ಲಿ ಶ್ರೀ ಮುಖಾಂತರವೇ ವಿಷ್ಣುವಿಗೆ ಅಸ್ತಿತ್ವ. ಎಂದರೆ ಹೆಣ್ಣಿನ ಮಾತಿಗೆ ಗಂಡು ಮನ್ನಣೆ ಕೊಡುವಂತೆ ಮಾಡುವುದೇ ಸ್ತ್ರೀತ್ವದ ಹಿರಿಮೆ : ನೀನು ನಿನ್ನ ಸ್ತ್ರೀತ್ವ ಕಾಪಾಡಿಕೊಳ್ಳದಿದ್ದರೆ ನನಗೆಲ್ಲಿ ರಕ್ಷಣೆಯಮ್ಮ ?''

''ಯಾಕೆ ಅಪ್ಪ ನಿಮಗೆ ಈ ಭಯ ? ಯಾರಾದರೂ ನಿಮ್ಮ ಧರ್ಮದರ್ಶಿತ್ವಕ್ಕೆ ಅಡ್ಡಿ ತಂದಿದ್ದಾರೆಯೆ?''

''ಶ್ರೀಮಾದಾಚಾರ್ಯರ ರಕ್ಷಣೆ ನನಗಿರುವವರೆಗೆ ಆ ವಿಷಯದಲ್ಲಿ ಯಾರಿಗೂ ಕೈ ಹಾಕುವ ಧೈರ್ಯ ಬರುವುದಿಲ್ಲ.''

''ಅಂದಮೇಲೆ ನಿಮಗಿನ್ನೇನು ರಕ್ಷಣೆ ಬೇಕು ? ನಿಮಗೆ ಸುಖವಾದ ಬದುಕು ಸಾಗಿಸಲು ಎಲ್ಲವೂ ಆ ಧರ್ಮದರ್ಶಿತ್ವದಿಂದ ಒದಗುತ್ತಿಲ್ಲವೆ ?''

''ಏನು ಮಗು ಇದು, ನಿನ್ನ ಈ ಮಾತು ? ಯಾಕೆ ನಿನಗೆ ಆಗಲೆ ರಾಣಿಯ ಗಾಳಿ ತುಂಬಾ ಬೀಸಿ ಮಂಕು ಕವಿದಂತಾಗಿದೆ. ನನಗೇನಮ್ಮ ? ಒಂಟಿ. ಎಲ್ಲೂ ಇಲ್ಲದಿದ್ದರೆ ಉಪಾದಾನಕ್ಕೆ ಹೋಗಿ ಹೊಟ್ಟೆ ತುಂಬಿಕೊಳ್ಳಬಹುದು. ಇಲ್ಲ ನಾನು ಕಲಿತ ನಾಲ್ಕು ಅಕ್ಷರ ಹೇಳಿಕೊಟ್ಟರೆ ನನ್ನ ಬದುಕು ಸಾಗುತ್ತದೆ. ಆದರೆ ನನಗಿರುವ ಯೋಚನೆಯೆಲ್ಲ ನಿನ್ನ ಸಲುವಾಗಿ.''

''ಅಪ್ಪ ಆ ಕುರಿತು ನೀವೇನು ಚಿಂತಿತರಾಗಬೇಕಾಗಿಲ್ಲ. ಮಹಾರಾಜರು ಅದಕ್ಕೆ ಎಲ್ಲ ಸರಿಯಾದ ವ್ಯವಸ್ಥೆ ಮಾಡುತ್ತಾರೆ.''

''ಮಗು, ನಿನಗೆ ಏನು ಹೇಳಲಮ್ಮ ? ನೀನಿನ್ನೂ ಹಸುಗೂಸಷ್ಟೆ ನೀನು ಈ ಯಾದವಪುರಿಯಲ್ಲಿಯೇ ಎಲ್ಲ ಕಾಲದಲ್ಲೂ ಇರುವುದಿಲ್ಲ. ಎಂದಿದ್ದರೂ ನಿನ್ನ ಇರುವಿಕೆ ಮುಂದೆ ರಾಜಧಾನಿಯಲ್ಲೇ. ನಾನಿಲ್ಲೇ ಇದ್ದು ಬಿಟ್ಟರೆ ಅಲ್ಲಿ ರಾಜಧಾನಿಯಲ್ಲಿ ನಿನ್ನ ಬಗೆಗೆ ಆಲೋಚಿಸುವವರು ಯಾರಮ್ಮ ಇರುತ್ತಾರೆ ?''

"ಏನಪ್ಪ ಇದು. ನೀವು ಏಕೋ ಮಕ್ಕಳ ಹಾಗೆ ಹೇಳುತ್ತಿದ್ದೀರಲ್ಲ ನನ್ನ ಬಗೆಗೆ ಆಲೋಚಿಸಲು ಕೈ ಹಿಡಿದು ಪ್ರೀತಿಸುವ ಮಹಾರಾಜರಿದ್ದಾರೆ. ಮತ್ತೆ ನೋಡಿಕೊಳ್ಳಲು ಹಿರಿಯ ರಾಣಿಯರು, ಪಟ್ಟಮಹಾದೇವಿಯವರು ಇದ್ದಾರೆ. ಇದರ ಮೇಲೆ ರಾಣಿಯಾದ ನನಗೇ ಕೆಲವು ಸ್ವಯಂಸಿದ್ಧ ಸೌಕರ್ಯಗಳು ಇರುತ್ತವೆ."

"ಹಾಗಲ್ಲ ಮಗು. ನಿನಗೆ ಲೋಕಾನುಭವ ಸಾಲದು. ಪಟ್ಟಮಹಾದೇವಿಯವರು ಇರಬಹುದು. ಅವರು ಜೈನರು. ಉಳಿದ ರಾಣಿಯರು ಹುಟ್ಟಾ ಶೈವರು. ರಾಣಿಯರಲ್ಲಿ ಈ ಧರ್ಮವ್ಯತ್ಯಾಸ ಇದ್ದಾಗ ನೀನು ಶ್ರೀವೈಷ್ಣವಳಾಗಿ ಒಂಟಿಯಾಗಿ ಬಿಡುತ್ತೀ. ಧರ್ಮದ ಸಂಬಂಧದಲ್ಲಿ ಏನಾದರೂ ತೊಡಕು ಬಂದರೆ ಅದನ್ನು ನಿವಾರಿಸಲು ನಾನು, ನೀನಿದ್ದಲ್ಲೇ ಇರಬೇಕಮ್ಮ. ಅದರಿಂದ ನಿನಗೇನು ತೊಂದರೆ ?"

"ಅಂದರೆ ನಿಮ್ಮ ಮನಸ್ಸಿನಲ್ಲಿ ಏನಿದೆ ಸ್ಪಷ್ಟವಾಗಿ ಹೇಳಿ ಬಿಡಿ. ನಾನು ಆ ವಿಷಯವಾಗಿ ಮಹಾರಾಜರೊಂದಿಗೆ ಮಾತನಾಡುತ್ತೇನೆ."

"ಈಗ ಆ ವೇಲಾಪುರಿಯಲ್ಲಿ ಒಂದು ಬೃಹತ್ತಾದ ದೇವಮಂದಿರ ನಿರ್ಮಾಣವಾಗುತ್ತಿದೆ. ಅದು ಮುಕ್ತಾಯ ಘಟ್ಟಕ್ಕೆ ಬಂದಿದೆ. ಅಲ್ಲಿ ಸ್ಥಾಪಿಸಲಾಗುವ ಕೇಶವದೇವರಿಗೆ ವಿಜಯನಾರಾಯಣ ಎಂದು ನಾಮಕರಣ ಮಾಡಬೇಕೆಂದು ಶ್ರೀಮದಾಚಾರ್ಯರು ಮಹಾರಾಜರಿಗೆ ಆದೇಶವಿತ್ತಿದ್ದಾರೆ. ಅಲ್ಲಿ ಆ ದೇವಸ್ಥಾನದ ಧರ್ಮದರ್ಶಿತ್ವ ನನಗೆ ದೊರೆತರೆ, ಸ್ವಾಮಿಕಾರ್ಯ ಸ್ವಕಾರ್ಯ ಎರಡೂ ಆಗುತ್ತದೆ. ಅಷ್ಟು ಮಾಡಿಸಿಕೊಟ್ಟು ಉಪಕಾರ ಮಾಡು."

* * *

ವೇಲಾಪುರಿಯ ವಿಜಯನಾರಾಯಣ ಮಂದಿರದ ಪ್ರತಿಷ್ಠಾಪನೆ ಸಮಾರಂಭಕ್ಕೆ ಶ್ರೀಮದಾಚಾರ್ಯರನ್ನು ಆಹ್ವಾನಿಸಲು ಬಿಟ್ಟಿದೇವ ಆಚಾರ್ಯರ ಬಳಿ ಆಗಮಿಸಿ ಪ್ರಾರ್ಥಿಸಿದ :

"ವೇಲಾಪುರಿಯ ವಿಜಯನಾರಾಯಣ ಮಂದಿರ ಮುಗಿಯುವುದಕ್ಕೆ ಬಂದಿದೆ. ಅಲ್ಲಿ ಸ್ವಾಮಿಯ ಪ್ರತಿಷ್ಠಾಪನೆಗೆ ಶ್ರೀಮದಾಚಾರ್ಯರು ಬಿಜಯ ಮಾಡಿಸಬೇಕು. ನಾವು ವೇಲಾಪುರಿಯನ್ನು ಮುಟ್ಟಿದ ಮೇಲೆ ಅಲ್ಲಿನ ಪರಿಸ್ಥಿತಿ ಅರಿತು ಬಿನ್ನಹವನ್ನು ಕಳುಹಿಸುತ್ತೇವೆ"

"ನಮ್ಮ ಪರವಾಗಿ ನೀವೇ ಪಟ್ಟದರಸ ಅರಸಿಯರು ಇರುತ್ತೀರಲ್ಲ."

"ಆದರೂ ತಮ್ಮ ಅಮೃತ ಹಸ್ತದಿಂದ ಅಲ್ಲಿ ಸ್ವಾಮಿ ಸ್ಥಾಪನೆಯಾಗಬೇಕು ಎಂಬುದು ನಮ್ಮ ಮನದಾಶೆ. ಪಟ್ಟಮಹಾದೇವಿಯವರದೂ ಅದೇ ಆಸೆ. ಆ ದೇವಮಂದಿರದ ನಿರ್ಮಾಣ ಮುಗಿದು, ದೇವರ ಪ್ರತಿಷ್ಠೆ ಆಗುವವರೆಗೆ ಪಟ್ಟಮಹಾದೇವಿಯವರು ಕಾಯಶುದ್ಧಿ ವ್ರತವನ್ನು ಆಚರಿಸುವವರಿದ್ದಾರೆ."

"ಏನಂದಿರಿ ? ಕಾಯಶುದ್ಧಿಯೆ ?"

"ಹೌದು."

"ಅಂದರೆ ?"

"ಅದರ ಶಂಕುಸ್ಥಾಪನೆಯಾದಂದಿನಿಂದ ಅವರು ಬ್ರಹ್ಮಚರ್ಯವನ್ನು ಅವಲಂಬಿಸಿದ್ದಾರೆ."

ಶ್ರೀಮದಾಚಾರ್ಯರ ಮುಖದ ಮೇಲೆ ಮುಗುಳುನಗೆಯೊಂದು ಮೂಡಿತು. "ಅವರ ಸಂಕಲ್ಪ ದೇವಮಂದಿರದ ಸಂಕೇತವನ್ನು ದಾಟಿ ನಿಂತಿದೆ. ಅವರು ಕಾಯಶುದ್ಧಿಯನ್ನು ಸಾಧಿಸುತ್ತಾರೆ. ಆ

ಸಂಯಮ ಅವರಲ್ಲಿ ಇದೆ. ಅದರ ಹಿಂದೆ ಒಂದು ಮಹಾತ್ಯಾಗವಡಗಿದೆ. ಮಹಾರಾಜ, ನಿಮ್ಮ ಅನೇಕ ಜನ್ಮಗಳ ಸುಕೃತ ನಿಮ್ಮ ಪಟ್ಟಮಹಾದೇವಿ. ಅವರ ಇಚ್ಛೆಗೆ ವಿರೋಧವಾಗಿ ನೀವು ಏನನ್ನೂ ಮಾಡಬೇಡಿ.''

"ಅವರ ಒಪ್ಪಿಗೆಯಿಲ್ಲದೆ ನಾವೇನನ್ನೂ ಮಾಡುವುದಿಲ್ಲವೆಂಬುದು ನಿಮಗೆ ತಿಳಿದ ವಿಷಯವೇ ಆಗಿದೆ.''

"ಅದು ಸರಿಯೇ. ಆದರೂ ಮಹಾರಾಜರು ಒಂದು ವಿಷಯವನ್ನು ಯೋಚಿಸಬೇಕು. ಮಹಾರಾಜರಿಗೆ ಯಾವುದಾದರೂ ಬಯಕೆ ಇದೆಯೆಂದು ಅವರಿಗೆ ತಿಳಿದರೆ ಆ ಬಯಕೆಯ ಪೂರೈಕೆಯಿಂದ ತಮಗೆ ಸ್ವತಃ ಏನೋ ಕೊರತೆ ಕಾಣಿಸುವುದಿದ್ದರೂ ಅವರು ತಮ್ಮ ವಿಷಯ ಮರೆತು ಮಹಾರಾಜರ ಆಸೆ ನೆರವೇರಲು ಒಪ್ಪಿಬಿಡುತ್ತಾರೆ. ಅದರಿಂದ ಮಹಾರಾಜರೇ ತಮ್ಮಾಸೆ ಪ್ರಕಟಿಸುವಲ್ಲಿ ಪಟ್ಟಮಹಾದೇವಿಯವರಿಗೆ ಏನಾದರೂ ಕೊರತೆ, ನೋವು ಆದೀತೆ ಎಂಬುದು ಯೋಚಿಸಿ ನಂತರವೇ ಆಸೆ ಪ್ರಕಟಿಸುವುದು ಒಳಿತು ಎಂದು ನಮಗೆ ತೋರುತ್ತದೆ.''

"ನಾವು ಆ ದೃಷ್ಟಿಯಿಂದ ಯೋಚಿಸಿರಲಿಲ್ಲ. ಶ್ರೀಮದಾಚಾರ್ಯರ ಸಲಹೆ ನಮಗೆ ಮಾನ್ಯ'' ಎಂದ ಬಿಟ್ಟಿದೇವ.

ರಾಣಿ ಲಕ್ಷ್ಮೀದೇವಿಗೆ ಈ ಕಾಯಶುದ್ಧಿಯ ವಿಚಾರ ಪೂರ್ತಿ ಅರ್ಥವಾಗಲಿಲ್ಲ. ಏಕಾಂತದಲ್ಲಿ ಅದರ ವಿಷಯ ತಿಳಿದರಾಯಿತೆಂದುಕೊಂಡಳು.

ಕೆಲವು ಕಾಲ ಮೌನವಾವರಿಸಿತ್ತು. ನಂತರ ಆಚಾರ್ಯರು ಒಳಬಾಗಿಲಿನತ್ತ ದೃಷ್ಟಿಹೊರಳಿಸಿದರು.

"ಯಾರನ್ನಾದರೂ ಕರೆಯಬೇಕಾಗಿತ್ತೆ ?'' ಎಂದು ನಾಗಿದೇವಣ್ಣ ಕೇಳಿದ.

"ಎಂಬಾರ್ ಬರಬೇಕಾಗಿತ್ತು'' ಎಂದರು ಆಚಾರ್ಯರು.

ನಾಗಿದೇವಣ್ಣ ಒಳಕ್ಕೆ ಹೋಗಿ ಬೇಗಲೆ ಹಿಂತಿರುಗಿದ. ಅವನ ಹಿಂದೆಯೇ ಎಂಬಾರ್, ಅಚ್ಚಾನ್ ಬಂದರು. ಅಚ್ಚಾನ್ ಕೈಯಲ್ಲಿ ಒಂದು ವಸ್ತ್ರಮುಚ್ಚಿದ ಹರಿವಾಣವಿತ್ತು.

"ಇದು ನಾವು ರಾಜದಂಪತಿಗಳಿಗೆ ಆಶೀರ್ವಾದ ಮಾಡಿಕೊಟ್ಟ ದೀಕ್ಷಾವಸ್ತ್ರ. ಇವನ್ನು ಮಹಾರಾಜರು, ಪಟ್ಟಮಹಾದೇವಿಯವರು ಪ್ರತಿಷ್ಠಾಪನೋತ್ಸವ ಸಂದರ್ಭದಲ್ಲಿ ಧರಿಸಬೇಕು. ರಾಣಿ ಲಕ್ಷ್ಮೀದೇವಿಗೂ ಒಂದು ವಸ್ತ್ರವಿದೆ. ಅಚ್ಚಾನ್ ಹರಿವಾಣವನ್ನು ಮಹಾರಾಜರಿಗೆ ಕೊಡು'' ಎಂದರು.

ಮಹಾರಾಜ ಎದ್ದು ಶ್ರೀಮದಾಚಾರ್ಯರಿಗೆ ಬಾಗಿ ವಂದಿಸಿದ. ಲಕ್ಷ್ಮೀದೇವಿಯೂ ಹಾಗೆಯೇ ಮಾಡಿದಳು. ನಿಂತಿದ್ದ ರಾಜದಂಪತಿಗಳ ಕೈಗೆ ಅಚ್ಚಾನ್ ಹರಿವಾಣವಿತ್ತ.

"ಒಳ್ಳೆಯದು. ಭಗವದನುಗ್ರಹ ಪೊಯ್ಸಳ ರಾಜವಂಶದ ಮೇಲೆ ಸದಾ ಇರಲಿ'' ಎಂದು ಶ್ರೀಮದಾಚಾರ್ಯರು ಅಭಯ ಹಸ್ತ ಸೂಚಿಸಿದರು.

"ಅಪ್ಪಣೆ ದಯಪಾಲಿಸಿದರೆ ನಾವು ಪ್ರಯಾಣ ಬೆಳೆಸುತ್ತೇವೆ. ಪ್ರತಿಷ್ಠಾಪನೋತ್ಸವಕ್ಕೆ ಹೇಗಾದರೂ ಮಾಡಿ ಶ್ರೀಮದಾಚಾರ್ಯರು ಬಿಜಯ ಮಾಡಿಸಬೇಕು.'' ಎಂದ ಬಿಟ್ಟಿದೇವ.

"ದೈವೇಚ್ಛೆ ಹಾಗಿದ್ದರೆ ಅದನ್ನು ಯಾರೂ ತಪ್ಪಿಸಲಾರರು. ನಮಗೂ ಬರಬೇಕೆಂದೇ ಆಸೆ ಇದೆ. ನೋಡೋಣ'' ಎಂದು ನಾಗಿದೇವಣ್ಣನತ್ತ ತಿರುಗಿ, "ನೀವು ಇಂದೇ ಯಾದವಪುರಿಗೆ ಹಿಂತಿರುಗಬೇಕೆ?

ಇಂದು ಇದ್ದು ನಾಳೆ ತೆರಳಿದರೆ ಆಗದೆ ?'' ಎಂದರು ಆಚಾರ್ಯರು.

"ಹಾಗೆಯೇ ಮಾಡಿ ಸಚಿವರೆ'' ಎಂದು ಬಿಟ್ಟದೇವನೇ ತೀರ್ಮಾನವನ್ನು ಹೇಳಿ ಬಿಟ್ಟ ರಾಜದಂಪತಿಗಳ ಪ್ರಯಾಣ ವೇಲಾಪುರಿಯತ್ತ ಸಾಗಿದ ಮೇಲೆ ನಾಗಿದೇವಣ್ಣ ಮತ್ತೆ ಶ್ರೀಮದಾಚಾರ್ಯರ ಸಂದರ್ಶನ ಮಾಡಿದ.

ನಾಗಿದೇವಣ್ಣನಿಗೆ ಕೂಡಲು ಹೇಳಿದ ಆಚಾರ್ಯರು ಬಳಿಯಿದ್ದ ಎಂಬಾರ್‌ಗೆ, "ಎಂಬಾರ್ ನೀನು ಸ್ವಲ್ಪ ಬಾಗಿಲು ಮುಚ್ಚಿಕೊಂಡು ಹೊರಗೇ ಇರು. ಯಾರಿಗೂ ಒಳಗೆ ಪ್ರವೇಶವಿಲ್ಲ. ನಾವು ಕರೆವವರೆಗೆ ನಿನಗೂ ಪ್ರವೇಶವಿಲ್ಲ'' ಎಂದರು.

ಅವನು ಇಂತಹ ಅಪ್ಪಣೆಯನ್ನು ಈವರೆಗೆ ಎಂದೂ ಕೇಳಿರಲಿಲ್ಲ. ಆಶ್ಚರ್ಯದಿಂದ ಗುರುಗಳತ್ತ ನೋಡಿದ.

"ನಾವು ಹೇಳಿದ್ದು ಕೇಳಿಸಿತು ತಾನೆ ಎಂಬಾರ್ ?'' ಎಂದರು ಆಚಾರ್ಯರು.

ಅವನು, "ಅಪ್ಪಣೆ'' ಎಂದು ಒಳಬಾಗಿಲನ್ನೆಳೆದು ಚಿಲಕ ಹಾಕಿ, ಹೊರಬಾಗಿಲಿಂದ ಹೊರಬಿದ್ದು ಬಾಗಿಲೆಳೆದುಕೊಂಡ.

"ನಾಗಿದೇವಣ್ಣನವರೆ, ನಿಮಗೆ ಯಾದವಪುರಿಯಲ್ಲಿನ ಎಲ್ಲ ವಿಷಯ ಗೊತ್ತಿದೆ ಎಂದು ಭಾವಿಸಿದ್ದೇವೆ.''

"ಎಲ್ಲ ವಿಷಯ ಅಂದರೆ ?''

"ಅರಮನೆಗೆ, ಮಹಾರಾಜರಿಗೆ ಸಂಬಂಧಿಸಿದುದು.''

"ಎಲ್ಲ ಗೊತ್ತಿದೆ ಎಂದು ಹೇಳುವಂತಿಲ್ಲವಾದರೂ ಸಾಕಷ್ಟು ವಿಷಯ ಗೊತ್ತಿದೆ ಎಂದು ಹೇಳಬಹುದು.''

"ನಮ್ಮ ತಿರುವರಂಗದಾಸನ ವಿಷಯ ನಿಮಗೇನು ಗೊತ್ತಿದೆ.''

"ಯಾವ ಸಂಬಂಧವಾಗಿ ಎಂದು ಸೂಚಿಸಿದರೆ ನನಗೆ ತಿಳಿದುದನ್ನು ಅರುಹುತ್ತೇನೆ.''

"ಅವನು ಲಕ್ಷ್ಮೀದೇವಿಯ ಸಾಕು ತಂದೆಯಲ್ಲವೆ ?''

"ಹೌದು.''

"ಅಂದರೆ ಮಹಾರಾಜರಿಗೆ ಮಾವನಾದಂತಾಯಿತು.''

"ಹೌದು.''

"ಹೀಗಿದ್ದೂ ಮೊದಲ ಸಲ ಅವರು ಸಾಕು ಮಗಳನ್ನು ಅಗಲುವಾಗ ಬೀಳ್ಕೊಡಲು ಸಹ ಅವನಿಗೆ ಅವಕಾಶ ಸಿಗಲಿಲ್ಲಾಂದರೆ ಏನೋ ಇರಬೇಕು ಎಂದು ನಮಗನ್ನಿಸಿದೆ. ಅವನಿಂದ ಏನಾದರೂ ಅಪರಾಧ, ಅಪಚಾರಗಳು ನಡೆದಿವೆಯೇ ?''

"ನನಗೆ ಆ ಬಗೆಗೆ ಏನೂ ವಿವರ ತಿಳಿಯದು. ಮಹಾರಾಜರು ವೇಲಾಪುರಿಗೆ ಪ್ರಯಾಣ ಮಾಡುವ ವಿಷಯ ಸೂಚಿತವಾಗಿತ್ತು. ಇನ್ನೂ ಯಾವ ಮುಹೂರ್ತವೆಂದು ನಿಶ್ಚಯವಾಗಿರಲಿಲ್ಲ. ಆಗ ಅವರು

ನನ್ನೊಂದಿಗೂ ಸೂಚಿಸಿದ್ದರು, ಇಲ್ಲಿಯವರೆಗೆ ರಾಜದಂಪತಿಗಳೊಡನೆ ಬರಬೇಕೆಂಬ ಬಯಕೆ ಇದೆ ಎಂದು. ರಾಣಿಯವರಲ್ಲಿ ಸೂಚಿಸಿರುವುದಾಗಿ ಸಹ ಹೇಳಿದ್ದರು. ನಾನು ಸಹ ಅವರು ಬರಬಹುದೆಂದೇ ಇದ್ದೆ. ಆದರೆ ಅವರು ಬರದಿರಲು ಕಾರಣ ಏನೆಂಬುದು ಗೊತ್ತಾಗಲಿಲ್ಲ.''

"ತಮ್ಮೊಂದಿಗೆ ಅವರನ್ನು ಕರೆತರಲು ಮಹಾರಾಜ ಇಚ್ಛೆಪಟ್ಟಿಲ್ಲ ಎಂಬುದು ಸ್ವಯಂಸಿದ್ಧ. ಎಂದರೆ ಮಹಾರಾಜರಿಗೆ ತಿರುವರಂಗದಾಸನ ವಿಷಯದಲ್ಲಿ ಒಳ್ಳೆಯ ಅಭಿಪ್ರಾಯ ಮೂಡಿಲ್ಲ ಎನ್ನಬೇಕಾಗಿದೆ. ಅದಕ್ಕೆ ಕಾರಣವೇನು ಎಂಬುದು ತಿಳಿಯಬೇಕಾಗಿದೆ. ಅಜ್ಞಾನದಿಂದ ಅವನು ಏನಾದರೂ ತಪ್ಪು ಮಾಡಿದ್ದರೆ ಅವನನ್ನು ತಿದ್ದಬೇಕಾದುದು ನಮ್ಮ ಧರ್ಮ. ಅವನು ತನ್ನ ಬೀಗತನದ ನೆವದಲ್ಲಿ ಅನವಶ್ಯಕ ಸಲಿಗೆಗೆ ತೊಡಗುವುದು ಒಳಿತಲ್ಲ. ಅವನ ನಾಲಿಗೆ ಸ್ವಲ್ಪ ಉದ್ದ. ಅವನೊಂದು ಬಗೆಯ ಪಾಷಂಡಿ. ಏನಾದರೂ ಮಾತು ಆಡಿರಬಹುದು ಎಂದು ನಮಗೆ ತೋರುತ್ತದೆ. ಅದರಿಂದ ನಿಮಗೆ ಏನಾದರೂ ವಿಷಯ ತಿಳಿದಿದ್ದರೆ ನಮಗೆ ತಿಳಿಸಿ'' ಎಂದರು ಆಚಾರ್ಯರು.

"ಶ್ರೀಮದಾಚಾರ್ಯರು ತಿಳಿಸಿದಂತೆ ಅವರು ಲೌಕಿಕ ತಿಳಿಯದವರು. ಅದರಿಂದ ಕೆಲವು ಆತುರದ ಮಾತುಗಳನ್ನು ಆಡುತ್ತಾರೆ. ನಾನೂ ಒಮ್ಮೆ ಅವರಿಗೆ ಈ ವಿಷಯದಲ್ಲಿ ತಿಳಿಯ ಹೇಳಿದ್ದೇನೆ'' ಎಂದು ಹಿಂದೆ ತಾನು ಬುದ್ಧಿವಾದದ ಮಾತು ಏಕೆ ಹೇಳಿದೆ, ಏನು ಹೇಳಿದೆ ಎಂಬುದನ್ನೆಲ್ಲ ತಿಳಿಸಿದ.

"ಸರಿ. ನಮ್ಮ ಊಹೆ ಸರಿಯಾಯಿತು. ನೀವು ಯಾದವಪುರಿಗೆ ಹೋದಮೇಲೆ ಅವನನ್ನು ಇಲ್ಲಿಗೆ ಕಳಿಸಿ. ನಮ್ಮ ನಮ್ಮಲ್ಲಿ ನಡೆದ ಸಂಭಾಷಣೆಯ ವಿಚಾರವಾಗಲಿ, ಇಲ್ಲಿ ಮಹಾರಾಜರೊಡನೆ ಆದ ಮಾತುಕತೆಯ ವಿಚಾರವಾಗಲಿ ನೀವು ಅವನಿಗೆ ಏನನ್ನೂ ಹೇಳಬೇಡಿ.''

"ಅಪ್ಪಣೆ.''

ಆ ರಾತ್ರಿ ಅಲ್ಲಿದ್ದು ಮಾರನೆಯ ಬೆಳಗ್ಗೆ ನಾಗಿದೇವಣ್ಣ ಯಾದವಪುರಿಗೆ ಹೋಗಿ ತಿರುಮಲೆಯ ತಿರುವರಂಗದಾಸನಿಗೆ ಆಚಾರ್ಯರ ಸಂದೇಶ ಮುಟ್ಟಿಸಿ ಅವನನ್ನು ಯಾದವಪುರಿಗೆ ಕಳುಹಿಸಿದ.

# ೧೧. ದೇವಮಂದಿರದ ಕೆಲಸ

ನಿರೀಕ್ಷೆಗೆ ಮುಂಚೆ ಮಹಾರಾಜ ತನ್ನ ನೂತನ ರಾಣಿಯೊಡನೆ ರಾಜಧಾನಿಗೆ ಬರುವ ವಿಷಯ ಕೊಂಚ ಗಡಿಬಿಡಿಗೆ ಕಾರಣವಾಗಿತ್ತು. ಶಾನ್ತಲದೇವಿ ಮಹಾರಾಜನ ಸ್ವಾಗತಕ್ಕೆ ಏನೆಲ್ಲ ವ್ಯವಸ್ಥೆಯನ್ನು ಮಾಡಬೇಕೆಂದಿದ್ದಳೋ ಅದೆಲ್ಲ ಸಾಧ್ಯವಾಗುವಷ್ಟು ವೇಳೆ ಇರಲಿಲ್ಲ. ಆದರೂ ಸಾಕಷ್ಟು ವೈಭವದ ಸ್ವಾಗತ ದೊರಕಿತು. ವೇಲಾಪುರಿಗೆ ವಾಸ್ತವವಾಗಿ ಹೊಸ ಕಳೆ ಬಂದಂತೆ ಆಗಿತ್ತು.

ನಾಗಿದೇವಣ್ಣ, ಮಂಚಿ ಅರಸು ಉಪಸ್ಥಿತರಿರಲಿಲ್ಲ. ರಾಣಿ ಬಮ್ಮಲದೇವಿ, ರಾಣಿ ರಾಜಲದೇವಿಯವರು ಸಹ ಆಸಂದಿನಾಡಿಗೆ ಹೋಗಿದ್ದರು. ಅವರಿಗೂ ಬೇಹು ಮುಟ್ಟಿಸುವಷ್ಟು ವೇಳೆಯೂ ಇರಲಿಲ್ಲ.

ವೇಲಾಪುರಿಯ ಪೂರ್ವದ್ವಾರದಲ್ಲಿ ಯಗಚಿ ನದಿಯನ್ನು ದಾಟಿದ ನಂತರ ಪ್ರಧಾನಿ ಗಂಗರಾಜ ಹಾಗು ಇತರ ದಂಡನಾಯಕರು, ಅರಮನೆಯ ಅಧಿಕಾರಿಗಳು ಮಹಾರಾಜನಿಗೆ ಸ್ವಾಗತ ಕೋರಿದರು. ವೇದೋಕ್ತವಾದ ಸ್ವಾಗತ ರಾಜಾಶೀರ್ವಾದಗಳು, ವೇದ ಘೋಷಣೆಗಳೊಂದಿಗೆ ಮಹಾರಾಜ ಅರಮನೆಯ ದ್ವಾರಕ್ಕೆ ಬಂದ. ಅಲ್ಲಿ ಪಟ್ಟಮಹಾದೇವಿ ನವವಧುವಿಗೆ ಕುಂಕುಮ ಸಿಂಧೂರವಿಟ್ಟು ದಂಪತಿಗಳಿಗೆ ಆರತಿ ಬೆಳಗಿ ರಾಣಿಯನ್ನು ಮನೆ ತುಂಬಿಸಿಕೊಂಡಳು.

ಅಂದಿನ ಭೋಜನ ಕೂಟಕ್ಕೆ ಅಧಿಕಾರಿಗಳೊಂದಿಗೆ ಪುರಪ್ರಮುಖರನ್ನೂ ಆಹ್ವಾನಿಸಲಾಗಿತ್ತು. ಮಹಾರಾಜ ಮತ್ತೊಂದು ಪಾಣಿಗ್ರಹಣ ಮಾಡಿಕೊಂಡಿದ್ದ ವಿಷಯ ವೇಲಾಪುರಿಗೆ ಮುಟ್ಟಿತ್ತು. ಅದರಿಂದ ಹೊಸರಾಣಿಯನ್ನು ನೋಡುವ ಕುತೂಹಲವು ಸಹಜವಾಗಿ ಎಲ್ಲರಲ್ಲಿ ಕೆರಳಿ ನಿಂತಿತ್ತು. ಪಟ್ಟಮಹಾದೇವಿಯೇ ಹೊಸರಾಣಿಯನ್ನು ಅಧಿಕಾರಿ ಜನಕ್ಕೆ ಹಾಗೂ ಇತರ ಆಹ್ವಾನಿತರಿಗೆ ಪರಿಚಯ ಮಾಡಿಸಿಕೊಟ್ಟಳು.

ಆಹ್ವಾನಿತರಲ್ಲಿ ಸ್ಥಪತಿ ಮತ್ತು ಕೆಲವು ಪ್ರಮುಖ ರೂವಾರಿಗಳು ಇದ್ದರು. ತಾನು ಊರು ಬಿಟ್ಟು ಯುದ್ಧಕ್ಕೆ ಹೋದ ಮೇಲೆ ಸಂವತ್ಸರಕ್ಕೂ ಹೆಚ್ಚಿನ ಕಾಲ ಕಳೆದು ಹೋಗಿದ್ದುದು ಮಹಾರಾಜನಿಗೆ ಗೊತ್ತಿತ್ತು. ಈಗ ಅವನು ಸ್ಥಪತಿಯಲ್ಲಿ ಸಾಕಷ್ಟು ಬದಲಾವಣೆಯನ್ನು ಗುರುತಿಸಿ, "ಸ್ಥಪತಿಗಳಿಗೆ ವೇಲಾಪುರಿ ಒಗ್ಗಿರುವಂತೆ ಕಾಣುತ್ತದೆ" ಎಂದ.

"ಪಟ್ಟಮಹಾದೇವಿಯವರು ತಾಯಿ ಮಕ್ಕಳನ್ನು ಒಲಿಸಿಕೊಳ್ಳುವಂತೆ ಎಲ್ಲರನ್ನೂ ಒಲಿಸಿಕೊಂಡು ಬಿಡುತ್ತಾರೆ" ಎಂದ ಸ್ಥಪತಿ.

"ಆದರೂ ಹಿಂದಿನ ಸ್ಥಪತಿ ಇಲ್ಲಿ ನಿಲ್ಲಲಿಲ್ಲವಂತಲ್ಲ."

"ನಷ್ಟ ಅವರಿಗೇ ವಿನಾ ಬೇರಾರಿಗೂ ಅಲ್ಲವಲ್ಲ."

"ಅದೇನೋ ನಿಜ. ಶ್ರೀಮದಾಚಾರ್ಯರು ಸಹ ನಿಮ್ಮ ಬಗೆಗೆ ತುಂಬಾ ಹೇಳಿದ್ದರು."

"ಅವರು ಪ್ರತಿಷ್ಠಾಪನೋತ್ಸವಕ್ಕೆ ಬಿಜಯ ಮಾಡಿಸುತ್ತಾರೆ ತಾನೆ ?"

"ಅವರಿಗೇನೋ ಬರುವ ಯೋಚನೆ ಇದೆ. ಆದರೆ ನಿಮ್ಮದೇ ಭಯ."

"ನನ್ನ ಭಯವೆ ?"

"ಅಲ್ಲವೆ ಮತ್ತೆ ? ಮತ್ತೆ ಹೇಳದೆ ಕೇಳದೆ ಹೋಗಿ ಬಿಟ್ಟರೆ ? ಈ ಮೊದಲೊಮ್ಮೆ ನೀವು ಮಾಡಿದ ಹಾಗೆ ಮಾಡೀರಿ ಎಂಬ ಭಯ ಸಹಜ ತಾನೆ ?"

"ಈಗ ನಾನು ಸಾಕಷ್ಟು ಬದಲಾಗಿದ್ದೇನೆ. ಆಗ ನನ್ನಲ್ಲಿ ಇದ್ದ ಅಳುಕು ಈಗ ಇಲ್ಲ. ಪಟ್ಟಮಹಾದೇವಿಯವರು ನನ್ನಲ್ಲಿದ್ದ ಅಳುಕಿಗೆ ಚಿಕಿತ್ಸೆ ಮಾಡಿದ್ದಾರೆ. ಅದರಿಂದ ನಾನು ಹೇಳದೆ ಕೇಳದೆ ಹಿಂದಿನ ಹಾಗೆ ಹೋಗುವ ಸಂಭವವಿಲ್ಲ."

"ನೀವೆ ಆ ಮಾತನ್ನು ಆಡಿದ ಮೇಲೆ ನಮಗೂ ಧೈರ್ಯ ಬಂತು. ಮಂದಿರದ ಕೆಲಸ ಯಾವಾಗ ಮುಗಿಯುತ್ತದೆ ?"

"ಅದು ಮುಗಿದಂತೆಯೇ. ಮೂಲವಿಗ್ರಹ ಸಹ ಇನ್ನೆರಡು ದಿವಸಗಳಲ್ಲಿ ಮುಗಿಯುತ್ತದೆ. ಕೆಲವು ಅಲಂಕಾರ ವಿಗ್ರಹಗಳು ಮಾತ್ರ ಆಗಬೇಕು. ಅದು ಹೇಗಿರಬೇಕೆಂಬ ನಿರ್ಣಯವಾದರೆ ಆಮೇಲೆ ನಾಲ್ಕು ದಿವಸದ ಕೆಲಸ. ಸಧ್ಯದಲ್ಲಿ ಪ್ರತಿಷ್ಠಾಪನೆಗೆ ಒಳ್ಳೆಯ ಮೂಹೂರ್ತವಿದ್ದರೆ ಪ್ರತಿಷ್ಠಾಪನೋತ್ಸವವನ್ನು ನೆರವೇರಿಸಬಹುದು."

"ನಿಮಗೆ ಜೋತಿಷ್ಯದಲ್ಲಿ ವಿಶೇಷ ಪರಿಣತಿ ಇದೆಯಂತೆ. ನೀವೇ ಒಂದು ಯೋಗ್ಯ ಮುಹೂರ್ತವನ್ನು ನಿಶ್ಚಯಿಸಿ ಬಿಡಿ. ಶ್ರೀಮದಾಚಾರ್ಯರಿಗೆ ಆಹ್ವಾನವನ್ನು ಕಳುಹಿಸೋಣ."

"ಎಲ್ಲಾದರೂ ಉಂಟೆ. ಅರಮನೆಯ ಜ್ಯೋತಿಷಿಗಳು ಮುಹೂರ್ತ ನಿಶ್ಚಯಿಸಬೇಕು. ನಾವುಗಳು ಅದನ್ನು ಅನುಸರಿಸಬೇಕು."

"ನೀವು ಈ ಶಾಸ್ತ್ರದಲ್ಲಿ ವಿಶೇಷ ಪರಿಣತಿಯನ್ನು ಪಡೆದಿದ್ದೀರಿ ಎಂದು ಪಟ್ಟಮಹಾದೇವಿಯವರು ನಮಗೆ ಹೇಳಿದ್ದಾರೆ."

"ಅವರ ಮನಸ್ಸೇ ವಿಶಾಲ. ಸ್ವಲ್ಪ ಇದ್ದರೂ ಅದಕ್ಕೆ ಮಹತ್ತಿನ, ಬೃಹತ್ತಿನ ಲೇಪಕೊಟ್ಟು ಬಿಡುತ್ತಾರೆ."

"ಅಂದರೆ ನೀವು ಪಟ್ಟಮಹಾದೇವಿಯವರನ್ನು ಸರಿಯಾಗಿ ಅರ್ಥಮಾಡಿಕೊಂಡಿಲ್ಲ ಎಂದಾಯಿತು. ಅವರು ಗುಣ ಪಕ್ಷಪಾತಿಗಳೇ ವಿನಾ ಇಲ್ಲದ ಗುಣವನ್ನು ಎಂದೂ ವಿಸ್ತರಿಸಿ ಹೇಳುವವರಲ್ಲ. ನಾವು ರಣರಂಗ ಯಾತ್ರೆ ಕೈಕೊಂಡ ದಿನದ ಗ್ರಹಸ್ಥಿತಿ ನೋಡಿ ಆಗಿಂದಾಗಲೇ ನೀವು ಫಲವನ್ನು ತಿಳಿಸಿದ್ದಿರಂತೆ. ಅದರಿಂದ ನಿಮ್ಮ ತಿಳುವಳಿಕೆಯ ಮಟ್ಟ ಎಷ್ಟು ಎಂಬುದರ ಬಗೆಗೆ ಅವರಿಗೆ ನಿಖರವಾಗಿ ತಿಳಿದಿದೆ."

"ನಾನೂ ಈ ವಿಷಯದಲ್ಲಿ ಕೊಂಚ ಅಜಾಗರೂಕನಾದುದನ್ನೂ, ಆತುರ ಪಟ್ಟುದನ್ನೂ ಅವರು ಮನವರಿಕೆ ಮಾಡಿಕೊಟ್ಟಿದ್ದಾರೆ."

"ಯಾವ ಮನುಷ್ಯನೂ ಪರಿಪೂರ್ಣನಲ್ಲ. ಏನಾದರೂ ಕೊರೆ ಇದ್ದೇ ಇರುತ್ತದೆ. ಏನಾದರೂ ಆತುರದ ಅಜಾಗರೂಕ ಕೆಲಸವನ್ನು ಮಾಡಿಯೇ ಮಾಡುತ್ತಾನೆ. ಅದ್ದರಿಂದ ನೀವೇ ಪ್ರತಿಷ್ಠಾಪನೆಗೆ ಒಂದು ಸುಮೂಹೂರ್ತವನ್ನು ನಿಶ್ಚಯಿಸಿ ತಿಳಿಸಿ."

"ಯಥಾಮತಿ ನಾನು ಸೂಚಿಸುತ್ತೇನೆ. ಆದರೆ ಅರಮನೆಯ ಜ್ಯೋತಿಷಿಗಳು ಅಸಮಾಧಾನ ಪಡಬಾರದು."

"ಆ ವಿಚಾರ ನಿಮಗೆ ಸಂಬಂಧಿಸಿದ್ದಲ್ಲ. ನಮ್ಮ ಇಚ್ಛೆ ಏನೆಂಬುದನ್ನು ನಿಮಗೆ ತಿಳಿಸಿಯಾಯಿತು. ಮುಂದಿನದು ನಿಮಗೆ ಸಂಬಂಧಿಸಿದುದಲ್ಲ."

"ಚಿತ್ತ."

"ವಾಸ್ತು, ರಚನೆ, ಸೌಂದರ್ಯ, ವಸ್ತು ವೈಶಾಲ್ಯ ಹಾಗು ಮತಸಹಿಷ್ಣುತೆಯ ಸಂಕೇತವಾಗಿ ಹೊಚ್ಚ ಹೊಸ ಮಾದರಿಯಾಗಿ ಈ ದೇವಮಂದಿರವು ನೆಲೆ ನಿಲ್ಲುವಂತಹುದು. ಪಟ್ಟಮಹಾದೇವಿಯವರ ಕಣಕಣವೂ ಜೈನದಿಂದ ಸ್ಪಂದಿಸುತ್ತಿದ್ದರೂ ಈ ಭವ್ಯ ಕೃತಿ ನಿರ್ಮಾಣಕ್ಕೆ ಅವರು ಶ್ರೀವೈಷ್ಣವತ್ವವನ್ನೇ ರೂಪಿಸಿದ್ದಾರೆ. ಕನ್ನಡಿಗರ ಇತಿಹಾಸದಲ್ಲಿ ಇದೊಂದು ಭವ್ಯ ಸಾಧನೆ. ಅವರ ಹೆಸರು ಆಚಂದ್ರಾರ್ಕವಾಗಿ ಶಾಶ್ವತವಾಗಿ ನಿಲ್ಲಬೇಕು. ಅದರಿಂದ ಪ್ರತಿಷ್ಠಾಪನೆಯ ಮುಹೂರ್ತವು ಅತ್ಯಂತ ಶ್ರೇಷ್ಠವಾದ ಮುಹೂರ್ತವಾಗಬೇಕು."

"ಇದು ಪೊಯ್ಸಳ ವಾಸ್ತುಶಿಲ್ಪವೆಂದೇ ಹೆಸರು ಪಡೆಯಬೇಕು." ಎಂದ ಜಕಣಾಚಾರ್ಯ.

"ಎಲ್ಲಕ್ಕೂ ರಾಜವಂಶದ ಹೆಸರನ್ನಿಡುವ ಚಪಲವೊಂದು ಬೆಳೆದು ನಿಂತಿದೆ. ವಾಸ್ತವವಾಗಿ ಇದು ನೀವು ರಚಿಸಿದ ನೂತನ ಶಿಲ್ಪ. ಇದು ಜಕ್ಕಣಶಿಲ್ಪ ಎಂದು ನಿಮ್ಮ ಹೆಸರಿನಲ್ಲೇ ಈ ಶಿಲ್ಪವು ಪ್ರಖ್ಯಾತವಾಗಬೇಕು."

"ನನಗೆ ಹೆಸರಿನ ಮೇಲೆ ಕಕಲಾತಿ ಇಲ್ಲ. ಯಾವುದೇ ಕಲೆಯಾಗಲಿ ಅದು ಕೇವಲ ಕಲೆಗಾರನಿಂದ ನಿಲ್ಲುವುದಿಲ್ಲ. ಕಲೆಗಾರನ ಕಲಾಪ್ರತಿಭೆಯು ಬೆಳಕಿಗೆ ಬರಲು ಅವಕಾಶ ಮಾಡಿಕೊಡುವ ಸಹೃದಯ ರಸಿಕನೇ ಬಹು ಮುಖ್ಯ. ನಾನು ಏನೇ ಕಲ್ಪಿಸಲಿ. ಕೊಡುಗೈಯಿನ ಪೊಯ್ಸಳ ವಂಶ ಈ ಬೃಹತ್ ಕೆಲಸವನ್ನು ಕೈಕೊಳ್ಳದಿದ್ದರೆ ನನ್ನ ಕಲ್ಪನೆ ಬರೀ ಕಡತದಲ್ಲಿ ಉಳಿಯುತ್ತಿತ್ತು. ಪೊಯ್ಸಳ ನಾಮ ಈ ವಾಸ್ತುವಿನ ರೀತಿಗೆ ಬಂದರೆ ಅದರಲ್ಲಿ ಅನುಚಿತವಾದುದೇನೂ ಇಲ್ಲ. ಅದು ನ್ಯಾಯವೂ ಹೌದು. ಏಕೆಂದರೆ ಇದು ಯಾವ ಕಾಲದಲ್ಲಿ ರೂಪಿತವಾದ ವಾಸ್ತುಶಿಲ್ಪ ಎಂಬುದು ಕಲಾಕಲ್ಪನೆಯ ವೈವಿಧ್ಯಮಯ ಬೆಳವಣಿಗೆ ಸೂಚಿಯಾಗಿ ಉಳಿಯುತ್ತದೆ. ಮಹಾಸನ್ನಿಧಾನ ಈ ರೀತಿಯ ವಾಸ್ತು ಶಿಲ್ಪಕ್ಕೆ ಪೊಯ್ಸಳಾಭಿಧಾನವನ್ನು ಕರುಣಿಸಬೇಕು. ನಾನು ವ್ಯಕ್ತಿ. ಆದರೆ **ರಾಜವಂಶವು ಇಡೀ ನಾಡಿನ ಸಂಕೇತ.**"

"ನಾವು ಅದಕ್ಕೇನೂ ಹೆಸರಿಸುವುದು ಬೇಡ. ಮುಂಬರುವ ಪೀಳಿಗೆಗಳು ಅದಕ್ಕೆ ಬೇಕಾದ ಹೆಸರನ್ನು ನೀಡಿಕೊಳ್ಳಲಿ. ಆದರೆ ಈ ದೇವಮಂದಿರವು ಶಾಶ್ವತವಾಗಿ ಇರಬೇಕೆಂಬುದಷ್ಟೇ ನಮ್ಮ ಮನದಾಸೆ. ಏಕೆಂದರೆ ಇದು ನಮ್ಮ ಮತ್ತು ಪಟ್ಟಮಹಾದೇವಿಯವರ ಭಿನ್ನತೆಯಲ್ಲಿನ ಏಕತೆಯ ಸಂಕೇತ."

"ಒಂದು ದಿವಸ ಅವಕಾಶ ನೀಡಬೇಕು. ಒಮ್ಮೆ ಮಹಾಸನ್ನಿಧಾನ, ನೂತನ ರಾಣಿಯವರೊಡನೆ ಈಗ ಆಗಿರುವ ದೇವಾಲಯದ ಕೆಲಸವನ್ನು ಪರಿಶೀಲಿಸಬೇಕು."

"ಅವೆಲ್ಲ ಪಟ್ಟಮಹಾದೇವಿಯವರಿಗೆ ಬಿಟ್ಟ ಕೆಲಸ."

"ನಿಮ್ಮ ಇಚ್ಛೆಯನ್ನು ಮಹಾಸನ್ನಿಧಾನ ಪೂರೈಸುತ್ತಾರೆ" ಎಂದು ಕೂಡಲೇ ಶಾನ್ತಲದೇವಿ ಹೇಳಿದಳು. ಆ ವಿಚಾರ ಅಲ್ಲಿಗೆ ನಿಂತಿತು.

ಅಂದಿನ ಭೋಜನಕೂಟವು ಒಟ್ಟಿನ ಮೇಲೆ ಎಲ್ಲರಿಗೂ ಸಂತಸವನ್ನು ತಂದು ಕೊಟ್ಟಿತು. ಮಾರನೆಯ ದಿವಸದ ಮನ್ತ್ರಣ ಸಭೆಯಲ್ಲಿ ದೇವಪ್ರತಿಷ್ಠೆಯ ಸುಸಂದರ್ಭದಲ್ಲಿಯೇ ಹಿರಣ್ಯಗರ್ಭ, ತುಲಾಪುರುಷಗಳನ್ನೂ, ವಿಜಯೋತ್ಸವವನ್ನೂ ನೆರವೇರಿಸುವುದೆಂದೂ 'ತಲಕಾಡುಗೊಂಡ' ಎಂಬ ಬಿರುದನ್ನು ಮಹಾರಾಜ ವಿಧಿಯುಕ್ತವಾಗಿ ಧರಿಸುವುದೆಂದೂ ತೀರ್ಮಾನವಾಯಿತು.

ರಾಜ್ಯದ ಎಲ್ಲ ಗ್ರಾಮ ಮುಖಂಡರುಗಳಿಗೂ ಆಹ್ವಾನಪತ್ರಿಕೆ ಹೋಯಿತು. ಅದರ ಜೊತೆಗೆ ಗ್ರಾಮ ಗ್ರಾಮದಲ್ಲಿಯೂ ನಿಯೋಜಿತ ದಿನದಂದು ವಿಜಯೋತ್ಸವವನ್ನು ನೆರವೇರಿಸಬೇಕೆಂದೂ ಅದರ ಸಂಕೇತವಾಗಿ ಪೊಯ್ಸಳ ಪತಾಕೆಯನ್ನು ಹಾರಿಸಬೇಕೆಂದೂ ಮತ್ತು ರಾಷ್ಟ್ರಕ್ಕಾಗಿ ತನ್ನ ನಿಷ್ಠಾವಂತ ಸೇವೆ ಮೀಸಲೆಂದು ಪ್ರತಿಜ್ಞೆ ಮಾಡಬೇಕೆಂದೂ ಪ್ರತಿಯೊಬ್ಬ ಪ್ರಜೆಗೂ ಆದೇಶವನ್ನು ನೀಡಲಾಗಿತ್ತು.

ನೂತನ ದೇವಮಂದಿರದಲ್ಲಿ ವಿಜಯನಾರಾಯಣ ಪ್ರತಿಷ್ಠಾಪನೆ, ಹಿರಣ್ಯ ಗರ್ಭ, ತುಲಾಪುರುಷ, ವಿಜಯೋತ್ಸವ ಹಾಗೂ ಬಿರುದು ಧರಿಸುವ ಸಮಾರಂಭ ಇವೆಲ್ಲವೂ ಯೋಗ್ಯರೀತಿಯಲ್ಲಿ ನಡೆಯಬೇಕಾದರೆ ಅದಕ್ಕೆಷ್ಟು ಹಣಬೇಕು ? ಅದಕ್ಕೆಷ್ಟು ಜನಸಹಾಯಬೇಕು? ಅದಕ್ಕೆಷ್ಟು ಪೂರ್ವಸಿದ್ಧತೆ ಆಗಬೇಕು ಎಂಬುದೆಲ್ಲವನ್ನೂ ಕೂಲಂಕುಷವಾಗಿ ವಿಮರ್ಶೆ ಮಾಡಿ, ವಿಚಾರ ಮಾಡಿ ಇತ್ಯರ್ಥ ಪಡಿಸಲು ಉದಯಾದಿತ್ಯರಸನ ನೇತೃತ್ವದಲ್ಲಿ ಒಂದು ಮಂಡಳಿಯ ರಚನೆಯಾಯಿತು.

ಶ್ರೀಮದಾಚಾರ್ಯರಿಗೆ ಒಂದು ಮನವಿ ಪತ್ರ ಕಳಿಸಿ ಈ ಪ್ರತಿಷ್ಠಾಪನೋತ್ಸವದ ಕಾರ್ಯವು ಶಾಸ್ತ್ರ ಸಮ್ಮತವಾದ ರೀತಿಯಲ್ಲಿ ನಡೆಯಲು ಏನೇನು ಮಾಡಬೇಕು ಎಂಬುದೆಲ್ಲವನ್ನೂ ರೂಪಿಸಲು ಒಂದು ಧರ್ಮ ಮಂಡಳಿಯನ್ನು ರಚಿಸಿ ವೇಲಾಪುರಿಗೆ ಕೂಡಲೇ ಕಳಿಸಬೇಕೆಂದು ಪ್ರಾರ್ಥಿಸಲಾಯಿತು.

ಮತ್ತು ಹಿಂದೆ ವಿಜಯೋತ್ಸವವನ್ನು ಬಲ್ಲಾಳ ಮಹಾರಾಜನ ಆಳ್ವಿಕೆಯ ಕಾಲದಲ್ಲಿ ದೋರಸಮುದ್ರದಲ್ಲಿ ನೆರವೇರಿಸಿದಾಗ, ಅಥವಾ ಅದಕ್ಕೂ ಮೊದಲು ಎರಯಂಗಪ್ರಭು, ತನ್ನ ತಂದೆ ಜೀವಂತವಿದ್ದಾಗಲೇ ಪಟ್ಟಕ್ಕೆ ಒಪ್ಪಿದ ಸಂದರ್ಭದಲ್ಲಿ ಜರುಗಬೇಕಾಗಿದ್ದ ಉತ್ಸವದ ಸಿದ್ಧತೆಯಲ್ಲಿ ಬಹಳ ದಕ್ಷತೆಯಿಂದ ಭಾಗವಹಿಸಿ ಕಾರ್ಯ ನಿರ್ವಹಿಸಿದ ಅನೇಕ ಅಧಿಕಾರಗಳನ್ನು ನಾಡಿನ ನಾನಾ ಭಾಗಗಳಿಂದ ಮೊದಲೇ ಕರೆಸಬೇಕೆಂದು ನಿರ್ಣಯಿಸಿದ ಮೇರೆಗೆ ಅಂತಹವರಿಗೆಲ್ಲ ವೇಲಾಪುರಿಗೆ ಬರಲು ಕರೆಪತ್ರ ಹೋಯಿತು.

ಬಲ್ಲಾಳನ ಮೂವರು ರಾಣಿಯರನ್ನೂ ಸ್ವತಃ ಉದಯಾದಿತ್ಯನೇ ಹೋಗಿ ಕರೆತರುವುದೆಂದು ನಿರ್ಣಯವಾಯಿತು. ಅದೇ ರೀತಿ ಮಂಚಿ ಅರಸು ದಂಡನಾಥನು ಕೂಡಲೇ ರಾಣಿಯರು ಬಮ್ಮಲದೇವಿ, ರಾಜಲದೇವಿಯರೊಂದಿಗೆ ಬರತಕ್ಕದ್ದೆಂಬ ಆದೇಶ ಹೋಯಿತು.

ಡಾಕರಸ, ಬೊಪ್ಪದೇವ, ಏಚಮ, ಕುಮಾರ ಬಿಟ್ಟಿಯಣ್ಣ, ಡಾಕರಸನ ಮಕ್ಕಳು ಮರಿಯಾನೆ–ಭರತರು, ಹೆಗ್ಗಡೆ ಮಾರಸಿಂಗಯ್ಯ, ಸಿಂಗಮಯ್ಯ ಮೊದಲಾದ ಮುಖ್ಯರಿಗೆಲ್ಲ ಬೇರೆ ಬೇರೆ ಬಹು ಮುಖ್ಯವಾದ ಕೆಲಸಗಳ ಹೊಣೆಗಾರಿಕೆಯನ್ನು ಹೊರಿಸಲಾಯಿತು.

ತಾನು ಒಪ್ಪಿಕೊಂಡಂತೆ ಸ್ಥಪತಿ ದೇವಪ್ರತಿಷ್ಠೆಗೆ ಮುಹೂರ್ತವನ್ನು ನಿಶ್ಚಯಿಸಿಕೊಂಡು ಬಂದು ಅದನ್ನು ಮಹಾರಾಜನಿಗೆ ಸೂಚಿಸಿದ. ಈ ದುರ್ಮುಖಿ ಸಂವತ್ಸರದಲ್ಲಿ ಒಳ್ಳೆಯ ಯಾವ ಮುಹೂರ್ತವೂ ದೊರಕಲಿಲ್ಲವಾದುದರಿಂದ ಬರುವ ಹೇವಿಳಂಬಿ ಸಂವತ್ಸರದ ಚೈತ್ರ ಶುದ್ಧ ಪಂಚಮಿ ವಡ್ಡವಾರದಂದು ರೋಹಿಣಿ ನಕ್ಷತ್ರದಲ್ಲಿ ನೆರವೇರಿಸಬಹುದೆಂದೂ, ಆ ದಿನ ಕರ್ಕಾಟಕ ಲಗ್ನದಲ್ಲಿ ಅಭಿಜಿನ್ ಮುಹೂರ್ತದಲ್ಲಿ ಪ್ರತಿಷ್ಠಾಪನೆ ಮಾಡಬಹುದೆಂದೂ ಅವನು ಸೂಚಿಸಿದ್ದ. ಶ್ರೀಮದಾಚಾರ್ಯರಿಗೆ ಈ ಮುಹೂರ್ತವನ್ನು ಸೂಚಿಸಿ ಅವರು ಒಪ್ಪಿದರೆ ತಾವೂ ಅದನ್ನೇ ಒಪ್ಪಬಹುದೆಂದೂ ಬಿನ್ನವಿಸಿಕೊಂಡ.

ಬೇಹಿನವರಿಂದ ಮುಹೂರ್ತ ಕುರಿತ ವಿವರಣ ಪತ್ರ ಶ್ರೀಮದಾಚಾರ್ಯರ ಸಲಹೆಗೆ ಹೋಯಿತು. ಅವರಿಂದ ಒಪ್ಪಿಗೆ ಪಡೆದು ಅದೇ ಮುಹೂರ್ತವೆಂದು ಖಚಿತವಾಯಿತು. ಒಪ್ಪಿಗೆಯ ಓಲೆ ಹೊತ್ತ ಬೇಹಿನವರು ಹಿಂದಿರುಗಿದ ಒಂದು ವಾರದಲ್ಲಿಯೇ ಐದು ಜನ ಶ್ರೀವೈಷ್ಣವಾಚಾರ್ಯರು ಪ್ರತಿಷ್ಠಾಪನೋತ್ಸವ ಕ್ರಿಯೆಗಳನ್ನು ತಿಳಿದವರು ಆಚಾರ್ಯರ ಆದೇಶದಂತೆ ವೇಲಾಪುರಿಗೆ ಬಂದರು. ಅವರು ಬಂದ ಸುದ್ದಿ, ಅಂತಃಪುರಕ್ಕೂ ಮುಟ್ಟಿತು. ರಾಣಿ ಲಕ್ಷ್ಮೀದೇವಿಗೂ ಮುಟ್ಟಿತು. ಅವಳು ತನ್ನ ತಂದೆ ಬಂದೇ ಬರುತ್ತಾರೆಂದು ಆಶಿಸಿದ್ದಳು. ಆದರೆ ಅವರು ಬಂದಿಲ್ಲವೆಂದು ಮಾತ್ರ ತಿಳಿಯಿತು. ಅದರಿಂದ ಅವರಲ್ಲಿ ಒಬ್ಬರನ್ನು ಅಂತಃಪುರಕ್ಕೆ ಬರಮಾಡಿಕೊಂಡು ರಾಣಿ ಲಕ್ಷ್ಮೀದೇವಿ, "ನಮ್ಮ ತಂದೆಯವರು ಏಕೆ ಬರಲಿಲ್ಲ ?" ಎಂದು ಅವರನ್ನು ನೇರವಾಗಿ ಕೇಳಿದಳು.

"ಏಕೆ ಬರಲಿಲ್ಲವೆಂಬುದು ತಿಳಿಯದು. ಶ್ರೀಮದಾಚಾರ್ಯರು ಏನೆಲ್ಲ ಸಿದ್ಧತೆ ಆಗಬೇಕು ಎಂಬುದನ್ನೆಲ್ಲ ವಿವರಿಸಿ ನಮ್ಮನ್ನು ಇಲ್ಲಿಗೆ ಹೋಗುವಂತೆ ಅಪ್ಪಣೆ ಮಾಡಿದರು. ನಾವು ಬಂದೆವು."

"ನಾವು ಇತ್ತ ಹೊರಟು ಬಂದ ಮೇಲೆ ನಮ್ಮ ತಂದೆಯವರೇನಾದರೂ ಯಾದವಪುರಿಯಿಂದ ಶ್ರೀಮದಾಚಾರ್ಯರ ಸಂದರ್ಶನಕ್ಕೆ ಬಂದಿದ್ದರೆ ?"

"ಬಂದಿದ್ದರು."

"ಯಾವಾಗ ?"

"ಬಹುಶಃ ಎರಡು ಮೂರು ದಿವಸದಲ್ಲಿ ಇರಬಹುದು. ಸನ್ನಿಧಾನದ ಜೊತೆಗೆ ಬಂದಿದ್ದ ಸಚಿವ ನಾಗಿದೇವಣ್ಣನವರು ಆ ಮಾರನೆಯ ದಿವಸ ಯಾದವಪುರಿಗೆ ಹೊರಟರು. ಒಂದೆರಡು ದಿನದಲ್ಲೇ ತಿರುವರಂಗದಾಸರು ಬಂದರು. ವಾಸ್ತವವಾಗಿ ಶ್ರೀಮದಾಚಾರ್ಯರೇ ಅವರನ್ನು ಬರಮಾಡಿದ್ದರಂತೆ."

"ನಮ್ಮ ತಂದೆ ಹಾಗೆ ಹೇಳಿದರೇನು ?"

"ಅವರು ಹೇಳಲಿಲ್ಲ. ಶ್ರೀಮದಾಂಡಾನ್ ಹೇಳಿದರು."

"ಶ್ರೀಮದಾಚಾರ್ಯರೇ ಬರಹೇಳಿ ಕರೆಸಿದ್ದರಿಂದ ಬಹಳ ಮುಖ್ಯವಾದ ವಿಚಾರವೇ ಇರಬೇಕೆಂದು ಕಾಣುತ್ತದೆ."

"ಇರಬೇಕೆಂದು ತೋರುತ್ತದೆ. ಏಕೆಂದರೆ ಅವರು ಕೂಡಲೇ ಯಾದವಪುರಿಗೆ ಹಿಂತಿರುಗಿಬಿಟ್ಟರು."

"ಹಾಗಾದರೆ ಶ್ರೀಮದಾಚಾರ್ಯರ ಜೊತೆಗೆ ನಮ್ಮ ತಂದೆಯವರು ಬರಬಹುದೇನೋ?"

"ಏನೋ ! ಆ ವಿಷಯ ನಮಗೆ ತಿಳಿಯದು."

"ಶ್ರೀಮದಾಚಾರ್ಯರು ಯಾವಾಗ ಬರುತ್ತಾರೆ ?"

"ಅದೂ ನಮಗೆ ತಿಳಿಯದು. ನಾವು ಬರಲಿ ಬಿಡಲಿ ವಿಜಯನಾರಾಯಣ ಸ್ವಾಮಿಯ ಪ್ರತಿಷ್ಠಾಪನೆ ಯಾವ ಲೋಪವೂ ಆಗದಂತೆ ನೆರವೇರಿಸಿ ಎಂದು ವಿವರಣಾತ್ಮಕ ಆದೇಶ ನೀಡಿದ್ದಾರೆ. ಅದರಿಂದ ಅವರು ಬರುವರೇ ಇಲ್ಲವೆ ಎಂಬುದು ಸಹ ನಾವು ಹೇಳಲಾರದ ಸ್ಥಿತಿಯಲ್ಲಿದ್ದೇವೆ."

"ಇಲ್ಲ. ಅವರು ಬಂದೇ ಬರುತ್ತಾರೆ."

"ರಾಣಿಯವರ ಬಾಯಿ ಹರಕೆಯಿಂದಲಾದರೂ ಶ್ರೀಮದಾಚಾರ್ಯರು ಬಂದರೆ ಒಳಿತು. ಈ ಭವ್ಯ

ಸುಂದರ ದೇವಮಂದಿರವನ್ನು ಅವರು ಕಣ್ಣಿಂದ ನೋಡಬೇಕು. ಆನಂದಿಸಬೇಕು. ಪಟ್ಟಮಹಾದೇವಿಯವರ ನಿಷ್ಠೆಗೆ ಈ ಮಂದಿರವು ಸಾಕ್ಷಿಯಾಗಿದೆ.''

"ಈ ಮಂದಿರವು ಸ್ಥಪತಿಗಳ, ರೂವಾರಿಗಳ ನಿಷ್ಠೆಗೆ ಸಾಕ್ಷಿ. ಪಟ್ಟಮಹಾದೇವಿಯವರಾಗಲಿ, ಬೇರೆ ರಾಣಿಯರಾಗಲಿ, ನಾನಾಗಲಿ ಏನು ಮಾಡಲು ಸಾಧ್ಯ ?''

"ನಮಗೇನು ಗೊತ್ತು ? ಶ್ರೀ ಮದಾಚಾರ್ಯರು ಹೇಳಿದುದನ್ನು ನಾವು ನಂಬುವವರು. ಈ ಮಂದಿರ ನಿರ್ಮಾಣದ ಇಡೀ ಹೊಣೆಗಾರಿಕೆ, ರೂಪರೇಷೆಯ ನಿರ್ಣಯ ಎಲ್ಲವೂ ಅವರದೇ. ಅನ್ಯಮತಾವಲಂಬಿಯಾದರೂ ತತ್ವನಿಷ್ಠರಾದ ಅವರ ರೀತಿಯನ್ನು ಅತ್ಯುತ್ತಮ ವ್ಯಕ್ತಿತ್ವವೆಂದು ಶ್ರೀಮದಾಚಾರ್ಯರು ತುಂಬಾ ಮೆಚ್ಚಿಕೊಳ್ಳುತ್ತಾರೆ. ತಮ್ಮಂತರಂಗಕ್ಕೆ ಗೋಚರವಾಗದೆ ಎಂದೂ ಶ್ರೀಮದಾಚಾರ್ಯರು ಯಾರ ಹೆಗ್ಗಳಿಕೆಯ ಬಗೆಗೂ ಮಾತನಾಡುವವರೇ ಅಲ್ಲ. ನಮಗೂ ಸಹ ಶ್ರೀಮದಾಚಾರ್ಯರು ಯಾವುದೇ ಕೆಲಸ ಮಾಡುವಾಗಲೂ ಅವರಿಗೆ ತಿಳಿಸಿ ಅವರ ಒಪ್ಪಿಗೆ ಪಡೆದು ಮಾಡುವಂತೆ ಸೂಚನೆಯನ್ನು ಕೊಟ್ಟಿದ್ದಾರೆ. ನಾವು ಶ್ರೀಮದಾಚಾರ್ಯರ ಆದೇಶದಂತೆ ನಡೆಯುವವರು.''

"ಅವರ ಶಿಷ್ಯರಾದವರೆಲ್ಲರ ಕರ್ತವ್ಯ ಅವರ ಆದೇಶವನ್ನು ಪಾಲಿಸುವುದು. ನಾನೂ ಸಹ ಆ ಶಿಷ್ಯವರ್ಗಕ್ಕೆ ಸೇರಿದವಳೇ ಅಲ್ಲವೆ. ಇಲ್ಲಿ ನಿಮಗೆ ಎಲ್ಲಾ ಸೌಕರ್ಯವಿರುವುದು ತಾನೆ ? ಏನಾದರೂ ಅನನುಕೂಲಗಳಿದ್ದರೆ ನಮಗೆ ಹೇಳಿ.''

"ಅಪ್ಪಣೆ'' ಎಂದು ರಾಣಿಯ ಭೇಟಿಗೆ ಬಂದವರು ಎದ್ದು ವಂದಿಸಿ ಹೊರಟು ಹೋದರು.

ರಾಣಿ ಲಕ್ಷ್ಮೀದೇವಿಗೆ ಒಂದು ಬಗೆಯ ಯೋಚನೆಗಿಟ್ಟುಕೊಂಡಿತು. ತಮ್ಮ ತಂದೆ ಇಲ್ಲಿಗೆ ಧರ್ಮದರ್ಶಿಯಾಗಿ ಬರುವುದಿರಲಿ, ಪ್ರತಿಷ್ಠಾಪನೋತ್ಸವಕ್ಕೆ ಸಹ ಬರುವ ಸಂಭವ ಕಾಣುತ್ತಿಲ್ಲ. ಹಾಗಾದರೆ ಶ್ರೀಮದಾಚಾರ್ಯರು ತಾವೇ ಹೇಳಿಕಳಿಸಿ ಕರೆಸಿಕೊಂಡು ತಂದೆಗೆ ಏನು ಹೇಳಿರಬಹುದು? ತಾವು ಇಲ್ಲಿಗೆ ಬರಲು ಶ್ರೀಮದಾಚಾರ್ಯರನ್ನು ಒಲಿಸಿಕೊಳ್ಳುವುದಾಗಿ ತಂದೆ ಹೇಳಿದ್ದರಲ್ಲ. ಸಾಕ್ಷಾತ್ ತಿರುಮಲೆಯಲ್ಲಿನ ಅನುಭವ ಪಡೆದ ತನ್ನ ತಂದೆಗೆ ಇಲ್ಲಿನ ಈ ಹೊಸ ಮಂದಿರದ ಆರಂಭದಲ್ಲಿ ಸ್ಥಾನವಿಲ್ಲವೆ ? ಅಂದರೆ ಯಾರೋ ಒಟ್ಟಿನ ಮೇಲೆ ಅವರನ್ನು ಅಖಂಡವಾಗಿ ದ್ವೇಷಿಸುವವರಿದ್ದಾರೆ. ಎಲ್ಲ ಕಡೆಯೂ ತನ್ನ ತಂದೆಯ ಬಗೆಗೆ ತಪ್ಪು ಕಲ್ಪನೆಯನ್ನು ಮೂಡಿಸುವ ಕೆಲಸ ಸಾಗಿರುವಂತೆ ಕಾಣುತ್ತದೆ. ಅದನ್ನು ಪತ್ತೆ ಹಚ್ಚಿ ಅದಕ್ಕೆ ಕಾರಣರಾದವರನ್ನು ಮಹಾರಾಜರ ಮುಂದೆ ನಿಲ್ಲಿಸಬೇಕು. ಈ ನಿರ್ಣಯವನ್ನು ಅವಳು ಕೈಕೊಂಡಳು. ಆದರೆ ಪತ್ತೆ ಹಚ್ಚುವ ಕೆಲಸ ಮಾಡುವವರಾರು ? ಅವಳಿಗೆ ವೇಲಾಪುರಿಯ ವಾತಾವರಣವೇ ಹೊಸದು. ಎಲ್ಲರೂ ಅವಳನ್ನು ಬಹಳ ಮರ್ಯಾದೆಯಿಂದ ಕಂಡು ಗೌರವಿಸುತ್ತಿದ್ದರು. ಅವಳ ವೈಯಕ್ತಿಕ ಬೇಕು ಬೇಡಗಳಿಗೆ ಅನುಸಾರವಾಗಿ ಅವಳ ಜೀವನ ಸಾಗಿತ್ತು. ತನ್ನ ಶಯನ ಸುಖಕ್ಕೆ ಅಡ್ಡಿಯಾಗಬಹುದೇನೋ, ಪಟ್ಟಮಹಾದೇವಿಯವರ ಬಯಕೆ ಪೂರೈಸಿದ ಮೇಲೆಯೇ ತನ್ನ ಬಯಕೆಗೆ ಅವಕಾಶ ಎಂದೆಲ್ಲ ಅವಳು ಊಹಿಸಿದ್ದಳು. ಆದರೆ ಅದೊಂದೂ ಆಗಲಿಲ್ಲ. ಪಾಣಿಗ್ರಹಣವಾದಂದಿನಿಂದ ಮಹಾರಾಜ ತನ್ನನ್ನು ಬಿಟ್ಟು ಬೇರೊಬ್ಬರೊಂದಿಗೆ ಶಯನವನ್ನು ಹಂಚಿಕೊಂಡಿಲ್ಲವೆಂಬುದು ಅವಳಿಗೇ ಗೊತ್ತು. ಮಹಾರಾಜನು ಸಹ ಅವಳೊಂದಿಗೆ ಒಂದೇ ರೀತಿ ವರ್ತಿಸುತ್ತಿದ್ದ. ಮತ್ತೆ ತನ್ನ ತಂದೆಯ ಬಗೆಗೆ ಪ್ರಸ್ತಾಪ ಮಾಡೋಣವೆ ಎಂದು ಕೆಲವೊಮ್ಮೆ ಅವಳಿಗೆ ಅನಿಸಿತ್ತು. ಆದರೂ ಧೈರ್ಯವಾಗಲಿಲ್ಲ. ಆ ಗುಂಗಿ ಒಳಗೇ ಇದ್ದರೂ ಅವಳು ವೇಲಾಪುರಿಯ ರೀತಿ ನೀತಿ, ಜನಗಳನ್ನು ಅರಿತುಕೊಳ್ಳುತ್ತಾ ಕಾಲ ತಳ್ಳಿದಳು.

ಎಲ್ಲರೂ ಬಿಡುವಿಲ್ಲದಂತೆ ದುಡಿಯತೊಡಗಿದ್ದರು. ದೇವಮಂದಿರದ ಕೆಲಸ ಒಂದು ಕಡೆ ಭರದಿಂದ ಸಾಗುತ್ತಿದ್ದರೆ ಮತ್ತಿತರ ಕಡೆ ವಿಜಯೋತ್ಸವದ ವ್ಯವಸ್ಥೆಗಳು ಭರದಿಂದ ಸಾಗತೊಡಗಿವು. ವಸತಿ, ಆರೋಗಣೆ–ಮನುಷ್ಯರಿಗೆ; ಪ್ರಾಣಿಗಳಿಗೆ. ಜೊತೆಗೆ ಈ ಎರಡು ವರ್ಗಗಳ ಆರೋಗ್ಯ ರಕ್ಷಣೆಗೆ ವಿಶಿಷ್ಟವಾದ ವ್ಯವಸ್ಥೆಗಳೇ ಆಗಬೇಕಾಗಿತ್ತು. ಹುಲ್ಲು ಮೆದೆಗಳು, ಆಹಾರದ ಉಗ್ರಾಣಗಳು ತುಂಬಿ ಎದ್ದು ನಿಂತವು.

ಕಾಮನ ಹುಣ್ಣಿಮೆಯ ನಂತರ ಹೊರಗಿನಿಂದ ಬರುವವರು ಬರತೊಡಗುವ ನಿರೀಕ್ಷೆಯಿತ್ತು. ಅದರಿಂದ ಅಷ್ಟರಲ್ಲಿ ಎಲ್ಲ ವ್ಯವಸ್ಥೆಗಳೂ ಆಗಿ ಬಿಡಬೇಕೆಂದು ಅರಮನೆಯ ಅಪ್ಪಣೆ ಆಗಿತ್ತು. ಹೊರಗಿನಿಂದ ಬರುವವರ ಅನುಕೂಲಕ್ಕೆಂದು ವಿಶೇಷ ಮಾರುಕಟ್ಟೆಯೊಂದು ನಿರ್ಮಾಣವಾಯಿತು. ವೇಲಾಪುರಿ ಹೊಸ ಚೇತನದಿಂದ ಜಗಜಗಿಸಿತ್ತು.

ಪಟ್ಟಮಹಾದೇವಿಗೆ, ರೂವಾರಿಗಳಿಗೆ ದೇವಮಂದಿರ ಪರಿಪೂರ್ಣಗೊಳಿಸುವ ಕೆಲಸ. ಮೈಯೆಲ್ಲಾ ಕಣ್ಣಾಗಿ ಆ ಕೆಲಸ ಸಾಗಿತ್ತು. ದೇವಸ್ಥಾನದ ಸುತ್ತಲೂ ಸ್ಥಂಭಗಳ ಮೇಲೆ ಓರೆಯಾಗಿ ನಿಲ್ಲಿಸಲು ಯೋಚಿಸಿದ್ದ ವಿಗ್ರಹಗಳು ಪೂರ್ತಿ ಆಗಿರಲಿಲ್ಲ. ಒಂದು ದಿನ ಸ್ಥಪತಿ ಪಟ್ಟಮಹಾದೇವಿಯೊಂದಿಗೆ ತನ್ನ ಹಿಂದಿನ ಬೇಡಿಕೆಯನ್ನು ಪುನರಾವರ್ತನೆ ಮಾಡಿದ.

"ಮಹಾಸನ್ನಿಧಾನದೊಂದಿಗೆ ವಿಚಾರ ಮಾಡಿ ನಂತರ ತಿಳಿಸುತ್ತೇನೆ'' ಎಂದಳು ಶಾನ್ತಲದೇವಿ.

ಈಗಂತೂ ಸಮಯವಿರಲಿಲ್ಲ. ಅದರಿಂದ ಒಡನೆಯೇ ಅವಳು ಮಹಾರಾಜನೊಡನೆ ಏಕಾಂತದಲ್ಲಿ ಮಾತನಾಡಿದಳು. ಪರಿಸ್ಥಿತಿಯನ್ನು ವಿವರಿಸಿದಳು. "ಸ್ಥಪತಿ ತನ್ನ ಕಲ್ಪನೆಯ ವೈವಿಧ್ಯವನ್ನೆಲ್ಲ ಈ ದೇವಮಂದಿರದಲ್ಲಿ ತುಂಬಿದ್ದಾನೆ. ಈ ವಿಗ್ರಹಗಳ ವೈವಿಧ್ಯ ತುಂಬಲು ನನ್ನ ನೆರವನ್ನು ಕೇಳುತ್ತಿದ್ದಾನೆ. ನಮ್ಮನ್ನು ಯಾದವಪುರಿಗೆ ಬರಮಾಡುವುದಕ್ಕೆ ಮುಂಚಿನಿಂದ ಆತ ಪ್ರಾರ್ಥಿಸುತ್ತಿದ್ದಾನೆ. ನಾನು ಹಿಂಜರಿದೆ. ಸ್ಥಪತಿಯ ಆಸೆ ನೆರವೇರಿಸಿದರೆ ಅದರಲ್ಲಿ ತಪ್ಪಿಲ್ಲದಿದ್ದರೂ ತಪ್ಪುಕಲ್ಪನೆಗೆ ಅದು ಎಡೆ ಮಾಡಿ ಕೊಡಬಹುದೆಂದು ಕಾಲ ತಳ್ಳಿದೆ. ಅಲ್ಲದೆ ಇನ್ನೂ ವಿಗ್ರಹಗಳು ಆಗಬೇಕು. ಅದಕ್ಕೆ ನಾನು 'ಪ್ರತಿಮಾಭಂಗಿ' ನೀಡಬೇಕು. ಸನ್ನಿಧಾನ ಅದು ತಪ್ಪಿಲ್ಲ, ಆಗಬಹುದು ಎಂದು ಒಪ್ಪಿದರೆ ನಾನು ಸ್ಥಪತಿಗೆ ನನ್ನ ಅಂತಃಪುರದಲ್ಲಿ 'ಪ್ರತಿಮಾಭಂಗಿ' ನೀಡುತ್ತೇನೆ. ಅಪ್ಪಣೆಯಾಗಲಿ'' ಎಂದು ತಿಳಿಸಿದಳು.

"ಈಗಾಗಲೇ ಶ್ರೀಮದಾಚಾರ್ಯರು ನಿನ್ನನ್ನು ಅಟ್ಟಕ್ಕೇರಿಸಿ ಮಾತನಾಡುತ್ತಾರೆ. ಇದಾದ ಮೇಲೆ ನಿನ್ನನ್ನು ಗಗನಕ್ಕೇರಿಸಿ ಬಿಡುತ್ತಾರೆ.''

"ದೊಡ್ಡವರು ಯಾವಾಗಲೂ ದೊಡ್ಡವರೇ ! ಅವರ ಮನಸ್ಸಿನಂತೆಯೇ ಅವರ ವಿಚಾರವೂ ಭವ್ಯತೆಯಿಂದ, ವಿಶಾಲತೆಯಿಂದ ತುಂಬಿರುತ್ತದೆ. ಈಗ ಸನ್ನಿಧಾನದ ಅಪ್ಪಣೆ.''

"ಇದು ಶ್ರೀಮದಾಚಾರ್ಯರ ಕೈಂಕರ್ಯ. ನಾವಿಬ್ಬರೂ ಅವರಿಗೆ ವಚನವಿತ್ತಿದ್ದೇವೆ. ಪೊಯ್ಸಳರು ಭಾಷೆಗೆ ತಪ್ಪುವವರ ಗಂಡರು. ಎಂದಾಗ ಪಟ್ಟಮಹಾದೇವಿಯ ಇಚ್ಛೆಗೆ ವಿರೋಧವೇನಿದೆ ?''

"ಇದು ಕೇವಲ ಪಟ್ಟಮಹಾದೇವಿ, ಮಹಾರಾಜರ ಸಂಬಂಧವಲ್ಲ. ಸನ್ನಿಧಾನ ಈ ವಿಷಯವನ್ನು ಇನ್ನೂ ಆಳವಾಗಿ ಯೋಚಿಸಬೇಕು. ಬಿಟ್ಟಿದೇವ ಶಾನ್ತಲೆಯರು ತಮ್ಮ ವೈಯಕ್ತಿಕತೆಗೆ ಯಾವ ಅಧಿಕಾರವೂ ಇಲ್ಲದಾಗ, ತಾವಿಬ್ಬರೂ ದೇಹವೆರಡು ಆತ್ಮವೊಂದು ಎಂದು ಗುರುತಿಸಿಕೊಂಡು ಅದಕ್ಕೆ ಮಹಾಮಾತೃಶ್ರೀಯವರ

ಆಶೀರ್ವಾದ ಪಡೆದುಕೊಂಡು ದಂಪತಿಗಳಾದಾಗ, ನನ್ನನ್ನು ನಾನು ಸನ್ನಿಧಾನಕ್ಕಾಗಿ ಪೂರ್ತಿ ಸಮರ್ಪಿಸಿಕೊಂಡೆ. ಈ ಮನಸ್ಸು ಎಂದೂ ಕಲುಷಿತವಾಗುವುದಿಲ್ಲ. ಈ ಶರೀರವೂ ಕಲುಷಿತವಾಗಬಾರದು. ಅದು ಕಾಯಾ, ಮನಸಾ ಪವಿತ್ರವಾಗಿರುತ್ತದೆ ಎಂದು ಭಾವಿಸಿದ್ದೇನೆ. ಸನ್ನಿಧಾನಕ್ಕೂ ಆ ವಿಷಯದಲ್ಲಿ ಅಪಾರ ನಂಬಿಕೆ ಇದೆ. ಆದರೆ ವಾಚಾ, ಎಂದರೆ ಲೋಕದ ನಾಲಿಗೆಗೆ ತಡೆಯಿಲ್ಲ. ನಾನು ನೀಡಬಹುದಾದ 'ಪ್ರತಿಮಾ ಭಂಗಿ' ಕೆಲವು ಮಟ್ಟಿಗೆ ದೇಹಾಭಿಮಾನವನ್ನು ತೊರೆದ ಭಂಗಿಯಾಗಬಹುದು. ಅದು ನಾಳೆ ಮಾತಿಗೆಡೆಕೊಡಬಹುದು. ನಾನು ಲೋಕಕ್ಕೆ ಅಂಜುವವಳಲ್ಲ. ಕಲಾವಿದರಿಗೆ ಯಾವಾಗಲೂ ದ್ವಂದ್ವ ಬಾಳಿರುತ್ತದೆ ಎಂಬುದರ ಸ್ಪಷ್ಟಕಲ್ಪನೆ ನನ್ನದು. ಒಂದು ಸ್ವಂತದ್ದು. ಇನ್ನೊಂದು ಬರೀ ಕೃತಕ; ಕಲ್ಪಿತ. ಕಲೆಗಾಗಿ ಮಾಡುವ ತೋರಿಕೆಯ ಕ್ರಿಯೆ. ಈ ವಿಷಯ ಸನ್ನಿಧಾನಕ್ಕೂ ಗೊತ್ತಿಲ್ಲದಿಲ್ಲ. ಆದರೂ ಎಲ್ಲವನ್ನೂ ವಿಚಾರ ಮಾಡಿ ಸನ್ನಿಧಾನ ಒಪ್ಪಿಗೆಯನ್ನು ಕೊಟ್ಟರೆ ನನಗೆ ನೆಮ್ಮದಿ. ಸನ್ನಿಧಾನದ ಹೃದಯದಲ್ಲಿ ಎಂದೂ ನನ್ನ ಬಗೆಗೆ ಶಂಕೆ ಮೂಡಬಾರದು. ಬಾಹ್ಯದ ಒತ್ತಡ ಬಂದರೂ ಶಂಕೆಗೆ ಸನ್ನಿಧಾನ ಶಿರಬಾಗದಂತಿರಬೇಕು. ಅದರಿಂದ ಈಗ ಸನ್ನಿಧಾನ ನೇರವಾಗಿ ಕೊಡುವ ಒಪ್ಪಿಗೆಯೇ ನನ್ನ ರಕ್ಷಾ ಕವಚ.''

''ನಮ್ಮ ಪಟ್ಟಮಹಾದೇವಿಯವರ ಬಗೆಗೆ ಶಂಕೆ ಪ್ರಕಟಿಸುವವರ ನಾಲಿಗೆ ಆಮೇಲೆ ಉಳಿಯಲಿಕ್ಕಿಲ್ಲ.''

''ಹಿಂದುಮುಂದರಿಯದೆ ಆಡುವ ನಾಲಿಗೆಯ ಮೇಲೆ ಸನ್ನಿಧಾನದ ಶಾಸನಬೇಡ. ಬೂತುಗನಂತಹ ಜನರಿಗೆ ಕ್ಷಮೆಯೂ ದೊರೆಯಬೇಕು. ಅದರಿಂದ ಸನ್ನಿಧಾನ ನೇರವಾಗಿ ನನಗೆ ಒಪ್ಪಿಗೆ ನೀಡಬೇಕು.''

''ದೇವಿ, ಇದಕ್ಕೆ ನನ್ನ ಹಾರ್ದಿಕ ಒಪ್ಪಿಗೆ ಇದೆ. ಅದು ಇರಲಾರದೆಂದು, ದೊರೆಯಲಾರದೆಂದು ನೀನೇಕೆ ಶಂಕಿಸಿದಿ ಎಂಬುದೇ ನಮಗೆ ಅರ್ಥವಾಗುತ್ತಿಲ್ಲ.''

''ಎಲ್ಲರಿಗೂ ಅರಮನೆಯ ನಡವಳಿಕೆಯ ರೀತಿ ತಿಳಿದಿರುವುದಿಲ್ಲ. ನೂತನ ರಾಣಿಯವರು ರಾಣಿಯಾಗುವ ಮೊದಲು ಬಾಳಿದ ವಾತಾವರಣ ಅವರಲ್ಲಿ ಪ್ರಬುದ್ಧತೆಯನ್ನು ರೂಪಿಸಲು ನೆರವಾಗಿಲ್ಲ. ಅದರಿಂದ ಅವರು ಬೆಳೆದ ವೈದಿಕ ವಾತಾವರಣದ ಹಿನ್ನೆಲೆಯಲ್ಲಿ ಅವರ ಬಾಯಲ್ಲಿ ಏನಾದರೂ ಮಾತು ಬರಬಹುದು. ಅದರಿಂದ...''

''ಆ ವಿಷಯದಲ್ಲಿ ದೇವಿ ಚಿಂತಿಸಬೇಕಾಗಿಲ್ಲ. ರಾಣಿಯನ್ನು ನಮ್ಮ ಹಿಡಿತದಲ್ಲಿಟ್ಟುಕೊಳ್ಳುವುದು ನಮಗೆ ತಿಳಿದಿದೆ. ಪಟ್ಟಮಹಾದೇವಿಯ ಬಗೆಗೆ ಹೇಗೆ ವರ್ತಿಸಬೇಕೆಂದು ಶ್ರೀಮದಾಚಾರ್ಯರೂ ರಾಣಿಗೆ ಹೇಳಿದ್ದಾರೆ.''

''ಸದ್ಯ, ನನ್ನ ಮೇಲೆ ಕುಳಿತಿದ್ದ ಭಾರವೊಂದು ಇಳಿದಂತಾಯಿತು.''

''ಆಗ ಜೊತೆಯಲ್ಲಿ ಬೇರೆ ಯಾರಾದರೂ ಇರುತ್ತಾರೆಯೆ ? ಅಥವಾ ದೇವಿ, ಸ್ಥಪತಿ ಇಬ್ಬರೇ ಇರುವುದೋ !''

''ಸ್ಥಪತಿಯ ಬಗೆಗೆ ಶಂಕಿಸಬೇಕಾಗಿಲ್ಲ. ಆದರೂ ಸನ್ನಿಧಾನದ ಆಲೋಚನೆಯಂತೆ ಚಟ್ಟಲೆಯನ್ನು ಜೊತೆಗಿರುವಂತೆ ಹೇಳುತ್ತೇನೆ.''

''ಸರಿ.''

ನಂತರದ ನಾಲ್ಕಾರು ದಿವಸಗಳು ಪಟ್ಟಮಹಾದೇವಿಯ ಅಂತಃಪುರವೇ ಸ್ಥಪತಿಯ

ಪ್ರತಿಮಾನಿರೂಪಶಾಲೆಯಾಯಿತು. ಪಟ್ಟಮಹಾದೇವಿ ಇತ್ತ ಒಂದೊಂದು ಭಂಗಿಯನ್ನೂ ಅವನು ಚಿತ್ರಿಸಿಕೊಂಡ. ಕೆಲವು ಭಂಗಿ ಸೂಚನೆಗಳನ್ನೂ ವಿನಯವಾಗಿ ಮಾಡಿದ. ಒಂದು ವಿಷಯವನ್ನು ಶಾನ್ತಲದೇವಿ ಪ್ರಾರಂಭದಲ್ಲಿಯೇ ಸೂಚಿಸಿದ್ದಳು—ಭಂಗಿಗಳು, ಭಾವಗಳು ತನ್ನವಾಗಬಹುದೇ ವಿನಾ ಮುಖಮಾತ್ರ ತನ್ನದಾಗ ಬಾರದು. ಅದಕ್ಕೆ ಹಲವು ರೂಪಗಳನ್ನು ಕೊಡಬೇಕು. ಯಾವುದೊಂದರಲ್ಲಿಯೂ ತನ್ನ ಮುಖ ರೂಪಿತವಾಗಬಾರದು ಎಂದು. ಅದರಂತೆಯೇ ಅವ್ಯಾಹತವಾಗಿ ಕೆಲಸ ಸಾಗಿತು. ಪಟ್ಟಮಹಾದೇವಿಯ ಅಂತಃಪುರದೊಳಕ್ಕೆ ಆ ನಾಲ್ಕಾರು ದಿವಸಗಳು ಯಾರೊಬ್ಬರಿಗೂ ಪ್ರವೇಶವಿರಲಿಲ್ಲ. ಸ್ವತಃ ಪೊಯ್ಸಳ ಮಹಾರಾಜನಿಗೇ ಪ್ರವೇಶವಿಲ್ಲ ಎಂದ ಮೇಲೆ ಉಳಿದವರಿಗೆ ಎಲ್ಲಿಂದ ಪ್ರವೇಶಸಾಧ್ಯ? ಪಟ್ಟಮಹಾದೇವಿ, ಸ್ಥಪತಿ ಮತ್ತು ಚಟ್ಟಲೆ ಇಷ್ಟೇ ಜನ. ಉಪಹಾರ, ಆರೋಗಣೆಗಳು ಸಹ ಅಲ್ಲಿಯೇ ನಡೆದವು. ಅಂತಃಪುರದಲ್ಲಿ ಏನು ನಡೆಯುತ್ತಿದೆ ಎಂಬ ವಿಚಾರ ಯಾರಿಗೂ ತಿಳಿಸಲಿಲ್ಲ. ಆ ವಿಷಯವನ್ನು ಮಾತನಾಡಬಾರದೆಂದು ಸ್ಥಪತಿಗೂ ಚಟ್ಟಲೆಗೂ ಕಟ್ಟಪ್ಪಣೆ ಮಾಡಲಾಗಿತ್ತು. ಮಾಯಣನಿಗೆ ಸಹ ಈ ಕುರಿತು ಏನೂ ಉಸಿರೆತ್ತಬಾರದೆಂದು ಹೇಳಲಾಗಿತ್ತು. ಹೊರಗೆ ಕಾವಲಿದ್ದ ರೇವಿಮಯ್ಯನಿಗೆ ವಿಷಯ ತಿಳಿದಿತ್ತು. ಅವನ ವಿಷಯ ಗೊತ್ತಿದ್ದ ಯಾರೂ ಅವನನ್ನು ಕೇಳುವ ಸಾಹಸ ಮಾಡಲಿಲ್ಲ. ಆದರೆ ಈ ಘಟನೆ ಮಾತ್ರ ಕುತೂಹಲವನ್ನು ಕೆರಳಿಸಿತ್ತು. ಯಾರ ಮನಸ್ಸಿನಲ್ಲಿಯೂ ಅಪಾರ್ಥ ಕಲ್ಪನೆ ಹುಟ್ಟಲಿಲ್ಲವಾದರೂ ಎಲ್ಲರನ್ನೂ ಎಲ್ಲವನ್ನೂ ಇನ್ನೂ ಅರ್ಥಮಾಡಿಕೊಳ್ಳಲಾಗದ ರಾಣಿ ಲಕ್ಷ್ಮಿದೇವಿಗೆ ಮಾತ್ರ ಇದೊಂದು ಮಹಾ ಸಮಸ್ಯೆ ಎನಿಸಿತು. ಅವಳು ಊಳಿಗದವರು ಒಂದಿಬ್ಬರನ್ನು ಕೇಳಿದಳು. "ಅವೆಲ್ಲ ಅರಮನೆಗೆ ಸಂಬಂಧಿಸಿದ ವಿಷಯ. ನಮಗೇನೂ ಗೊತ್ತಿಲ್ಲ. ತಿಳಿಯುವ ಕುತೂಹಲವೂ ಇಲ್ಲ" ಎಂದು ಬಿಟ್ಟರು.

ತನ್ನ ಕುತೂಹಲವನ್ನು ತಡೆದುಕೊಳ್ಳಲಾರದೆ ಅವಳು ಮಹಾರಾಜನನ್ನೇ ಕೇಳಿದಳು.

"ನಿನಗೇಕೆ ಅನ್ಯರ ವಿಷಯ ?"

"ಪಟ್ಟಮಹಾದೇವಿಗೆ ಪರಪುರುಷನ ಜೊತೆಗೆ ಅದೇನು ದಿನಗಟ್ಟಲೆ ಗುಟ್ಟಿನ ಏಕಾಂತ ಎಂಬುದನ್ನು ತಿಳಿಯಬಾರದೆ ?"

"ದೇವಿ !" ಗಡಸು ಧ್ವನಿಯಲ್ಲಿ ಬಿಟ್ಟಿದೇವ ಹೇಳಿದ. ಅವನ ನೋಟ ಸಿಟ್ಟಿನಿಂದ ಕೂಡಿತ್ತು.

"ನಾನೇನು ಮಾಡಿದೆ ?"

"ಅಲ್ಪಳ ಹಾಗೆ ವರ್ತಿಸುವುದು ಪೊಯ್ಸಳ ರಾಣಿಗೆ ತಕ್ಕುದಲ್ಲ. ಅದೇನೆಂಬುದು ನಮಗೆ ಗೊತ್ತಿದೆ."

"ಸನ್ನಿಧಾನಕ್ಕೆ ಗೊತ್ತಿದೆ, ಪಟ್ಟಮಹಾದೇವಿಯವರು ತಮ್ಮ ಅಂತಃಪುರದಲ್ಲಿ ಸ್ಥಪತಿಯೊಡನೆ ಏಕಾಂತದಲ್ಲಿರುತ್ತಾರೆ ಎಂಬುದು. ಅದೇನೆಂಬುದು ರಾಣಿಯಾದ ನನಗೆ ತಿಳಿಯಬಾರದೆಂದರೆ ಸನ್ನಿಧಾನದ ದೃಷ್ಟಿಯಲ್ಲಿ ನಾನು ಅಲ್ಪಳೆಂದೇ ಅರ್ಥವಾಗುತ್ತದೆಯಲ್ಲ."

"ಇದು ಅಲ್ಪತನದ ಪ್ರದರ್ಶನವಷ್ಟೆ ಅಲ್ಲ. ಇದು ದುರ್ಬುದ್ಧಿ ಕೂಡ."

"ಹೌದು, ನನ್ನದು ದುರ್ಬುದ್ಧಿ. ನಾನು ಅಲ್ಪಳು. ಮತ್ತದೇಕೆ ನನ್ನ ಪಾಣಿಗ್ರಹಣ ಮಾಡಬೇಕಾಗಿತ್ತು?"

"ಶ್ರೀಮದಾಚಾರ್ಯರ ಆಶೀರ್ವಾದ ಬಲವಿರುವ ನೀನು ಇಲ್ಲಿಗೆ ಆವಶ್ಯಕವಾದ ಮನೋವೈಶಾಲ್ಯವನ್ನು

ಬೆಳೆಸಿಕೊಳ್ಳಬಲ್ಲೆ ಎಂದು ಪಾಣಿಗ್ರಹಣ ಮಾಡಿದೆವು. ಅದೂ ನಮ್ಮ ಪಟ್ಟಮಹಾದೇವಿ, ಉಳಿದ ರಾಣಿಯರು ಒಪ್ಪಿಗೆ ಇತ್ತುದರಿಂದ.''

"ಅವರು ಒಪ್ಪದಿದ್ದರೆ ಹಾಗಾದರೆ ಸನ್ನಿಧಾನ ನನ್ನ ಪಾಣಿಗ್ರಹಣ ಮಾಡುತ್ತಿರಲಿಲ್ಲ ?''

"ಹೌದು. ಎಷ್ಟು ಸಲ ಹೇಳಬೇಕು ? ನಾವು ಪಟ್ಟಮಹಾದೇವಿಯವರ ಇಷ್ಟಕ್ಕೆ ವಿರೋಧವಾಗಿ ನಡೆಯುವುದಿಲ್ಲ.''

"ಸನ್ನಿಧಾನದ ಇಷ್ಟಾನಿಷ್ಟಕ್ಕಿಂತ ಪಟ್ಟಮಹಾದೇವಿಯವರ ಇಷ್ಟಾನಿಷ್ಟವೇ ಹೆಚ್ಚಿನದೇನು ?''

"ಇದು ಪರಸ್ಪರ. ಹೆಚ್ಚು ಕಡಿಮೆ ಇಲ್ಲಿ ಬರುವುದಿಲ್ಲ.''

"ಇಲ್ಲಿ ರಾಣಿಯ ಸ್ಥಾನವೇನು ?''

"ಇಲ್ಲಿ ಎಲ್ಲರಿಗೂ ವೈಯಕ್ತಿಕ ವಿಚಾರಗಳಲ್ಲಿ ಸಮಾನ ಸ್ಥಾನವಿದೆ. ಅರಮನೆಯ ನೀತಿಯ ರೀತಿಯ ನೆಲೆಗಟ್ಟಿನಲ್ಲಿ ಅವರವರು ಸ್ವತಂತ್ರರು. ಈವರೆಗೆ ಯಾರೂ ಸ್ವೇಚ್ಛಾಪ್ರವೃತ್ತರಾಗಿಲ್ಲ. ಮತ್ತೊಬ್ಬರನ್ನ ಶಂಕೆಯಿಂದ ನೋಡಿಲ್ಲ. ನಾವೆಲ್ಲ ಒಂದು ಕುಟಂಬದವರಂತೆ ಬಾಳಿದ್ದೇವೆ. ಮುಂದೆಯೂ ಹಾಗೆಯೇ ಬಾಳಬೇಕು. ಹೊಸದಾಗಿ ಈ ಕುಟುಂಬವನ್ನು ಪ್ರವೇಶಿಸಿದ ನೀನು ಸಹ ಅದಕ್ಕೆ ಅನುವರ್ತಿಯಾಗಿ ನಡೆದುಕೊಳ್ಳಬೇಕು. ನಮ್ಮ ಅರಮನೆಯ ಹಿರಿಯ ಹಡಿಯಾರ ರೇವಿಮಯ್ಯನ ಬಳಿ ನೀನು ಶಿಕ್ಷಣ ಪಡೆದುಕೋ. ಆಗ ನೀನು ಈ ರಾಜಮನೆತನದಲ್ಲಿ ಬಾಳುವುದು ಹೇಗೆ ಎಂಬುದನ್ನು ಅರ್ಥಮಾಡಿಕೊಳ್ಳಬಲ್ಲೆ.''

"ನಾನು ರಾಣಿ, ಒಬ್ಬ ಬಾಗಿಲು ಕಾಯುವವನಿಂದ ಕಲಿಯಬೇಕೆ ?''

"ಪಟ್ಟಮಹಾದೇವಿಯವರೇ ಅವನನ್ನು ಅಚ್ಚುಮೆಚ್ಚೆಂದು ಪರಿಗಣಿಸಿದ್ದಾರೆ.''

"ಅದರಿಂದ ನಾವೂ ಹಾಗೆ ಪರಿಗಣಿಸಬೇಕೇನು ?''

"ವ್ಯಕ್ತಿಯನ್ನು ಗುಣದಿಂದ ಅರಿಯುವ ಬುದ್ಧಿ ಬರದ ಬರೀ ಸ್ಥಾನದಿಂದ ಅಳೆದವರು ಬಾಳಿನಲ್ಲಿ ಏನನ್ನೂ ಸಾಧಿಸುವುದಿಲ್ಲ. ರಾಣಿ ಬಮ್ಮಲದೇವಿ, ರಾಣಿ ರಾಜಲದೇವಿಯವರು ಬೇರೆ ಬೇರೆ ವಂಶದವರು. ಇಬ್ಬರೂ ರಾಜವಂಶೀಯರಾದರೂ ದೂರದ ಆಪ್ತರೊಡನೆ ಒಡಹುಟ್ಟಿದವರಂತೆ ಬೆಳೆದು ಪೊಯ್ಸಳ ರಾಣಿಯರಾದರು. ಒಬ್ಬ ಸಾಮಾನ್ಯ ಹೆಗ್ಗಡೆಯ ಮಗಳು ನಮ್ಮ ಪಟ್ಟಮಹಾದೇವಿಯವರು. ಮಹಾ ದಣ್ಣಾಯಕರ ಮಕ್ಕಳಿಗಿಂತ ಸಾವಿರ ಮಡಿ ಮೇಲೆನಿಸಿದ ಗುಣದಿಂದ ಮಹಾಮಾತೃಶ್ರೀ ಅವರ, ನಮ್ಮ ತಾತಂದಿರು ವಿನಯಾದಿತ್ಯ ಮಹಾರಾಜರ ಪ್ರೀತಿ ಸಂಪಾದಿಸಿ ನಮ್ಮ ಹೃದಯವನ್ನು ಗೆದ್ದಹರು. ನಾನು ಶ್ರೀವೈಷ್ಣವ ಬ್ರಾಹ್ಮಣ ಕುಲಸಂಜಾತರ ಆಶ್ರಯದಲ್ಲಿ ಬೆಳೆದರೂ ನಿನ್ನನ್ನು ರಾಣಿಯಾಗಲು ಅವಕಾಶ ಕೊಟ್ಟ ನಿನ್ನ ಸಾಕುತಂದೆಯವರು ಮಹಾಧರ್ಮಪಾಷಂಡಿಗಳು. ತನ್ನ ಕುಲದಷ್ಟು ಉಚ್ಚಕುಲ ನಿನ್ನದಲ್ಲದಿರಬಹುದು ಎಂಬ ಶಂಕೆಯಿಂದ ನಿನ್ನನ್ನು ನಮಗೆ ಒಪ್ಪಿಸಿದರು. ಅವರ ಸ್ವಂತ ಮಗಳಾಗಿದ್ದಿದ್ದರೆ ಅವರು ಪಾಣಿಗ್ರಹಣಕ್ಕೆ ಒಪ್ಪುವುದಿರಲಿ, ಈ ಪಾಣಿಗ್ರಹಣಕ್ಕೆ ಪ್ರಯತ್ನಿಸಿದಂತೆ ಪ್ರಯತ್ನಿಸುತ್ತಿರಲಿಲ್ಲ. ನೀನು ರಾಣಿಯಾಗುವುದರಲ್ಲಿ ಬೇರೆ ಯಾರ ಪತ್ನಿಯಾಗುವುದಕ್ಕಿಂತಲೂ ಹೆಚ್ಚಿನ ಹಿತವಿದೆ ಎಂಬುವ ಲೌಕಿಕ ಜಾಣತನ ನಿಮ್ಮ ಸಾಕು ತಂದೆ ತಿರುವರಂಗದಾಸರದು. ನೀನಿನ್ನೂ ಚಿಕ್ಕವಳು. ನಿನಗೆ ಶುಭ ದೊರೆಯಲಿ ಎಂದು ಪಟ್ಟಮಹಾದೇವಿಯವರು ಕಾಯದೀಕ್ಷೆ ಹಿಡಿದಿದ್ದಾರೆ. ಅವರ ಈ ಔದಾರ್ಯಕ್ಕೆ ನಿನ್ನ ಶಂಕೆ ಸರಿಯಾದ ಮನ್ನಣೆಯಲ್ಲ. ಸುಮ್ಮನೆ ಇಲ್ಲದ ಶಂಕೆಯನ್ನು ತಂದುಕೊಳ್ಳಬೇಡ. ಅದೇನೆಂಬುದು

ಯುಕ್ತಕಾಲದಲ್ಲಿ ಲೋಕಕ್ಕೆಲ್ಲ ಗೊತ್ತಾಗುತ್ತದೆ. ಈಗಲೇ ಆತುರವೇಕೆ ?''

"ಲೋಕಕ್ಕೆಲ್ಲ ಆಮೇಲೆ ಗೊತ್ತಾಗುವುದಾದರೆ ಈಗ ಅದಕ್ಕೇಕೆ ಈ ಏಕಾಂತ ? ಈ ಗುಟ್ಟು?''

"ಮಾಡತೊಡಗಿರುವ ಕೆಲಸದ ಏಕಾಗ್ರತೆಗೆ ಭಂಗ ಬರಬಾರದೆಂದು.''

"ಅದೇನು ಕೆಲಸವೋ ? ಅದೇನು ಏಕಾಗ್ರತೆಯೋ ಭಗವಂತನೇ ಬಲ್ಲ. ನನಗಂತೂ ಅರ್ಥವಾಗುವುದಿಲ್ಲ''

"ಅದು ಅರ್ಥವಾಗಬೇಕಾದರೆ ಕಲೆಯ ಅರಿವಿರಬೇಕು. ಅದರ ಬಗೆಗೆ ಅಭಿಮಾನವಿರಬೇಕು. ಕಲ್ಪನಾ ಪ್ರತಿಭೆ ಇರಬೇಕು. ಅದಿಲ್ಲದವರು ಅದರ ಬಗೆಗೆ ತಲೆಕೆಡಿಸಿಕೊಳ್ಳುವುದು ಸರಿಯಲ್ಲ.''

"ಅದು ನನ್ನ ತಪ್ಪಲ್ಲ. ನನಗೆ ಅದರ ಬಗೆಗೆ ಏನೂ ತಿಳಿಯಲು ಅವಕಾಶ ಬರಲಿಲ್ಲ. ಅದರಲ್ಲಿ ಆಸಕ್ತಿ ತಳೆಯಬೇಕೆಂದು ನನಗೆಂದೂ ತೋರಲೇ ಇಲ್ಲ''

"ಹಾಗಾದರೆ ನಿನಗೇನೇನು ತೋರಿತ್ತು ? ಯಾವು ಯಾವುದನ್ನು ತಿಳಿಯಲು ಅವಕಾಶವಾಗಿತ್ತು?''

"ದೇವಸ್ಥಾನ. ಅರ್ಚನೆ. ಅವುಗಳಿಗೆ ಬೇಕಾದ ಪರಿಕರಗಳು. ರುಚಿ ಕಟ್ಟಾದ ಆಹಾರ ಸಿದ್ಧಪಡಿಸುವ ಶ್ರದ್ಧೆ. ಭಗವದ್ಧ್ಯಾನ. ಗೃಹಕೃತ್ಯದ ಕೆಲಸಗಳು. ಸಾರಿಸುವುದು. ಓರಣ ಮಾಡುವುದು. ರಂಗೋಲೆ ಇಡುವುದು.''

"ಸಾಮಗ್ರಿಗಳನ್ನು ಓರಣವಾಗಿಡುವುದೂ ಕಲೆಯೆ. ರಂಗೋಲೆ ಚಿತ್ರ ರಚಿಸುವುದೂ ಕಲೆಯೆ. ರುಚಿಕಟ್ಟಾದ ಆಹಾರ ಮಾಡುವುದೂ ಕಲೆಯೇ.''

"ಮಲಗುವುದೂ ಕಲೆ. ಊಟ ಮಾಡುವುದೂ ಕಲೆ. ಕುಳಿತುಕೊಳ್ಳುವುದೂ ಕಲೆ. ಸಿಡುಗುಟ್ಟುವುದೂ ಕಲೆ. ನಾವು ಮಾಡುವುದೆಲ್ಲಾ ಕಲೆ ಎಂದಾಯಿತು.''

"ವ್ಯಂಗ್ಯ ಬೇಡ. ನೋಡುವ ಕಣ್ಣಿಗೆ ಸೌಂದರ್ಯ ರೂಪಿಸುವುದೆಲ್ಲ ಕಲೆಯೇ. ಅದನ್ನು ಬೌದ್ಧಿಕವಾಗಿ ರೂಪಿಸಬೇಕಾದರೆ ಏಕಾಗ್ರತೆ ಅತ್ಯಂತ ಅವಶ್ಯಕ. ಮನಸ್ಸನ್ನು ಹತ್ತು ಕಡೆ ಹರಿಯ ಬಿಟ್ಟು ತಪಸ್ಸನ್ನು ಮಾಡಲು ಸಾಧ್ಯವೆ ? ತಪಸ್ಸಿನ ಸಿದ್ಧಿ ಬೇಕಾದರೆ ಏಕಾಗ್ರತೆ ಇದ್ದೇ ತೀರಬೇಕು. ಹಾಗೆಯೇ ಸಿದ್ಧಿ ಪಡೆಯಲೆಳಸುವ ಎಲ್ಲ ವಿಷಯದಲ್ಲಿ ಏಕಾಗ್ರತೆ ಅವಶ್ಯಕ. ನಿನಗೆ ಅದರ ಸ್ವಾರಸ್ಯ ಗೊತ್ತಿಲ್ಲದಿರಬಹುದು. ಗೊತ್ತಾದ ಮೇಲೆ ನೀನೇ ಅದಕ್ಕೆ ಅರ್ಥ ವಿನ್ಯಾಸ ಮಾಡಲು ಹೊರಡುತ್ತೀಯೆ.''

"ಏನೋ ನೋಡೋಣ. ನಂದೋ ರಾಜೋ ಭವಿಷ್ಯತಿ.''

"ನೀನೇ ನಿನ್ನ ಕಲ್ಪನೆಗೆ ಮೀರಿ ರಾಣಿ ಆಗಿರುವಾಗ ಆ ಸಾಮಿತಿ ಯಾಕೆ ?''

"ಮಾತೆತ್ತಿದರೆ ಸನ್ನಿಧಾನಕ್ಕೆ ಅದೊಂದು ಮಾತು ಬರುತ್ತದೆ. ನನ್ನನ್ನು ರಾಣಿ ಎಂದು ಕರೆಯದಿದ್ದರೂ ಚಿಂತೆಯಿಲ್ಲ. ನೀವು ಸದಾ ನನ್ನವರಾಗಿದ್ದರೆ ಸರಿ.''

"ನಾವು ಪ್ರಾಣಿಗ್ರಹಣ ಮಾಡಿದ ಎಲ್ಲರವರು ಆಗಬೇಡವೆ ? ಮೀಸಲು ಇರಲು ಹೇಗೆ ಸಾಧ್ಯ? ನಮ್ಮ ಹೃದಯದಲ್ಲಿ ಎಲ್ಲರಿಗೂ ಸಮಾನ ಸ್ಥಾನವಿದೆ.''

"ಇನ್ನೂ ಎಷ್ಟು ಸ್ಥಳ ತೆರವಾಗಿ ಕೂತಿದೆಯೋ ? ಇದರ ಮೇಲೆ ಪಟ್ಟಮಹಾದೇವಿಗೆ ವಿಶೇಷ ಸ್ಥಾನ.''

"ಹಾಗಲ್ಲ. ನಿನಗೆ ಅರ್ಥವಾಗುವುದಿಲ್ಲ. ನನ್ನ ಹೃದಯವೆಲ್ಲ ಪಟ್ಟಮಹಾದೇವಿಯವರೇ. ಅವರೇ ನನ್ನ ಎಲ್ಲ ರಾಣಿಯವರಿಗೂ ಸಮಾನ ಸ್ಥಾನ ಕಲ್ಪಿಸಿಕೊಟ್ಟವರು. ಕೊಡುವವರು."

"ಅಂದರೆ ಅವರು ಉಳಿದವರಿಗಿಂತ ಹೆಚ್ಚೆಂದು ತಾನೆ ?"

"ಅದಕ್ಕೇನು ಮಾಡಬೇಕು ? ಮೊದಲು ಹುಟ್ಟಿದವಳು ಅಕ್ಕ. ನಂತರ ಹುಟ್ಟಿದವಳು ತಂಗಿ. ತಂಗಿ ಅಕ್ಕ ಆಗಬಲ್ಲಳೆ ? ನೀನು ರಾಣಿ ಆದೆಯೆಂದು ನಿನ್ನ ಸಾಕು ತಂದೆಯನ್ನು ಊಳಿಗದವನಂತೆ ಕಾಣುತ್ತೀಯೇನು ?"

"ಅದು ಹೇಗೆ ಸಾಧ್ಯ ? ತಂದೆ ತಂದೆಯೇ. ಮಗಳು ಮಗಳೇ."

"ಇಲ್ಲೂ ಅಷ್ಟೆ. ಒಬ್ಬ ತಂದೆ ತಾಯಿಗೆ ಹತ್ತು ಮಕ್ಕಳಿದ್ದರೆ ಅವರಲ್ಲಿ ಭೇದ ಎಣಿಸುತ್ತಾರೆಯೆ ?"

"ಇಲ್ಲ."

"ಇಲ್ಲೂ ಹಾಗೆ. ಪಟ್ಟಮಹಾದೇವಿಗೆ ಹಿರಿತನದ ಪಟ್ಟ ಉಳಿದ ರಾಣಿಯರೆಲ್ಲ ಸಮ. ಅವಳ ಸೋದರಿಯರಿದ್ದಂತೆ. ಅದರಿಂದ ನೀನು ಆ ಸ್ಥಾನ ಗೌರವದಿಂದ ಪಟ್ಟಮಹಾದೇವಿಯವರನ್ನು ನೋಡಬೇಕೇ ವಿನಾ, ನಿನಗೆ ಅವರು ಸಮ ಎಂದು ನೋಡಬಾರದು. ಅವರು ನಿನಗೆ ಸಮಾನ ಗೌರವ ತೋರಿದರೆ ಅದು ಅವರ ಔದಾರ್ಯವಾಗುತ್ತದೆ."

"ಒಪ್ಪಿದೆ. ಆದರೆ ಇನ್ನೊಂದು ವಿಷಯ. ಸನ್ನಿಧಾನ ನನ್ನನ್ನು ತಪ್ಪು ತಿಳಿಯಬಾರದು. ಸ್ಥಪತಿ, ಪಟ್ಟಮಹಾದೇವಿ ಇಬ್ಬರನ್ನೇ ಏಕಾಂತದಲ್ಲಿ ಬಿಡುವುದು ಸರಿಯೆ ? ಪಟ್ಟಮಹಾದೇವಿಯವರಿಗೆ ಏನಾದರೂ ಸಂರಕ್ಷಣೆ ಇದ್ದರೆ ಒಳ್ಳೆಯದಾಗುತ್ತಿರಲಿಲ್ಲವೆ ?"

"ನೀನು ತಿರುವರಂಗದಾಸರ ಮಗಳೇನು ?"

"ಅಲ್ಲ."

"ನಿನ್ನ ತಾಯಿ ತಂದೆ ಯಾರು ?"

"ತಿಳಿಯದು."

"ಒಂದು ಸಮಯ ಅವರು ನಿನ್ನನ್ನು ಲಗ್ನವಾಗ ಬಯಸಿದ್ದರೆ ಅಥವಾ ತನ್ನ ಜೊತೆಗೆ ಒಂಟಿ ಹೆಣ್ಣು ಎಲ್ಲಿಯೋ ಸಿಕ್ಕವಳು, ರಸವಂತಿಯಾಗಿ ಸಿಕ್ಕಿದ್ದಾಳೆ, ಹೇಗೆಂದರೆ ಹಾಗೆ ಉಪಭೋಗಿಸಬಹುದು ಎಂದು ಬಯಸಿದ್ದರೆ ?"

"ಎಲ್ಲಾದರೂ ಉಂಟೆ ? ಅವರು ಅಂತಹವರಲ್ಲ. ನನ್ನನ್ನು ಅವರ ಸ್ವಂತ ಮಗಳಂತೆ ಬೆಳೆಸಿದರು."

"ಅಂತಹವರು ಲೋಕದ ತುಂಬ ಇದ್ದಾರೆ. ಅದರಿಂದ ನೀನು ಅಪನಂಬಿಕೆಯಿಂದ ಯಾವುದನ್ನೂ ನೋಡಬಾರದು."

"ಅಪನಂಬಿಕೆಯ ಪ್ರಶ್ನೆ ಅಲ್ಲ. ಎಚ್ಚರಿಕೆಯ ಪ್ರಶ್ನೆ."

"ಅದೂ ಕಾರಣವಿಲ್ಲ. ಅದರೂ ಲೋಕ ಎಂಬುದಿದೆ. ಅದರಲ್ಲಿ ಅರೆತಿಳಿವಳಿಕೆಯ ಜನ ಇದ್ದಾರೆ ಅಪಾರ್ಥ ಕಲ್ಪಿಸುತ್ತಾರೆ."

"ನನ್ನನ್ನು ಗುರಿಯಿಟ್ಟುಕೊಂಡು ಈ ಮಾತೇನು ?"

"ಅಲ್ಲ. ಹಿಂದೊಂದು ಕಥೆ ನಡೆಯಿತು. ಕೇಳುವ ಇಚ್ಛೆ ಇದ್ದರೆ ಹೇಳುತ್ತೇವೆ."

"ಹೇಳಿ."

"ಏಕಾಗ್ರತೆಯಿಂದ ಕೇಳಬೇಕು."

"ಆ ಸ್ವಾರಸ್ಯ ಸನ್ನಿಧಾನ ಹೇಳುವ ರೀತಿಯಲ್ಲಿದ್ದರೆ ಏಕಾಗ್ರತೆ ತಾನೇ ಬರುತ್ತದೆ."

"ಅಂದರೆ ಈಗ ನಾವೇ ಪರೀಕ್ಷೆಗೆ ಒಳಗಾದಂತಾಯಿತು. ಕಿರಿಯರ ಸಂತೋಷಕ್ಕೆ ಹಿರಿಯರು ಪರೀಕ್ಷೆಗೆ ಒಳಗಾದರೇನು ತಪ್ಪಿಲ್ಲ" ಎಂದು, ಹಿಂದೆ ಧಾರಾನಗರದ ಮುತ್ತಿಗೆಯ ಕಾಲದಲ್ಲಿ ತನ್ನ ತಂದೆ ಚಾಲುಕ್ಯ ಚಕ್ರವರ್ತಿ ವಿಕ್ರಮಾದಿತ್ಯನ ನೆರವಿಗೆ ಹೋಗಿ ಚಾಲುಕ್ಯ ಪಿರಿಯರಸಿ ಅಜ್ಞಾತಳಾಗಿ ಬಂದು ಬಲಿಪುರದಲ್ಲಿ ಇದ್ದಾಗ ನಡೆದ ಎಲ್ಲವನ್ನೂ ಸವಿಸ್ತಾರವಾಗಿ ಹೇಳಿ, ರತನ್‌ವ್ಯಾಸ್, ಬೂತುಗ, ಗಾಳಬ್ಬೆ, ದಾಸವ್ವೆ, ತ್ಯಾರಪ್ಪ ಮೊದಲುಗೊಂಡು ಪ್ರತಿಯೊಬ್ಬರ ನೀತಿ ನಡವಳಿಕೆಗಳನ್ನೂ ಈ ಇಡೀ ಪ್ರಸಂಗದಲ್ಲಿ ಹೆಗ್ಗಡೆ ದಂಪತಿಗಳು, ಶಾನ್ತಲದೇವಿ ನಡೆದುಕೊಂಡ ರೀತಿ ಎಲ್ಲವನ್ನೂ ಬಿಡಿಸಿ ಬಿಡಿಸಿ ಹೇಳಿದ.

ಕಣ್ಣಿಗೆ ಕಟ್ಟಿದಂತೆ ಮಹಾರಾಜ ಹೇಳಿದ. ಬೆಕ್ಕಸ ಬೆರಗಾದವಳಂತೆ ರಾಣಿ ಲಕ್ಷ್ಮೀದೇವಿ ಅದನ್ನು ಕೇಳಿದಳು. ಇಡೀ ಪ್ರಹರ ಕಳೆದು ಹೋದುದು ಅವರಿಬ್ಬರ ಅರಿವಿಗೆ ಬಂದಿರಲೇ ಇಲ್ಲ. ಘಟನೆ ಹೇಳುವಲ್ಲಿನ ತನ್ಮಯತೆ, ಕೇಳುವಲ್ಲಿನ ತನ್ಮಯತೆ; ಪರಸ್ಪರ ಪೂರಕವಾಗಿ ಅವರನ್ನು ತಾವಿದ್ದ ತಾಣದಿಂದ ಬಲಿಪುರಕ್ಕೆ ಕರೆದೊಯ್ದಿದ್ದಂತೆ ಭಾಸವಾಯಿತು.

"ಒಳ್ಳೆ ಶುಕ ಸಪ್ತತಿ ಕಥೆ ಇದ್ದಹಾಗೆ ಇದೆ" ಎಂದಳು ರಾಣಿ ಲಕ್ಷ್ಮೀದೇವಿ.

"ಇದು ಶುಕ–ಪಿಕಗಳ ಕಪೋಲ ಕಲ್ಪಿತ ಕಥೆಯಲ್ಲ. ನಡೆದ ಕಥೆ. ರತನ್ ವ್ಯಾಸ್ ಬಿಟ್ಟು ಉಳಿದವರೆಲ್ಲ ಜೀವಂತ ಇದ್ದಾರೆ."

ಒಂದು ಸುಳ್ಳು ವದಂತಿ, ಒಂದು ಅನುಮಾನ ಏನೆಲ್ಲ ಮಾಡಿತು ಎಂಬುದು ಅವಳ ಅರಿವಿಗೆ ಬಂದಿರಬೇಕೆಂದು ಭಾವಿಸಿದ ಮಹಾರಾಜ. "ಈಗ ಹೇಳು, ಶಂಕೆ ಪಡುವುದು ಸಾಧುವೆ ಎಂದು ?" ಎಂದು ಕೇಳಿದ

"ಸನ್ನಿಧಾನಕ್ಕೆ ಹೆಣ್ಣಿನ ಮನೋಭಾವವೇ ಅರ್ಥವಾಗಿಲ್ಲ. ಅವಳು ತನ್ನ ಜೊತೆಗೆ ಬೇರೊಂದು ಹೆಣ್ಣಿರುವುದು ತನಗೆ ದೊರೆವ ಪರಮ ರಕ್ಷಣೆ ಎಂದು ಭಾವಿಸುತ್ತಾಳೆ."

"ಅದು ಹಣ್ಣಾದ ಪಟ್ಟಮಹಾದೇವಿಗೆ ಗೊತ್ತಿಲ್ಲದೇ ಇಲ್ಲ. ಚಟ್ಟಲೆ ಸದಾ ಪಟ್ಟಮಹಾದೇವಿಯ ಜೊತೆಗೆ ಇರುತ್ತಾಳೆ."

"ಏನು. ಆ ಕುಲಗೆಟ್ಟವಳು ಪಟ್ಟಮಹಾದೇವಿಯ ಜೊತೆಗೆ ?"

"ಆ ಮಾತನ್ನು ಆಡಬೇಡ. ನೀನು ಮೂಲ ವಿಷಯ ತಿಳಿಯದೆ ನಾಲಿಗೆ ಹರಿದಂತೆಲ್ಲ ಮಾತನಾಡುವೆ. ಅರಮನೆಯಲ್ಲಿ ಚಟ್ಟಲೆಗೆ ತುಂಬಾ ಗೌರವವಿದೆ.

"ಗೊತ್ತು. ಪಟ್ಟಮಹಾದೇವಿಗೆ ಬೇಕಾದವಳೆಂದು ಹೆದರಿ ಸುಮ್ಮನಿದ್ದಾರೆ. ನನಗೆಲ್ಲಾ ಗೊತ್ತು. ಅವಳ ಬಗೆಗೆ ಊಳಿಗದವರಲ್ಲಿ ಏನು ಅಭಿಪ್ರಾಯವಿದೇಂತ."

"ಆ ಕುರಿತು ಚರ್ಚೆಬೇಡ."

"ಯಾಕೆ. ಅವಳು ಶೀಲ ಭ್ರಷ್ಟಳಲ್ಲವೆ ?"

"ಶೀಲ, ಅಶ್ಲೀಲಗಳ ಬಗೆಗೆ ಚರ್ಚೆ ಮಾಡುವ ಪ್ರಬುದ್ಧತೆ ನಿನಗಿನ್ನೂ ಬಂದಿಲ್ಲ. ಎಂತಲೇ ಈ ವಿಷಯ ಚರ್ಚೆ ಬೇಡವೆಂದೆವು. ಒಂದು ಮಾತು. ಅವಳ ಗತ ಬಾಳಿನ ವಿಚಾರವನ್ನು ಅವಳೆದುರಿಗೆ ಯಾರೇ ಎತ್ತಿದರೂ ನಾವು ಕ್ಷಮಿಸುವುದಿಲ್ಲ ಎಂಬ ವಿಚಾರ ರಾಣಿಯೂ ನೆನಪಿನಲ್ಲಿಡಬೇಕು."

"ಇಲ್ಲಿ ಎಲ್ಲವೂ ವಿಚಿತ್ರ. ಶೀಲಭ್ರಷ್ಟರು ಪವಿತ್ರ. ತ್ಯಾಗದ ಮೆರುಗು ಅದಕ್ಕೆ. ಧರ್ಮದ ಕಟ್ಟಳೆ ಇಲ್ಲ. ಅದಕ್ಕೆ ಮನೋವೈಶಾಲ್ಯ, ಧರ್ಮಸಹಿಷ್ಣುತೆ, ಸರ್ವ ಸಮಾನತೆಯ ಲೇಪ. ತಿಗುಳನಾಡಿನಲ್ಲಿ ಕಾಣದಿದ್ದ ಎಷ್ಟೋ ವಿಚಿತ್ರಗಳು ಈ ಪೊಯ್ಸಳ ನಾಡಿನಲ್ಲಿವೆ."

"ಅಲ್ಲಿ ಇಲ್ಲವೆಂಬ ಕಾರಣದಿಂದ ಇದೆಲ್ಲ ವಿಚಿತ್ರವೆನಿಸಬಹುದು. ಇಲ್ಲಿಯ ಬಾಳು ಒಗ್ಗಿದ ಮೇಲೆ ಇಲ್ಲಿನದು ಮೇಲ್ಪಂಕ್ತಿ ಆಗಲು ಯೋಗ್ಯವೆನಿಸೀತು. ಶ್ರೀಮದಾಚಾರ್ಯರಂತಹ ಮಹಾನುಭಾವರು ತಮ್ಮನ್ನು ರಕ್ಷಿಸಿಕೊಳ್ಳಲು ಹುಟ್ಟು ನಾಡನ್ನು ಬಿಟ್ಟು ಇಲ್ಲಿಗೆ ಬರಬೇಕಾಯಿತು ಎಂದಾಗ ವಿಚಿತ್ರ ರೀತಿ ಯಾವುದು ಎಂಬುದು ಸ್ವಯಂವೇದ್ಯ. ಧರ್ಮಾಂಧತೆಯಿಂದ ದೈವ ದ್ವೇಷ ಹುಟ್ಟುತ್ತದೆ. ಮನೋವೈಶಾಲ್ಯದಿಂದ ಮತ ಸಹಿಷ್ಣುತೆ ಚಿಗುರುತ್ತದೆ. ಅದನ್ನು ಆಚರಿಸಿದರೆ ಪ್ರೇಮ ಉಕ್ಕುತ್ತದೆ. ನಮ್ಮ ನಿನ್ನ ವಿವಾಹ ನಿಮ್ಮ ತಿಗುಳ ನಾಡಿನಲ್ಲಿ ಸಾಧ್ಯವಿತ್ತೆ?"

"ನನಗಷ್ಟೆಲ್ಲ ತಿಳಿಯದು. ಆದರೆ ಇಂತಹ ಲಗ್ನ ಸಾಧ್ಯವಿರುತ್ತಿರಲಿಲ್ಲ ಎಂದು ಹೇಳಬಲ್ಲೆ."

"ಅದರಿಂದಲೇ ಪೂರ್ತಿ ವಿಷಯ ತಿಳಿಯುವವರೆಗೆ ಟೀಕಿಸಲು ಹೋಗಬಾರದು. ಮತ್ತು ಆತುರದಿಂದ ವಿಷಯವೂ ಪೂರ್ತಿ ತಿಳಿಯುವುದಿಲ್ಲ. ತಾಳ್ಮೆಯಿಂದ ಮೊದಲು ವ್ಯಕ್ತಿ, ವಿಷಯಗಳನ್ನು ಅರಿಯುವುದನ್ನು ಕಲಿ. ನಂತರ ನೀನೇ ನಮಗೆ ಪಾಠ ಹೇಳುತ್ತೀ."

"ಇವತ್ತಂತೂ ಪಾಠದ ಒಂದು ಪ್ರಕಾಂಡ ಭಾಗವೇ ಆಗಿದೆ. ಮಾತುಕತೆ ಆರಂಭವಾದಾಗ ನಾನು ಸನ್ನಿಧಾನದ ಉಗ್ರಕೋಪಕ್ಕೆ ಬಲಿಯಾದೆನೆಂದೇ ಭಾವಿಸಿದೆ. ಆದರೆ...."

"ಪಟ್ಟಮಹಾದೇವಿಯ ಮಾರ್ಗದರ್ಶನ ಸಿಕ್ಕರೆ ಉಕ್ಕಿದ ಕೋಪ ಸಹ ತಲೆ ತಗ್ಗಿಸಿ ಹಿಂದೆ ಸರಿಯುತ್ತದೆ. ನೀನು ಅದನ್ನು ದೊರಕಿಸಿಕೊಳ್ಳಲು ಪ್ರಯತ್ನಿಸು."

"ಅವರು ಕೈಗೆ ಸಿಕ್ಕರೆ ತಾನೆ. ಬೆಳಿಗ್ಗೆ ಪೂಜೆ, ನೇಮಗಳು, ಉಪಹಾರ, ದೇವ ಮಂದಿರದ ನಿರ್ಮಾಣದತ್ತ ಸುತ್ತಾಟ. ನಂತರ ಆರೋಗಣೆ. ಆಮೇಲೆ ಶಾಲೆಗೆ ಪಾಠ ಹೇಳಲು ಹೋಗುವುದು. ಅಲ್ಲಿಂದ ಮತ್ತೆ ದೇವಮಂದಿರದ ಪರಿಶೀಲನೆ. ಆರೋಗಣೆ, ಮಂತ್ರಾಲೋಚನೆ. ವಿಶ್ರಾಂತಿ. ಇಲ್ಲಿಗೆ ಬಂದಮೇಲೆ ಉಪಹಾರ, ಹಗಲಿನ ಆರೋಗಣೆಗೆ ಜೊತೆಗಿರುತ್ತಿದ್ದರು. ಈಗಂತೂ ಅವರ ಮುಖದರ್ಶನಕ್ಕೇ ಅವಕಾಶವಾಗಿಲ್ಲ. ಇನ್ನು ಮಾರ್ಗದರ್ಶನ ಪಡೆಯುವುದು ಹೇಗೆ ?"

"ಏಕೆ ಹಗಲಿನ ಶಾಲೆಗೆ ಹೋಗಿ ಇಚ್ಛೆ ಇದ್ದರೆ ಕಲಿಯಬಹುದಲ್ಲ ?"

"ನಾನು ರಾಣಿ. ಸಾಮಾನ್ಯರ ಜೊತೆ ಕಲಿಯುವುದೇ ?"

"ಕಲಿಯುವ ಆಸೆ ಇದ್ದರೆ ಕಲಿಕೆ ಮುಖ್ಯವೇ ವಿನಾ ಜೊತೆಗೆ ಕಲಿಯಲು ಯಾರು ಇರುತ್ತಾರೆ ಎಂಬುದು ಮುಖ್ಯವಲ್ಲ. ನನ್ನ ಅಣ್ಣಂದಿರು ನಿನ್ನ ಹಾಗೆ ಭಾವನೆ ಇದ್ದವರು. ಮೊದ ಮೊದಲು ತಮ್ಮ ಬಾಳನ್ನೇ ವ್ಯರ್ಥ ಮಾಡಿಕೊಂಡರು. ಅವರಿಗೆ ತಿಳಿವಳಿಕೆ ಮೂಡಿದ ಮೇಲೆ ಪೇಚಾಡಿಕೊಂಡರು. ಆತುರದಲ್ಲಿ ಮಾಡಿದ ಕೆಲಸಕ್ಕೆ ಅವರ ಇಡೀ ಬಾಳೇ ನಷ್ಟವಾಗಿ ಹೋಯಿತು."

"ಏನಾಯಿತು ?'' ಕಂಸಾಳದ ಶಬ್ದ ಕೇಳಿಸಿತು.

"ಈಗ ವೇಳೆ ಇಲ್ಲ ಇನ್ನೊಮ್ಮೆ ಹೇಳುತ್ತೇವೆ. ಈಗ ಮಂತ್ರಾಲೋಚನ ಸಭೆಗೆ ಹೋಗಬೇಕು'' ಎಂದು ಬಿಟ್ಟಿದೇವ ಎದ್ದ. ರಾಣಿಯೂ ಎದ್ದಳು. ಬಿಟ್ಟಿದೇವ ಒಳಗಿನ ಕಂಸಾಳ ಬಾಜಿಸಿದ. ಬಾಗಿಲು ತೆರೆಯಿತು. ಅವನು ಮನ್ತ್ರಣಸಾಲೆಗೆ ಹೊರಟುಹೋದ.

ವಾಸ್ತವವಾಗಿ ರಾಣಿ ಲಕ್ಷ್ಮೀದೇವಿಯ ಮನಸ್ಸು ಏನೋ ಒಂದು ಬಗೆಯ ಗೊಂದಲಕ್ಕೊಳಗಾಗಿ ಬಿಟ್ಟಿತು. ಅವಳು ಬೆಳೆದ ವಾತಾವರಣಕ್ಕೂ ರೀತಿಗೂ ಇಲ್ಲಿನ ಪರಿಸ್ಥಿತಿಗೂ ತುಂಬಾ ವ್ಯತ್ಯಾಸವಿದೆಯೆಂದು ಗೋಚರವಾಯಿತು. ತಾನು ಬೆಳೆದ ವಾತಾವರಣಕ್ಕೆ ಹೊಂದಿಕೊಂಡಂತೆ ಅವಳ ಮನಸ್ಸಿನಲ್ಲಿ ಜೀವನದ ಬಗೆಗೆ ಏನೇನೋ ಮೌಲ್ಯವಿತ್ತು. ಈಗ ಅದಕ್ಕಿಂತ ಭಿನ್ನವಾದ ಮೌಲ್ಯಗಳು ಇವೆ ಎಂದು ತಿಳಿಯಿತು. ಆದರೆ ಯಾವುದು ಸರಿ ಎಂಬುದು ಅವಳಿಗೆ ಅರ್ಥವಾಗಲಿಲ್ಲ. ಈ ಅರಮನೆಯಲ್ಲಿ ಬಾಗಿಲು ಕಾಯುವವನಿಂದ ಹಿಡಿದು ಪಟ್ಟಮಹಾದೇವಿಯವರವರೆಗೆ ಎಲ್ಲರಿಂದಲೂ ಕಲಿಯಬೇಕಾದ ವಿಷಯಗಳಿವೆಯಂತೆ. ಎಂದಾಗ ಅವಳಿಗೆ ಗೊಂದಲವಾಗದೆ ಏನು ? 'ನಾನು ಹೇಳಿದ ಹಾಗೆ ಕೇಳು ಮಗು. ನಿನ್ನ ಬಾಳು ಸುಗಮ ಮಾಡುವ ಹೊಣೆ ನನ್ನದು' ಎಂದು ಬಾಲ್ಯದಿಂದ ತನ್ನನ್ನು ನಡೆಸಿಕೊಂಡು ಬಂದ ಸಾಕು ತಂದೆ ತೋರಿಸಿ ಕೊಟ್ಟ ಮಾರ್ಗ ಇಲ್ಲಿ ಉಪಯೋಗಕ್ಕೆ ಬರಲಾರದೆಂದು ಅವಳಿಗನ್ನಿಸಿತು. ಇಲ್ಲಿನ ರೀತಿಗೆ ತಾನು ಹೊಂದಿಕೊಳ್ಳದಿದ್ದರೆ ನೀರಿನಿಂದ ಈಚೆಗೆ ಬಂದ ಮೀನಾದೇನು ಎಂದುಸಹ ಅವಳಿಗನ್ನಿಸಿತು. ಸನ್ನಿಧಾನ ಹೇಳಿದಂತೆ ಹಗಲಿನಲ್ಲಿ ಶಾಲೆಗೆ ಹೋಗಲೆ ? ಹೋದರೆ ನಾನು ಎಲ್ಲರೊಡನೆ ಕೂಡುವುದು ಸರಿಯೆ ? ನನಗಾಗಿ ಬೇರೆ ವ್ಯವಸ್ಥೆ ಬೇಡವೆ ? ಅದಕ್ಕೆ ಪಟ್ಟಮಹಾದೇವಿ ಒಪ್ಪದಿದ್ದರೆ ? ಈ ಸಮಯದಲ್ಲಿ ನನ್ನ ತಂದೆಯಾದರೂ ಇಲ್ಲಿದ್ದಿದ್ದರೆ ? ಆದರೆ ಅವರು ಇಲ್ಲಿಗೆ ಬರದಂತೆ ತಂತ್ರ ನಡೆದಿದೆ. ಅಂತೂ ಅವಳ ಯೋಚನೆ ಮತ್ತೆ ಅಲ್ಲಿಗೇ ಬಂದು ಅವಳನ್ನು ತಿವಿಯತೊಡಗಿತು.

'ಪ್ರತಿಮಾಭಂಗಿ'ಗಳ ಚಿತ್ರೀಕರಣದ ಕೆಲಸ ಮುಗಿದ ಮೇಲೆ ಶಾಂತವಾಗಿ ಕುಳಿತು ಶಾನ್ತಲದೇವಿ ಸ್ಥಪತಿ ಚಿತ್ರಿಸಿದ್ದ ಒಂದೊಂದು ಭಂಗಿಯ ಚಿತ್ರವನ್ನು ನೋಡಿದಳು. ಅವನು ಅವಳು ಕೊಟ್ಟ ಎಚ್ಚರಿಕೆಯನ್ನು ಸಂಪೂರ್ಣವಾಗಿ ಪರಿಪಾಲಿಸಿದ್ದ. ಯಾವುದೇ ಚಿತ್ರದಲ್ಲಿಯೂ ಇದು ಪಟ್ಟಮಹಾದೇವಿ ಚಿತ್ರಗಾರನಿಗೆ ಕೊಟ್ಟ ಪ್ರತಿಮಾಭಂಗಿ ಎಂದು ಹೇಳುವಂತಿರಲಿಲ್ಲ. ಚಿತ್ರರಚನೆ ವಾಸ್ತವವಾಗಿ ಶಾನ್ತಲದೇವಿಯ ಮನಸ್ಸಿಗೆ ಮೆಚ್ಚಿಗೆಯಾಯಿತು.

"ಇವುಗಳಲ್ಲಿ ಯಾವು ಯಾವುದನ್ನು ಆರಿಸಬೇಕು ? ಸನ್ನಿಧಾನ ಆ ಕೆಲಸ ನನಗಾಗಿ ಮಾಡುವ ಕೃಪೆದೋರಬೇಕು.''

"ಆರಿಸುವ ಕೆಲಸ ನಾನಾಗಲೀ ನೀವಾಗಲೀ ಮಾಡುವುದು ಬೇಡ. ಮೊದಲು ಮಹಾಸನ್ನಿಧಾನ, ಉದಯಾದಿತ್ಯರಸರು, ಕುವರ ಬಿಟ್ಟಿಯಣ್ಣ, ನಾನು, ನೀವು ಇಷ್ಟು ಜನ ಈ ಚಿತ್ರಗಳನ್ನು ಒಟ್ಟಾಗಿ ಕಲೆತು ಪರಿಶೀಲಿಸಿ ಅಭಿಪ್ರಾಯಗಳನ್ನು ಸಂಗ್ರಹಿಸೋಣ. ನಂತರ ಅವಶ್ಯಕತೆ ಬಿದ್ದರೆ ಕೆಲವು ಪ್ರಮುಖ ರೂವಾರಿಗಳನ್ನೂ ಅರಮನೆಗೆ ಕರೆಸಿ ಅವರ ಅಭಿಪ್ರಾಯ ಸಲಹೆಗಳನ್ನೂ ಕೇಳೋಣ'' ಎಂದಳು.

ಸಲಹೆ ಸ್ಥಪತಿಗೆ ಸಾಧುವೆನಿಸಿತು. ಅಂತೆಯೇ ಮನ್ತ್ರಣಸಾಲೆಯಲ್ಲಿ ಮೊದಲ ಕೂಡುಹ ಜರುಗಿತು. ಬಿಟ್ಟಿದೇವನಂತೂ ಮೆಚ್ಚಿಗೆಯ ಪ್ರಕಟನೆಯಲ್ಲಿ ಯಾವ ಸಂಕೋಚವನ್ನೂ ಪ್ರಕಟಿಸಲಿಲ್ಲ. "ನಮ್ಮ ಕಾಲದ ಸೌಂದರ್ಯ ಕಲ್ಪನೆ ಶಿಲೆಯಲ್ಲಿ ಶಾಶ್ವತವಾಗಿ ಮೂಡಿನಿಲ್ಲುತ್ತದೆ'' ಎಂದು ತೃಪ್ತಿಯನ್ನು ಸೂಚಿಸಿದ.

"ಇವುಗಳಲ್ಲಿ ಯಾವು ಯಾವುದನ್ನು ಈಗ ಸದ್ಯಕ್ಕೆ ಆಯುವುದು ಎಂಬುದು ನಮಗರಿಯದಂತಾಗಿದೆ. ಅದರಿಂದ ಈ ಸಂದರ್ಭದಲ್ಲಿ ಸನ್ನಿಧಾನ ಸೂಚಿಸಿದರೆ ನಾವು ಕೃತಜ್ಞರಾಗಿರುತ್ತೇವೆ'' ಎಂದು ಸ್ಥಪತಿ ತನ್ನ ಹಾಗು ಪಟ್ಟಮಹಾದೇವಿಯ ಪರವಾಗಿ ಎಂಬ ಭಾವದಿಂದ ಸೂಚಿಸಿದ.

"ಎಲ್ಲವೂ ಇರಬಹುದು. ಅಲ್ಲವೆ ಉದಯ ?'' ಎಂದು ತಮ್ಮನತ್ತ ಬಿಟ್ಟಿ ದೇವ ನೋಡಿದ.

"ಮರಿ ಡಣ್ಣಾಯಕರು ಏನು ಹೇಳುತ್ತಾರೋ ?'' ಎಂದು ಉದಯಾದಿತ್ಯ ಅವನತ್ತ ನೋಡಿದ.

"ಹಿರಿಯರೆಲ್ಲರೂ ಇರುವಾಗ ನನ್ನದೇನು ?'' ಎಂದ ಕುವರ ಬಿಟ್ಟಿಯಣ್ಣ.

"ನಿನ್ನನ್ನು ಬರಮಾಡಿರುವುದು ಸಲಹೆಗಾಗಿ ಅಲ್ಲವೆ ?'' ಎಂದು ಬಿಟ್ಟಿದೇವ ಪ್ರಶ್ನಿಸಿದ.

"ಹೌದು.''

"ಅಂದಮೇಲೆ ಅಭಿಪ್ರಾಯ ಸೂಚಿಸು.''

"ಎಲ್ಲರಿಗೂ ಮೊದಲು ನಾನೇ ಸೂಚಿಸಿದವನು. ಸ್ಥಪತಿಗಳಿಗೆ ಬೇಕಾದ ನಿಲುವು, ಭಂಗಿ, ಮುದ್ರೆಗಳನ್ನೊಳಗೊಂಡ ಪ್ರತಿಮಾಭಂಗಿಯನ್ನು ಪಟ್ಟಮಹಾದೇವಿಯವರು ನೀಡಿದರೆ ಒಳಿತು ಎಂದು. ಅದು ಈಗ ಸಫಲವಾಗಿರುವಾಗ, ಭಂಗಿ ನೀಡುವಾಗ, ಅದನ್ನು ಚಿತ್ರೀಕರಿಸುವಾಗ ಅದರ ಎಲ್ಲ ಗುಣವಿಶೇಷಗಳನ್ನೂ ಸ್ಥಪತಿಗಳೂ ಪಟ್ಟಮಹಾದೇವಿಯವರೂ ಚರ್ಚಿಸಿಯೇ ನಿರ್ಣಯಿಸಿರುತ್ತಾರೆ. ಅಂದಮೇಲೆ ಇಲ್ಲಿ ಅಭಿಪ್ರಾಯಕ್ಕಾಗಲಿ, ಸಲಹೆಗಾಗಲಿ, ಅವಕಾಶವೇ ಇಲ್ಲ. ಮಹಾಸನ್ನಿಧಾನ ಅಪ್ಪಣೆಕೊಡಿಸಿದಂತೆ ಎಲ್ಲವೂ ಇರಬಹುದು.''

"ಪ್ರತಿಮಾಭಂಗಿ ನೀಡಿದವರು ಯಾರೆಂಬುದು ನಾಳೆ ತಿಳಿದರೂ ಆ ಭಂಗಿ ಯಾರಿಂದಲೂ ಆಕ್ಷೇಪಣೆಗೆ ಒಳಗಾಗಬಾರದು. ಅದರಿಂದ ಪರಿಶೀಲನೆ ಅಗತ್ಯ. ಈ ಚಿತ್ರಗಳೆಲ್ಲವೂ ವೈಶಿಷ್ಟ್ಯ ಪೂರ್ಣವಾದವುಗಳೇ ಆಗಿವೆ. ಆದರೂ ಕಲೆಯ ಗುರಿ, ಅಲ್ಲಿ ರೂಪಿತವಾದ ಸೌಂದರ್ಯದ ನಿರ್ವಿಕಲ್ಪ ಆಸ್ವಾದನೆ. ಆದರೆ ಆ ಅರಿವು ಜನ ಸಾಮಾನ್ಯರಲ್ಲಿ ಇರುವುದಿಲ್ಲ. ಅದರಿಂದ ಇವು ಬಹಿರಂಗವಾಗಿ ಪ್ರಕಟವಾಗುವ ಮುನ್ನ ನಾವುಗಳು ಸ್ವಲ್ಪ ಆಳವಾಗಿ ಆಲೋಚಿಸುವುದು ಒಳಿತು'' ಎಂದು ಉದಯಾದಿತ್ಯ ಸೂಚಿಸಿದ.

"ಅಂದರೆ ಕೆಲವು ಭಂಗಿಗಳು ರೂಪಿತವಾಗುವುದು ಬೇಡ ಎಂದು ನಿನ್ನ ಅಭಿಪ್ರಾಯವೆ?'' ಎಂದು ಬಿಟ್ಟಿದೇವ ಕೇಳಿದ.

"ವೈಯಕ್ತಿಕವಾಗಿ ನನಗೆ ಯಾವುದೂ ಬೇಡವೆನಿಸುವುದಿಲ್ಲ. ಆದರೆ ಅದು ಮೂರ್ತಿಯಾಗಿ ಸಾರ್ವಜನಿಕರ ಕಣ್ಣೆದಿರಿಗೆ ನಿಂತಾಗ ಬೇರೆ ಬೇರೆ ಪ್ರತಿಕ್ರಿಯೆ ಆಗಬಹುದು. ಅದರಿಂದ ಕೆಲವನ್ನು ರೂಪಿಸದಿರಬಹುದೇನೋ ಎಂದು ನನಗನ್ನಿಸಿತು'' ಎಂದ ಉದಯಾದಿತ್ಯ.

"ಅಂತಹವನ್ನು ನೀನೇ ನೇರವಾಗಿ ಸೂಚಿಸು. ಬಿಟ್ಟು ಬಿಡೋಣ'' ಎಂದು ಬಿಟ್ಟಿದೇವ.

"ನಾನು ಸೂಚಿಸುವುದು ಬಿಡುವುದು ಬೇಡ. ಮೊದಲಿನಿಂದ ನಾವು ಎಲ್ಲವನ್ನೂ ರೂವಾರಿಗಳ ಪರಿಶೀಲನೆಗೆ, ಸಲಹೆಗೆ ಬಿಟ್ಟಿದ್ದೇವೆ. ಅವರ ಸಹಕಾರ ನಮಗೆ ಸಂಪೂರ್ಣವಾಗಿ ಒದಗಿ ಬಂದಿದೆ. ಈಗಲೂ ಸಹ ಇವನ್ನು ಅವರ ಪರಿಶೀಲನೆಗೆ ಬಿಟ್ಟು...''

ನಡುವೆಯೇ ಬಿಟ್ಟಿದೇವ, "ಸ್ಥಪತಿಯ ಮೇಲೆ ಅಂಕುಶವೆ ?'' ಎಂದ.

"ಅಂಕುಶವಲ್ಲ. ಇದರಿಂದ ಎರಡು ಕೆಲಸವಾಗಲಾಗುತ್ತವೆ. ನನ್ನ ಅಭಿಪ್ರಾಯದಲ್ಲಿ ಇವೆಲ್ಲವನ್ನೂ ತಾವೇ ಕಡೆದಿಡಬೇಕೆಂದು ಸ್ಥಪತಿಗಳು ಇಚ್ಛೆಪಟ್ಟಿಲ್ಲ ಎಂದು ಭಾವಿಸಿದ್ದೇನೆ'' ಎಂದ ಅವನತ್ತ ನೋಡಿ.

"ಯಾರು ಯಾವುದನ್ನು ಕಡೆಯಲು ಇಚ್ಛೆಪಡುತ್ತಾರೋ ಕಡೆಯಲಿ ಎಂಬುದೇ ನನ್ನ ಬಯಕೆ. ನನಗೆ ಯಾವುದನ್ನೂ ಬಿಡದಿದ್ದರೂ ಚಿಂತೆಯಿಲ್ಲ'' ಎಂದ ಸ್ಥಪತಿ.

"ಮತ್ತೂ ಒಳಿತಾಯಿತು. ಇವನ್ನೆಲ್ಲ ರೂವಾರಿಗಳ ಸಭೆ ಸೇರಿಸಿ ಅವರ ಅವಗಾಹನೆಗೆ ತರೋಣ. ತಮ್ಮನ್ನೂ ಗಣನೆಗೆ ತೆಗೆದುಕೊಂಡರೆಂಬ ಮಾನಸಿಕ ತೃಪ್ತಿ ಅವರಿಗೆ ಸಿಗುತ್ತದೆ. ಇವುಗಳನ್ನೆಲ್ಲ ಕಡೆಯುವ ಆಸೆ ಅವರಲ್ಲಿ ಉಂಟಾದರೆ ಕೆಲಸದ ಹಂಚಿಕೆ ತಾನಾಗಿಯೇ ಮುಗಿಯುತ್ತದೆ. ಮತ್ತು ಯಾರೂ ಆಶಿಸದ ಚಿತ್ರಗಳು ಉಳಿದುಕೊಂಡರೆ ನಂತರ ಅವುಗಳ ಬಗೆಗೆ ಯೋಚಿಸೋಣ''

"ಇಲ್ಲಿ ನೀನು ಮೊದಲು ಹೇಳಿದೆಯಲ್ಲ, ಜನಸಾಮಾನ್ಯರ ಟೀಕೆಗೆ ಒಳಗಾಗಬಹುದು ಎಂಬುದು ಪರಿಶೀಲಿತವಾಗಲಿಲ್ಲವಲ್ಲ ?'' ಎಂದ ಬಿಟ್ಟದೇವ.

"ಮೊದಲೇ ವಿಚಾರ ಹೇಳಿಬಿಟ್ಟರೆ ಹೇಗೆ ? ಅವರ ಅಭಿಪ್ರಾಯವನ್ನು ಕೇಳೋಣ'' ಎಂದ ಉದಯಾದಿತ್ಯ.

"ಸರಿ ಹಾಗೆಯೇ ಮಾಡಿ'' ಎಂದ ಬಿಟ್ಟದೇವ.

ಸಭೆ ಮುಕ್ತಾಯವಾಯಿತು.

ಉದಯಾದಿತ್ಯ, ಸ್ಥಪತಿ ಮತ್ತು ಇತರ ರೂವಾರಿಗಳು ಕಲೆತು ನಿರ್ಣಯಿಸುವುದೆಂದು ಇತ್ಯರ್ಥವಾಯಿತು.

ಅದರಂತೆ ಮುಂದೆ ಕಾರ್ಯಾಚರಣೆಯೂ ಆಗಿ ಮೂರು ನಾಲ್ಕು ಭಂಗಿಗಳನ್ನು ಕೈಬಿಟ್ಟು ಉಳಿದೆಲ್ಲ ಚಿತ್ರಗಳನ್ನು ಮೂರ್ತಿಗಡೆಯಲು ರೂವಾರಿಗಳು ಆರಿಸಿಕೊಂಡರು. ತನ್ನ ವಾಣಿ ತನಗೇ ಶಾಪವಾದಂತೆ ಸ್ಥಪತಿಯ ಪಾಲಿಗೆ ಯಾವುದೂ ಉಳಿಯಲೇ ಇಲ್ಲ.

ನಿರಾಕರಿಸಲ್ಪಟ್ಟ ಭಂಗಿಗಳ ಮೂರ್ತಿಗಳನ್ನು ಅವನು ರಾತ್ರಿಯ ವೇಳೆ ತನ್ನ ಬಿಡಾರದಲ್ಲಿ ಕಡೆಯತೊಡಗಿದ. ದೇವಮಂದಿರದ ಕೆಲಸ ಭರದಿಂದ ಸಾಗಿತು.

# ೧೨. ಕೇಡು ತಪ್ಪಿತು

ಮಾರನೆಯ ದಿವಸ ಮಧ್ಯಾಹ್ನದ ಆರೋಗಣೆ ಮುಗಿದ ಕೂಡಲೇ ಲಕ್ಷ್ಮೀದೇವಿ ಪಟ್ಟಮಹಾದೇವಿಯ ಬಳಿಗೆ ಬಂದು, "ನಾನೂ ಜೊತೆಗೆ ಬರಲೆ ? ನಿನ್ನೆ ಅಪೂರ್ಣವಾದುದನ್ನು ಇಂದು ನೋಡಲು ಅವಕಾಶವಿದೆಯೆ ?"

"ಅದಕ್ಕೇನು ಬರಬಹುದು. ಮೂಲದೇವ ವಿಗ್ರಹವನ್ನು ಸ್ವಲ್ಪ ಅಲ್ಲಲ್ಲಿ ನಯ ಮಾಡಿ ಅದಕ್ಕೆ ಮೆರುಗು ಕೊಡುವುದಷ್ಟು ಕೆಲಸ ಉಳಿದಿದೆ. ಅದರಿಂದ ಸ್ಥಪತಿಗಳಿಗೆ ಬಿಡುವು ಮಾಡಿಕೊಳ್ಳಲು ಕಷ್ಟವಾಗಲಾರದು" ಎಂದಳು ಶಾನ್ತಲದೇವಿ.

"ಎಷ್ಟು ಹೊತ್ತಿಗೆ ನಾನು ಸಿದ್ಧವಾಗಬೇಕು ?"

"ಎರಡು ಗಳಿಗೆಯ ನಂತರ ಹೋಗೋಣ. ಇವತ್ತೂ ಅನಧ್ಯಯನ. ಅದರಿಂದ ಬೇಗಲೇ ಹೊರಡಬಹುದು."

"ಸರಿ ಹಾಗಾದರೆ ನಾನು ಬೇಗ ಸಿದ್ಧವಾಗಿ ಬಿಡುತ್ತೇನೆ" ಎಂದು ಲಕ್ಮೀದೇವಿ ತನ್ನ ಅಂತಃಪುರಕ್ಕೆ ಹೋದಳು. ಒಂದೇ ಗಳಿಗೆಯಲ್ಲಿ ಅವಳು ಸಿದ್ಧವಾಗಿ ಪಟ್ಟಮಹಾದೇವಿಯ ಸಜ್ಜೆವನೆಗೆ ಬಂದಳು.

ಮಹಾರಾಜ ಮತ್ತು ಪಟ್ಟಮಹಾದೇವಿ ಎರಡು ಆಸನಗಳ ಮೇಲೆ ಕುಳಿತಿದ್ದರು. ಅವರ ನಡುವಿನ ಚಿತ್ತಾರದ ಅಡ್ಡಣಿಗೆಯ ಮೇಲಿನ ಬಂಗಾದ ಹರಿವಾಣದಲ್ಲಿ ವೀಳ್ಯದೆಲೆ ಅಡಿಕೆಗಳು ಇದ್ದವು. ರಾಜದಂಪತಿಗಳಿಬ್ಬರೂ ವೀಳ್ಯ ಹಾಕಿಯಾಗಿತ್ತು. ಶಾನ್ತಲದೇವಿಯ ಪಕ್ಕದ ಆಸನದ ಮೇಲೆ ಲಕ್ಷ್ಮೀದೇವಿ ಕುಳಿತಳು.

"ಸನ್ನಿಧಾನ ರಾಣಿಯ ಇಚ್ಛೆಯ ವಿಷಯ ಹೇಳಿದರು. ಏನು ಮಾಡಬೇಕೆಂದು ಹಾಗೆಯೇ ಯೋಚಿಸುತ್ತಿದ್ದೆವು. ಅಷ್ಟರಲ್ಲಿ....."

"ನಾನೇ ಬಂದಾಯಿತು. ವಾಸ್ತವವಾಗಿ ಸನ್ನಿಧಾನ ನಿಮ್ಮೊಂದಿಗೆ ಈ ವಿಷಯ ಹೇಳುವುದಕ್ಕಿಂತ ಮುಂಚೆಯೇ ನಾನು ಆ ವಿಷಯವಾಗಿ ಮಾತನಾಡಬೇಕೆಂದು ಆಲೋಚಿಸಿದ್ದೆ."

"ಯಾರು ಹೇಳಿದರೂ ವಿಷಯ ಒಂದೇ ತಾನೆ. ನಿನ್ನ ಬಯಕೆ ಸಹಜ. ನನ್ನ ಸಹಾನುಭೂತಿ ಇದೆ. ಇಲ್ಲಿಗೆ ಅವರನ್ನು ಕರೆಸಲು ಕೆಲವು ಕಾರಣಗಳಿಂದ ಸಾಧ್ಯವಿಲ್ಲವೆಂಬುದು ಸಾಮಾನ್ಯ ಅಭಿಪ್ರಾಯ. ಆದರೆ ಈ ಉತ್ಸವ ಸಮಯಕ್ಕೆ ಅವರಿಲ್ಲಿಗೆ ಬರಲು ಏನೂ ತೊಂದರೆ ಇರಲಾರದು. ಯಾದವಪುರಿಗೆ ಯಾರನ್ನಾದರೂ ಕಳಿಸಿ ಕೊಡಬೇಕೆಂದು ಶ್ರೀಮದಾಚಾರ್ಯರಿಗೆ ಬಿನ್ನವಿಸಿಕೊಂಡು ನಿಮ್ಮ ತೀರ್ಥರೂಪರನ್ನು

ಒಂದು ಪಕ್ಷ ಕಾಲ ಇಲ್ಲಿರುವ ಹಾಗೆ ವ್ಯವಸ್ಥೆ ಮಾಡೋಣ. ಅವರು ಇಲ್ಲಿಗೆ ಬಂದ ನಂತರ, ಉದ್ಯೋಗ ಬೇಡ, ಮಗಳ ಕಣ್ಣೆದಿರಿಗಿದ್ದರೆ ಸಾಕೆಂದು ಅಭಿಪ್ರಾಯ ಪಡುವುದಾದರೆ ಮುಂದೇನು ಮಾಡಬೇಕೆಂದು ನಂತರ ಆಲೋಚಿಸೋಣ. ಆಗದೆ ?''

ಈ ನಿರ್ಣಯ ಕೇಳಿ ತಾನು ಪಟ್ಟಮಹಾದೇವಿಗೆ ಏನೇನು ಹೇಳಬೇಕೆಂದು ಯೋಚಿಸಿಕೊಂಡಿದ್ದಳೋ ಅವನ್ನು ಹೇಳುವ ಅವಕಾಶವೇ ತಪ್ಪಿದಂತಾಯಿತು. ಅಂತೂ ಆ ಸಮಯಕ್ಕೆ ತನ್ನ ತಂದೆ ಇಲ್ಲಿಗೆ ಬರುವಂತಾಯಿತಲ್ಲ. ಅಷ್ಟೇ ಸಾಕು ಎಂಬ ಸಮಾಧಾನ. ಮುಗುಳುನಗೆಯಿಂದ ತನ್ನ ಒಪ್ಪಿಗೆಯನ್ನೂ, ತೃಪ್ತಿಯನ್ನೂ ಸೂಚಿಸಿದಳು.

ಮತ್ತೆ ಸ್ಥಪತಿಯ ಮಾತು ಬಂತು. ಶಾನ್ತಲದೇವಿಯೇ ಲಕ್ಷ್ಮೀದೇವಿಯನ್ನು ನೇರವಾಗಿ ಕೇಳಿದಳು. "ಕಲೆ ರೂಪಿಸುವಾಗಲೂ ಅಷ್ಟೆ, ಅದನ್ನು ಆಸ್ವಾದಿಸಿ ಆನಂದಿಸುವಾಗಲೂ ಅಷ್ಟೆ, ತನ್ಮಯತೆ ಅತ್ಯಂತ ಅವಶ್ಯಕ ಎಂದು ನಿನ್ನೆ ನಿನಗನ್ನಿಸಲಿಲ್ಲವೆ ?''

"ತನ್ಮಯತೆ ಎಂಬುದರ ತಿಳಿವಳಿಕೆ ನಿನ್ನೆಯೇ ನನಗಾದುದು. ನಮ್ಮ ಸುತ್ತಲಿನ ಇತರ ವಿಚಾರಗಳು, ಕ್ರಿಯೆಗಳತ್ತ ಸಹ ನಮ್ಮ ಮನಸ್ಸು ಹೋಗದೆ ಒಂದೇ ವಿಚಾರದಲ್ಲಿ ಕೇಂದ್ರೀಕೃತವಾಗಿರುತ್ತದೆ. ಈ ಅನುಭವ ಮಾತ್ರ ಅಮೋಘವಾದ್ದು.''

"ಆ ಭಾವನೆಯು ಮನಸ್ಸಿನಲ್ಲಿ ಮೂಡಿದಾಗಲೇ ಕಲೆಯ ನಿಜಸ್ವರೂಪದ ಅರಿವಾಗುವುದು. ಅವರ ಕಲಾಕಲ್ಪನೆ ನಿನ್ನ ಮೆಚ್ಚುಗೆಗೆ ಒಳಗಾಯಿತು ತಾನೆ ?''

"ಸುಮ್ಮನೆ ಚಿತ್ರ ನೋಡಿದ್ದರೆ ಏನೆನ್ನಿಸುತ್ತಿತ್ತೋ. ಅವರಿತ್ತ ವಿವರಣೆ ಕೇಳಿ, ಅದರ ಸೌಂದರ್ಯ ನನ್ನ ಮನಸ್ಸಿಗೆ ನಾಟಿತು. ಆತ ಮಾತಿನಲ್ಲಿ ಸಹ ಚತುರ. ಹೇಳುವುದನ್ನು ಮನಕ್ಕೆ ನಾಟುವಂತೆ ಹೇಳುತ್ತಾನೆ.''

"ಆತ ವೇದವೇದಾಂಗಪಾರಂಗತನೂ, ಸರ್ವಶಾಸ್ತ್ರ ಸಂಪನ್ನನೂ, ಸರ್ವಶಿಲ್ಪ ನಿಷ್ಣಾತನೂ ಆದ ಪರಮಜ್ಞಾನಿ.''

"ನೋಡಿದರೆ ಅಷ್ಟೆಲ್ಲ ಗೊತ್ತಾಗುವುದಿಲ್ಲ.''

ಶಾನ್ತಲದೇವಿ, ಲಕ್ಷ್ಮೀದೇವಿಯರು ದೇವಮಂದಿರದತ್ತ ಹೊರಟರು. ಉದಯಾದಿತ್ಯ, ಕುವರ ಬಿಟ್ಟಿಯಣ್ಣ ಆಗಲೇ ಅಲ್ಲಿಗೆ ಹೋಗಿದ್ದರು.

"ಸ್ಥಪತಿಗಳೇ, ನಮ್ಮ ರಾಣಿಯವರಿಗೆ ಶಿಲ್ಪದ ವಿಷಯದಲ್ಲಿ ತುಂಬಾ ಶ್ರದ್ಧೆ ಹುಟ್ಟಿದೆ. ಅವರಿಗೆ ಇನ್ನೂ ನೀವು ತೋರಿಸಲಾಗದೆ ಇರುವುದನ್ನೆಲ್ಲ ತೋರಿಸಿ, ಅವು ಹೇಗೆ ರೂಪಿತವಾದವು ಎಂಬುದನ್ನೆಲ್ಲ ವಿವರಿಸಿ. ನಾವು ನಗರ ಸಂಚಾರ ಮಾಡಿ ಬರುತ್ತೇವೆ. ಆಗಲೇ ಜನ ಬರಲು ಆರಂಭಿಸಿದ್ದಾರೆ. ಸೌಕರ್ಯಗಳೆಲ್ಲ ಆಗಿವೆಯೆ ಇಲ್ಲವೆ ನೋಡಿ ಬರಬೇಕು'' ಎಂದು ನಿರ್ಣಯವನ್ನೇ ಹೇಳಿ ಉದಯಾದಿತ್ಯ, ಕುವರ ಬಿಟ್ಟಿಯಣ್ಣರೊಂದಿಗೆ ಶಾನ್ತಲದೇವಿ ಹೊರಟುಹೋದಳು. ರಾಣಿ ಲಕ್ಷ್ಮೀದೇವಿ ಸ್ಥಪತಿಯೊಂದಿಗೆ ಒಬ್ಬಳೇ ಆದಳು.

"ಮೂಲ ಕಟ್ಟಡದ ಎಲ್ಲ ಚಿತ್ರಗಳನ್ನೂ ತಾವು ನಿನ್ನೆಯೇ ಪರಿಶೀಲಿಸಿ ಆಗಿದೆ. ತಾವು ಇಚ್ಛೆಪಟ್ಟರೆ ಒಂದು ಸಲ ನಿರ್ಮಿತವಾಗಿರುವ ಮಂದಿರದ ಸುತ್ತ ನೋಡಿ, ನಿನ್ನೆ ತಾವು ಪರಾಂಬರಿಸಿದ ಚಿತ್ರಗಳೊಂದಿಗೆ

ಮನಸ್ಸಿನಲ್ಲಿ ತಾಳೆ ನೋಡಿದ ಮೇಲೆ ಇತ್ತೀಚೆಗೆ ರೂಪಿತವಾದ ಚಿತ್ರಗಳು ಹೇಗೆ ರೂಪಧಾರಣೆ ಪಡೆಯುತ್ತಿವೆಯೆಂಬುದನ್ನು ಪರಿಶೀಲಿಸಬಹುದು'' ಎಂದು ಸ್ಥಪತಿ ವಿನಯವಾಗಿ ಹೇಳಿದ.

''ಹಾಗೆಯೇ ಮಾಡೋಣ'' ಎಂದಳು ಲಕ್ಷ್ಮೀದೇವಿ.

ಸ್ಥಪತಿ ಮುಂದೆ ಹೆಜ್ಜೆ ಹಾಕಿದ. ರಾಣಿ ಹಿಂಬಾಲಿಸಿದಳು. ನಾಲ್ಕು ಹೆಜ್ಜೆ ಹಿಂದೆ ರೇವಿಮಯ್ಯ ಚಟ್ಟಲೆ ಹೆಜ್ಜೆ ಹಾಕಿದರು. ದೇವಮಂದಿರದ ಸುತ್ತ ಬಂದಮೇಲೆ ಸ್ಥಪತಿ, ''ಚಿತ್ರಗಳಿಗೂ ಮಂದಿರಕ್ಕೂ ಏನಾದರೂ ವ್ಯತಾಸಗಳಿವೆಯೇ ? ಅಥವಾ ಅವು ಸಮರ್ಪಕ ಎನ್ನಿಸಿದವೆ ?'' ಎಂದು ಕೇಳಿದ.

''ನೀವು, ಪಟ್ಟಮಹಾದೇವಿಯವರು ಅವುಗಳನ್ನೆಲ್ಲ ಬಹು ಎಚ್ಚರಿಕೆಯಿಂದ ಪರಿಶೀಲಿಸಿ ಸಿದ್ಧಪಡಿಸಿರುವಾಗ ಅವು ಸಮರ್ಪಕವಾಗಿಯೇ ಇರುತ್ತವೆ. ಇಷ್ಟಕ್ಕೂ ನನಗೆ ಹಾಗೆಲ್ಲಾ ಪರಿಶೀಲಿಸಿ ಅಭಿಪ್ರಾಯ ಹೇಳಲು ಸಾಧ್ಯವಾಗುವುದಿಲ್ಲ. ನನ್ನ ತಿಳಿವಳಿಕೆ ಈ ದಿಶೆಯಲ್ಲಿ ಏನೇನೂ ಇಲ್ಲ.''

''ತಮ್ಮ ಈ ಸೌಜನ್ಯದ ಮಾತಿಗೆ ನಾನು ಕೃತಜ್ಞ. ನನಗೆ, ಪಟ್ಟಮಹಾದೇವಿಯವರಿಗೆ, ಇವನ್ನು ದಿನಾ ನೋಡಿ ನೋಡಿ ವ್ಯತ್ಯಾಸಗಳು ಗಮನಕ್ಕೆ ಬಾರದಂತೆ ಆಗಿವೆ. ಹೊಸದಾಗಿ ನೋಡಿದ ತಮಗೆ ಬದಲಾವಣೆ ಇದ್ದರೆ, ತಪ್ಪು ಇದ್ದರೆ ಬೇಗ ಗೋಚರವಾಗುವ ಸಂಭವ ಹೆಚ್ಚು. ಆದ್ದರಿಂದ ತಿಳಿಸಿದರೆ ಉಪಕಾರವಾಗುತ್ತದೆ.''

ರಾಣಿ ಲಕ್ಷ್ಮೀದೇವಿ ಯೋಚಿಸುತ್ತ ನಿಂತಳು. ಎರಡು ಕ್ಷಣಗಳ ನಂತರ, ''ಚಿತ್ರದಲ್ಲಿ ಆ ನಾಟ್ಯ ಸರಸ್ವತಿಯ ಮುಖ ಎಳಸಾಗಿತ್ತು. ಇಲ್ಲಿ ಅದು ಪ್ರೌಢವೆನಿಸುತ್ತದೆ'' ಎಂದಳು.

''ತಮ್ಮ ಅಭಿಪ್ರಾಯ ನಿಜ. ಅಂದರೆ ತಾವು ವಿಷಯದಲ್ಲಿ ಪೂರ್ತಿ ಮನಗೊಟ್ಟಿದ್ದೀರಿ ಎನ್ನುವುದಕ್ಕೆ ಇದಕ್ಕಿಂತ ಬೇರೆ ಸಾಕ್ಷಿ ಬೇಕೆ ?''

''ಹಾಗೇಕೆ ಬದಲಾಯಿತು ?''

''ಅದಕ್ಕೆ ಕಾರಣವಿದೆ.'' ಎಂದು ಈ ಬಗೆಗೆ ಹಿಂದೆ ನಡೆದ ಮಾತುಕತೆ ಕ್ರಿಯೆಗಳನ್ನೆಲ್ಲವನ್ನೂ ಸ್ಥಪತಿ ತಿಳಿಸಿದ.

''ಅಂದರೆ ಅದು ಈಗ ಸಂಗೀತ ನಾಟ್ಯ ಸರಸ್ವತಿಯಾಯಿತು ಎನ್ನಿ ?''

''ಹೌದು.''

''ಅಂದರೆ ಅದರಲ್ಲಿ ಸ್ವರಗಳು ನುಡಿಯುತ್ತವೆಯೆ ?''

''ಕೇಳುತ್ತೀರೇನು ?''

''ಕೇಳಬಹುದು.''

ಇಬ್ಬರೂ ಮತ್ತೆ ಉತ್ತರ ದ್ವಾರದತ್ತ ಹೋದರು. ಸ್ಥಪತಿ ಸರಸ್ವತಿ ವಿಗ್ರಹದ ಬೇರೆ ಬೇರೆ ಭಾಗಗಳನ್ನು ತನ್ನ ಕೈಯಲ್ಲಿದ್ದ ಟಂಕದಿಂದ ಮೆದುವಾಗಿ ಬಡಿದ.

ಶುದ್ಧವಾದ ಸಪ್ತಸ್ವರಗಳೂ ಆ ವಿಗ್ರಹದಿಂದ ಹೊಮ್ಮಿದುದನ್ನು ಕೇಳಿ ಅವಳು ರೋಮಾಂಚನಗೊಂಡಳು.

''ಇದೆಲ್ಲಾ ಕಲ್ಲಿನಲ್ಲಿ ಸಾಧ್ಯ ಎಂದು ನಾನು ಭಾವಿಸಿಯೇ ಇರಲಿಲ್ಲ.''

''ಸಾಧಿಸಬೇಕೆಂಬ ನಿಷ್ಠಾವಂತ ಇಚ್ಛೆ ಇದ್ದರೆ ಸಾಧಿಸಬಹುದು.''

"ದೇವ ಮಂದಿರದ ಮಹಾದ್ವಾರದ ಮೇಲು ಭಾಗದಲ್ಲಿ ಹಾಗೆಯೇ ತೆರವಿದ್ದಂತೆ ಕಾಣುತ್ತದೆಯಲ್ಲ."

"ಅಹುದು. ಅದನ್ನು ಬೇಕೆಂದೇ ತೆರವಾಗಿಟ್ಟಿದೆ."

"ಹಾಗಾದರೆ ಅಲ್ಲಿ ಏನನ್ನಾದರೂ ಹೊಂದಿಸಬೇಕೆಂದು ನಿರ್ಣಯವಾಗಿದೆಯೆ ?"

"ಇಲ್ಲ. ಅದನ್ನು ಮಹಾಸನ್ನಿಧಾನ, ಪಟ್ಟಮಹಾದೇವಿಯವರು ತೀರ್ಮಾನಿಸಬೇಕು."

"ನನಗೆ ಹೀಗನ್ನಿಸುತ್ತದೆ" ಎಂದು ಮಾತು ನಿಲ್ಲಿಸಿ ಸ್ಥಪತಿಯ ಮುಖ ನೋಡಿದಳು.

"ಅಪ್ಪಣೆಯಾಗಲಿ."

"ಅದು ಸರಿಯಾದುದು ಹೌದೋ ಅಲ್ಲವೋ ಎಂಬ ಸಂಕೋಚ."

"ಯಾರಿಗೆ ಗೊತ್ತು ನಿಮ್ಮಂತರಂಗದಲ್ಲಿ ಹುಟ್ಟಿದುದೇ ಹೆಚ್ಚು ಸಮಂಜಸವೆನ್ನಿಸಬಹುದು."

"ಶ್ರೀಮದಾಚಾರ್ಯರು ಸನ್ನಿಧಾನವನ್ನು ಶಿಷ್ಯರನ್ನಾಗಿ ಪರಿಗ್ರಹಿಸುವ ಚಿತ್ರವನ್ನು ರೂಪಿಸಿ ಅಲ್ಲಿ ಹೊಂದಿಸಿದರೆ ಸರಿಯಾಗುತ್ತದೆ ಎಂದು ನನಗನ್ನಿಸುತ್ತದೆ."

"ಪರಿಶೀಲಿಸಬಹುದಾದ ಸಲಹೆಯೇ. ಶ್ರೀಮದಾಚಾರ್ಯರು ಇದಕ್ಕೆ ಒಪ್ಪಿಗೆ ಕೊಡಬೇಕಾಗುತ್ತದೆ. ಅದರಿಂದ ಅವರನ್ನು ವಿಚಾರಿಸದೆ ನಿರ್ಣಯಿಸುವಂತಿಲ್ಲ"

"ಹೌದಲ್ಲವೆ ? ಅವರು ಒಪ್ಪುತ್ತಾರೆಂದು ನನಗೆ ನಂಬಿಕೆ ಇದೆ. ಮಹಾರಾಜರನ್ನು ಶಿಷ್ಯರನ್ನಾಗಿ ಪರಿಗ್ರಹಿಸಿದ ಸಂದರ್ಭ ಅವರ ಜೀವನದಲ್ಲಿಯ ಒಂದು ಮಹತ್ತರವಾದ ಘಟನೆಯಲ್ಲವೆ? ಅದು ಇಲ್ಲಿ ರೂಪಿತವಾದರೆ ಅದಕ್ಕೊಂದು ಐತಿಹಾಸಿಕ ಶಾಶ್ವತತ್ವ ಬರುತ್ತದೆ."

"ತಾವು ಹೇಳುವ ಮಾತು ಸರಿಯೆ."

"ಇದನ್ನೆಲ್ಲ ನೋಡಿ ಬಂದ ಮೇಲೆ ನನಗೊಂದು ಕೊರತೆ ಕಾಣುತ್ತದೆ."

"ಅಪ್ಪಣೆಯಾಗಲಿ."

"ಅನೇಕ ವಿಗ್ರಹಗಳ ಕೆಳಗೆ ಅದನ್ನು ಕಡೆದ ರೂವಾರಿಗಳ ಹೆಸರು ಬಿರುದು ಎಲ್ಲಾ ಇವೆ. ಆದರೆ ನಿಮ್ಮ ಹೆಸರು ಎಲ್ಲೂ ಮೂಡಿಲ್ಲವಲ್ಲ. ಈ ಕೃತಿ ನಿರ್ಮಾಣಕ್ಕೆ ನೀವೇ ಮೂಲ ಕಲ್ಪನೆ ನೀಡಿದವರು. ಎಂದಾಗ ನಿಮ್ಮ ಹೆಸರು ಎಲ್ಲಿಯಾದರೂ ಇರಲೇಬೇಕು."

"ಹೆಸರು ಉಳಿಯಬೇಕೆಂಬ ಆಸೆ ನನ್ನದಲ್ಲ. ಕೃತಿ ಉಳಿಯಬೇಕೆಂಬುದಷ್ಟೇ ನನ್ನ ಗುರಿ. ಅದೂ ಅಲ್ಲದೆ ನನಗೆ ಲೌಕಿಕವಾದ ಯಾವ ಆಸೆಯೂ ಇಲ್ಲ. ಸಂಸಾರಗಳ ನಡುವೆ ಇದ್ದರೂ ಸಂನ್ಯಾಸ ಸ್ವೀಕರಿಸದಿದ್ದರೂ ನಾನು ಸಂನ್ಯಾಸಿ. ನನ್ನ ಹೆಸರೇ ಲೋಕಕ್ಕೆ ತಿಳಿಯಬಾರದೆಂದು ನಿರ್ಣಯಿಸಿರುವ ನಾನು ಎಲ್ಲೂ ಹೆಸರು ಕೆತ್ತುವುದಿಲ್ಲ."

"ಹಾಗೇಕೆ ?"

"ಅದು ಸ್ವವಿಷಯ. ನನಗೆ ಹೇಳಲು ಇಷ್ಟವಿಲ್ಲ. ತಾವೂ ಬಲವಂತ ಮಾಡಬಾರದು."

"ನಿಮ್ಮಿಷ್ಟ. ಮುಂದೆ."

"ರೂವಾರಿಗಳ ಶಿಬಿರಗಳನ್ನು ನೋಡಿ ಬರೋಣ. ಅಲ್ಲಿ ಇತ್ತೀಚೆಗೆ ರೂಪಿಸಿದ ಚಿತ್ರಗಳು ಶಿಲ್ಪರೂಪ ತಾಳುತ್ತಿವೆ" ಎಂದು ಅತ್ತ ಹೆಜ್ಜೆ ಹಾಕಿದ. ಉಳಿದವರು ಹಿಂಬಾಲಿಸಿದರು.

ಮೊದಲು ರೂಪಿಸಿದ್ದ ಚಿತ್ರಗಳು, ಶಾನ್ತಲದೇವಿ ಪ್ರತಿಮಾಭಂಗಿ ನೀಡಿದಾಗ ರೂಪಿಸಿದ ಚಿತ್ರಗಳು ಎಲ್ಲವೂ ಕೃತಿಧಾರಣೆ ಮಾಡಿ ನಿಂತಿದ್ದ ಶಿಬಿರಗಳಿಗೆಲ್ಲ ಹೋಗಿ ಬರಲಾಯಿತು. ಕಡೆಗೆ ಸ್ಥಪತಿಯ ಶಿಬಿರಕ್ಕೆ ಬಂದ ಮೇಲೆ, "ಈ ಚಿತ್ರಗಳನ್ನೆಲ್ಲಾ ನೀವು ಕಲ್ಪಿಸಿ ರೂಪಿಸಿಕೊಂಡಿರಿ ಎಂದರೆ ನಿಮ್ಮ ಕಲ್ಪನಾ ಸಾಮರ್ಥ್ಯ ಎಷ್ಟೆಂದು ಹೇಳಲು ಸಾಧ್ಯವಿಲ್ಲ ವಿಶ್ವಮೋಹಿನಿಯರನ್ನೇ ನೀವು ಕಲ್ಪಿಸಿಕೊಂಡಂತೆ ನನಗೆ ಭಾಸವಾಗುತ್ತದೆ."

"ಕೆಲವು ಕಲ್ಪಿತ. ಆದರೆ ಅವುಗಳಲ್ಲಿ ಜೀವಂತಿಕೆ ತುಂಬಿರುವುವು ಎಲ್ಲಾ ಅನ್ಯರು ನೀಡಿದ ಪ್ರತಿಮಾಭಂಗಿ ಫಲ."

"ಪ್ರತಿಮಾಭಂಗಿ ಎಂದರೆ ?"

"ಭಂಗಿ ನೀಡುವುದರಲ್ಲಿ ಪರಣತಿಯನ್ನು ಪಡೆದ ಒಬ್ಬ ವ್ಯಕ್ತಿ ಅಚಲವಾದ ಭಂಗಿಯಲ್ಲಿ ನಮ್ಮಿದಿರು ನಿಲ್ಲುತ್ತಾರೆ. ನಾವು ಆ ಭಂಗಿಯನ್ನು ಯಥಾವತ್ತಾಗಿ ಚಿತ್ರಿಸುತ್ತವೆ. ಆ ರೀತಿ ರೂಪಿಸಿದ ಚಿತ್ರವೇ ಮುಂದೆ ಪೂರ್ಣ ಶಿಲ್ಪಾಕೃತಿಯಾಗುತ್ತದೆ."

"ಅಂದರೆ ನೀವು ಚಿತ್ರ ರಚನೆ ಮುಗಿಸುವವರೆಗೆ ಹಾಗೆ ಅದೇ ಭಂಗಿಯಲ್ಲೇ ಇರಬೇಕೆ?"

"ಇಲ್ಲದಿದ್ದರೆ ನಿಜ ಚಿತ್ರ ಮೂಡುವುದು ಹೇಗೆ ?"

"ಮತ್ತೆ ಅವುಗಳಲ್ಲಿ ಭಂಗಿಯ ಜೊತೆಗೆ ಭಾವವೂ ಇದೆಯಲ್ಲ ?"

"ಹೌದು. ಭಾವಯುಕ್ತವಾದಾಗಲೇ ಜೀವಂತಿಕೆ ಮೂಡುವುದು. ಭಾವ ತುಂಬಿ ನಿಂತಾಗ ಭಂಗಿಯಲ್ಲಿಯೂ ಆ ಭಾವ ಹರಿದು ನಿಲ್ಲುತ್ತದೆ."

"ಅಂದರೆ ಭಾವ ಅಂಗಾಂಗಗಳೆಲ್ಲ ಹರಿಯುತ್ತಿರುತ್ತದೆ ಎಂದು ನಿಮ್ಮ ಮಾತೇನು ?"

"ಹೌದು ಮತ್ತೆ. ಅಲ್ಲೇ ಕಲೆಯ ಶಕ್ತಿ ಅಡಗಿರುವುದು."

"ಅಂದರೆ ಪ್ರತಿಮಾಭಂಗಿ ಕೊಡುವವರು ಆ ಭಾವವನ್ನು ತುಂಬಿಕೊಂಡೇ ನಿಂತಿರುತ್ತಾರೆಯೆ?"

"ಹೌದು."

"ಅಂದರೆ ಆ ಭಾವ ಮೂಡಲು ಅವರಿಗೆ ಇಲ್ಲಿ ಸನ್ನಿವೇಶವೇ ಇರುವುದಿಲ್ಲವಲ್ಲ ನಮ್ಮ ಮೇಲೆ ಅಂತರಂಗದ ಮೇಲೆ ಪರಿಣಾಮ ಮಾಡುವ ಘಟನೆಯೇ ಇಲ್ಲದೆ ಆ ಭಾವವನ್ನು ತಂದುಕೊಳ್ಳಲು ಹೇಗೆ ಸಾಧ್ಯ ?"

"ಅದೇ ಕಲೆ. ಎಲ್ಲವನ್ನೂ ತಮ್ಮ ಮನೋರಂಗದಲ್ಲಿ ಕಲ್ಪಿಸಿಕೊಂಡು ಆ ಭಾವವನ್ನು ತಂದುಕೊಂಡು ಅದನ್ನು ಭಂಗಿಗೂ ತುಂಬಬೇಕು."

"ಅಂದರೆ ಅವರಿಗೆ ನಿಜವಾಗಿ ಆ ಭಾವಾನುಭವವಾಗುವುದಿಲ್ಲ."

"ಹೌದು. ಅದು ನಟನೆ. ಅಂದರೆ ಆ ಭಾವ ಪ್ರದರ್ಶನವೇ ಕೃತಕ. ನೈಜವೆಂಬ ಭ್ರಮೆಯನ್ನೂ ಮೂಡಿಸುತ್ತದೆ. ಅದನ್ನೇ ಕಲೆ ಎನ್ನುತ್ತೇವೆ."

"ಇದೆಲ್ಲ ಕೇಳಿದರೆ ವಿಚಿತ್ರವೆನಿಸುತ್ತದೆ."

"ಕಲೆಯನ್ನು ಸಾಧಿಸಿದವರಿಗೆ ಅದು ಸಹಜ. ಅದರ ಅರಿವಿಲ್ಲದವರಿಗೆ ಅದು ವಿಚಿತ್ರ."

"ಹಾಗಾದರೆ ನಿಮಗೆ ಈ ಪ್ರತಿಮಾಭಂಗಿ ನೀಡಿದವರು ಯಾರು ?"

"ನಮ್ಮ ಪಟ್ಟಮಹಾದೇವಿಯವರು."

ರಾಣಿ ಲಕ್ಷ್ಮೀದೇವಿ ಅವಾಕ್ಕಾದಳು. ಆಶ್ಚರ್ಯದಿಂದ ಸ್ಥಪತಿಯತ್ತ ನೋಡಿದಳು.

"ಯಾಕೆ ? ನಂಬದಂತಹ ವಿಷಯವೇನು ?"

"ಏನೋ, ನನ್ನ ಮನಸ್ಸಿಗೆ ಅದು ನಿಲುಕುತ್ತಿಲ್ಲ. ಪಟ್ಟಮಹಾದೇವಿಯವರು ಪ್ರತಿಮಾಭಂಗಿ ನೀಡಲು ಸಾಧ್ಯವೆ ? ನೀಡಬಹುದೆ ?"

"ಬಹುದು, ಸಾಧ್ಯ ಎಂಬುದೆರಡೂ ಸತ್ಯ. ನಮ್ಮ ಪಟ್ಟಮಹಾದೇವಿಯವರು ಒಂದು ಅನರ್ಘ್ಯರತ್ನ. ಧರೆಗಿಳಿದು ಬಂದ ಕಲಾದೇವಿ ಅವರು. ಅವರ ಅಚಲವಾದ ನಿಷ್ಠೆ, ಸತ್ಯದ ಬಲದಿಂದ ಕೂಡಿದ ಧೈರ್ಯ, ಅವರನ್ನು ಲೋಕ ಕಲ್ಯಾಣದ ಎಲ್ಲ ಕೆಲಸಗಳಲ್ಲಿ ಭಾಗವಹಿಸಲು ಪ್ರೇರೇಪಿಸುತ್ತವೆ. ನನ್ನ ಮಾತಿನಲ್ಲಿ ಅಪನಂಬಿಕೆ ಇದ್ದರೆ ತಾವು ಅವರನ್ನೇ ಕೇಳಬಹುದು."

"ಅವರು ತಮಗೆ ಪ್ರತಿಮಾಭಂಗಿಯನ್ನು ಯಾವಾಗ ನೀಡಿದರು ?"

"ತಾವು ವೇಲಾಪುರಿಗೆ ಬೀಜಯ ಮಾಡಿಸಿದ ಮೇಲೆ."

"ಓಹೋ. ಆ ಸಂದರ್ಭದಲ್ಲಿಯೇನೋ ಪಟ್ಟಮಹಾದೇವಿಯ ಸಂದರ್ಶನ ಅನ್ಯರಿಗೆ ಲಭಿಸಿದೆ ಇದ್ದುದು ?"

"ಹೌದು. ಈ ಕೆಲಸ ಅತ್ಯಂತ ಅವಶ್ಯಕವಾದುದಾಗಿತ್ತು. ಮತ್ತು ಅದು ಅತ್ಯವುಸರದ್ದಾಗಿತ್ತು."

"ಮೊದಲೇ ಈ ಕೆಲಸವನ್ನೇಕೆ ಮಾಡಲಿಲ್ಲ. ಕಡೆ ಗಳಿಗೆಯವರೆಗೇಕೆ ಕಾದಿರಿ ?"

"ನಾನೊಬ್ಬ ಸಾಮಾನ್ಯ ಮನುಷ್ಯ. ಅರಮನೆಯ ಊಳಿಗದಲ್ಲಿರುವವನು. ನಾನು ಪಟ್ಟಮಹಾದೇವಿಯವರಲ್ಲಿ ಏನು ಕೇಳಬಹುದು ಏನು ಕೇಳಬಾರದು ಎಂಬುದರ ವಿವೇಚನೆಯುಳ್ಳವನು. ಲೋಕದ ರೀತಿ ನೀತಿಗಳಿಗೂ ಕಲಾವಿದರ ನಿರ್ವಿಕಲ್ಪ ಕಲಾರಾಧನೆಯ ರೀತಿಗೂ ಭಿನ್ನತೆ ಇದೆ. ದೃಷ್ಟಿಕೋನ ಭೇದವೇ ಈ ಭಿನ್ನತೆಗೆ ಕಾರಣ. ಅದ್ದರಿಂದ ಅದು ಅತ್ಯಂತ ಸೂಕ್ಷ್ಮವಾದ ವಿಚಾರವೆನಿಸಿ ನಾನೇ ಅವರನ್ನು ಕೇಳಲು ಬಹಳ ಕಾಲ ಹಿಂಜರಿದು ಕಾಲ ತಳ್ಳಿದೆ."

"ಅಂದರೆ ಕಡೇ ಗಳಿಗೆಯಲ್ಲಿ ಕೇಳಿದರೆ ಒಪ್ಪಿಬಿಡುತ್ತಾರೆಂದೋ ?"

"ಆ ಭಾವನೆಯೇ ನನ್ನಲ್ಲಿ ಮೂಡಿಲ್ಲ. ನನ್ನದೇ ಸಂಕೋಚ ವಿಲಂಬಕ್ಕೆ ಕಾರಣ. ಈಗ ಪಟ್ಟಮಹಾದೇವಿಯವರು ಒಪ್ಪಿದುದು ಸಹ ಕಡೇ ಗಳಿಗೆಯಲ್ಲಿ ಆತುರದಲ್ಲಿ ಆಗಬೇಕು ಎಂಬ ಸಂದಿಗ್ಧಕ್ಕೆ ಸಿಕ್ಕಿ ಅಲ್ಲ. ಅವರು ಸಹ ವಿಷಯವನ್ನು ಚೆನ್ನಾಗಿ ಆಲೋಚನೆ ಮಾಡಿ, ಮಹಾಸನ್ನಿಧಾನದ ಒಪ್ಪಿಗೆಯನ್ನು ಪಡೆದು ಪ್ರತಿಮಾಭಂಗಿ ನೀಡಿದ್ದಾರೆ."

"ಇಷ್ಟೆಲ್ಲ ಒಪ್ಪಿಗೆ, ಯೋಚನೆ, ವಿವೇಚನೆ ನಡೆದಿದ್ದರೂ ಆ ಒಂದು ಚಿತ್ರದಲ್ಲಿಯೂ ಅವರ ಮುಖದ ಸಾಮ್ಯವಿಲ್ಲವಲ್ಲ ?"

"ಅದು ಸಹ ಅವರ ಬಯಕೆ. ತಾವಿತ್ತ ಭಂಗಿ, ಭಾವಗಳಿಗೆ ಬೇರೊಂದು ಕಲ್ಪಿತ ಮುಖವನ್ನು ಹೊಂದಿಸಬೇಕೆಂಬುದು ಅವರ ಇಚ್ಛೆಯಾಗಿತ್ತು."

"ಅದೇಕೆ ಹಾಗೆ ? ಅವರದೇ ಮುಖ ಇದ್ದಿದ್ದರೆ ಏನಾಗುತ್ತಿತ್ತು ?"

"ಏಕರೂಪತೆ ಇರುತ್ತಿತ್ತು. ಈಗಿನ ವೈವಿಧ್ಯ ಇರುತ್ತಿರಲಿಲ್ಲ."

"ಅವರ ಮುಖದ ಹೋಲಿಕೆಯ ಒಂದಾದರೂ ಮೂರ್ತಿ ಇದ್ದಿದ್ದರೆ ಚೆಂದವಾಗುತ್ತಿತ್ತು. ಅಲ್ಲವೆ?"

"ಇವೆಲ್ಲ ಕಲ್ಪಿತ ಎಂಬ ಭಾವನೆ ಮೂಡಿಸಬೇಕಾದಾಗ ವ್ಯಕ್ತಿಯನ್ನು ಗುರುತಿಸುವುದು ಅದರಿಂದ ಸಾಧ್ಯವಾಗಬಾರದು. ಇಲ್ಲಿ ಭಾವ ಭಂಗಿಗಳು ಮುಖ್ಯವೇ ವಿನಾ ಅದನ್ನಿತ್ತ ವ್ಯಕ್ತಿಯಲ್ಲ."

"ಇವೆಲ್ಲ ಹೊಸ ವಿಚಾರಗಳು. ನನ್ನ ತಲೆಗೆ ಹೋಗುವುದು ಕಷ್ಟ."

"ಹಾಗೇನಿಲ್ಲ. ತಮಗೆ ಇದರಲ್ಲಿ ತೊಡಗುವ ಅವಕಾಶ ಒದಗಿ ಬರದಿದ್ದುದರಿಂದ ಹಾಗೆ ಆಗಿದೆ. ತಾವು ಇಚ್ಛೆಪಟ್ಟರೆ ಅರಿಯುವ ಸಾಮರ್ಥ್ಯ ತಮ್ಮಲ್ಲಿ ಇದೆ."

"ಅದು ನಿಮಗೆ ಹೇಗೆ ಗೊತ್ತು ?"

"ನಿಮ್ಮ ಸ್ಮರಣ ಶಕ್ತಿ ಚೆನ್ನಾಗಿದೆ. ನಿಮ್ಮಲ್ಲಿನ ವೀಕ್ಷಕ ಪ್ರವೃತ್ತಿ ಜಾಗೃತ ಸ್ಥಿತಿಯಲ್ಲಿ ಇದೆ. ಅದರಿಂದಲೇ ನೀವು ನೋಡಿದ ಚಿತ್ರಕ್ಕೂ, ಕಡೆದ ಶಿಲ್ಪಕ್ಕೂ ಇದ್ದ ವ್ಯತ್ಯಾಸವನ್ನು ಗುರುತಿಸಿದಿರಿ."

"ಎಲ್ಲೋ ಆಕಸ್ಮಿಕವಾಗಿ ಅದು ತಲೆದೋರಿರಬಹುದು."

"ಅಂದರೆ ನಿಮ್ಮ ಜಾಗೃತ ಮನಸ್ಸಿನ ಜೊತೆಗೆ ಸುಪ್ತ ಮನಸ್ಸು ಸಹ ಜಾಗೃತವಾಗಿದ್ದು ನಿಮಗೆ ಅನಪೇಕ್ಷಿತವಾಗಿಯೂ ನೆರವೀಯುತ್ತದೆ ಎಂದಾಯಿತು."

"ಏನೋ ಅವೆಲ್ಲ ನಮಗೆ ತಿಳಿಯುವುದಿಲ್ಲ. ವೇದಾಂತಿಗಳು ಜಾಗೃತಿ, ಸ್ವಪ್ನ, ಸುಷುಪ್ತಿ ಅಂತ ಏನೇನೋ ಹೇಳೋವಾಗ ಅಂತಃಚಕ್ಷು, ಸುಪ್ತ ಮನಸ್ಸು ಎಂದು ಹೇಳಿದ್ದನ್ನು ಕೇಳಿದ್ದೇನೆ. ಆದರೆ ನನಗೆ ಅವೆಲ್ಲ ಅರ್ಥವಾಗಿಲ್ಲ."

"ವೇದಾಂತಿಗೂ ಕಲಾರಾಧಕನಿಗೂ ಏನೂ ವ್ಯತ್ಯಾಸವಿಲ್ಲ. ಎರಡೂ ಒಂದೇ ನಾಣ್ಯದ ಎರಡು ಮುಖಗಳು."

"ಈ ಮಾತು ಸಹ ನನಗೆ ಅರ್ಥವಾಗುವುದಿಲ್ಲ."

"ಪಟ್ಟಮಹಾದೇವಿಯವರು ಪಾಠ ಮಾಡುವಾಗ ಕೇಳುವ ಅವಕಾಶ ಕಲ್ಪಿಸಿಕೊಂಡರೆ ಅವರು ಇವನ್ನೆಲ್ಲ ನನಗಿಂತ ಸುಲಭಗ್ರಾಹ್ಯವಾಗಿ ಹೇಳುತ್ತಾರೆ."

"ಆಗಲಿ. ಪಟ್ಟಮಹಾದೇವಿಯವರು ಇನ್ನೂ ಬಂದಿಲ್ಲ. ನಾನು ಅರಮನೆಗೆ ಹೋಗುತ್ತೇನೆ" ಎಂದು ಲಕ್ಷ್ಮೀದೇವಿ ಚಟ್ಟಲೆಯತ್ತ ನೋಡಿದಳು.

"ಅಂದಳ ಸಿದ್ಧವಾಗಿದೆ" ಎಂದಳು ಚಟ್ಟಲೆ.

"ಕಲೆಗಾರರು ಒಂದು ಬಗೆಯ ಹುಚ್ಚಿನ ಜನ. ಅವರ ಹುಚ್ಚು ಅವರಿಗೆ ಪ್ರಿಯ. ಆ ನನ್ನ ಹುಚ್ಚಿನಲ್ಲಿ ತಮಗೆ ಬೇಸರವುಂಟುಮಾಡಿದ್ದರೆ ಮನ್ನಿಸಬೇಕು" ಎಂದು ಸ್ಥಪತಿ ವಿನಯವಾಗಿ ಹೇಳಿದ.

"ಏನೂ ಬೇಸರವಿಲ್ಲ. ಎಷ್ಟೋ ತಿಳಿಯದಿದ್ದ ವಿಷಯಗಳು ತಿಳಿದವು" ಎಂದು ಲಕ್ಷ್ಮೀದೇವಿ ಅಂದಳವೇರಿ ಅರಮನೆಗೆ ಹೋದಳು.

* * *

ಶ್ರೀಮದಾಚಾರ್ಯರು ಬರುವುದಿಲ್ಲವೆಂಬ ಸುದ್ದಿ ನಿರುತ್ಸಾಹವನ್ನು ತಂದಿತು. ಆದರೂ ಕೆಲಸವನ್ನು ನಿಲ್ಲಿಸುವಂತಿರಲಿಲ್ಲ. ಅದರಿಂದ ಚಟುವಟಿಕೆಯನ್ನು ಸ್ಥಗಿತಗೊಳಿಸುವಂತಿರಲ್ಲ. ಆದರೆ ಸುದ್ದಿಗೆ ಪ್ರಸಾರ ಕೊಡಲಿಲ್ಲ. ಮತ್ತು ಸುದ್ದಿ ತಂದ ಶಿಷ್ಯನಿಗೂ ಬಾಯಿ ಬಿಗಿ ಹಿಡಿಯಬೇಕು ಎಂಬ ಆದೇಶ ನೀಡಲಾಯಿತು.

ಚತುರ್ದಶಿಯ ದಿವಸ ಲಕ್ಷ್ಮೀದೇವಿಯ ಸಾಕು ತಂದೆ ತಿರುವರಂಗದಾಸನ ಆಗಮನವಾಯಿತು. ಅವನು ನೇರವಾಗಿ ಅರಮನೆಗೆ ಹೋದ. ಅಲ್ಲಿಯ ದ್ವಾರಪಾಲಕರಾರಿಗೂ ಆತ ಪರಿಚಿತನಾಗಿರಲಿಲ್ಲ. ತಾನು ಯಾರು, ಏನು ಎಂಬ ಪೂರ್ವೋತ್ತರಗಳನ್ನೆಲ್ಲ ಹೇಳಿಕೊಂಡು ಪ್ರವೇಶ ದೊರಕಿಸಿಕೊಳ್ಳಲು ಆತನಿಗೆ ಸಾಕು ಸಾಕಾಯಿತು. ಅದೂ ನೆರವೇರುತ್ತಿತ್ತೋ ಇಲ್ಲವೋ. ಏನೋ ಕೆಲಸದ ನಿಮಿತ್ತ ಅರಮನೆಯಿಂದ ಹೊರಟಿದ್ದ ರೇವಿಮಯ್ಯನ ಕಣ್ಣಿಗೆ ಆತ ಬಿದ್ದುದರಿಂದ ಅನುವಾಯಿತು. ರಾಣಿ ಲಕ್ಷ್ಮೀದೇವಿಗಂತೂ ಹದಿನೆಂಟು ಭುಜ ಬಂದಂತೆ ಭಾಸವಾಯಿತು. ಮಂಚಿಅರಸರು ದಂಡನಾಥರಿಗೆಂದು ನಿಯೋಜಿಸಿದ್ದ ಬಿಡಾರದಲ್ಲಿಯೇ ಇದ್ದರಾದ್ದರಿಂದ ತನ್ನ ತಂದೆಯನ್ನು ಅರಮನೆಯಲ್ಲಿ ಉಳಿಸಿಕೊಳ್ಳಲೆಳಸಿದ ರಾಣಿ ಲಕ್ಷ್ಮೀದೇವಿಯ ಪ್ರಯತ್ನಕ್ಕೆ ಫಲ ಸಿಗಲಿಲ್ಲ. ಅವನು, ತಮ್ಮ ವೃತ್ತಿ ಬಾಂಧವರಿಗಾಗಿ ವ್ಯವಸ್ಥೆಗೊಂಡಿರುವ ಬಿಡಾರದಲ್ಲಿ ಇರಬಹುದು. ಅದು ಸರಿಯೆನಿಸದಿದ್ದರೆ ಬೇರೆ ಬಿಡಾರದ ವ್ಯವಸ್ಥೆಯನ್ನು ಆತನೊಬ್ಬನಿಗಾಗಿಯೇ ಮಾಡಬಹುದು ಎಂದು ನಿರ್ಣಯವಾಗಿ ತಾನು ಎಲ್ಲಿರಬೇಕೆಂಬ ಬಗೆಗೆ ತಿರುವರಂಗದಾಸನೇ ತೀರ್ಮಾನ ಮಾಡ ಬೇಕಾಯಿತು. ತಾನೊಬ್ಬನೇ ಬೇರೆ ಇರುವುದಾಗಿ ತಿಳಿಸಿದ. ಅದರಂತೆ ಅವನಿಗಾಗಿ ಬೇರೆ ಬಿಡಾರದ ವ್ಯವಸ್ಥೆ ಆಯಿತು. ಅವನು ಶ್ರೀಮದಾಚಾರ್ಯರ ಅನುಜ್ಞೆಯಂತೆ ಬರದೆ ತನ್ನ ಸ್ವಂತ ಅಪೇಕ್ಷೆಯ ಮೇಲೆ ಬಂದಿದ್ದುದರಿಂದ ಅವನು ಕೇವಲ ಅತಿಥಿಯಾಗಿ ಉಳಿದಿರಬೇಕಾಯಿತೇ ವಿನಾ ಯಾವುದರಲ್ಲಿಯೂ ಕೈ ಬಾಯಿ ಹಾಕುವಂತಿರಲಿಲ್ಲ. ಅವನಿಗಿದ್ದ ವಿಶೇಷ ಸೌಲಭ್ಯ ಎಂದರೆ ತನ್ನ ಮಗಳನ್ನು ಕಾಣಲು ಯಾವಾಗ ಬೇಕಾದರೂ ಅರಮನೆಯೊಳಕ್ಕೆ ಬಂದು ಹೋಗಬಹುದಾಗಿತ್ತು. ಆ ಸೌಲಭ್ಯ ಮಂಚಿ ಅರಸುವಿಗೂ, ಮಾರಸಿಂಗಯ್ಯನಿಗೂ ಇದ್ದೇ ಇತ್ತು. ಶ್ರೀಮದಾಚಾರ್ಯರು ತನಗೆ ವೇಲಾಪುರಿಗೆ ಹೋಗಲು ಅವಕಾಶ ಕೊಡಲಿಲ್ಲವಲ್ಲಾ ಎಂಬ ಬೇಗುದಿಯಲ್ಲಿ ಕುದಿಯುತ್ತಿದ್ದ ಅವನು ಅವರು ಉತ್ತರಕ್ಕೆ ಪ್ರಯಾಣ ಬೆಳೆಸಿದರೆಂಬುದನ್ನು ತಿಳಿದ ಕೂಡಲೇ ಯಾದವಪುರಿಯ ತನ್ನ ಕೆಲಸವನ್ನು ತನ್ನ ಸಹಾಯಕನೋರ್ವನಿಗೆ ವಹಿಸಿ ವೇಲಾಪುರಿಗೆ ಬಂದುಬಿಟ್ಟಿದ್ದ. ತನ್ನ ನಿರ್ಧಾರಗಳು ಇಲ್ಲಿ ಕೈಗೂಡುವ ಸೂಚನೆ ಅವನಿಗೆ ಇಲ್ಲಿ ಬಂದ ಕೂಡಲೇ ಕಾಣಲಿಲ್ಲ. ಆದರೂ ಅವನು ಒಳಗೆ ಲೆಕ್ಕ ಹಾಕಿ ಮೊದಲು ಬಿಡಾರದಲ್ಲಿ ಬೇರು ಬಿಟ್ಟು, ಪರಿಸ್ಥಿತಿ, ಜನಗಳನ್ನು ನೋಡಿ ಏನಾದರೂ ಸಾಧ್ಯವಿದ್ದರೆ ಒಂದು ಕೈ ನೋಡುವುದೆಂದು ತೀರ್ಮಾನಿಸಿ ಯಾವ ಬಗೆಯ ಪ್ರತಿಕ್ರಿಯೆಯನ್ನೂ ತೋರಿಸದೆ ಆದದ್ದೆಲ್ಲಾ ತನಗೆ ಸಮರ್ಪಕ ಎಂಬ ನಗುಮುಖದ ಸ್ವಾಗತವನ್ನೇ ನೀಡಿದ್ದ. ಬಂದ ಮಾರನೆಯ ದಿವಸವೇ ಅವನು ಲಕ್ಮೀದೇವಿಯ ಕಿವಿಯಲ್ಲಿ ಸಾಕಷ್ಟು ಊದಿದ್ದ. ತನಗೆ ಯಾರೋ ಗುಪ್ತ ಶತ್ರುಗಳು ಇದ್ದಾರೆ. ಮಹಾಸನ್ನಿಧಾನದ ಮನಸ್ಸನ್ನು, ಕಡೆಗೆ ಶ್ರೀಮದಾಚಾರ್ಯರ ಮನಸ್ಸನ್ನು ಸಹ ಕೆಡಿಸಿಬಿಟ್ಟಿದ್ದಾರೆ. ಆ ದುರ್ಭಾವನೆಯನ್ನು ಹೋಗಲಾಡಿಸಿಕೊಳ್ಳಲು ಆತ್ಮಶುದ್ಧಿಯಿಂದ ಕೈಂಕರ್ಯ ಮಾಡಿ ಸೈ ಎನ್ನಿಸಿಕೊಂಡು ಮನ್ನಣೆ ಪಡೆಯೋಣವೆಂದರೆ ಇಲ್ಲಿನ ಪರಿಸ್ಥಿತಿಯೂ ಅದಕ್ಕೆ ವಿರೋಧವಾಗಿದೆ ಎಂದು ಬಣ್ಣಕಟ್ಟಿ ಚಿತ್ರಿಸಿದ್ದ. ಅವಳು, ಪಾಪ ಏನೂ ಮಾಡಲಾಗದ ಪರಿಸ್ಥಿತಿಯಲ್ಲಿ ಇದ್ದಳು.

ರಾಣಿ ಲಕ್ಷ್ಮೀದೇವಿಯ ಮನಸ್ಸನ್ನು ಕಲಕಿ ಹೊರಬಿದ್ದ ತಿರುವರಂಗದಾಸ ತನ್ನ ಬಿಡಾರದ ಕಡೆಗೆ ಹೋಗದೆ ದೇವಮಂದಿರದತ್ತ ಪಾದ ಬೆಳೆಸಿದ. ದೇವಸ್ಥಾನವನ್ನು ಒಂದು ಪ್ರದಕ್ಷಿಣೆ ಹಾಕಿ ಅದರ

ಮಹಾದ್ವಾರದ ಇದಿರಿಗೆ ಗರುಡಗಂಭದ ಹಾಗೆ ನಿಂತು ವೀಕ್ಷಿಸಿದ. ಅದರ ಭವ್ಯತೆಗೆ, ಅದರ ಸೌಂದರ್ಯಕ್ಕೆ ಒಂದು ರೀತಿಯಲ್ಲಿ ಮಾರುಹೋದ. 'ಆಗುವುದಾದರೆ ಇಂತಹ ದೇವಮಂದಿರಕ್ಕೆ ಧರ್ಮದರ್ಶಿ ಆಗಬೇಕು. ಇದೆಲ್ಲಿ ? ಆ ಸೊಟ್ಟ ಲಕ್ಷ್ಮೀನಾರಾಯಣ ದೇವಸ್ಥಾನವೆಲ್ಲಿ ? ನಾನು ಪೊಯ್ಸಳ ಮಹಾರಾಜನ ಶ್ವಶುರನಾಗಿ ನನಗೆ ಈ ಪದವಿ ದೊರೆಯದಿದ್ದರೆ ನಾನು ಬದುಕಿದ್ದು ಏನು ಸಾರ್ಥಕ ? ಶ್ರೀಮದಾಚಾರ್ಯರ ಶಿಷ್ಯನಾಗಿ ಏನು ಪ್ರಯೋಜನ ? ತಿರುಮಲೆಯಿಂದ ಏನೋ ಸಾಧಿಸುತ್ತೇನೆಂದು ಇಲ್ಲಿಗೆ ಬಂದು ಏನು ಸಾಧಿಸಿದಂತಾಯಿತು ? ಶತಾಯ ಗತಾಯ ನಾನು ಇಲ್ಲಿಯ ಧರ್ಮದರ್ಶಿ ಪಟ್ಟವನ್ನು ಪಡಯಲೇಬೇಕು. ಅದನ್ನು ಪಡೆದುಕೊಳ್ಳಬೇಕಾದರೆ ಉಳಿದಿರುವುದು ಒಂದೇ ಮಾರ್ಗ. ತನ್ನ ಆಸೆಯನ್ನು ನೆರವೇರಿಸಿಕೊಳ್ಳಲು ಲಕ್ಷ್ಮೀಯನ್ನು ಅಸ್ತ್ರವಾಗಿ ಉಪಯೋಗಿಸುವುದು. ಪಟ್ಟಮಹಾದೇವಿಯ ಬಗೆಗೆ ಅವಳಲ್ಲಿರುವ ಗೌರವ, ಭವ್ಯ ಕಲ್ಪನೆಗೆ ಮಸಿ ಬಳಿಯುವುದು. ನನ್ನ ಮುಖ ನೋಡುವುದಕ್ಕಿಲ್ಲ, ನನ್ನ ಬಗೆಗೆ ಅವಳಿಗೆ ಸದಭಿಪ್ರಾಯ ಮೂಡಲಿಲ್ಲವಂತೆ. ಅವಳ ಮಾತೆಂದರೆ ವೇದವಾಕ್ಯವೇನು ? ಆ ಮುದಿ ಆಚಾರ್ಯನಿಗೆ ಲೌಕೀಕ ಜ್ಞಾನವೇನು ಇದೆ ? ರಾಜ ಹೂವಿನ ಹಾರ ಹಾಕಿದ. ಸುಖವಾಗಿ ಊಟ ಕಳೆಯುತ್ತೆ. ಒಳ್ಳೆ ಆಶ್ರಯ ಸಿಕ್ಕಿದೆ. ಬೇಕಾದ ಹಾಗೆ ಹಣ ಸಿಕ್ಕಿದೆ. ರಾಜನಿಗೂ ಒಂದು ಬಗಯ ಹುಚ್ಚು ಮೂಡಿದೆ. ದೇವಸ್ಥಾನಕ್ಕೆ ಹುಚ್ಚನಂತೆ ಹಣ ವ್ಯಯಿಸುತ್ತಿದ್ದಾನೆ. ಅದರಿಂದ ಪೂರ್ವಾಪರ ಲೌಕೀಕ ತಿಳಿಯದೆ ಅವರುಗಳು ಹೇಳಿದ ಮಾತನ್ನು ಕೇಳಿ ನನಗೆ ಛೀಮಾರಿ ಹಾಕಿದ್ದಾರೆ. ನಾನು ವೇಲಾಪುರಿಯತ್ತ ಸುಳಿಯಬಾರದೆಂದು ಅಪ್ಪಣೆ ಮಾಡಿದ್ದಾರೆ. ಅವರಿದ್ದಿದ್ದರೆ ನನಗೆ ಈ ಸುಯೋಗವೂ ತಪ್ಪುತ್ತಿತ್ತು. ಅದಕ್ಕೇ ನಾನು ನಂಬಿದ ದೇವರು ಅವರನ್ನೇ ಉತ್ತರಕ್ಕೆ ಅಟ್ಟಿದ. ಈ ಸಂದರ್ಭವನ್ನು ನಾನು ಬಿಟ್ಟುಕೊಟ್ಟರೆ ಮುಂದೆ ತನಗೆ ಉಳಿಗಾಲವೇ ಇಲ್ಲ....' ಎಂದು ಏನೇನೋ ಯೋಚಿಸುತ್ತಾ ರೂವಾರಿಗಳು ಕೆಲಸ ಮಾಡುವ ಕಡೆ ಸುತ್ತುತ್ತಾ ಬರುತ್ತಿದ್ದ. ಆರೋಗಣೆಯ ಸಮಯವಾಗಿ ರೂವಾರಿಗಳೆಲ್ಲ ಕೆಲಸ ನಿಲ್ಲಿಸಿ ಆರೋಗಣೆಗೆಂದು ಹೊರಟರು.

ಅರಮನೆಯ ಊಳಿಗದವನೊಬ್ಬನು ಅರಮನೆಯ ದ್ವಾರದಿಂದ ಜೊತೆಯಲ್ಲಿಯೇ ಇದ್ದುದರಿಂದ ವಾಸ್ತವವಾಗಿ ತಿರುವರಂಗದಾಸನಿಗೆ ಓಡಾಟದಲ್ಲಿ ಯಾವ ನಿರ್ಭಂಧಕ್ಕೂ ಅವಕಾಶವಾಗಲಿಲ್ಲ. ಅವನು ರೂವಾರಿಗಳು ಕಡೆದು ನಿಲ್ಲಿಸಿದ್ದ ವಿವಿಧ ಭಂಗಿಗಳ ಸ್ತ್ರೀ ವಿಗ್ರಹಗಳನ್ನು ನೋಡಿ ಬೆರಗಾಗಿ ಬಿಟ್ಟಿದ್ದ. ಅವುಗಳನ್ನು ದೂರದಿಂದ ನೋಡಿದ. ಹತ್ತಿರದಿಂದ ನೋಡಿದ. ಅವುಗಳ ಕಪೋಲಗಳ ಮೇಲೆ, ಕುಂಭಗಳ ಮೇಲೆ, ಕಟಿ, ಜಘನಗಳ ಮೇಲೆ ಕೈಯಾಡಿಸಿದ. "ಸೊಗಸು, ಸೊಗಸು" ಎಂದು ಪಿಸುಗುಟ್ಟಿಕೊಂಡ. ಅವನಿಗೆ ಅದರಿಂದ ದೊರೆತ ಆನಂದದಲ್ಲಿ ಭೋಜನವೇ ಬೇಕಾಗಲಿಲ್ಲ. ಶಿಬಿರದಿಂದ ಶಿಬಿರಕ್ಕೆ ಸಾಗಿದ. ಬಿಲ್ಲುಬಾಗಿಸಿ ಆಕಾಶದತ್ತ ಅಂಬನ್ನು ಬಿಡಲೆಳೆಸಿರುವ ವೀರಯೋಧೆಯ ವಿಗ್ರಹದಲ್ಲಿನ ಕುಚಾಗ್ರಗಳು ಸಹ ಅಂಬಿನ ಗುರಿ ಕೇಂದ್ರವನನ್ನೇ ನೋಡುತ್ತಿವೆ ಎಂದು ಭ್ರಮೆ ಪಟ್ಟ. ಕಪಿ, ವೃಶ್ಚಿಕಗಳು ತನ್ನಂತರಂಗದ ಬಯಕೆಗಳನ್ನೇ ಪೂರೈಸಿವೆಯೆಂದು, ಚೇಷ್ಟೆ ಮಾಡುವ ಕಪಿಗೂ, ಕುಟುಕುವ ವೃಶ್ಚಿಕಕ್ಕೂ ತನ್ನ ಕೃತಜ್ಞತೆಯನ್ನು ಸಮರ್ಪಿಸಿದ. ಅವನು ಸ್ಥಪತಿಯ ಶಿಬಿರಕ್ಕೆ ಬಂದಾಗ ಅಲ್ಲೊಬ್ಬ ಕಿರುವಯಸ್ಸಿನ ಯುವಕ ಮೂಲದೇವ ವಿಗ್ರಹವನ್ನು ಪರೀಕ್ಷಿಸುತ್ತಿದ್ದ. ತನ್ನ ಬೆರಳ ಗೆಣ್ಣೆನಿಂದ ಆ ವಿಗ್ರಹದ ಅಂಗಾಂಗಗಳ ಮೇಲೆ ಬಡಿದು ಬಡಿದು ನೋಡುತ್ತಿದ್ದ. ಅದರ ಪೀಠ, ಅದರ ಕೀರಿಟ, ಅದರ ಮುಖ, ಅದರ ಎದೆ ಭಾವ ಹೀಗೆ ಒಂದೊಂದರ ಪ್ರಮಾಣವನ್ನೂ ತನ್ನ ಬೆರಳು, ಚೋಟು, ಗೇಣುಗಳಿಂದ ಅಳೆದಳೆದು ಆ ಪ್ರತಿಮಾ ಲಕ್ಷಣದ ವ್ಯವಸ್ಥೆಯನ್ನು ತೂಗಿ ನೋಡಿದ. ಅದರ ಭುಜ, ತೋಳುಗಳು,

ತೊಡೆ, ಕಾಲು, ಪಾದ ಎಲ್ಲವೂ ಅವನ ಅಳತೆಗೊಳಗಾಯಿತು. ಆ ಯುವಕ ಈ ಪ್ರತಿಮೆಯಲ್ಲಿ ತೋರುತ್ತಿದ್ದ ಆಸಕ್ತಿಯನ್ನು ನೋಡಿದ ತಿರುವರಂಗದಾಸ, "ನೀನು ಈ ಸ್ಥಪತಿಯ ಶಿಷ್ಯನೋ ?" ಎಂದು ಕೇಳಿದ.

"ನಾನು ಯಾರ ಶಿಷ್ಯನೂ ಅಲ್ಲ. ಶಿಲ್ಪ ನನ್ನ ರಕ್ತಗತ."

"ಹಾಗೇನು ? ಹಾಗಾದರೆ ನೀನು ಇಲ್ಲಿ ರೂವಾರಿಯ ಕೆಲಸ ಮಾಡುತ್ತಿದ್ದೀಯೇನು ?"

"ಇಲ್ಲ. ನಾನು ಇಲ್ಲಿಗೆ ಬಂದುದೇ ಇಂದು."

"ಇಲ್ಲಿಗೇಕೆ ಬಂದೆ ?"

"ನಾನು ಜೀವನದಲ್ಲಿ ಏನನ್ನೋ ಕಳೆದುಕೊಂಡಿದ್ದೇನೆ. ಅದನ್ನು ಹುಡುಕುತ್ತ ಹೊರಟಿದ್ದೇನೆ."

"ಏನದು ?"

"ಯಾರಿಗೂ ಹೇಳಬಾರದೆಂದು ನನ್ನ ತಾಯಿ ಅಪ್ಪಣೆ ಮಾಡಿದ್ದಾರೆ."

"ಯಾರಿಗೂ ಹೇಳದಿದ್ದರೆ ನೀನು ಕಳೆದುಕೊಂಡುದು ನಿನಗೆ ಸಿಗುವ ಬಗೆ ?"

"ಅದು ಸಿಗುವುದಾದರೆ ನನಗೆ ಮಾತ್ರ ಸಿಗುತ್ತದೆ. ಉಳಿದವರಿಗೆ ಅದರ ಗುರುತು ಸಿಗುವುದಿಲ್ಲ."

"ನಿಮ್ಮ ಊರು ?"

"ಅದು ನಿಮಗೇಕೆ ?"

"ಸುಮ್ಮನೆ ಕೇಳಿದೆ. ಇದೇನು ಬೆರಳು, ಚೋಟು, ಗೇಣು ಅಳತೆ ಮಾಡುತ್ತಿದೆಯಲ್ಲ ?"

"ಇದು ಪ್ರತಿಮಾಲಕ್ಷಣಕ್ಕೆ ಅನುಸಾರವಾಗಿದೆಯೆ ಇಲ್ಲವೆ ಎಂದು ತಾಳೆ ನೋಡಲು."

"ಅಂದರೆ ಇದು ಇಂತಿಷ್ಟೇ ಪ್ರಮಾಣ ಇರಬೇಕು ಎಂದು ಹೇಳಲಾಗಿದೆಯೇನು ?"

"ನಿಮ್ಮ ವೇಷ, ಲಾಂಛನ ನೋಡಿದರೆ ನೀವು ವೈದಿಕರ ಹಾಗೆ ಕಾಣುತ್ತೀರಿ. ನಿಮಗೆ ಆಗಮಶಾಸ್ತ್ರಗಳ ಪರಿಚಯವಿರಬೇಕಲ್ಲ ?"

"ಪರಿಚಯವಿಲ್ಲದೆ ಇರುತ್ತದೆಯೆ ? ನಮ್ಮ ವೃತ್ತಿಗೆ ಬೇಕಾದಷ್ಟು ಮಾತ್ರ ನಾವು ಅದರಲ್ಲಿ ಸ್ವೀಕರಿಸುತ್ತೇವೆ. ಬರೀ ವೇದ, ಶಾಸ್ತ್ರಗಳನ್ನು ಅಧ್ಯಯನ ಮಾಡುತ್ತಿದ್ದರೆ ವೃತ್ತಿಗೆ ಬಿಡುವೇ ಸಿಗುವುದಿಲ್ಲ ಅದರಿಂದ ಅರ್ಚನಾದಿಗಳಿಗೆ ಹಾಗು ಇತರ ಪೌರೋಹಿತ್ಯದ ಕಾರ್ಯಗಳಿಗೆ ಯುಕ್ತವಾದುದಷ್ಟನ್ನು ನಾವು ಕಲಿಕೆಯಲ್ಲಿ ಸೀಮಿತಗೊಳಿಸಿರುತ್ತೇವೆ."

"ಹಾಗಾದರೆ ವೈದಿಕವಾದುದೆಲ್ಲ ನಿಮ್ಮ ಸ್ವತ್ತೆಂದೂ, ಅದು ಇತರರಿಗೆ ಸಲ್ಲದೆಂದೂ ಹೇಳುವ ನೀವು ಅದರ ಪೂರ್ಣ ಸ್ವರೂಪ ತಿಳಿದಿಲ್ಲವೆ ?"

"ಮಗು, ಮಾನವ ಮೊದಲು ಬದುಕಬೇಕು. ಆ ಬದುಕಿಗೆ ಬೇಕಾದಷ್ಟು ಅವನು ಕಲಿತೇ ತೀರಬೇಕು. ಉಳಿದ ಹೆಚ್ಚಿನದು ಮಠಾಧಿಪತಿಗಳಿಗೆ ಬಿಡಬೇಕಾಗುತ್ತದೆ. ರೂವಾರಿಗಾದರೂ ಅಷ್ಟೆ ನಿಯೋಜಿಸಿದ ಕೆಲಸ ಮಾಡುವ ಕೈ ಚಳಕ ಇದ್ದರೆ ಸಾಕು. ಈ ಶಾಸ್ತ್ರವಿಚಾರವೆಲ್ಲ ಯಾಕೆ ?"

"ಕ್ಷಮಿಸಬೇಕು. ನಮ್ಮ ನಮ್ಮದು ಭಿನ್ನಾಭಿಪ್ರಾಯ. ನೋಡಿ, ಈ ಭವ್ಯ ದೇವಮಂದಿರ, ಇದರಲ್ಲಿ ಅಡಗಿ ಕೂಡುವ ಸಾವಿರಾರು ಶಿಲ್ಪಗಳು, ಎಲ್ಲವನ್ನೂ ಕಲ್ಪಿಸಿ ರೂಪಿಸಬೇಕಾದರೆ ಬರೀ ಹೊಟ್ಟೆ

ಹೊರೆಯಲು ಕಲಿತ ಕಲ್ಲುಕುಟಿಕತನದಿಂದ ಸಾಧ್ಯವಿಲ್ಲ. ದೇವರಿಗೆ, ಮಾನವರಿಗೆ ನಡುವೆ ಸಂಬಂಧ ಕಲ್ಪಿಸಿ ಆ ಭಗವಂತನ ಸಾಕ್ಷಾತ್ಕಾರದ ಆನಂದವನ್ನು ತಂದುಕೊಡಬೇಕಾದರೆ ಶಿಲ್ಪಿವರ್ಗ ಸರ್ವಜ್ಞರಾಗಬೇಕೆ ವಿನಾ ಬರೀ ಹೊಟ್ಟೆಪಾಡಿನ ಗಳಿಕೆಯವರಾಗಬಾರದು.''

"ಚೋಟುದ್ದದ ನಿನ್ನ ನಾಲಿಗೆ ತುಂಬಾ ಹರಿತವಾಗಿರುವಂತೆ ಕಾಣುತ್ತದೆಯಲ್ಲ ?''

"ಸತ್ಯಸಂಗತಿ ಅರುಹಲು ನಾಲಿಗೆ ಚೋಟು ಉದ್ದ ಇದ್ದರೂ ಅದನ್ನು ಮೊಳ ಉದ್ದ ಮಾಡಬಹುದು; ಕತ್ತಿಯಷ್ಟೇ ಹರಿತ ಮಾಡಬಹುದು ಸ್ವಾಮಿ. ಹಾಗಂತ ನಮ್ಮ ತಾಯಿ ಹೇಳಿದ್ದಾರೆ.''

"ನಿಮ್ಮ ತಂದೆ ಯಾರು ?''

"ಆ ವಿಷಯ ನಿಮಗೇಕೆ ?''

"ಓಹೋ, ಹಾಗಾದರೆ ನೀನೊಬ್ಬ ಕಲಿಯುಗದ ಸತ್ಯಕಾಮ.''

"ನಿಮ್ಮ ಬಾಯಲ್ಲಿ ಅಣಕ ನಿರೀಕ್ಷಿಸಿರಲಿಲ್ಲ. ದಯವಿಟ್ಟು ಕ್ಷಮಿಸಿ. ನಾನು ಆ ಬಗೆಯ ಯಾವ ಪಟ್ಟಿಯನ್ನೂ ಧರಿಸಿಕೊಂಡು ಬಂದಿಲ್ಲ. ತಮ್ಮ ಕೆಲಸ ತಾವು ನೋಡಿಕೊಳ್ಳಬಹುದು.''

"ಏನಯ್ಯ ಇದು. ಏನೋ ಹುಡುಗ ಜಾಣನಾಗಿ ಕಾಣುತ್ತಾನೆ ಎಂದರೆ ತಲೆಯೆಲ್ಲ ಹರಟುತ್ತೀಯೆ? ನಿನಗೆ, ದೊಡ್ಡೋರು ಚಿಕ್ಕೋರು ಎನ್ನುವ ತಾರತಮ್ಯ ಜ್ಞಾನವಿಲ್ಲವೆ ?''

"ಅದನ್ನು ತಮ್ಮಿಂದ ಕಲಿಯಬೇಕಾಗಿಲ್ಲ.

"ಲೇ, ಇವನನ್ನು ಯಾರೋ ಒಳಕ್ಕೆ ಬಿಟ್ಟವರು ? ದಬ್ಬಿರೋ ಆಚೆಗೆ'' ಎಂದು ತಿರುವರಂಗದಾಸ ಆರ್ಭಟಿಸಿದ. ಅವನ ಅಬ್ಬರಕ್ಕೆ ಜನ ಸೇರಿದರು. ಅಷ್ಟರಲ್ಲಿ ಸ್ಥಪತಿ ಬಂದ. ಬಿಕ್ಕಟ್ಟಿದೆಯೆಂಬುದು ಅವನಿಗೆ ದೂರದಿಂದಲೇ ಗೋಚರಿಸಿತ್ತು. ಒಳಗೆ ಬಂದವನೇ, "ಇಲ್ಲಿ ಯಾಕೆ ಹೀಗೆ ಜನ ಸಮೂಹ ? ನಿಮ್ಮ ನಿಮ್ಮ ಕೆಲಸ ನೋಡಿಕೊಳ್ಳಿ'' ಎಂದ.

"ನನ್ನ ಕೆಲಸ ನಾನು ನೋಡಿಕೊಳ್ಳಬೇಕಂತೆ. ಈ ಚೋಟುದ್ದದವನು ಹೇಳುತ್ತಾನಲ್ಲ'' ಎಂದು ಗೊಣಗಿದ ತಿರುವರಂಗದಾಸ.

"ತಾವು ?'' ಸ್ಥಪತಿ ಕೇಳಿದ.

"ನಾನು ಮಹಾರಾಜರ ಮಾವ.''

"ಓಹೋ, ರಾಣಿ ಲಕ್ಷ್ಮೀದೇವಿಯವರ ಸಾಕುತಂದೆಯವರು. ರಾಣಿಯವರು ತಮ್ಮ ನಿಷ್ಠೆ ನೇಮಗಳ ಬಗೆಗೆ ತುಂಬಾ ಹೇಳಿದ್ದಾರೆ. ತಮ್ಮನ್ನು ನೋಡುವ ಭಾಗ್ಯ ಒದಗಿ ಬಂದಿರಲಿಲ್ಲ. ತಾವು ನಿನ್ನೆ ಇಲ್ಲಿಗೆ ಬಿಜಯ ಮಾಡಿಸಿದಿರಿ ಎಂದು ತಿಳಿಯಿತು. ಕುಶಲವೆ ? ಕೂಡಿ'' ಎಂದು ಸಹಜ ಸೌಜನ್ಯದಿಂದ ಸ್ಥಪತಿ ಹೇಳಿದ.

"ನಾನು ತಮ್ಮನ್ನು ಕಾಣಲೆಂದೇ ತಮ್ಮ ಶಿಬಿರಕ್ಕೆ ಬಂದೆ. ನೀವು ದೇವಲೋಕವನ್ನೇ ಕಲ್ಪಿಸಿ ನಿರ್ಮಿಸಿರುವ ದೇವ ಶಿಲ್ಪಿ. ತಮ್ಮ ನಿರಹಂಭಾವವನ್ನು ನಾನು ಪಟ್ಟಮಹಾದೇವಿಯವರ ಬಾಯಲ್ಲಿ, ಶ್ರೀಮದಾಚಾರ್ಯರ ಬಾಯಲ್ಲಿ, ಹಾಗೂ ನನ್ನ ಮಗಳ ಬಾಯಲ್ಲಿ ಕೇಳಿದ್ದೇನೆ. ಎಷ್ಟಾದರೂ ತುಂಬಿದ ಕೊಡ ತುಳುಕುವುದಿಲ್ಲ. ಅಂತಹುದರಲ್ಲಿ ಈ ಪೋರ ಸಲಿಗೆ ಕೊಟ್ಟೆನೆಂದು ಬಾಯಿಗೆ ಬಂದಂತೆ ಹರಟುತ್ತಾನೆ.'' ಎಂದು ತೀಕ್ಷ್ಣವಾಗಿ ಆ ಯುವಕನತ್ತ ನೋಡಿ ಅಲ್ಲಿದ್ದ ಒಂದು ಆಸನದಲ್ಲಿ ಕುಳಿತ.

“ಇರಲಿ. ವಿಚಾರಿಸೋಣ. ಯೌವನದ ಹುಮ್ಮಸ್ಸಿನಲ್ಲಿ ಒಂದೆರಡು ಮಾತು ಮಕ್ಕಳು ಹೆಚ್ಚಾಗಿ ಆಡಿಬಿಡಬಹುದು. ಹಿರಿಯರಾದ ನಾವೇ ಕ್ಷಮಿಸಬೇಕು. ಬಾ ಮಗು. ನೀನೂ ಕುಳಿತುಕೋ. ನೀವಿಬ್ಬರೂ ಈ ಶಿಬಿರದಿಂದ ಸಂತೋಷದಿಂದ, ಮನಃಕ್ಲೇಶವಿಲ್ಲದೆ ಹೊರಗೆ ಹೋಗಬೇಕು. ಏನಾಯಿತು ?”

“ಅವರನ್ನೇ ಕೇಳಿ” ಎಂದು ಸಂಕೋಚದಿಂದ ನಿಂತೇ ಆ ಯುವಕ ಹೇಳಿದ.

“ನೀನೇ ಹೇಳು. ಅದು ಸರಿಯಿಲ್ಲದಿದ್ದರೆ ನಾನು ಸರಿಪಡಿಸುತ್ತೇನೆ” ಎಂದ ತಿರುವರಂಗದಾಸ. ಆ ಯುವಕ ತಿರುವರಂಗದಾಸನ ಪ್ರವೇಶವಾದಾಗಿನಿಂದ ಏನೇನು ನಡೆಯಿತೋ ಅದನ್ನು ಯಥಾವತ್ತಾಗಿ ಹೇಳಿ, “ನನ್ನನ್ನು ಸತ್ಯಕಾಮನೆಂದು ವ್ಯಂಗ್ಯವಾಗಿ ಆ ಹಿರಿಯರು ಆಡಬಹುದೆ? ನಾನು ಹುಡುಗ. ಬೈಯಲಿ, ಹೊಡೆಯಲಿ, ಉಗುಳಲಿ, ಸಹಿಸಿಕೊಳ್ಳುತ್ತೇನೆ. ಪರಮಪವಿತ್ರರಾದ ನನ್ನ ತಾಯಿ, ತಂದೆಗಳ ಬಗೆಗೆ ಇವರ ಮಾತಿನಲ್ಲಿ ಅವಹೇಳನದ ಧ್ವನಿ ಮೂಡಬಹುದೆ ? ತಾವೇ ಹೇಳಿ” ಎಂದು ಸಮಸ್ಯೆಯನ್ನು ಮುಂದಿಟ್ಟ

“ಹೌದು. ತಾನಾರೆಂದು ಹೇಳದ, ತನ್ನ ಊರಾರವುದೆಂದು ಹೇಳದ ಈ ತಿರುಬೋಕಿಗೆ ನಾನು ಬೇರೇನು ಮರ್ಯಾದೆ ಕೊಡಬೇಕಾಗಿತ್ತು ? ನಾನೆಷ್ಟು ವೇದ, ವಿದ್ಯೆ ಕಲಿತುಕೊಳ್ಳಬೇಕು, ನಾನೆಷ್ಟು ಆಗಮಶಾಸ್ತ್ರವನ್ನು ತಿಳಿದುಕೊಳ್ಳಬೇಕು ಎಂಬುದನ್ನು ಈ ಘೋರನಿಂದ ನಾನು ಕಲಿತುಕೊಳ್ಳಬೇಕು. ಶ್ರೀಮದಾಚಾರ್ಯರ ಶಿಷ್ಯನಾಗಬೇಕಾದರೆ ಮೂಲತಃ ವಿಶೇಷ ಯೋಗ್ಯತೆ ಇರಬೇಕೆಂಬುದೂ ಈ ಹುಡುಗನಿಗೆ ತಿಳಿಯದು. ಯೌವನದ ಚಾಪಲ್ಯಕ್ಕೆ ನಾವು ಹಿರಿಯರು ತಗ್ಗಿದರೆ ಅವರು ನಮ್ಮನ್ನು ಅಡ್ಡ ನುಂಗಿ ಬಿಡುತ್ತಾರೆ ಅಷ್ಟೆ. ಅಲ್ಲಲ್ಲೇ ಈ ತಲೆಹರಟೆಯನ್ನು ಚಿವುಟಿ ಹಾಕಬೇಕು.”

“ನಾವು ಚಿವುಟಿದರೆ ಹತ್ತು ಕಡೆ ಹೊಸ ಚಿಗುರು ಮೂಡುತ್ತದೆ ಸ್ವಾಮಿ. ಅರಿವಿನ ಮೂಲಕ ಅವರೇ ಅದನ್ನು ಕಳಚಿಕೊಳ್ಳಬೇಕು. ಹೋಗಲಿ ಬಿಡಿ. ಅವನನ್ನು ಕ್ಷಮಿಸಿಬಿಡಿ. ತಾವು ಆರೋಗಣೆ ಮುಗಿಸಿಕೊಂಡು ಇತ್ತ ಬಂದಿರಬೇಕು.”

“ಇಲ್ಲ. ಬೆಳಗ್ಗೆ ಸ್ನಾನ ಆಹ್ನಿಕಾದಿಗಳನ್ನು ಮುಗಿಸಿಕೊಂಡು ಮಗಳನ್ನು ನೋಡಿ, ಕುಶಲ ಪ್ರಶ್ನೆ ಮುಗಿಸಿ, ಈ ದೇವಮಂದಿರದ ದರ್ಶನಕ್ಕಾಗಿ ಬಂದವನು ಮುಗ್ಧನಾಗಿ ಇಲ್ಲೇ ಇದ್ದು ಬಿಟ್ಟಿದ್ದೇನೆ.”

“ಪಾಪ ! ಬಹಳ ವೇಳೆಯಾಯಿತು. ತಾವು ಭೋಜನಕ್ಕೆ ದಯಮಾಡಿಸಿ” ಎಂದು ಸ್ಥಪತಿ ವಿಷಯಕ್ಕೆ ಪೂರ್ಣವಿರಾಮ ಹಾಕಿದ.

“ಲೋ ಹುಡುಗ, ನಿನ್ನ ಊಟ ಆಗಿಲ್ಲದಿದ್ದರೆ, ಬಾ. ನನ್ನ ಬಿಡಾರದಲ್ಲೇ ಹಾಕಿಸುತ್ತೇನೆ. ಪರಸ್ಥಲದವನು ಎಂದೆ” ಎಂದು ಎದ್ದು ನಿಂತ ತಿರುವರಂಗದಾಸ ಹೇಳಿದ.

“ನನ್ನದು ಆಗಿದೆ” ಎಂದು ಪುಟ್ಟ ಉತ್ತರ ಆ ಯುವಕ ಕೊಟ್ಟ

ತಿರುವರಂಗದಾಸ ಅಲ್ಲಿಂದ ಹೊರಟುಹೋದ.

“ಕೂಡು ಮಗು” ಎಂದು ಆ ಯುವಕನಿಗೆ ಆತ್ಮೀಯತೆಯಿಂದ ಹೇಳಿದ ಸ್ಥಪತಿ. ಅವನು ಕುಳಿತ. “ಹಿರಿಯನಾಗಿ ನಾನೆರಡು ಮಾತನ್ನು ಹೇಳಬಹುದೆ ಮಗು ?”

“ತಮ್ಮಂತಹ ಪ್ರಾಜ್ಞರು ಹೇಳುವ ಮಾತು ಕೇಳುವುದು ನಮ್ಮಂತಹವರಿಗೆ ಅವಶ್ಯ. ಅಪ್ಪಣೆಯಾಗಲಿ.”

“ಮತ ಭೇದವಿದ್ದರೂ ಹಿರಿಯರಲ್ಲಿ ಸ್ವಲ್ಪ ವಿನಯವಾಗಿ ವರ್ತಿಸುವುದನ್ನು ಕಲಿಯಬೇಕು ಮಗು.”

"ಎಲ್ಲರಲ್ಲಿಯೂ ವಿನಯವಾಗಿ ವರ್ತಿಸಬೇಕೆಂದು ನನ್ನ ತಾಯಿ ಹೇಳಿದ್ದಾರೆ.''

"ಅಂದಾಗ ಅವರಲ್ಲಿ ನೀನು ಸ್ವಲ್ಪ ಸಂಯಮದಿಂದ ಮಾತನಾಡಬೇಕಾಗಿತ್ತು.''

"ನಾನು ಹಾಗೆಯೇ ಮಾತನಾಡಿದೆ. ಆದರೆ ಅವರು ನನ್ನ ವಂಶದ ಮಾತು ತೆಗೆದು ವ್ಯಂಗ್ಯವಾಡಿದ್ದು ಮಾತ್ರ ನನಗೆ ಸಹಿಸಲಿಲ್ಲ. ತಮಗೂ ಸಹಿಸಲಾರದಲ್ಲವೆ ?''

"ನಾನು ನಿರ್ವಂಶನಾದ್ದರಿಂದ ನನಗೆ ಅದರ ಚಿಂತೆಯೇ ಇಲ್ಲ. ನಿನ್ನ ಮಾತನ್ನು ಒಪ್ಪಿಕೊಳ್ಳುತ್ತೇನಾದರೂ ನೀನು ಮೊದಲು ಅವರ ಸಾಮರ್ಥ್ಯದ ಬಗೆಗೆ ಎತ್ತಿ ಆಡಿದುದು ಸರಿಯಾಗಲಿಲ್ಲ''

"ಅವರ ಪ್ರಶ್ನೆ ತಿಳಿವಳಿಕೆ ಇಲ್ಲದವರ ಪ್ರಶ್ನೆಯಾಗಿತ್ತು. ಮೂಲತಃ ಆತನ ಕೆದಕಿದ ಪ್ರಶ್ನೆಗಳೇ ನನಗೇ ಹಿಡಿಸಲಿಲ್ಲ. ಅದರಿಂದ ನಾನು ಆ ಸಮಯದಲ್ಲಿ ಹಾಗೆ ಆಡಿಬಿಟ್ಟೆ. ಈಗ ಅದನ್ನು ಆಡಬಾರದಾಗಿತ್ತು ಅನ್ನಿಸುತ್ತದೆ. ಬೇಕಾದರೆ ಅವರ ಕ್ಷಮಾಯಾಚನೆ ಮಾಡುತ್ತೇನೆ.''

"ಆ ಮನೋಭಾವವಿದೆಯಲ್ಲ ಅಷ್ಟೇ ಸಾಕು. ನಿನ್ನ ಮಾತಿನಿಂದ ನೀನು ರೂವಾರಿ ಎಂದು ತಿಳಿಯಿತು. ನೀನು ಮುಂಚೆಯೇ ಇಲ್ಲಿಗೆ ಬಂದಿದ್ದರೆ ನಿನ್ನ ಕೈಯಲ್ಲಿಯೂ ಏನಾದರೂ ಕೆತ್ತನೆಯನ್ನು ಮಾಡಿಸಬಹುದಿತ್ತು.''

"ಈಗಲೂ ಏನಾದರೂ ಕೆಲಸವಿದ್ದರೆ ಮಾಡುತ್ತೇನೆ.''

"ನೋಡೋಣ. ನಾಳೆ ಬೆಳಿಗ್ಗೆ ನನ್ನನ್ನು ಕಾಣುವೆಯಾ ?''

"ಆಗಲಿ.''

"ಎಲ್ಲಿದ್ದೀಯೆ ?''

"ಇನ್ನೂ ಎಲ್ಲೂ ಸ್ಥಳ ಮಾಡಿಕೊಂಡಿಲ್ಲ.''

"ಮತ್ತೆ ಊಟ ಆಯಿತು ಎಂದೆ ?''

"ಊರಿಗೆ ಬಂದೆ. ದಾರಿಯಲ್ಲಿ ಯಗಚಿಯಲ್ಲಿ ಮಿಂದೆ. ಈ ಉತ್ಸವಕ್ಕೆ ವ್ಯವಸ್ಥೆ ಆಗಿರುವ ಸತ್ರಸಾಲೆಯಲ್ಲಿ ಊಟ ಮಾಡಿದೆ. ಇತ್ತ ಬಂದೆ. ಮಂದಿರವನ್ನೆಲ್ಲ ನೋಡಿದೆ. ಹಾಗೆಯೇ ಕೆತ್ತನೆಯ ಕೆಲಸ ಸಾಗುತ್ತಿದ್ದ ಸ್ಥಳಗಳನ್ನೆಲ್ಲ ನೋಡಿಕೊಂಡು ನಿಮ್ಮ ಶಿಬಿರದಲ್ಲಿನ ಈ ಮೂರ್ತಿಯನ್ನು ಪರಿಶೀಲಿಸುತ್ತಿದ್ದೆ. ಅಷ್ಟರಲ್ಲಿ ಆ ನಾಮಧಾರಿ ಬಂದರು. ಉಳಿದುದೆಲ್ಲ ನಿಮಗೆ ತಿಳಿದಿದೆ.''

"ನಿನ್ನ ಸಾಮಾನು ?''

"ಅದು ನನ್ನ ಈ ಚೀಲದಲ್ಲಿ ಇದೆ. ಆ ಬದಿಯಲ್ಲಿಟ್ಟಿದ್ದೇನೆ.''

"ಅದೇನು ನೀನು ಈ ಪ್ರತಿಮೆಯನ್ನು ಅಷ್ಟೊಂದು ಪರಿಶೀಲಿಸಿದುದು ?''

"ಇದ ಪ್ರತಿಷ್ಠಾಪನೆ ಆಗುವ ಮೂಲ ಸ್ವಾಮಿಯ ವಿಗ್ರವಲ್ಲವೆ ? ಇದು ಎಲ್ಲಾ ಲಕ್ಷಣಗಳನ್ನೂ ಹೊಂದಿಲ್ಲದಿದ್ದರೆ ಇದನ್ನು ಮಾಡಿದವರಿಗೆ, ಮಾಡಿಸಿದವರಿಗೆ, ಪ್ರತಿಷ್ಠಾಪಿಸಿದವರಿಗೆ ಕೆಡುಕು. ಅದರಿಂದ ನೋಡಿದೆ.''

"ಅಂದರೆ ಈ ಕೆಲಸ ನಿರ್ವಹಿಸಿದ ಇಲ್ಲಿನ ಯಾರಿಗೂ ಅದು ತಿಳಿಯದು ಎಂದು ಭಾವಿಸಿದ್ದೆಯಾ?''

"ಅಂತಹ ಮೂರ್ಖ ನಾನಲ್ಲ. ಕಲಿಯುವ ಆಸೆ. ಪರೀಕ್ಷೆಯು ಕಲಿಕೆಯ ಒಂದು ಅಂಗವಲ್ಲವೆ?''

"ಅಂದರೆ ನೀನು ಇದನ್ನು ಕಡೆದವರ ಯೋಗ್ಯತೆಯನ್ನು ಪರೀಕ್ಷಿಸಲಿಲ್ಲ. ಬರೀ ವಿಗ್ರಹವನ್ನು ಪರೀಕ್ಷಿಸಿದೆ ಎಂದೋ ನಿನ್ನ ಭಾವ ?"

"ನನ್ನ ಅರಿವು ಸ್ಫುಟಗೊಳ್ಳಲು ಪರೀಕ್ಷೆ ಅವಶ್ಯಕ ಎನ್ನಿಸಿತು."

ಆ ಸಮಯಕ್ಕೆ ಸರಿಯಾಗಿ ಪಟ್ಟಮಹಾದೇವಿ, ಉದಯಾದಿತ್ಯ ಮತ್ತು ಕುವರ ಬಿಟ್ಟಿಯಣ್ಣ ಅಲ್ಲಿಗೆ ಬಂದರು. ಸ್ಥಪತಿ ಎದ್ದು ನಿಂತು ಕರಮುಗಿದು ಬಾಗಿದ.

ಆ ಯುವಕನೂ ಎದ್ದು ಸಂಕೋಚದಿಂದ ಹಿಂದೆ ಸರಿದು ನಿಂತ.

"ಯಾರು ಈ ಯುವಕ ?" ಎಂದು ಶಾನ್ತಲದೇವಿ ಕೇಳಿದಳು.

"ಅಪರಿಚಿತ. ಇಂದೇ ಬಂದಿದ್ದಾನೆ. ಶಿಲ್ಪದಲ್ಲಿ ತುಂಬಾ ಆಸಕ್ತಿ ಇರುವಂತೆ ಕಾಣುತ್ತದೆ."

ಶಾನ್ತಲದೇವಿ ಅವನನ್ನು ಅಡಿಯಿಂದ ಮುಡಿಯವರೆಗೂ ವೀಕ್ಷಿಸಿದಳು. "ಈ ಕಿರಿಯ ವಯಸ್ಸಿನಲ್ಲಿಯೇ ಆಸಕ್ತಿ. ಅಂದರೆ ಅದು ರಕ್ತಗತವಾದ ಆಸಕ್ತಿಯೇ ಇರಬೇಕು. ನಿನ್ನ ಸ್ಥಳ ಯಾವುದು ಮಗು ?"

"ಕ್ಷಮಿಸಬೇಕು. ನನ್ನ ಸ್ವವಿಚಾರ ದಯಮಾಡಿ ಕೇಳಬೇಡಿ."

ಶಾನ್ತಲದೇವಿ ನಕ್ಕು ಸ್ಥಪತಿಯತ್ತ ನೋಡಿದಳು. ನಂತರ, "ರೂವಾರಿಗಳಿಗೆ ಇದೊಂದು ಅಂಟುಜಾಡ್ಯವೆಂದು ಕಾಣಿಸುತ್ತದೆ. ಇಷ್ಟಕ್ಕೂ ನಮಗೆ ಊರು, ಮನೆತನ ಇತ್ಯಾದಿಗಳು ತಿಳಿದು ಆಗಬೇಕಾದುದೇನಿದೆ ? ನಾವೇನಿದ್ದರೂ ಕೃತಿಯಿಂದ ಮನುಷ್ಯನ ಸಾಮರ್ಥ್ಯವನ್ನು ಅರಿಯುವವರು ತಾನೆ? ಏನಾದರೂ ಕೆಲಸ ಕೊಡುವ ಯೋಚನೆ ಮಾಡಿದ್ದೀರಾ ?"

"ನೋಡಬೇಕು. ನಾಳೆ ಬಾ ಎಂದು ಹೇಳಿದ್ದೇನೆ. ಅಷ್ಟರಲ್ಲಿ ಏನು ಕೆಲಸ ಉಳಿದಿದೆಯೆಂದು ಒಂದು ಸಲ ಅರಿತುಕೊಳ್ಳುತ್ತೇನೆ."

"ಸರಿ. ಹಾಗೆಯೇ ಮಾಡಿ."

"ಒಂದು ವಿಷಯವನ್ನು ಪಟ್ಟಮಹಾದೇವಿಯವರಲ್ಲಿ ಬಿನ್ನವಿಸಿಕೊಳ್ಳಬೇಕು. ಈ ಯುವಕನಿಗೂ ಮಹಾಸನ್ನಿಧಾನದ ಶ್ವಶುರರಿಗೂ ಕೊಂಚ ಮಾತುಕತೆ, ವಾಗ್ವಾದ ನಡೆದಿದೆ. ಅದು ಬಣ್ಣ ತಳೆದು ತಮ್ಮ ಸನ್ನಿಧಾನಕ್ಕೆ ಮುಟ್ಟುವುದರೊಳಗೆ ಅದೇನೆಂಬುದು ತಿಳಿದಿದ್ದರೆ ಒಳಿತು. ಹೇಗೆ ಅಪ್ಪಣೆ ಕೊಡಿಸಿದರೆ ಹಾಗೆ" ಎಂದ ಸ್ಥಪತಿ.

"ನೀವೆ ಹೇಳುತ್ತೀರಾ ? ಇಲ್ಲ ಆ ಯುವಕ ಹೇಳುತ್ತಾನೋ !"

"ಹೇಗಾದರೂ ಸರಿ."

"ಏನು ಮಗು ? ಏನು ಮಾಡುತ್ತೀಯೆ ?"

"ನನಗೆ ರಾಜ–ರಾಣಿಯರ ಹತ್ತಿರ ಮಾತನಾಡುವ ರೀತಿ ಗೊತ್ತಿಲ್ಲ. ಅವರೇ ಹೇಳಲಿ. ಅವರಿಗೆ ಎಲ್ಲ ಗೊತ್ತು" ಎಂದು ಆ ಯುವಕ ಹೇಳಿದ.

"ರಾಜ–ರಾಣಿಯರೂ ಮನುಷ್ಯರೇ ಮಗು. ನಿಮ್ಮ ತಂದೆ ತಾಯಿ ಹತ್ತಿರ ಮಾತನಾಡುವುದಿಲ್ಲವೆ? ಹಾಗೆಯೇ ಅವರ ಹತ್ತಿರವೂ ಮಾತನಾಡಬಹುದು" ಎಂದಳು ಶಾನ್ತಲದೇವಿ.

“ಏನೋ !’’ ಎಂದು ಯುವಕ ತಲೆತಗ್ಗಿಸಿದ.

“ಸರಿ, ನೀವೆ ಹೇಳಿ ಸ್ಥಪತಿಗಳೆ’’ ಎಂದಳು ಶಾನ್ತಲದೇವಿ.

“ನಿಂತೇ ಮಾತು ಸಾಗಿದೆ. ಪಟ್ಟಮಹಾದೇವಿಯವರು, ಅರಸರು, ಡಣ್ಣಾಯಕರು ಮಂಡಿಸಿದರೆ......’’ ಎಂದು ಮಾತು ನಿಲ್ಲಿಸಿದ ಸ್ಥಪತಿ.

ಅವರು ಮೂವರೂ ಕುಳಿತರು. ಸ್ಥಪತಿ ತನಗೆ ತಿಳಿದುದೆಲ್ಲವನ್ನೂ ಚಾಚೂ ಬಿಡದೆ ಹೇಳಿದ.

“ಇವರು ಹೇಳಿದ್ದೆಲ್ಲ ಸರಿ ತಾನೆ ಮಗು ?’’

ಅವನು ಸರಿ ಎಂಬಂತೆ ತಲೆ ಆಡಿಸಿದ.

“ಸ್ಥಪತಿಗಳೆ, ನೀವೆಂದಂತ ನಮಗೆ ಈ ವಿಷಯ ಮೊದಲೇ ತಿಳಿದುದು ಒಳಿತಾಯಿತು. ಅವರ ಸ್ವಭಾವವೇ ಹಾಗೆ. ಸ್ವಲ್ಪ ಧೋರಣೆಯಿಂದಲೇ ವರ್ತಿಸುತ್ತಾರೆ. ಅವರನ್ನು ಅಸಮಾಧಾನಗೊಳಿಸದೆ, ಹೆಚ್ಚು ಮಾತಿಗೆ ಅವಕಾಶ ಕೊಡದೆ ಸುಲಭದಲ್ಲಿ ನಿವಾರಿಸಿಕೊಳ್ಳುವುದು ಜಾಣತನ. ನಿಮ್ಮ ರೂವಾರಿಗಳಿಗೆಲ್ಲ ಸೂಕ್ಷ್ಮ ತಿಳಿಸಿ ಬಿಡಿ.’’

“ಅಪ್ಪಣೆ.’’

“ನಾವುಗಳು ಇಲ್ಲಿಗೆ ಬಂದಾಗ ಅದೇನೋ ಪರೀಕ್ಷೆ ಅಂತ ನೀವಿಬ್ಬರೂ ಮಾತನಾಡುತ್ತಿದ್ದಂತೆ ಕೇಳಿಸಿತ್ತು. ಏನು ಪರೀಕ್ಷೆ ?’’

“ಈ ಕೇಶವನ ವಿಗ್ರಹದ ಪರೀಕ್ಷೆಯ ವಿಷಯ.’’

“ಇದು ಬರೀ ಕೇಶವನಲ್ಲ. ಚೆನ್ನಕೇಶವ. ಎಂತಹ ಮುದ್ದಾಗಿದ್ದಾನೆ ಸ್ವಾಮಿ. ಅವನದಿನ್ನೇನು ಪರೀಕ್ಷೆ. ನೀವೆ ಸ್ವತಃ ಅದನ್ನು ಜೀವಂತವೆನಿಸುವಂತೆ ಕಡೆದಿರುವಾಗ, ಈಗ ಪರೀಕ್ಷೆಯ ಮಾತೇಕೆ ?’’

“ಪರೀಕ್ಷೆ ಆ ದೃಷ್ಟಿಯಿಂದ ಅಲ್ಲ. ಶಿಲ್ಪಶಾಸ್ತ್ರದಲ್ಲಿ ಪ್ರತಿಮಾಲಕ್ಷಣವನ್ನು ನಿಖರವಾಗಿ ತಿಳಿಸಲಾಗಿದೆ. ಅದಕ್ಕೆ ಭಿನ್ನವಾದ ರೀತಿಯಲ್ಲಿ ರೂಪಿತವಾಗಿ ಪ್ರತಿಷ್ಠಾಪಿತವಾದರೆ ಅದನ್ನು ಕಡೆದವರಿಗೆ, ಕಡೆಯಿಸಿದವರಿಗೆ, ಪ್ರತಿಷ್ಠಾಪಿಸಿದವರಿಗೆ ಕೆಡುಕೆಂದು ತಿಳಿಸಲಾಗಿದೆ. ಈ ಪ್ರತಿಮೆ ಆ ಲಕ್ಷಣಗಳನ್ನೆಲ್ಲಾ ಒಳಗೊಂಡಿದೆಯೆ ಇಲ್ಲವೆ ಎಂಬುದನ್ನು ತನ್ನ ತಿಳುವಳಿಕೆಗಾಗಿ ಪರೀಕ್ಷಿಸಿದನಂತೆ.’’

“ನಿಮ್ಮ ಅಭಿಪ್ರಾಯವೇನು ?’’

“ಎಲ್ಲವನ್ನೂ ಪರಿಶೀಲಿಸಿ ಯುಕ್ತರೀತಿಯಲ್ಲಿಯೇ ಮಾಡಿದ್ದೇನೆ.’’

“ಅಂದ ಮೇಲೆ ಅದನ್ನು ಮತ್ತೆ ಪರಿಶೀಲಿಸಿ ನೋಡುವ ಧೈರ್ಯ ಬೇರೆ ಯಾವ ರೂವಾರಿಗೆ ಇರಲು ಸಾಧ್ಯ ?’’ ಎಂದು ಶಾನ್ತಲದೇವಿ ತೀರ್ಮಾನವನ್ನೇ ಹೇಳಿದಳು.

“ಆದರೂ ಮನುಷ್ಯ ಮನುಷ್ಯನೇ ಅಲ್ಲವೆ ?’’ ಎಂದ ಉದಯಾದಿತ್ಯ.

“ಏನು ಹಾಗೆಂದರೆ ?’’ ಶಾನ್ತಲದೇವಿ ಪ್ರಶ್ನಿಸಿದಳು.

“ನಡೆಯುವವರು ಎಡುವುವ ಸಾಧ್ಯತೆ ಇದೆಯೆಂಬ ತತ್ವ ಸರ್ವಮಾನ್ಯವಲ್ಲವೆ ?’’

“ಅಂದರೆ ಸ್ಥಪತಿಗಳೂ ತಪ್ಪು ಮಾಡಿರಬಹುದು ಎಂತಲೆ ?’’

"ಆ ಸಾಧ್ಯತೆ ಇರಬಹುದೂಂತ."

"ಅಂದರೆ ಆ ಯುವಕನ ಅಭಿಪ್ರಾಯವನ್ನು ಕೇಳಬೇಕೂಂತಲೆ ?"

"ಕೇಳಿದರೆ ತಪ್ಪೇನು ? ಸ್ಥಪತಿಗಳಂತೂ ಆಕ್ಷೇಪಿಸಲಾರರು ಎಂದು ಭಾವಿಸಿದ್ದೇನೆ."

"ಅದಕ್ಕೇನು ? ಹೇಳಲಿ. ಸತ್ಯ ಯಾರ ಬಾಯಲ್ಲಿ ಬಂದರೂ ಸತ್ಯವೇ ತಾನೆ ?" ಎಂದ ಸ್ಥಪತಿ.

ಶಾನ್ತಲದೇವಿ ಯುವಕನತ್ತ ನೋಡಿದಳು.

ಅವನು ಒಮ್ಮೆ ಶಾನ್ತಲದೇವಿಯನ್ನೂ ಮತ್ತೊಮ್ಮೆ ಸ್ಥಪತಿಯನ್ನೂ ನೋಡಿದ. ಕೂಡಲೇ ಉತ್ತರಿಸಲಿಲ್ಲ. ಆಮೇಲೆ, "ನನಗೆ ಪರಿಶೀಲನೆ ನಡೆಸಲು ಸ್ವಲ್ಪ ಅವಕಾಶ ನೀಡಬೇಕು. ನನ್ನ ಸ್ವಂತಕ್ಕೆ ಪರಿಶೀಲಿಸಿಕೊಳ್ಳೋಣ ಎಂದು ಯೋಚಿಸಿದ್ದೆ. ಆದರೆ ಇದು ಈಗ ಅರಮನೆಯವರೆಗೂ ಮುಟ್ಟಿಬಿಟ್ಟದೆ ಎಂದ ಮೇಲೆ ಆತುರದ ಮಾತು ಯಾವುದನ್ನೂ ನಾನು ಆಡಬಾರದು. ದಯಮಾಡಿ ನಾಳಿನ ಹಗಲಿನವರೆಗೆ ನನಗೆ ಅವಕಾಶ ನೀಡಬೇಕು" ಎಂದು ತುಂಬಾ ವಿನಯದಿಂದ ಆದರೂ ದೃಢತೆಯಿಂದ ಹೇಳಿದ.

"ಹಾಗೆಯೇ ಮಾಡು ಮಗು" ಎಂದಳು ಶಾನ್ತಲದೇವಿ.

ಕೂಡಲೇ ಯಾರೂ ಏನೂ ಮಾತನ್ನೂ ಆಡಲಿಲ್ಲ.

"ನನ್ನದೊಂದು ಬಿನ್ನಹವಿದೆ" ಎಂದ ಸ್ಥಪತಿ.

"ಹೇಳಿ. ನಿಮಗೂ ಸಂಕೋಚವೆ ?"

"ಹಾಗೇನಿಲ್ಲ. ದೇವಮಂದಿರದ ಮುಖದ್ವಾರದ ಮೇಲೆ ಎಡಭಾಗದಲ್ಲಿ ನಾನು ಬಿಟ್ಟಿರುವ ಸ್ಥಳದಲ್ಲಿ ಇನ್ನೂ ಏನನ್ನು ಕೂಡಿಸಬೇಕೆಂದು ನಿರ್ಣಯಿಸಿಲ್ಲ. ಈಗ ಸನ್ನಿಧಾನ ನನ್ನ ಯೋಚನೆಗೆ ಒಪ್ಪಿಗೆ ಕೊಟ್ಟರೆ ಅದನ್ನು ರೂಪಿಸಿ ಜೋಡಿಸಿ ಬಿಡುತ್ತೇನೆ."

"ಏನನ್ನು ಕೂಡಿಸಬೇಕೆಂದು ಯೋಚಿಸಿದ್ದೀರಿ ?"

"ಅಲ್ಲಿ ಮಹಾಸನ್ನಿಧಾನ ಮತ್ತು ಪಟ್ಟಮಹಾದೇವಿಯವರು ಜೊತೆಗೆ ಮಂಡಿಸಿರುವ ರಾಜಸಭೆಯ ಒಂದು ಸಾಂಕೇತಿಕ ದೃಶ್ಯವನ್ನು ರೂಪಿಸಬೇಕೆಂಬುದು ನನ್ನ ಆಸೆ. ಹಿಂದೆಯೇ ಸೂಚಿಸಿದ್ದೆ..."

"ಛೆ, ಛೆ. ಅದೆಲ್ಲ ಬೇಡ. ಮಾನವರಾದ ನಮ್ಮ ಸಂಕೇತ ದೇವಮಂದಿರದಲ್ಲಿ ಏಕೆ ?"

"ಈಗ ನಿರ್ಮಾಣವಾಗುತ್ತಿರುವ ಸೌಂದರ್ಯ ಶಿಲ್ಪ ವಿಗ್ರಹಗಳು ಹೆಚ್ಚು ಕಡಿಮೆ ಪಟ್ಟಮಹಾದೇವಿಯವರ ನೆರವಿನವೇ ಅಲ್ಲವೆ ? ಅವರದೇ ಸಾಂಕೇತಿಕ ರೂಪವಲ್ಲವೆ ?"

"ಅಲ್ಲ. ಅದಕ್ಕೆಂದೇ ನಾನು ಭಿನ್ನ ಬಿನ್ನ ಮುಖ ಆ ಭಂಗಿಗಳಿಗಿರಬೇಕೆಂದು ಹೇಳಿದೆ. ಅದು ಬರೀ ಕಲ್ಪಿತ. ಭಂಗಿಯ ಚಿತ್ರ ನಿಮ್ಮ ಕಣ್ಣಿಗೆ ಸ್ಪಷ್ಟತೆ ಕೊಡಲು ಮಾತ್ರ ನಾನು ನೆರವಾದೆ."

"ತಾವಿತ್ತ ಭಂಗಿ ಬರೀ ಶಾರೀರಿಕವಾಗಿರಲಿಲ್ಲ. ಅದು ಭಾವದಿಂದ ತುಂಬಿರುತ್ತಿತ್ತು."

"ಇರಬಹುದು. ಅವೆಲ್ಲ ನಿಮ್ಮ ಕಲ್ಪನೆಯ ನೆರವಿಗೆ ಮಾತ್ರ. ಅದರಿಂದ ಹೊಮ್ಮಿರುವುದು ಕಲ್ಪಿತ ಚಿತ್ರವೇ ವಿನಾ ಪ್ರತಿರೂಪವಲ್ಲ."

"ಕೊಂಚ ಮಟ್ಟಿಗೆ ಆ ಅಭಿಪ್ರಾಯ ಸರಿಯೆನಿಸಬಹುದು. ಆದರೂ ನನ್ನ ಈಗಿನ ಸಲಹೆಗೆ ಮನ್ನಣೆ ನೀಡಬೇಕು."

"ನನ್ನ ಅಭಿಪ್ರಾಯ ಹೇಳಿದ್ದೇನೆ. ಅದು ಏನಿದ್ದರೂ ಮಹಾಸನ್ನಿಧಾನದ ಇಷ್ಟ ಹೇಗೋ ಹಾಗೆ."

"ಮಹಾಸನ್ನಿಧಾನವನ್ನು ಒಪ್ಪಿಸುವ ಕೆಲಸ ಮಾತ್ರ ತಮ್ಮ ಪಾಲಿನದು."

"ನಿಮ್ಮ ಸಲಹೆ ಸರಿಯೆನಿಸಿದರೆ ಉದಯಾದಿತ್ಯರಸರು, ನಮ್ಮ ಮರಿಡಣ್ಣಾಯಕರೇ ಈ ವಿಷಯವನ್ನು ಪ್ರಸ್ತಾಪಿಸಲಿ."

"ಸ್ಥಪತಿಗಳ ಸಲಹೆ ಬಹಳ ಸಾಧುವಾದುದು. ಇದರ ನಿರ್ಮಾಣಕ್ಕೆ ಪ್ರೇರಣೆ ಮಹಾಸನ್ನಿಧಾನದ್ದು. ಅದನ್ನು ಈ ರೂಪಕ್ಕೆ ತಂದವರು ಪಟ್ಟಮಹಾದೇವಿಯವರು. ಅದರಿಂದ ಅವರಿಬ್ಬರ ಹೆಸರು ಈ ಮಂದಿರದೊಂದಿಗೇ ಶಾಶ್ವತವಾಗಿ ಇರುವುದು ಅತ್ಯಂತ ಸಾಧು. ಅದರಿಂದ ನಾನೇ ಮಹಾಸನ್ನಿಧಾನದೊಂದಿಗೆ, ಸಚಿವರುಗಳೊಂದಿಗೆ ಮಾತನಾಡುತ್ತೇನೆ" ಎಂದ ಉದಯಾದಿತ್ಯ.

"ನನ್ನ ಸಲಹೆಗೆ ಒಪ್ಪಿಸುವುದಷ್ಟೇ ಅಲ್ಲ ನನ್ನ ಅನುಕೂಲಕ್ಕಾಗಿ ಮೊದಲು ಚಿತ್ರಿಸಿಕೊಳ್ಳಲು ಒಂದು ರಾಜ್ಯಸಭೆಯನ್ನೂ ಕೂಡಿಸಬೇಕು."

"ಅದನ್ನು ನೀವೇ ಕಲ್ಪಿಸಿಕೊಳ್ಳಬಾರದೆ ?"

"ಕಲ್ಪಿಸಿಕೊಳ್ಳಬಹುದು. ಆದರೂ ಒಮ್ಮೆ ರಾಜಸಭೆ ನೋಡಬೇಕು. ನಾನಂತೂ ಎಂದೂ ಯಾವ ರಾಜಸಭೆಯನ್ನೂ ನೋಡಿದವನೇ ಅಲ್ಲ."

"ನವ ವರುಷದಾರಂಭದಂದು ನೈಮಿತ್ತಿಕ ರಾಜಸಭೆ ಹೇಗೂ ಸೇರುತ್ತದೆ. ನೀವು ಆಹ್ವಾನಿತರಾಗಿರುತ್ತೀರಿ. ಅಷ್ಟು ಸಾಕು. ಅದಕ್ಕಾಗಿ ಮಹಾಸನ್ನಿಧಾನದವರೆಗೆ ಈ ವಿಷಯ ಮುಟ್ಟಬೇಕಾಗಿಲ್ಲ."

"ಚಿತ್ತ."

"ಆ ಯುವಕನ ಬಿಡಾರ ?" ಎಂದು ಶಾನತಲದೇವಿ ಎದ್ದು ನಿಲ್ಲುತ್ತಾ ಕೇಳಿದಳು. ಉಳಿದವರೂ ಎದ್ದರು.

"ನನ್ನೊಂದಿಗೆ ಇರಬಹುದು."

"ಅವನೊಪ್ಪಿದರೆ ಆಗಬಹುದು" ಎಂದಳು ಶಾನ್ತಲದೇವಿ.

"ಇಷ್ಟೊಂದು ಜಾಗವಿದೆ. ಬೇರೆ ಎಲ್ಲಿಯಾದರೂ ಇರುತ್ತೇನೆ" ಎಂದು ಯುವಕ ಹೇಳಿದ.

"ಜನ ಜಂಗುಳಿ ತುಂಬ ಇದೆ. ನನ್ನೊಂದಿಗೆ ಇರು ಮಗು" ಎಂದ ಸ್ಥಪತಿ.

ಅವನು ಒಡನೆಯೇ ಉತ್ತರಿಸಲಿಲ್ಲ.

"ಒಂದು ಕೆಲಸ ಮಾಡೋಣ. ಬೇರೆ ವ್ಯವಸ್ಥೆ ಆಗುವವರೆಗೆ ಯುವಕ ನಮ್ಮ ತಂದೆಯವರಲ್ಲಿ ಉಳಿದುಕೊಳ್ಳಲಿ" ಎಂದಳು ಶಾನ್ತಲದೇವಿ.

ನಂತರ ಏನೆಲ್ಲ ಕೆಲಸ ಉಳಿದುಕೊಂಡಿದೆ. ಅದನ್ನೆಲ್ಲ ಚೈತ್ರ ಶುದ್ಧ ತೃತೀಯ ಬೃಹಸ್ಪತಿ ವಾರದಲ್ಲಿ ಮುಗಿಸಿಬಿಡಬೇಕೆಂದು ಶಾನ್ತಲದೇವಿ ಸೂಚಿಸಿದಳು.

"ಅಧಿಕ ಪ್ರಸಂಗವೆಂದು ಯಾರೂ ಭಾವಿಸಬಾರದು. ಈಗ ಈ ಯುವಕನು ಮೂಲದೇವ

ಪ್ರತಿಮೆಯನ್ನು ಪರಿಶೀಲಿಸಬಹುದೆಂದೂ ಅದಕ್ಕವನಿಗೆ ಕಾಲಾವಕಾಶ ನೀಡಬಹುದೆಂದೂ ನಿರ್ಣಯಿಸಿ ಬಿಟ್ಟಿರಿ. ಆದರೆ ಅಂತಹ ಪರಿಶೀಲನೆಯನ್ನು ಮಾಡಲು ಆವನಿಗಿರುವ ಯೋಗ್ಯತೆ ಏನು ಎಂದು ಮೊದಲು ಪರೀಕ್ಷಿಸಬೇಡವೆ ? ಅಪರಿಚಿತನೊಬ್ಬ ಬಂದು ಹೇಳಿದ ಎಂದರೆ ಹೀಗೆ ತೆಗೆದ ಬಾಯಿಗೆ ಒಪ್ಪಿ ಬಿಡಬಹುದೆ ? ಇವನಂತೆ ಆಮೇಲೆ ನೂರಾರು ಜನ ಬಂದು ಪರಿಶೀಲಿಸುತ್ತ ಹೋದರೆ ಗತಿ ಮುಟ್ಟಿದ ಹಾಗೆಯೆ'' ಎಂದು ಕುವರ ಬಿಟ್ಟಿಯಣ್ಣ ಹೇಳಿದ.

''ನನ್ನ ಮಟ್ಟಿಗೆ ಹೇಳುವುದಾದರೆ ನನ್ನ ಕೃತಿಯನ್ನು ಯಾರು ಬೇಕಾದರೂ ಪರಿಶೀಲಿಸಬಹುದು. ಅದರಿಂದ ನನಗೇನೂ ಅಸಮಾಧಾನವಿಲ್ಲ. ತನ್ನ ಕೆಲಸದಲ್ಲಿ ನಂಬಿಕೆ ಇಲ್ಲದವನು, ಆತ್ಮವಿಶ್ವಾಸವಿಲ್ಲದವನು ಪರಿಶೀಲನೆಗೆ ಅಂಜುತ್ತಾನೆ'' ಎಂದ ಸ್ಥಪತಿ.

''ಆತ್ಮ ಸ್ಥೈರ್ಯವೇ ಕಲಾವಿದನ ಮೂಲಶಕ್ತಿ ಎಂಬುದು ಪಟ್ಟಮಹಾದೇವಿಯವರ ಕೃಪೆಯಿಂದ. ನನಗೂ ಗೊತ್ತಿದೆ. ಆದರೂ ಪ್ರಕೃತ ಸಂದರ್ಭದಲ್ಲಿ ಬೇರೊಬ್ಬರ ಪರಿಶೀಲನೆಗೆ ಒಳಗಾಗಬೇಕಾದರೆ, ಪರಿಶೀಲಿಸುವವರ ಯೋಗ್ಯತೆ ಏನೆಂಬುದೂ ನಿರ್ಣಯವಾಗಬೇಕಾದುದು ತುಂಬಾ ಯುಕ್ತ'' ಎಂದು ಬಿಟ್ಟಿಯಣ್ಣ ಒತ್ತಿ ಹೇಳಿದ.

''ನನ್ನ ಯೋಗ್ಯತೆ ಪ್ರದರ್ಶಿಸಲು ನಾನೇನು ಮಾಡಬೇಕು ? ಅಪ್ಪಣೆಯಾಗಲಿ'' ಎಂದು ಯುವಕ ಕೇಳಿದ.

''ಸ್ಥಪತಿಗಳೊಂದು ಚಿತ್ರ ಕೊಡಲಿ. ಆತ ಅದನ್ನು ಕಲ್ಲಿನಲ್ಲಿ ಕಡೆಯಲಿ. ಆಗದೆ ?'' ಎಂದು ಬಿಟ್ಟಿಯಣ್ಣ ಶಾನ್ತಲದೇವಿಯತ್ತ ನೋಡಿದ, ಅವಳ ಒಪ್ಪಿಗೆ ದೊರೆಯಲಿ ಎಂಬ ಭಾವದಿಂದ.

''ಒಪ್ಪಿಗೆ'' ಎಂದ ಯುವಕ.

''ಆದರೆ ಅದಕ್ಕೆಲ್ಲ ಸಮಯವೆಲ್ಲಿದೆ ?'' ಎಂದು ಶಾನ್ತಲದೇವಿ ಪ್ರಶ್ನಿಸಿದಳು.

''ಈಗ ಕೊಟ್ಟರೆ ನಾಳೆ ಸೂರ್ಯೋದಯಕ್ಕೆ ಸಿದ್ಧಪಡಿಸುತ್ತೇನೆ'' ಎಂದ ಯುವಕ.

ಅವನೇ ಒಪ್ಪಿಕೊಂಡ ಮೇಲೆ, ಅಂತೆಯೇ ಆಯಿತು. ಅವನಿಗೊಂದು ಚಿತ್ರವನ್ನು ನೀಡಲಾಯಿತು.

''ರಾತ್ರಿ ಕೆಲಸ ಮಾಡಲು ನನಗೆ ಬೆಳಕಿನ ವಿಶೇಷ ವ್ಯವಸ್ಥೆಆಗಬೇಕಾಗುತ್ತದೆ'' ಎಂದು ಯುವಕ ಹೇಳಿದ.

''ನನ್ನ ವಸತಿಗೆ ಬಂದರೆ ಅಲ್ಲಿಯೇ ನಿನಗೆಲ್ಲವನ್ನೂ ಒದಗಿಸಲಾಗುತ್ತದೆ'' ಎಂದು ಸ್ಥಪತಿ ಹೇಳಿದ.

''ತಮ್ಮ ವಿಶ್ರಾಂತಿಗೆ ಅಡಚಣೆ ಆಗುತ್ತದೆಯಲ್ಲ ?'' ಎಂದು ಯುವಕ ಹೇಳಿದ.

''ಏನಿಲ್ಲ. ಈ ಬಯಲು ಶಿಬಿರಗಳಲ್ಲಿ ಒಳ್ಳೆಯ ಬೆಳಕನ್ನು ಒದಗಿಸುವುದು ಕಷ್ಟದ ಕೆಲಸ. ಅದರಿಂದ ಅಲ್ಲಿಯೇ ಮಾಡುವುದು ಒಳಿತು.''

''ಸರಿ, ಹಾಗಾದರೆ ಅಲ್ಲಿಗೆ ನನ್ನನ್ನು ಕರೆದುಕೊಂಡು ಹೋಗಿ. ಈ ವಿಗ್ರಹಕ್ಕೆ ಬೇಕಾದ ಶಿಲೆಯನ್ನು ಆಯಬೇಕಲ್ಲ ?'' ಎಂದ ಯುವಕ.

''ಅಲ್ಲಿಯೇ ಶಿಲೆಗಳೂ ಇವೆ. ನಿನಗೆ ಬೇಕಾದುದೆಲ್ಲಾ ಪರಿಕರಗಳೂ ಅಲ್ಲಿಯೇ ಇವೆ'' ಎಂದು ಸ್ಥಪತಿ ಹೇಳಿದ.

"ಅಲ್ಲಿ ಶಿಲೆಗಳು ಏತಕ್ಕೆ ಹೋದವು ?'' ಎಂದು ಉದಯಾದಿತ್ಯ ಕೇಳಿದ.

"ಸ್ಥಪತಿಗಳು ರಾತ್ರಿಯ ವೇಳೆಯಲ್ಲಿ ತಮ್ಮ ಬಿಡಾರದಲ್ಲಿಯೂ ಕೆತ್ತನೆಯ ಕೆಲಸದಲ್ಲಿ ಸಕಾಷ್ಟು ವೇಳೆ ತೊಡಗಿರುತ್ತಾರಂತೆ. ನಮಗೆ ವರದಿ ಬಂದಿದೆ. ನಾನೇ ಆ ಕುರಿತು ಪ್ರಸ್ತಾಪ ಮಾಡಿರಲಿಲ್ಲ'' ಎಂದಳು ಶಾನ್ತಲದೇವಿ.

ಪಟ್ಟಮಹಾದೇವಿ, ಉದಯಾದಿತ್ಯ, ಬಿಟ್ಟಿಯಣ್ಣ ಅವರುಗಳು ಅರಮನೆಯತ್ತಲೂ, ಸ್ಥಪತಿ ಮತ್ತು ಆ ಯುವಕ ಸ್ಥಪತಿಯ ಬಿಡಾರದತ್ತಲೂ ಹೊರಟು ಹೋದರು.

ಬಿಡಾರದಲ್ಲಿ ಇದ್ದ ಶಿಲೆಗಳನ್ನೆಲ್ಲ ಆ ಯುವಕ ಪರಿಶೀಲಿಸಿ, ಕಡೆಗೆ ತನ್ನ ಕೆಲಸಕ್ಕೆ ಬೇಕಾದ ಒಂದು ಶಿಲೆಯನ್ನು ಆರಿಸಿಕೊಂಡು ಅದರ ಮೇಲೆ ಸ್ಥೂಲರೂಪ ಮೂಡಿಸುವ ರೇಖೆಗಳನ್ನು ಎಳೆದ. ರೇಖೆಗಳನ್ನು ಎಳೆವ ಕೈಚಳಕ, ರೇಖೆಗಳನ್ನು ಮೂಡಿಸುವ ಅವನ ಅಚ್ಚುಕಟ್ಟುತನ ನೋಡಿ ಸ್ಥಪತಿ ಸಂತಸ ಪಟ್ಟ ನಂತರ, "ನಾನಿನ್ನು ಮಂದಿರದತ್ತ ಹೋಗುತ್ತೇನೆ. ಇಲ್ಲಿ ಮಂಚಣ ಇರುತ್ತಾನೆ. ಏನು ಬೇಕಾದರೂ ಅವನು ಕೊಡುತ್ತಾನೆ. ಅವನಿಗೆ ಎಲ್ಲಾ ವಿಷಯ ತಿಳಿಸಿ ಹೋಗುತ್ತೇನೆ. ನಿನ್ನ ಕೆಲಸಕ್ಕೆ ಇಲ್ಲಿ ಯಾರಿಂದಲೂ ಅಡ್ಡಿ ಬರುವುದಿಲ್ಲ'' ಎಂದು ತಿಳಿಸಿ ಸ್ಥಪತಿ ಹೊರಟು ಹೋದ.

ಸಂಜೆ ಸೂರ್ಯಾಸ್ತಮಾನವಾದ ಮೇಲೆ ಸ್ಥಪತಿ ಬಿಡಾರಕ್ಕೆ ಹಿಂತಿರುಗಿದಾಗ ಆ ಯುವಕ ತನ್ನ ಕೆಲಸದಲ್ಲಿ ನಿರತನಾಗಿದ್ದ.

"ಅವನು ಊಟ ಯಾವಾಗ ಮಾಡಿದ್ದನೋ ತಿಳಿಯದು. ಉಪಹಾರ ಮಾಡಿ ಕೊಟ್ಟಿದ್ದೆಯಾ?'' ಎಂದು ಮಂಚಣನನ್ನು ಸ್ಥಪತಿ ಕೇಳಿದ.

"ಕೇಳಿದೆ. ಏನೂ ಬೇಡವೆಂದು ಹೇಳಿದ. ಆಗ ಕುಳಿತವನು ಸ್ಥಳ ಬಿಟ್ಟು ಕದಲಿಲ್ಲ. ನಿರಂತರವಾಗಿ ಅವನು ಕೆಲಸ ಸಾಗಿಸುತ್ತಲೇ ಇದ್ದಾನೆ. ವಿಶಿಷ್ಟವಾದ ಏಕಾಗ್ರತೆ ಅವನಲ್ಲಿ ಇದೆ'' ಎಂದು ಮಂಚಣ ಉತ್ತರಿಸಿ.

"ನನ್ನ ಪಾಠ ನನಗೇ ಒಪ್ಪಿಸಿದೆ. ಪರವಾಗಿಲ್ಲ, ನೀನು ತುಂಬಾ ಜಾಣನಾಗಿದ್ದೀ. ಅವನು ಬೇಡವೆಂದರೆ ನೀನು ಸುಮ್ಮನಿದ್ದು ಬಿಡುವುದೇ ? ಹಸಿದುಕೊಂಡು ಆ ಹುಡುಗ ಎಷ್ಟು ಹೊತ್ತು ಕೆಲಸ ಮಾಡಬಲ್ಲ ? ಶರೀರ ಆಯಾಸಗೊಂಡರೆ ಏಕಾಗ್ರತೆ ಹೇಗೆ ಸಾಧಿತವಾಗುತ್ತದೆ ?''

"ನನ್ನ ಬಲವಂತ ಏನೂ ಪ್ರಯೋಜನವಾಗಲಿಲ್ಲ. ಈಗ ತಾವೇ ಅವನಿಗೆ ತಿಳಿಯ ಹೇಳಿದರೆ ಬೇಗ ಊಟವಾದರೂ ಮಾಡಿಸಬಹುದು.''

ಸ್ಥಪತಿ ಹುಡುಗ ಕೆಲಸ ಮಾಡುತ್ತಿದ್ದ ಸ್ಥಳಕ್ಕೆ ಬಂದ. ಆಗಿರುವ ಕೆಲಸ ನೋಡಿ ಬೆರಗುಗೊಂಡ. 'ಯಾವ ಸದ್ವಂಶದ ರೂವಾರಿ ರಕ್ತವೋ ಇವನ ಧಮನಿಗಳಲ್ಲಿ ಹರಿಯುತ್ತಿರುವುದು? ವಯಸ್ಸಿಗೆ ಮೀರಿದ ಕೈಚಳಕ ಇವನಲ್ಲಿದೆ ಎಂಬುದರಲ್ಲಿ ಸಂಶಯವೇ ಇಲ್ಲ' ಎಂದು ಮನದಲ್ಲಿ ಅಂದುಕೊಂಡ. ಆಮೇಲೆ, "ಮಗು, ಏಳು. ಊಟ ಮುಗಿಸಿಬಿಡೋಣ'' ಎಂದ.

ಅವನು ಇತ್ತ ತಿರುಗಿ ಸಹ ನೋಡದೆ, "ಉಂಡರೆ ನಿದ್ದೆ ಬರುತ್ತದೆ. ಬೆಳಗಿನೊಳಗೆ ಇದನ್ನು ಮುಗಿಸಬೇಕಲ್ಲ. ನೀವು ಊಟ ಮಾಡಿ'' ಎಂದ.

"ಉಪವಾಸದಲ್ಲಿ ಕೆಲಸ ಮಾಡಲು ಆಗುತ್ತದೆಯೆ ?''

"ನನಗೆ ಹಸಿವೇ ಆಗುತ್ತಿಲ್ಲ. ನನ್ನ ಮನಸ್ಸೆಲ್ಲ ಈ ಕೆಲಸದಲ್ಲಿ ನಿರತವಾಗಿದೆ. ದಯವಿಟ್ಟು ನನ್ನ ಪಾಡಿಗೆ ನನ್ನನ್ನು ಬಿಟ್ಟು ಪುಣ್ಯ ಕಟ್ಟಿಕೊಳ್ಳಿ."

"ನಿನ್ನಿಷ್ಟ ಒಂದಿಷ್ಟು ಹಾಲು ಕಳಿಸುತ್ತೇನೆ. ಅದನ್ನಾದರೂ ಕುಡಿ. ವೇಣುಗೋಪಾಲನಿಗೆ ಹಾಲು ಬೆಣ್ಣೆಗಳೆಂದರೆ ತುಂಬ ಇಷ್ಟ"

"ಹಾಗೆಯೇ ಆಗಲಿ." ಸ್ಥಪತಿ ಹೊರಟು ಬಾಲಕನಿಗೆ ಹಾಲು ಕೊಡಲು ಮಂಚಣನಿಗೆ ತಿಳಿಸಿ ತಾನು ತನ್ನ ಆಹ್ನಿಕಕ್ಕೆ ಕುಳಿತ. ನಂತರ ಊಟ ಮುಗಿಸಿದ. ತನಗಾಗಿ ಯೋಜಿಸಿಕೊಂಡಿದ್ದ ಬೆಳಕಿನ ವ್ಯವಸ್ಥೆ ಸಂಪೂರ್ಣವಾಗಿ ಆ ಯುವಕನಿಗೆ ಮಾಡಿಕೊಡಲಾಗಿತ್ತು. ಬೇರೆ ಹೆಚ್ಚಿನ ಬೆಳಕನ್ನು ಮೂಡಿಸಲು ಸಾಧನಗಳು ಬಿಡಾರದಲ್ಲಿ ಇರಲಿಲ್ಲ ಅದರಿಂದ ವಿಶ್ರಾಂತಿಗೆ ಹೋದ.

ಮಂಚಣ ತಂದುಕೊಟ್ಟ ಹಾಲನ್ನು ಕುಡಿವಾಗ ಮಾತ್ರ ಅವನ ಕೈ ನಿಂತಿತ್ತು. ಮತ್ತೆ ಕೆಲಸ ಮುಂದುವರಿಯಿತು.

ಸೂರ್ಯೋದಯಕ್ಕೆ ಸರಿಯಾಗಿ ವೇಣುಗೋಪಾಲನ ವಿಗ್ರಹ ಸಿದ್ಧವಾಯಿತು. ಆ ವೇಳೆಗಾಗಲೇ ಸ್ಥಪತಿ ಎದ್ದು ತನ್ನ ಅನುಷ್ಠಾನಾದಿಗಳನ್ನೆಲ್ಲಾ ಮುಗಿಸಿಕೊಂಡು ಅಲ್ಲಿಗೆ ಬಂದ. ಅವನು ಅಲ್ಲಿಗೆ ಬರುವ ಹೊತ್ತಿಗೆ ಸಿದ್ಧವಾಗಿದ್ದ ವಿಗ್ರಹವನ್ನು ಬಟ್ಟೆಯಿಂದ ಯುವಕ ಒರೆಸುತ್ತಿದ್ದ.

"ಮುಗಿಯಿತೇ ಮಗು ?"

"ಮುಗಿಸಿದ್ದೇನೆ. ಆತುರದ ಕೆಲಸ. ಏನಾದರೂ ಕೊರತೆಗಳು ಇದ್ದರೆ ಮನ್ನಿಸಬೇಕು."

"ಇದರ ಪರಿಶೀಲನೆ ಆಗುವುದು ಪಟ್ಟಮಹಾದೇವಿ ಮತ್ತು ಇತರರಿಂದ. ನಾನು ಈ ವಿಷಯದಲ್ಲಿ ಪ್ರವೇಶಿಸುವುದಿಲ್ಲ. ನಡಿ, ನಿನ್ನ ಅನುಷ್ಠಾನಾದಿಗಳನ್ನು ಬೇಗ ಮುಗಿಸು. ಮಂದಿರಕ್ಕೆ ಹೋಗೋಣ" ಎಂದು ಸ್ಥಪತಿ ಹೇಳಿದ.

"ಈ ವಿಗ್ರಹ ?"

"ಅಲ್ಲಿಗೆ ಬರುತ್ತದೆ. ಅದಕ್ಕೆ ವ್ಯವಸ್ಥೆ ಆಗಿದೆ."

"ಅಂದರೆ ನಾನು ಮುಗಿಸುತ್ತೇನೆಂದು ತಾವು ಭಾವಿಸಿದ್ದಿರಾ ?"

"ಏಕೋ ನನ್ನಂತರಂಗ ಹಾಗೆ ನುಡಿಯುತ್ತಿತ್ತು."

"ನಾನು ಭಾಗ್ಯಶಾಲಿ. ತಾವು ಮಂದಿರಕ್ಕೆ ದಯಮಾಡಿಸಿ. ನಾನು ಬರುತ್ತೇನೆ. ನನಗಾಗಿ ತಾವು ಕಾಯುವುದು ಬೇಡ."

"ಸರಿ. ಮಂಚಣ, ಇವನು ನಿನ್ನೆಯ ಹಗಲಿನಿಂದ ಉಪವಾಸ. ಸ್ವಲ್ಪ ಸರಿಯಾಗಿ ಉಪಹಾರ ಕೊಟ್ಟು ಕಳಿಸು. ಊಳಿಗದವರು ಬರುತ್ತಾರೆ. ಅವರ ವಶಕ್ಕೆ ಈ ವಿಗ್ರಹವನ್ನು ಕೊಡು" ಎಂದು ಸ್ಥಪತಿ ಮಂದಿರದತ್ತ ನಡೆದ.

ಯುವಕ ಬೇಗಶಿಬಿರದ ಬಳಿಗೆ ಬಂದು ಮೂಲದೇವ ವಿಗ್ರಹದ ಬಳಿ ಅದರ ಪರಿಶೀಲನೆಗೆ ಕುಳಿತ. ಉಳಿದುದಾವುದರತ್ತಲೂ ಅವನು ಗಮನವನ್ನೇ ಕೊಡಲಿಲ್ಲ.

ಪಟ್ಟಮಹಾದೇವಿಯವರು, ಉದಯಾದಿತ್ಯ ಮತ್ತು ಕುವರ ಬಿಟ್ಟಿಯಣ್ಣ ಬೇಗಲೇ ಬಂದರು.

ಮಹಾರಾಜನಿಗೆ ವಿಷಯವನ್ನು ತಿಳಿಸಲಾಗಿತ್ತು. ಉಳಿದ ಯಾರಿಗೂ ಈ ವಿಷಯ ತಿಳಿಯದು. ಶಾನ್ತಲದೇವಿ, "ಸನ್ನಿಧಾನ ಬಯಸಿದರೆ ಆ ವಿಗ್ರಹವನ್ನು ಇಲ್ಲಿಗೆ ತರಿಸುತ್ತೇನೆ. ಅಥವಾ ಅಲ್ಲಿಗೆ ಬಿಜಯ ಮಾಡಿಸಿದರೂ ಸರಿಯೆ'' ಎಂದಿದ್ದಳು. ಅವನು ಆ ಸಂಬಂಧದಲ್ಲಿ ಅವಳೇ ತೀರ್ಮಾನಿಸಲಿ ಎಂದು ಸೂಚಿಸಿಬಿಟ್ಟಿದ್ದ.

ವೇಣುಗೋಪಾಲ ವಿಗ್ರಹ ಅವರುಗಳು ಬರುವಷ್ಟರಲ್ಲಿ ಶಿಬಿರಕ್ಕೆ ಬಂದಿತ್ತು. ಅದನ್ನು ಕಣ್ಣಿನ ಮಟ್ಟಕ್ಕೆ ಸರಿಯಾಗಿ ಗೋಚರವಾಗುವಂತೆ ಇಡಿಸಲಾಗುತ್ತ. ಚಿತ್ರವನ್ನು ನೋಡಿದ ಶಾನ್ತಲದೇವಿಗಾಗಲಿ ಉಳಿದವರಿಗಾಗಲಿ ಅದೇ ಹೊಸದಾಗಿ ಕಡೆಯಲ್ಪಟ್ಟ ವಿಗ್ರಹ ಎಂಬುದು ಅರಿವಾಗಲು ಕಷ್ಟವಾಗಲಿಲ ಶಾನ್ತಲದೇವಿ ಬಿಟ್ಟಿಯಣ್ಣನತ್ತ ತಿರುಗಿ, "ಮರಿಡಣ್ಣಾಯಕರು ಪರಿಶೀಲಿಸಿ ಹೇಳಬೇಕು'' ಎಂದಳು.

"ಅದೇನು ? ಸನ್ನಿಧಾನವೇ ಪರಿಶೀಲಿಸಬಹುದಲ್ಲ ?'' ಎಂದ ಬಿಟ್ಟಿಯಣ್ಣ.

"ಯುವಕನಿಗೆ ಯೋಗ್ಯತೆ ಇದೆಯೋ ಇಲ್ಲವೋ ಎಂಬುದನ್ನು ನೋಡಬೇಕೆಂದವರು ತಾವೇ ತಾನೆ?''

"ನನಗಾಗಿ ನಾನು ಹಾಗೆ ಹೇಳಲಿಲ್ಲ. ಅರಮನೆಯ ಕೆಲಸ  ಶಾಸ್ತ್ರಬದ್ಧವಾಗಿರಬೇಕೆಂಬ ದೃಷ್ಟಿಯಿಂದ ಹಾಗೆ ಹೇಳಿದೆನಷ್ಟೆ''

"ಆದರೇನಾಯಿತು ? ಹಾಗೆಯೇ ಅಭಿಪ್ರಾಯವನ್ನೂ ಕೊಡಿ.''

ಬಿಟ್ಟಿಯಣ್ಣ ಪರಿಶೀಲಿಸಿದ. "ಬಹುಶಃ ಸ್ಥಪತಿಗಳು ಇದನ್ನು ಮೊದಲೇ ಸಿದ್ಧ ಮಾಡಿಟ್ಟಿದ್ದರೇನೋ ಎನ್ನಿಸುತ್ತದೆ'' ಎಂದ.

"ಅಭಿಪ್ರಾಯ ವಿಚಿತ್ರವಾಗಿದೆ. ಸ್ಥಪತಿ ಯಾಕೆ ಸಿದ್ಧವಾಗಿದ್ದ ವಿಗ್ರಹವನ್ನು ಕೊಡುತ್ತಾರೆ ?'' ಎಂದು ಉದಯಾದಿತ್ಯ ಪ್ರಶ್ನಿಸಿದ.

"ಈ ಪ್ರಶ್ನೆ ಉದ್ಭವವಾಗಿ ಈಗ ಇದನ್ನು ಕಣ್ಣಿಂದ ನೋಡುತ್ತಿದ್ದೇವಲ್ಲ. ಅಲ್ಲಿಗೂ ಇಲ್ಲಿಗೂ ಇರುವ ಕಾಲಮಾನ ನೋಡಿ. ಇಷ್ಟು ಸ್ವಲ್ಪ ಕಾಲದಿಲ್ಲ ಇಂತಹ ವಿಗ್ರಹದ ಕೆತ್ತನೆ ಸಾಧ್ಯವಿಲ್ಲ ಎಂಬುದು ನನ್ನ ಭಾವ'' ಎಂದು ಬಿಟ್ಟಿಯಣ್ಣ ತನ್ನ ನಿಲುವನ್ನು ವಿವರಿಸಿದ

"ಇಷ್ಟು ಸ್ವಲ್ಪ ಕಾಲದಲ್ಲ ಇದನ್ನು ಮಾಡಲು ಹೇಗೆ ಸಾಧ್ಯವಾಯಿತು ಎಂದು ಪ್ರಶ್ನಿಸಬೇಕಾಗಿತ್ತು. ಅದು ಬಿಟ್ಟು...''

ಉದಯಾದಿತ್ಯನ ಮಾತನ್ನು ನಡುವೆಯೇ ತಡೆದ ಬಿಟ್ಟಿಯಣ್ಣ, "ಇದನ್ನು ಕೆತ್ತಿದ ಕೈ ಎಲ್ಲಾ ಸ್ಥಪತಿಗಳ ಕೈಯಂತೆಯೇ ಇದೆ ಎಂದು ನನಗನ್ನಿಸಿದ್ದರಿಂದ ಅವರ ಹೆಸರನ್ನು ಹೇಳಿದೆ'' ಎಂದ.

"ಅಭಿಪ್ರಾಯ ಹೇಳುವ ಹೊಸ ವಿಚಿತ್ರ ರೀತಿಯನ್ನು ನಿನ್ನಿಂದ ಕಲಿತ ಹಾಗಾಯಿತು. ಅಂದರೆ ಪರ್ಯಾಯವಾಗಿ ನೀನು ಇದನ್ನು ಮೆಚ್ಚಿದ್ದೀ. ಅದರಿಂದ ಆ ಯುವಕನಿಗೆ ಈ ವಿಷಯದಲ್ಲಿ ಸಾಕಷ್ಟು ಪರಿಣತಿ ಇದೆ ಎಂದು ಒಪ್ಪಿದಂತಾಯಿತು ಎಂದು ಭಾವಿಸಬಹುದು ತಾನೆ?'' ಎಂದು ಉದಯಾದಿತ್ಯ ವ್ಯಾಖ್ಯಾನಿಸಿದ.

"ಸಾಕಷ್ಟು ಅಲ್ಲ. ವಿಶೇಷ ಪರಿಣತಿ ಇದೆ ಎಂಬುದು ನನ್ನ ಭಾವನೆ. ಪಟ್ಟಮಹಾದೇವಿಯವರು ಏಕೆ ಮೌನವಾಗಿದ್ದಾರೆ ? ಸನ್ನಿಧಾನದ ಅಭಿಪ್ರಾಯ'' ಎಂದು ಬಿಟ್ಟಿಯಣ್ಣ ಶಾನ್ತಲದೇವಿಯ ಮುಖ ನೋಡಿದ.

"ಕಲಾದೇವಿ ಯಾರು ಯಾರನ್ನು ಒಲಿಯುತ್ತಾಳೆ ಎಂಬುದೇ ಒಂದು ನಿಗೂಢ ಸಮಸ್ಯೆ. ಬಿರುದು, ಕೀರ್ತಿ, ಮನ್ನಣೆ ಯಾವುದನ್ನೂ ಬಯಸದ ಎಷ್ಟೋ ಶ್ರೇಷ್ಠಾತಿಶ್ರೇಷ್ಠ ರೂವಾರಿಗಳು ಎಲ್ಲೋ ಎಲೆಯ ಮರೆಯ ಕಾಯಿಯ ಹಾಗೆ ಅಡಗಿರುತ್ತಾರೆ. ಈ ಕಿರಿಯ ವಯಸ್ಸಿಗೆ ಇಷ್ಟು ಪ್ರತಿಭೆಯಿದೆ ಎಂದು ಆಶ್ಚರ್ಯಪಡುತ್ತಿದ್ದೇನೆ. ಸಂಕಲ್ಪ, ಕ್ರಿಯೆ, ಗುರಿ ಇವುಗಳ ನಿಖರವಾಗಿ ಮೇಲೆ ಈ ಕೃತಿಯಲ್ಲಿ ನನಗೆ ಕಾಣುತ್ತಿದೆ. ಸ್ಥಪತಿಗಳೆ, ನಿಮ್ಮ ಅಭಿಪ್ರಾಯ ?'' ಎಂದು ಶಾನ್ತಲದೇವಿ ತುಸು ದೂರದಲ್ಲಿ ವಿನಯತೆಯ ಮೂರ್ತಿಯಂತೆ ನಿಂತಿದ್ದ ಸ್ಥಪತಿಯನ್ನು ಕೇಳಿದಳು.

"ಶಾಸ್ತ್ರದಲ್ಲಿ ಪರಿಣತಿ ಪಡೆದ ವಿಮರ್ಶಕನಿಗೂ ಕೃತಿಕಾರನಿಗೂ ಅಭಿಪ್ರಾಯ ಭೇದ ಬರಬಹುದು. ಸನ್ನಿಧಾನ ಶಾಸ್ತ್ರಬಲ್ಲ ವಿಮರ್ಶಕರು. ಅವರು ವ್ಯಕ್ತಿಯನ್ನು ಮರೆತು ಕೃತಿಯ ವಿಮರ್ಶೆಯನ್ನು ಮಾಡಬಲ್ಲವರು. ನಾನು ವಿಮರ್ಶಕನಲ್ಲ. ಮೊದಲು ಕೃತಿಕಾರ. ಶಾಸ್ತ್ರ ಬಲ್ಲವನೂ ಹೌದು. ಆದರೂ ನಾನು ಇನ್ನೊಬ್ಬರ ಕೃತಿಯನ್ನು ನೋಡುವಾಗ ಸಹಜವಾಗಿ ನನ್ನ ಕೃತಿ ಎಲ್ಲರ ಕೃತಿಗಿಂತ ಶ್ರೇಷ್ಠ ಎಂಬ ಪೂರ್ವಗ್ರಹ ಉಳ್ಳವನಾಗಿರಬಹುದು. ಅದರಿಂದ ನನ್ನ ಅಭಿಪ್ರಾಯವು ಇಲ್ಲಿ ಗೌಣ. ಎಂದರೆ ಈ ಕೃತಿಯ ಬಗೆಗೆ ನನಗೆ ಒಳ್ಳೆ ಅಭಿಪ್ರಾಯವಿಲ್ಲ ಎಂದು ಭಾವಿಸಬಾರದು. ನನ್ನ ಅಭಿಪ್ರಾಯ ಇಲ್ಲಿ ಸಲ್ಲದು ಎಂಬ ದೃಷ್ಟಿಯಿಂದ ಈ ಮಾತನ್ನು ಹೇಳಿದ್ದೇನೆ'' ಎಂದು ಸ್ಥಪತಿ ಹೇಳಿದ.

"ಈಗ ಆ ಯುವಕ ಏನು ಮಾಡುತ್ತಿದ್ದಾನೆ ?'' ಎಂದು ಶಾನ್ತಲದೇವಿ ಪ್ರಶ್ನಿಸಿದಳು.

"ನಾನು ಕೆಲಸ ಮಾಡುವ ಪಕ್ಕದ ತಾಣದಲ್ಲಿ ವಿಗ್ರಹ ಪರಿಶೀಲನೆ ನಡೆಸಿದ್ದಾನೆ'' ಎಂದು ಸ್ಥಪತಿ.

"ಪರಿಶೀಲನೆ ಮಾಡಬೇಕೆಂದು ಅವನು ಹೇಳುವಾಗ ಅದರಲ್ಲಿ ಏನೋ ಕೊರತೆ ಇರಬೇಕು ಎಂದು ಅನ್ನಿಸಿರಬೇಕಲ್ಲವೆ ?'' ಎಂದು ಪ್ರಶ್ನಿಸಿದಲು ಶಾನ್ತಲದೇವಿ.

"ಅವನಿಗೇನೆನ್ನಿಸಿತೋ ನನಗೆ ತಿಳಿಯದು.''

"ನಿಮಗೆ ಅದರಲ್ಲಿ ಕೊರತೆ ಇದೆಯೆನಿಸಿದೆಯ ?''

"ಏನೂ ಕೊರತೆಯಿಲ್ಲ. ವಾಸ್ತವವಾಗಿ ದೇವಾತ ವಿಗ್ರಹ, ಪ್ರತಿಷ್ಠಾಪಿತವಾಗ ಬೇಕಾದುದು ಎಂದಾಗ ನಾವು ಎಲ್ಲವನ್ನೂ ಪ್ರತಿಮಾಶಾಸ್ತ್ರದ ಸೂತ್ರಾನುಸಾರವಾಗಿಯೇ ಮಾಡುತ್ತೇವೆ.''

"ಅವನಿಗೆ ಹಾಗೆಂದು ತಿಳಿವಳಿಕೆ ನೀಡಿ ಈ ಪ್ರಕರಣವನ್ನು ಇಲ್ಲಿಗೇ ನಿಲ್ಲಿಸಿದರಾಗದೆ ?''

"ಯೌವನದಲ್ಲಿ ಕೆಲವು ಹುಚ್ಚು ಉತ್ಸಾಹಗಳು ಇರುತ್ತವೆ. ಅವರ ಈ ಹುಚ್ಚು ಉತ್ಸಾಹವು ಹಿರಿಯರನ್ನು ಕೆಣಕುವಂತೆ ಇರುತ್ತವೆ. ಆದರೆ ಹಿರಿಯರು ಅದನ್ನು ಗಣನೆಗೆ ತೆಗೆದುಕೊಳ್ಳಬಾರದು. ಅಲಕ್ಷ್ಯ ಮಾಡಿದರೆ, ಆಮೇಲೆ ಸ್ವಾನುಭವದಿಂದ ಅವರು ತಮ್ಮ ಹುಚ್ಚು ಉತ್ಸಾಹವನ್ನು ತಾವೇ ಬಿಟ್ಟುಕೊಡುತ್ತಾರೆ. ಅದು ಬಿಟ್ಟು ಅವರ ಉತ್ಸಾಹದ ಇದಿರು ನಿಂತರೆ ಆ ಉತ್ಸಾಹ ಹತ್ತಾರು ವಿಚಿತ್ರಮಾರ್ಗಗಳಿಗೆ ಹುಚ್ಚುಚ್ಚಾಗಿ ತೊಡಗಬಹುದು.''

"ಅಂದರೆ ಅವನು ಏನು ಹೇಳುತ್ತಾನೆಂದು ಕಾಯಬೇಕೆಂದು ಹೇಳುತ್ತೀರಾ ?''

"ಅವನಿಗೆ ಹೇಳಲು ಏನೂ ಇರುವುದಿಲ್ಲ. ಅದರಿಂದ ಕಾಯೋಣ.''

"ಅಂದರೆ ಅವರೆಗೆ ನಾವಿಲ್ಲಿ ಇರಬೇಕೆ ?''

"ಬೇಕಿಲ್ಲ. ಅಪ್ಪಣೆಯಾದರೆ ಅವನನ್ನು ಅರಮನೆಗೆ ಕರತರುತ್ತೇನೆ. ಇಲ್ಲ...''

“ಹೀಗೆ ಮಾಡಿ. ಪರಿಶೀಲನೆಯಾದ ಮೇಲೆ, ನೀವೇ ಅವನೊಂದಿಗೆ ವಿಚಾರ ವಿನಿಮಯ ಮಾಡಿ. ಅವನನ್ನು ತೃಪ್ತಿಪಡಿಸಿ.''

“ಅವನು ನನ್ನೊಂದಿಗೆ ವಿಚಾರ ಮಾಡಿದರೆ ಸರಿ. ಸನ್ನಿಧಾನಕ್ಕೇ ಅರಿಕೆ ಮಾಡುತ್ತೇನೆಂದರೆ?''

“ಹಾಗೇಕೆ ಹೇಳುತ್ತಾನೆ. ನೀವು ಇಲ್ಲಿನ ಸ್ಥಪತಿ. ನಿಮ್ಮ ತೀರ್ಮಾನವೇ ಕಟ್ಟಕಡೆಯದು.''

“ನನಗೆ ಆ ಅಧಿಕಾರವಿದ್ದರೂ ಸ್ವಪ್ರತಿಷ್ಠೆಗಾಗಿ ಅದನ್ನು ಎಂದೂ ಉಪಯೋಗಿಸಿ ಕೊಳ್ಳುವುದಿಲ್ಲ.''

“ಪರಿಸ್ಥಿತಿಗನುಸಾರವಾಗಿ ನಿರ್ಣಯಿಸಿ. ನಿಮ್ಮ ನಿರ್ಣಯಕ್ಕೆ ನಾವು ಬದ್ಧರು. ಒಂದು ವೇಳೆ ಆ ವಿಷಯ ನಮ್ಮವರೆಗೆ ಮುಟ್ಟಬೇಕಾಗಿದ್ದರೆ ನೀವು ಅರಮನೆಗೆ ಬರಬೇಕು. ಆರೋಗಣೆ ಮುಗಿಸಿಕೊಂಡು ಬನ್ನಿ.''

“ಅಪ್ಪಣೆ.''

ಶಾನ್ತಲದೇವಿ ಮತ್ತು ಉಳಿದವರು ಅಲ್ಲಿಂದ ಹೊರಟುಹೋದರು.

ಅಲ್ಲಿ ಅರಮನೆಯಲ್ಲಿ ತಿರುವರಂಗದಾಸ ತನ್ನ ಸಾಕು ಮಗಳ ಸಂದರ್ಶನ ಮಾಡಿ ಅವಳ ಕಿವಿಯಲ್ಲಿ ಬಣ್ಣ ಕಟ್ಟಿ ಸ್ಥಪತಿಯ ಬಿಡಾರದಲ್ಲಿ ನಡೆದ ಮಾತುಗಳನ್ನು ಹೇಳಿದ. “ನಾನೊಬ್ಬ ಅಲೆಮಾರಿಯಿಂದ ಬುದ್ಧಿವಾದ ಹೇಳಿಸಿಕೊಳ್ಳಬೇಕಾದ ಪರಿಸ್ಥಿತಿಯಾಗಿ ಬಿಟ್ಟಿತಲ್ಲ ಮಗು. ನಾನಿಲ್ಲಿಗೆ ಬರಬಾರದಾಗಿತ್ತು. ಶ್ರೀಮದಾಚಾರ್ಯರ ಮಾತನ್ನು ಕೇಳದೆ ನಾನು ತಪ್ಪು ಮಾಡಿದೆ. ಎಲ್ಲ ತಿಳಿದ ಆ ಸ್ಥಪತಿಗೆ ಸಹ ಅದೆಷ್ಟು ಕೊಬ್ಬು. ನೀನು ಬಾಯಿ ಮುಚ್ಚಿಕೊಂಡು ಸುಮ್ಮನಿರಯ್ಯ ಎಂದು ಹೇಳುವ ಧಾಟಿಯಲ್ಲಿ, ಹಿರಿಯರಲ್ಲಿ ಔದಾರ್ಯ ಇರಬೇಕು ಎಂದು ನನಗೇ ಪಾಠ ಹೇಳಿದ. ಮಾಡಿದ ಕೆಲಸ ಚೆನ್ನಾಗಿದೆ ಎಂದು ಹೇಳಿದ್ದಕ್ಕೆ ಇಷ್ಟು ಕೊಬ್ಬಾದರೆ ಹೇಗೆ ? ಇದಕ್ಕೆಲ್ಲ ಮೂಲ ಕಾರಣ ಏನು ಗೊತ್ತೆ ? ಅವರುಗಳನ್ನೆಲ್ಲ ಪಟ್ಟಮಹಾದೇವಿ ಉಬ್ಬಿಸಿ ಕೂಡಿಸಿದ್ದಾಳೆ'' ಎಂದು ಮುಂತಾಗಿ ಹೇಳಿ ತನ್ನ ಮಾತು, ನಡವಳಿಕೆ ಮಾತ್ರ ಸರಿ, ಉಳಿದವರದೆಲ್ಲ ತಪ್ಪು ಎಂಬಂತೆ ಬಣ್ಣಿಸಿದ.

ಸಂಜೆ ಸ್ಥಪತಿಯು ಆ ಯುವಕನೊಂದಿಗೆ ಅರಮನೆಗೆ ಬರುವುದಾಗಿಯೂ ಸಂದರ್ಶನವನ್ನು ದಯಪಾಲಿಸಬೇಕೆಂದೂ ಸುದ್ದಿ ಮುಟ್ಟಿಸಿದ. ಶಾನ್ತಲದೇವಿಗೆ ಅದರ ಅರ್ಥ ಆಯಿತು.

ಅವಳು ಒಂದು ಪುಟ್ಟ ಮಂತ್ರಾಲೋಚನ ಸಭೆಯನ್ನೇ ಸೇರಿಸಿದಳು. ಆ ಸಭೆಗೆ ರಾಜಕೀಯ ಮುಖ್ಯರ ಜೊತೆಗೆ ಕೆಲವು ಪ್ರಮುಖ ರೂವಾರಿಗಳು ಮತ್ತು ಶ್ರೀಮದಾಚಾರ್ಯರು ಪ್ರತಿಷ್ಠಾಪನೋತ್ಸವದ ಕೆಲಸವನ್ನು ಶಾಸ್ತ್ರೋಕ್ತವಾಗಿ ನೆರವೇರಿಸಲು ನೆರವು ನೀಡಲು ಕಳುಹಿಸಿದ್ದ ತಂಡದ ಮುಖ್ಯರು ಸಹ ಆಹ್ವಾನಿಸಲ್ಪಟ್ಟಿದ್ದರು. ರಾಣಿಯರೆಲ್ಲರೂ ಇದ್ದರು. ಮಾರಸಿಂಗಯ್ಯ, ಮಂಚಿಅರಸರೂ ಇದ್ದರು. ಎಂದಾಗ ತಿರುವರಂಗದಾಸರು ಇರಲೇಬೇಕಾಯಿತು.

ಮಹಾರಾಜ ಬಿಟ್ಟಿದೇವನ ಸಮ್ಮುಖದಲ್ಲಿ ಈ ಸಭೆ ನಡೆಯುವ ವ್ಯವಸ್ಥೆ ಆಗಿತ್ತು. ಅದರ ಸೂತ್ರಚಾಲಕಳು ಮಾತ್ರ ಪಟ್ಟಮಹಾದೇವಿಯೇ ಆಗಿದ್ದಳು. ಅದರಿಂದ ಅವಳೇ ಮೊದಲು ಮಾತನ್ನು ಆರಂಭಿಸಿ ಈ ಯುವಕ ಬಂದಾಗಿನಿಂದ ಜರುಗಿದುದೆಲ್ಲವನ್ನೂ ಪೂರ್ತಿಯಾಗಿ ವಿವರಿಸಿ ಮೂಲದೇವ ವಿಗ್ರಹದ ಬಗೆಗೆ ನಿರ್ಣಯ ಕೈಕೊಳ್ಳಲು ಸ್ಥಪತಿಗಳಿಗೇ ಬಿಡಲಾಯಿತು. ಮತ್ತೆ ಏನು ಜರುಗಿತೆಂಬುದನ್ನು ಈಗ ಸ್ಥಪತಿಗಳೇ ಈ ಸಭೆಗೆ ನಿವೇದಿಸಬೇಕು ಎಂದು ಸೂಚಿಸಲಾಯಿತು.

ಆ ಯುವಕ ಬಂದಾಗಿನಿಂದ, ಯುವಕ ಮತ್ತು ತಿರುವರಂಗದಾಸರಿಗೆ ಸಂಬಂಧಿಸಿದ ವೈಯಕ್ತಿಕ ಮಾತುಕತೆ ಬಿಟ್ಟು ಏನೇನು ನಡೆಯಿತೆಂಬುದನ್ನೆಲ್ಲವನ್ನು ಸ್ಥಪತಿ ಹೇಳಿ. ಕಡೆಯಲ್ಲಿ, "ಈಗ ನಾನು ಕಡೆದು ಸಿದ್ಧಪಡಿಸಿರುವ ಮೂಲ ಕೇಶವಸ್ವಾಮಿಯ ವಿಗ್ರಹವು ಪ್ರಮಾಣಾದಿಗಳಿಂದ ಶಿಲ್ಪಶಾಸ್ತ್ರಕ್ಕೆ ಅನುಸಾರವಾಗಿದೆಯಾದರೂ ಮೂಲವಾಗಿ ಶಿಲೆಯಲ್ಲಿಯೇ ದೋಷವಿರುವುದರಿಂದ ಈ ಮೂರ್ತಿ ಪ್ರತಿಷ್ಠಾಪನೆಗೆ ಅಯೋಗ್ಯವೆಂದು ಈ ಯುವಕ ಅಭಿಪ್ರಾಯಪಡುತ್ತಾನೆ. ಈಗ ಮುಹೂರ್ತವನ್ನು ನಿಶ್ಚಯಿಸಿಯಾಗಿದೆ. ಬೇರೊಬ್ಬ ಶಿಲ್ಪಿಯ ಅಭಿಪ್ರಾಯವನ್ನು ಮುಚ್ಚಿಟ್ಟು ನಾನೊಬ್ಬನೇ ಈ ಸಂದರ್ಭದಲ್ಲಿ ನಿರ್ಣಯ ಮಾಡುವುದು ಒಳಿತಲ್ಲವೆಂದು ಈ ಮಂಡಳಿಯ ಮುಂದೆ ನಿವೇದಿಸಿದ್ದೇನೆ. ಕಡೆಯ ನಿರ್ಣಯ ಮಂಡಳಿಗೆ ಸೇರಿದುದು" ಎಂದ.

"ಆತನ ಅಭಿಪ್ರಾಯವಿರಲಿ. ಈ ವಿಷಯದಲ್ಲಿ ನಿಮ್ಮ ಸ್ವಂತ ಅಭಿಪ್ರಾಯವೇನು ?" ಎಂದು ಬಿಟ್ಟಿದೇವ ಕೇಳಿದ.

"ನಾನು ಹುಟ್ಟಾ ರೂವಾರಿ. ಈ ವಿದ್ಯೆ ನನಗೆ ರಕ್ತಗತವಾಗಿ ಬಂದಿದೆ. ಶಿಲಾದೋಷಗಳನ್ನು ಅರಿಯಲಾರದವನು ಮೂಲತಃ ಒಳ್ಳೆಯ ರೂವಾರಿಯಾಗಲಾರ. ನನ್ನ ಕರ್ತವ್ಯದಲ್ಲಿ ಚ್ಯುತಿಯನ್ನು ನಾನೆಂದೂ ಮಾಡುವವನಲ್ಲ ನನ್ನ ಹೊಣೆಗಾರಿಕೆ ನನಗೆ ಗೊತ್ತಿದೆ. ಈ ಶಿಲೆಯಲ್ಲಿ ದೋಷವಿಲ್ಲವೆಂದೇ ನಾನು ಅದನ್ನು ಮೂಲ ಕೇಶವ ವಿಗ್ರಹಕ್ಕಾಗಿ ಆರಿಸಿಕೊಂಡೆ."

"ಅಂದ ಮೇಲೆ ಮುಗಿಯಿತಲ್ಲ. ನಮಗೆಲ್ಲ ನಿಮ್ಮ ಅಭಿಪ್ರಾಯ ಮಾನ್ಯ" ಎಂದು ಬಿಟ್ಟಿದೇವ ಹೇಳಿದ.

ತಿರುವರಂಗದಾಸನಿಗೆ ಆ ಹುಡುಗನ ಮೇಲೆ ಕೋಪವಿತ್ತು. ಈಗ ಇನ್ನೂ ತಲೆ ಹರಟೆಮಾಡಿದ್ದಾನೆ. ಅವನನ್ನು ಛೀಮಾರಿಗೆ ಒಳಗು ಮಾಡಿಬಿಟ್ಟರೆ ಚೆನ್ನಾಗಿ ಬುದ್ಧಿ ಕಲಿಸಿದ ಹಾಗಾಗುತ್ತದೆಯೆಂದು ಯೋಚಿಸಿ, ವಾಸ್ತವವಾಗಿ ತನಗೆ ಮಾತನಾಡಲು ಹಕ್ಕಿಲ್ಲದಿದ್ದರೂ ಎದ್ದು ನಿಂತ, "ನನ್ನದೊಂದು ಬಿನ್ನಪ. ಶ್ರೀಮದಾಚಾರ್ಯರು ಇಲ್ಲಿ ಉಪಸ್ಥಿತರಿದ್ದಿದ್ದರೆ ಅವರೇ ಈ ವಿಷಯದಲ್ಲಿ ನಿರ್ಣಯ ಹೇಳಿಬಿಡಬಹುದಾಗಿತ್ತು. ಈ ದೇವಮಂದಿರ ಹಾಗೂ ಸ್ವಾಮಿಯ ಸ್ಥಾಪನೆಗೆ ಅವರು ಅನುಸರಿಸುವ ತತ್ವ, ಅವರಿತ್ತ ಪ್ರೇರಣೆ ಕಾರಣ. ಅದರಿಂದ ನಾವು ಈ ಪ್ರತಿಷ್ಠಾಪನೆಯನ್ನು ಅನುಮಾನದ ಸ್ಥಿತಿಯಲ್ಲಿ ಮಾಡುವುದು ಉಚಿತವಾಗಲಾರದು" ಎಂದು ಹೇಳುತ್ತಿದ್ದ, ನಡುವೆಯೇ ಬಿಟ್ಟಿದೇವ ತುಸು ಅಸಮಾಧಾನದಿಂದ, "ಯಾವುದು ಉಚಿತವೆಂಬುದು ತಮ್ಮ ಅಭಿಪ್ರಾಯ ?" ಎಂದ. "ಸ್ಥಪತಿಗಳು ಹಿರಿಯರು, ಅನುಭವಿಗಳು, ಪ್ರಾಜ್ಞರು. ಅವರ ಮೇಲೆ ತನ್ನದೊಂದು ಕೊಂಬು ಎನ್ನುವಂತಿದೆ ಈ ಯುವಕನ ಮಾತು. ಇಂತಹ ಅಧಿಕ ಪ್ರಸಂಗಿಗಳನ್ನು ಹೀಗೆಯೆ ಬಿಟ್ಟು ಕೊಡಬಾರದು. ಹಿರಿಯ ಸ್ಥಪತಿಗಳಿಗೆ ಅವಮಾನ ಮಾಡಿದ್ದಕ್ಕೆ, ಅವರ ಹೆಸರಿಗೆ ಮಸಿ ಬಳಿಯಲು ಪ್ರಯತ್ನಿಸಿದ್ದಕ್ಕೆ, ಅವನಿಗೆ ತಕ್ಕ ಶಿಕ್ಷೆ ಆಗಬೇಕು" ಎಂದ ತಿರುವರಂಗದಾಸ.

ಯುವಕ ಸಿಡಿದೆದ್ದು ನಿಂತ, "ನನಗೆ ಇಂತಹ ಸಭೆ ಗಿಭೆ ಗೊತ್ತಿಲ್ಲ. ಹೇಗೆ ಮಾತನಾಡಬೇಕೆಂಬುದು ಗೊತ್ತಿಲ್ಲ. ಆದರೆ ಸತ್ಯ ಹೇಳಲು ನಾನು ಎಂದೂ ಅಂಜುವವನಲ್ಲ. ಇಡೀ ರಾಜ್ಯವೇ ನನ್ನ ಮೇಲೆ ತಿರುಗಿ ಬಿದ್ದರೂ ನಾನು ಹೆದರುವುದಿಲ್ಲ. ಈ ನಾಮಧಾರಿಗಳು ಮಹಾರಾಜರ ಮಾವನಿರಬಹುದು. ಅದರಿಂದ ನಾನು ಅವರಿಗೆ ಅಂಜುತ್ತೇನೆಂದು ಸಹ ಯಾರೂ ಭಾವಿಸಬಾರದು. ಅವರಾಡಿದ ಮಾತಿಗೆ ನನ್ನ ಪ್ರತಿಭಟನೆಯಿದೆ" ಎಂದ.

"ಯಾವ ಮಾತಿಗೆ ?''

"ನಾನು ಹಿರಿಯ ಸ್ಥಪತಿಗಳಿಗೆ ಅವಮಾನ ಮಾಡಿದೆನೆಂದೂ ಅವರ ಹೆಸರಿಗೆ ಮಸಿ ಬಳಿದೆನೆಂದೂ ಆರೋಪಿಸಿದ್ದಾರೆ. ಆ ಆರೋಪ ನಿರಾಧಾರವಾದುದು.''

"ಏಕೆ ನಿರಾಧಾರವಾದುದು ? ನೀನೊಬ್ಬ ಪೋರ. ಮಹಾಶಾಸ್ತ್ರಜ್ಞನ ಹಾಗೆ ಪರಿಶೀಲನೆ ನಡೆಸಿದೆ. ಹೋಗಲಿ ಪಾಪ. ಹುಡುಗನ ಆಸಕ್ತಿಗೆ ಭಂಗ ತರಬಾರದೆಂದು ಔದಾರ್ಯ ತೋರಿಸಿದರೆ ನೀನು ಹೇಳಿದ್ದೇನು ? ಆ ಮಹಾ ಸುಂದರ ವಿಗ್ರಹ, ಶಾಸ್ತ್ರೋಕ್ತ ಪ್ರತಿಮಾ ಲಕ್ಷಣಗಳನ್ನು ಪಡೆದ ಆ ದೇವವಿಗ್ರಹದ ಶಿಲೆಯು ದೋಷಯುಕ್ತ ಎಂದು. ಮಂತ್ರ ಬಾರದವನ ಬಾಯಲ್ಲಿ ಉಗುಳು ಜಾಸ್ತಿ ಎಂದ ಹಾಗೆ, ಕುಣಿಯಲಾರದ ಸೂಳೆ ನೆಲ ಡೊಂಕು ಎಂದ ಹಾಗೆ ಎಕರಪೆಕರಾಗಿ ಶಿಲೆದೋಷವೆಂದು ಬೊಗಳಿದೆಯಲ್ಲ. ಅದರ ಗುರಿಯೇನು ? ಸ್ಥಪತಿಗಳಿಗೆ ಅವಮಾನ ಮಾಡುವುದಲ್ಲವೆ ?''

"ನಾನು ಹೇಳಿದ್ದು ವಸ್ತು ಸ್ಥಿತಿಯನ್ನು. ನನಗೆ ಯಾವ ದುರುದ್ದೇಶವೂ ಇಲ್ಲ.''

"ಈಗ ನೀನು ಹೇಳಿದುದು ಸುಳ್ಳಾದರೆ ? ಈ ಶಿಲೆ ದೋಷಯುಕ್ತವಲ್ಲದಿದ್ದರೆ ?''

"ಹಾಗೆ ಹೇಳಿದ ಈ ನಾಲಿಗೆಯನ್ನು ಕತ್ತರಿಸಿಕೊಳ್ಳುತ್ತೇನೆ. ಈ ಕೆಲಸ ಮಾಡುವ ಈ ಕೈಗಳನ್ನು ಕತ್ತರಿಸಿಕೊಳ್ಳುತ್ತೇನೆ. ಅದಕ್ಕೆ ಸ್ಥಪತಿಗಳೆ ಆಗಲಿ ಅಥವಾ ಬೇರೆ ಯಾರೇ ಆಗಲಿ ಏನೆನ್ನುತ್ತಾರೆ ಅದನ್ನು ತಿಳಿಸಿ.'' ಕೆರಳಿದ ಸಿಂಹದ ಮರಿಯಂತೆ ಕಂಡ ಯುವಕ.

"ಬೇರೆ ಯಾರಾದರು ಏನು ಹೇಳುತ್ತಾರೆ ? ನಾನು ಈಗ ಒಂದು ಮಾತನ್ನು ಸ್ಪಷ್ಟವಾಗಿ ಹೇಳಬೇಕಾಗಿದೆ. ಈ ಯುವಕ ಹೇಳಿದಂತೆ, ನನಗೆ ಅವಮಾನ ಮಾಡಬೇಕೆಂದಾಗಲಿ, ನನ್ನ ಹೆಸರಿಗೆ ಮಸಿ ಹಚ್ಚಬೇಕೆಂದಾಗಲಿ ಅವನಿಗೆ ಉದ್ದೇಶವಿರಲಿಲ್ಲ ಎಂಬುದು ನನ್ನ ಮನಸ್ಸಿಗೆ ಗೊತ್ತು. ಅದರಿಂದ ಶ್ರೀ ತಿರುವರಂಗದಾಸರು ಮಾಡಿದ ಆರೋಪವನ್ನು ನಾನು ಒಪ್ಪುವುದಿಲ್ಲ. ಇದು ಸಂಸ್ಕೃತದಲ್ಲಿನಂತೆ ವಾಕ್ಯಾರ್ಥ ಸ್ಪರ್ಧೆಯಲ್ಲ; ಕಲೆಯ ವಿಮರ್ಶೆ. ಅತಿ ಸೂಕ್ಷ್ಮವಾದ ವಿಚಾರ. ಮತ್ತು ಅದರ ರೂಪ ಸಹ ಅನಂತವಾದುದು. ಈ ಮಾತನ್ನು ಹೇಳಿದೆನೆಂದು ಅವರು ನನ್ನನ್ನು ಅಪಾರ್ಥಮಾಡಿಕೊಳ್ಳಬಾರದೆಂದು ವಿನಯವಾಗಿ ಪ್ರಾರ್ಥಿಸುತ್ತೇನೆ. ಅವರು ಹೇಳಿದ ಒಂದು ಮಾತು ನನಗೂ ಮಾನ್ಯ. ಅನುಮಾನ ಬಂದಾಗ ಪರಿಹಾರ ಮಾಡಿಕೊಳ್ಳಬೇಕು. ಈ ಪರಿಹಾರದ ವಿಷಯದ ಫಲವಾಗಿ ಈ ಯುವಕ ತನ್ನ ಪರಿಶೀಲಿತ ಅಭಿಪ್ರಾಯ ತಪ್ಪಾದರೆ ಶಿಕ್ಷೆಗೆ ಒಳಗಾಗುತ್ತೇನೆ ಎಂದು ತಾನೇ ಶಿಕ್ಷೆಯ ರೀತಿಯನ್ನು ಸೂಚಿಸಿದ್ದಾನೆ. ಅದು ಕಲೆಗಾರನ ನೀತಿ, ರೀತಿ. ನಾನೂ ಕಲೆಗಾರನೇ. ನನಗೂ ಆ ನೀತಿ, ರೀತಿ ಮಾನ್ಯ. ಅವನು ಹೇಳಿದಂತೆ ಶಿಲೆಯಲ್ಲಿ ದೋಷವಿದ್ದರೆ ನಾನೂ ಅದೇ ಶಿಕ್ಷೆ ಅನುಭವಿಸುತ್ತೇನೆ. ಅವನಿಗಾದರೆ ಇನ್ನೂ ಬಾಳು ತನ್ನ ಹರ್ಷದ ಸ್ವಾಗತ ನೀಡುತ್ತಿದೆ. ನನಗೆ ಬಾಳಿನಲ್ಲಿ ಏನೂ ಆಸೆ ಉಳಿದಿಲ್ಲ. ಅದರಿಂದ ಮಾನಾಪಮಾನಗಳ ಮಾತಾಗಲಿ, ಹೆಸರು ಹಾಳಾಗುತ್ತದೆಯೆಂಬ ಹೆದರಿಕೆಯಾಗಲಿ ಇಲ್ಲ. ಈ ವ್ಯಕ್ತಿಗೇ ಹೆಸರಿಲ್ಲ. ಎಂದಾಗ ಯಾವುದೂ ಅಂಟುವುದಿಲ್ಲ. ಮಗು, ನಾನು ಈಗ ಸಾರ್ವಜನಿಕರ ಪರಿಶೀಲನೆಗೆ ಸಿದ್ಧ. ಈಗ ಈ ವಿಗ್ರಹದ ಶಿಲೆ ದೋಷಯುಕ್ತವಾದುದೆಂದು ತೋರಿಸಿ, ಸಾಕ್ಷಿ ಮಾಡಿಕೊಡುವ ಕೆಲಸ ನಿನ್ನದು. ನಾನು, ನೀನು ಇಬ್ಬರೂ ಶಿಕ್ಷೆಗೆ ಬದ್ಧರು.''

"ಒಪ್ಪಿಗೆ.''

ಈವರೆಗೆ ಸುಮ್ಮನಿದ್ದ ಶಾನ್ತಲದೇವಿ, "ನಾನು ಈ ವಿಷಯದಲ್ಲಿ ವಾಸ್ತವವಾಗಿ ಪ್ರವೇಶಿಸಬಾರದೆಂದೇ

ಇದ್ದೆ. ಪರಿಶೀಲನೆಯ ಪ್ರಶ್ನೆ ಬಂದುದು ಯಾರದ್ದು ಸರಿ, ಯಾರದ್ದು ಸರಿಯಲ್ಲ ಎಂಬುದಕ್ಕಲ್ಲ. ಅದನ್ನು ಆ ದೃಷ್ಟಿಯಿಂದ ಪರಿಶೀಲಿಸಿ ಒಬ್ಬರಿಗೆ ಶಿಕ್ಷೆ, ಒಬ್ಬರಿಗೆ ಗೆಲವು ಎಂದು ವಿವೇಚಿಸುವ ಕೆಲಸ ಮಾಡುವುದು ಯೋಗ್ಯವಾದ ಕೆಲಸವಾಗುವುದಿಲ್ಲ. ನಾವು ಮಾಡುವ ಎಲ್ಲ ಕೆಲಸಗಳೂ ಯಾವುದಾದರೂ ಒಂದು ನಿಲುವಿನ ಆಧಾರದ ಮೇಲೆ, ಒಂದು ಪರಂಪರೆಗೆ ಬದ್ಧರಾಗಿ ನಮಗೆ ಒಳಿತಾಗುತ್ತದೆ ಎಂದು ಆಚರಿಸುತ್ತ ಬರುತ್ತಿದ್ದೇವೆ. ಈ ಪರಂಪರೆಯ ಹಿನ್ನೆಲೆಯಲ್ಲಿ ದೋಷಯುಕ್ತವಾದ ಶಿಲೆಯಲ್ಲಿ ವಿಗ್ರಹವನ್ನು, ಅದರಲ್ಲಿಯೂ ದೇವರ ವಿಗ್ರಹವನ್ನು ಕಡೆಯಬಾರದು. ಏಕೆಂದರೆ ಈ ದೇವ ವಿಗ್ರಹಕ್ಕೆ ನಾವು ಪ್ರಾಣತುಂಬುವ ಶಾಸ್ತ್ರೋಕ್ತ ಪರಂಪರೆಯನ್ನು ಬೆಳೆಸಿಕೊಂಡಿದ್ದೇವೆ. ಅದರಿಂದ ದೋಷಯುಕ್ತವಾದ ಶಿಲೆಯಲ್ಲಿ ದೇವವಿಗ್ರಹವನ್ನು ಕಡೆದು ಸ್ಥಾಪಿಸಿ, ಪ್ರಾಣಪ್ರತಿಷ್ಠೆ ಮಾಡಿದರೆ ಅದು ರೋಗಯುಕ್ತವಾದ ಬಾಳಿನಂತೆ ಆಗುತ್ತದೆ. ಮಾನವ ತನ್ನ ಬುದ್ಧಿಗೆ ನಿಲುಕಿದಷ್ಟು ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು ಒಂದು ನಿಲುವನ್ನು ತಂದುಕೊಂಡು ಅದರ ಆಧಾರದ ಮೇಲೆ ಕ್ರಿಯೆ ಮಾಡುತ್ತಾನೆ. ಹೀಗಿರುವಾಗಲೂ ಕೆಲವು ಸಲ ಕಣ್ಣು ತಪ್ಪಿ ಕೆಲವು ಚ್ಯುತಿಗಳು ಉಳಿಯಬಹುದು. ಅಂತಹ ಸಂದರ್ಭದಲ್ಲಿ ಆ ಚ್ಯುತಿ ಬುದ್ಧಿಪೂರ್ವಕವಾದುದಲ್ಲ. ಅಜ್ಞತೆಯಿಂದ ಆದುದು. ಅಂತಹವೆಲ್ಲ ಕ್ಷಮಾರ್ಹ. ನಾವು ಜೈನರು. ಹಿಂಸೆ ನಮಗೆ ವರ್ಜ್ಯ. ಆದರೆ ನಾವು ನಡೆವಾಗ ನಮ್ಮ ಪಾದಾಘಾತದಿಂದ ನಮ್ಮ ಕಣ್ಣಿಗೆ ಆಗೋಚರವಾದ ಕ್ರಿಮಿಗಳಿಗೆ ನಾವು ಹಿಂಸೆ ಮಾಡಿರಲು ಸಾಧ್ಯವೇ ? ಅಂತಹವಕ್ಕೆ ನಾವು ಗಮನ ಪ್ರಾಯಶ್ಚಿತ ಎಂಬ ವ್ರತ ಇಟ್ಟುಕೊಂಡಿದ್ದೇವೆ. ಅದರಿಂದ ಯಾವುದೇ ಚ್ಯುತಿ ಇದ್ದರೂ ಅದನ್ನು ಮತ್ರೋಚ್ಚರಣೆ ಕ್ರಿಯೆಗಳಿಂದ ನಿವಾರಿಸಿಕೊಂಡು ಕೆಲಸ ಸಾಗಿಸಲು ಅವಕಾಶವಿರುವಾಗ, ಈ ವಾದವನ್ನು ಇಲ್ಲಿಗೆ ಮುಕ್ತಾಯ ಮಾಡಿ ಯೋಜಿತ ರೀತಿಯಲ್ಲಿ ಕೆಲಸ ಸಾಗುವಂತೆ ಮಾಡೋಣ. ಶ್ರೀಮದಾಚಾರ್ಯರು ಇಲ್ಲಿಗೆ ಕಳಿಸಿರುವ ಆಗಮಶಾಸ್ತ್ರ ನಿಪುಣರ ಅಭಿಪ್ರಾಯ ನನ್ನ ಅಭಿಪ್ರಾಯದಂತೆಯೇ ಇದ್ದರೆ ಮುಂದಿನ ಕೆಲಸಕ್ಕೆ ತೊಡಗೋಣ. ಈ ಸ್ಪರ್ಧೆ, ಮೇಲು, ಕೀಳು, ಸರಿ–ತಪ್ಪು, ಈ ಹೊತ್ತಿನಲ್ಲಿ ಬೇಡ. ಪವಿತ್ರವಾದ ಒಂದು ಕೆಲಸ ಮಾಡುತ್ತಿರುವಾಗ ದ್ವೇಷಾಸೂಯೆಗಳಿಗೆ ಅವಕಾಶ ನೀಡುವ ಈ ಪರೀಕ್ಷೆ ಬೇಡವೆಂಬುದೇ ನನ್ನ ಮತ'' ಎಂದಳು.

ಮಹಾರಾಜ ಆಗಮಶಾಸ್ತ್ರ ವಿಶಾರದರತ್ತ ನೋಡಿದ.

ಅವರಲ್ಲಿ ಹಿರಿಯರಾದವರು ಎದ್ದು, ''ಮಹಾಸನ್ನಿಧಾನದಲ್ಲಿ ನಮ್ಮೆಲ್ಲರ ಪರವಾದ ಅರಿಕೆ ಇಷ್ಟು. ಅಪವಿತ್ರವಾದುದನ್ನು ಪವಿತ್ರ ಮಾಡುವ ಮಂತ್ರಶಕ್ತಿ ಪಡೆದವರು ಎಲ್ಲಿ ದೋಷವಿದೆಯೆ ಇಲ್ಲವೆ ಎಂದು ಪರಿಶೀಲಿಸುವ ಕೆಲಸವನ್ನು ಮಾಡುವುದೇ ಇಲ್ಲ. ದೋಷವಿಲ್ಲದ್ದೆಂದು ನಮಗೆ ಸಾಕ್ಷಿ ಮಾಡಿ ಕೊಟ್ಟರೂ ಸಹ ನಾವು ಅಗೋಚರವಾಗಿ ಉಳಿದಿರಬಹುದಾದ ದೋಷಗಳ ನಿವಾರಣೆಗೆ ಮಂತ್ರದ ನೆರವು ಪಡೆದೇ ಪ್ರತಿಷ್ಠಾಪನೆ ಮಾಡಿಸುತ್ತೇವೆ. ಅದರಿಂದ ಪಟ್ಟಮಹಾದೇವಿಯವರು ಅಪ್ಪಣೆ ಕೊಡಿಸಿದುದು ಸಾಧು. ಎಲ್ಲ ಧರ್ಮವೂ ಆಗೋಚರ ದೋಷಗಳಿಗಾಗಿ, ತಪ್ಪುಗಳಿಗಾಗಿ ಪ್ರಾಯಶ್ಚಿತ್ತ ಮಾಡಿಕೊಂಡೇ ತಮ್ಮ ಕ್ರಿಯೆಗಳನ್ನು ಮುಂದುವರಿಸುವುವು. ಮಹಾವೀರಸ್ವಾಮಿಯ ಜನನಕ್ಕೆ ಮುಂಚೆ ದೇವಲೋಕದವರು ಬಂದು ಅವರು ಜನ್ಮಧಾರಣೆ ಮಾಡಬೇಕಾದ ಗರ್ಭಾಂಬುಧಿಯನ್ನು ಶುದ್ಧಿ ಮಾಡಿದರೆಂದು ಕೇಳಿದ್ದೇವೆ. ಅದರಿಂದ ಈಗ ಸಿದ್ಧವಾಗಿರುವ ದೇವ ಪ್ರತಿಮೆಯ ಪ್ರತಿಷ್ಠೆಗೆ ನಮ್ಮೊಪ್ಪಿಗೆ ಇದೆ'' ಎಂದರು.

ಯುವಕ ಎದ್ದು ನಿಂತ. ಏನೂ ಮಾತನಾಡಲಿಲ್ಲ. ಸುಮ್ಮನೆ ಸ್ಥಪತಿ, ಮಹಾರಾಜ ಮತ್ತು ಪಟ್ಟಮಹಾದೇವಿಯರತ್ತ ನೋಡಿದ.

"ಇನ್ನೂ ಏನಾದರೂ ಹೇಳುವುದಿದೆಯೆ ?'' ಎಂದು ಶಾನ್ತಲದೇವಿ ಕೇಳಿದಳು.

"ಅವಕಾಶ ಕೊಟ್ಟರೆ.''

"ಅವಕಾಶ ಕೊಡಬಹುದು. ಆದರೆ ಅದರಿಂದ ಏನು ಲಾಭ ?''

"ಅದು ಆಮೇಲಿನ ವಿಚಾರ. ಈಗ ನನಗೆ ಒಮ್ಮೆ ಅವಕಾಶ ಕೊಡಿ.''

"ಹೇಳಬಹುದು.''

"ಪಟ್ಟಮಹಾದೇವಿಯವರು ವಿಚಾರವನ್ನು ಔದಾರ್ಯದಿಂದ ನೋಡಿದರು. ಆಗಮವೇತ್ತರು ಅನುಕೂಲಸಿಂಧು ಮಾರ್ಗ ಹೇಳಿದರು.''

"ಅಂದರೆ ನಾವು ಹೇಳಿದುದು ಸರಿಯಲ್ಲವೆಂದು ನೀನು ವ್ಯಾಖ್ಯಾನ ಮಾಡುತ್ತೀಯಾ ?'' ಎಂದು ಆಗಮಿಕರು ಕೇಳಿದರು.

"ನನಗೆ ನನ್ನ ವಿಚಾರ ಮಂಡನೆ ಮುಖ್ಯ. ಅದು ಉಳಿದವರ ವಿಚಾರದ ವ್ಯಾಖ್ಯಾನವೆನಿಸಿದರೆ ಹೊಣೆ ನನ್ನದಲ್ಲ. ತಾವು ಹೇಳಿದ ವಿಧಾನ ದೋಷವಿದೆಯೆಂದು ತಿಳಿಯದೆ ಇದ್ದಾಗಿನದು. ಅದರೆ ಈಗ ಪರಿಸ್ಥಿತಿಯೇ ಬೇರೆ.''

"ದೋಷ ಕಾಣುವವರೆಗೆ, ಇದೆಯೆಂದು ಭಾವಿಸುವುದು ಹೇಗೆ ?'' ಎಂದರು ಆಗಮಿಕರು.

"ನಾನು ಹೇಳುತ್ತಿಲ್ಲವೆ ?''

"ನೀನು, ಈಗ ತಾನೆ ಲೋಕದಲ್ಲಿ ಕಣ್ಣು ಬಿಡುತ್ತಿದ್ದೀಯೆ. ಎಂದಾಗ ನೀನು ಹೇಳಿಬಿಟ್ಟರೆ ಒಪ್ಪಲು ಸಾಧ್ಯವೆ ?''

"ಒಪ್ಪಿ ಎಂದು ನಾನು ಹೇಳುತ್ತಿಲ್ಲ. ದೋಷ ತೋರಿಸಲು ಅವಕಾಶ ಕೊಡಿ.''

"ಸುಮ್ಮನೆ ಸಮಯ ದಂಡ'' ಎಂದರು ಆಗಮಿಕರು.

"ಅದು ನಿಮ್ಮ ಭಾವನೆ. ಸಮಯದ ಬೆಲೆ ಕಲಾವಿದನಿಗೆ ಗೊತ್ತಿರುವ ಹಾಗೆ ಉಳಿದವರಿಗೆ ಗೊತ್ತಿರುವುದಿಲ್ಲ. ನಿಮ್ಮ ಸಮಯ ದಂಡ ಮಾಡಿದರೆ ಅದಕ್ಕೆ ಬೆಲೆಯಾಗಿ ನನ್ನ ನಾಲಿಗೆ ಮತ್ತು ಕೈಗಳನ್ನು ಕೊಡಲೊಪ್ಪಿದ್ದೇನಲ್ಲ ?''

"ಯುವ ಚಾಪಲ್ಯದ ಈ ಹಟ ಸಲ್ಲದು.''

"ಇದು ಚಾಪಲ್ಯವಲ್ಲ. ನಾನು ರೂವಾರಿ. ಅದು ವಂಶಪಾರಂಪರ್ಯವಾಗಿ ಬಂದ ಕಲೆ ನನಗೆ. ಶಿಲೆ ದೋಷಯುಕ್ತ ಎಂದು ಖಚಿತವಾದ ಪ್ರತಿಮೆ ಪ್ರತಿಷ್ಠೆಗೆ ಅಯೋಗ್ಯ. ಅದರ ದೋಷವನ್ನು ಗುರುತಿಸಿ, ಅದನ್ನು ತೆಗೆದು, ನಂತರ ಬೇಕಾದರೆ ಪ್ರತಿಷ್ಠೆ ಮಾಡಿಸಿ. ಈಗಂತೂ ಈ ಪ್ರತಿಮೆ ಪ್ರತಿಷ್ಠೆಗೆ ಅಯೋಗ್ಯ. ಇದನ್ನು ಹೀಗೆಯೆ ಪ್ರತಿಷ್ಠೆ ಮಾಡಿದರೆ ಇದನ್ನು ಮಾಡಸಲು ಪ್ರೇರಣೆ ಇತ್ತವರು, ಇದರ ನಿರ್ವಹಣೆಗೆ ತೊಡಗಿದವರು ಎಲ್ಲರಿಗೂ ಕೆಡುಕಾಗುತ್ತದೆ. ಅದರ ಬದಲು ನಾನು ಪ್ರಾಣತ್ಯಾಗ ಮಾಡುವುದು ವಾಸಿ. ನಮ್ಮ ರಾಜವಂಶಕ್ಕೆ ಇದರಿಂದ ಹಾನಿ ತಟ್ಟಬಾರದು. ನಾನೊಬ್ಬ ಸಣ್ಣ ಪ್ರಜೆ. ಆದರೂ ಇದು ನನ್ನ ತಾಯಿನಾಡು. ಇದು ಶಾಶ್ವತ ಕೀರ್ತಿಗೆ ಭಾಜನವಾಗಬೇಕೇ ವಿನಾ ಕೆಡುಕಿಗೆ ಸ್ವಾಗತ ನೀಡಲು ಅವಕಾಶವಾಗಲು ನಾನು ಸಿದ್ಧವಿಲ್ಲ ಸ್ಥಪತಿಗಳನ್ನೇ ಕೇಳಿ. ದೋಷವಿದೆಯೆಂದು ಅನುಮಾನ ಬಂದುದನ್ನು ಪ್ರತಿಷ್ಠೆ ಮಾಡುತ್ತಾರೆಯೆ ಎಂದು ?''

“ಅವರು ದೋಷವಿಲ್ಲ ಎಂದು ಅಭಿಪ್ರಾಯ ಪಟ್ಟಿರುವಾಗ....”

“ಭಿನ್ನಾಭಿಪ್ರಾಯ ಬಂದಾಗ ಏನು ಮಾಡಬೇಕೆಂದನ್ನು ಅವರನ್ನೇ ಕೇಳಿ. ಅವರೂ ಸಹ ಪರಂಪರಾನುಗತವಾಗಿ ಬಂದಿರುವ ರೂವಾರಿ ವಂಶದವರು ತಾನೇ ? ಅವರು ಈಗ ಮೂಲತತ್ವ ಕೈಬಿಟ್ಟು ಅಂಜಿ ಪಟ್ಟುಹಿಡಿದರೆ ಅದನ್ನು ನಾನು ಪರಂಪರೆಯ ಚಾಪಲ್ಯದ ಪಟ್ಟು ಸ್ವಾರ್ಥಪ್ರೇರಕ ಎಂದು ಭಾವಿಸ ಬೇಕಾಗುತ್ತದೆ.”

“ಒಂದು ರೀತಿಯಲ್ಲಿ ಎಲ್ಲರ ಅಭಿಪ್ರಾಯಗಳೂ ಈಗ ತಿಳಿದಂತಾಯಿತು. ಈ ಯುಕ ಹೇಳುವ ಒಂದು ಮಾತನ್ನು ನಾನು ಒಪ್ಪುತ್ತೇನೆ. ಅದರಲ್ಲಿ ದೋಷವಿಲ್ಲ ಎಂಬುದು ಈಗಲೂ ನನ್ನ ಖಚಿತ ಅಭಿಪ್ರಾಯವಾಗಿದ್ದರೂ ಇನ್ನೊಬ್ಬ ರೂವಾರಿ ಅದು ದೋಷಯುಕ್ತ ಎಂದಾಗ ಅದನ್ನು ಪರೀಕ್ಷಿಸುವುದು ಸಾಧು. ಅದರಿಂದ ಈ ಮಾತನ್ನು ಮುಂದುವರಿಸಿ ಕಾಲವ್ಯಯ ಮಾಡುವುದು ಬೇಡ. ಪರೀಕ್ಷೆ ಆಗಲಿ” ಎಂದು ಸ್ಥಪತಿ ತನ್ನ ತೀರ್ಮಾನ ಹೇಳಿದ. ಅವನ ಮಾತಿನಲ್ಲಿ ವಿವೇಚನೆ ಇತ್ತು. ಕಹಿ ಇರಲಿಲ್ಲ

“ಅಂದರೆ ಆಕಸ್ಮಾತ್ ಶಿಲೆದೋಷಯುಕ್ತವೆಂದು ಸಿದ್ಧವಾದರೆ ಈಗ ನೀವೇ ಇಟ್ಟಿರುವ, ಶ್ರೀಮದಾಚಾರ್ಯರು ಒಪ್ಪಿರುವ, ಮುಹೂರ್ತವು ನಡೆಯುವುದು ಹೇಗೆ ?” ಎಂದು ಬಿಟ್ಟಿದೇವ ಕೇಳಿದ.

“ಇಷ್ಟು ಜನ ಪ್ರಸಿದ್ಧ ರೂವಾರಿಗಳಿದ್ದಾರೆ. ವೇಳೆಗೆ ಸರಿಯಾಗಿ ಇನ್ನೊಂದು ಪ್ರತಿಮೆ ಆಗುತ್ತದೆ.”

ಆದರೆ ಯಾವ ರೂವಾರಿಯೂ ಮಾತನಾಡಲಿಲ್ಲ. ಪರಸ್ಪರ ಒಬ್ಬರನ್ನೊಬ್ಬರು ನೋಡಿಕೊಂಡರು ಅಷ್ಟೆ

“ಏನು ರೂವಾರಿಗಳೇ ?” ಎಂದು ಬಿಟ್ಟಿದೇವ ಕೇಳಿಯೂ ಕೇಳಿದ.

ಯಾರೂ ತುಟಿಪಿಟಕ್ಕೆನ್ನಲಿಲ್ಲ. ಚಾವುಣ, “ಅದು ಬಹಳ ಕಷ್ಟದ ಕೆಲಸ. ಇರುವ ಸಮಯ ಬಹಳ ಅಲ್ಪ. ಅದರಿಂದ ಧೈರ್ಯ ಸಾಲದು” ಎಂದ.

“ಹಾಗಾದರೆ ಮುಂದೇನು ಗತಿ ?” ಎಂದ ಬಿಟ್ಟಿದೇವ.

“ಈ ಯುವಕ ಒಂದು ದಿವಸದಲ್ಲಿ ಮೂರ್ತಿ ಕಡೆಯಬಲ್ಲ. ನಾನು ಒಂದು ದಿನದಲ್ಲಿ ಕಡೆಯಬಲ್ಲೆ. ಇಬ್ಬರಲ್ಲೊಬ್ಬರ ಕೈ ಹೇಗೊ ಉಳಿದಿರುತ್ತದೆಯಲ್ಲ. ಹೆದರಬೇಕಿಲ್ಲ ಇಟ್ಟ ಮುಹೂರ್ತಕ್ಕೆ ಪ್ರತಿಷ್ಠಾಪನೆ ಉಂಟು” ಎಂದ ಸ್ಥಪತಿ.

ಸಭೆಯಲ್ಲಿ ಮೌನವಾವರಿಸಿತು. ಬಿಟ್ಟಿದೇವ ಸಹ ನಿರ್ಣಯ ಕೊಡಲು ಹಿಂಜರಿದು ಪಟ್ಟಮಹಾದೇವಿಯೊಂದಿಗೆ ಪಿಸುಗುಟ್ಟಿದ.

“ಇಬ್ಬರು ರೂವಾರಿಗಳ ಅಭಿಪ್ರಾಯ ಒಂದಾಗಿದೆ ಈಗ. ಪರೀಕ್ಷೆ ಆಗಲಿ ನಾಳೆ ಬೆಳಿಗ್ಗೆ ಈ ಪರೀಕ್ಷೆ ಸಾರ್ವಜನಿಕರಿದಿರಿಗೆ. ಈಗ ಕೇವಲ ಪರೀಕ್ಷೆಗೆ ಸನ್ನಿಧಾನ ಒಪ್ಪಿಗೆಯಿತ್ತದ್ದಾರೆ. ಉಳಿದೆಲ್ಲ ವಿಷಯ ನಂತರ ವಿಚಾರಿಸಲಾಗುವುದು. ಈ ಸಭೆ ಮುಗಿಯಿತು. ಭಾಗವಹಿಸಿದ, ಉಪಸ್ಥಿತರುವ ಎಲ್ಲರಿಗೂ ಅರಮನೆ ಕೃತಜ್ಞವಾಗಿದೆ” ಎಂದಳು ಪಟ್ಟಮಹಾದೇವಿ.

ಬಿಟ್ಟಿದೇವ ಎದ್ದ. ಉಳಿದವರೂ ಎದ್ದರು. ಏನೋ ಒಂದು ಬಗೆಯ ಅಸಮಾಧಾನ ಮಾತ್ರ ಎಲ್ಲರ ಮುಖದಲ್ಲಿಯೂ ಕಂಡು ಬಂತು. ಏನೋ ಒಂದು ಪೀಡೆ ಬಂದು ಅಂಟಿ ಬಿಟ್ಟಿದೆ ಎಂಬ ಭಾವ

ತಾಳಿಕೊಂಡು ಎಲ್ಲರೂ ಹೊರಟರು. ತಿರುವರಂಗದಾಸನಿಗೆ ಮಾತ್ರ ಒಂದು ಬಗೆಯ ಸಂತೋಷವೇ ಆಗಿತ್ತು.

ವೇಲಾಪುರಿಯ ತುಂಬಾ ಈ ಕೌತಕದ ವಿಷಯ ಪ್ರಸಾರವಾಯಿತು.

ಸಭೆ ಮುಗಿದ ಮೇಲೆ ಅರಮನೆಯ ಮೊಗಸಾಲೆಯತ್ತ ಸಾಗಿತ್ತ ಯುಕನನ್ನು ರೇವಿಮಯ್ಯ ಸಂಧಿಸಿ, "ಪಟ್ಟಮಹಾದೇವಿಯವರು ಕರೆಯುತ್ತಾರೆ. ಸ್ವಲ್ಪ ಇಲ್ಲೇ ಇರಿ" ಎಂದ. ಅವನು ನಿಂತ.

ಅಲ್ಲೇ ಇದ್ದ ಸ್ಥಪತಿ 'ನಾನು ಬರಬೇಕೆ ?' ಎನ್ನುವಂತೆ ರೇವಿಮಯ್ಯನನ್ನು ನೋಡಿದ. ಅವನು ಏನಿಲ್ಲವೆಂಬಂತೆ ಸನ್ನೆಮಾಡಿದ. ಅವನು ತನ್ನ ಬಿಡಾರಕ್ಕೆ ಹೊರಟುಹೋದ.

ಬಂದಿದ್ದವರೆಲ್ಲರೂ ಹೊರಟುಹೋದ ಮೇಲೆ ರೇವಿಮಯ್ಯ ಯುವಕನನ್ನು ಅಂತಃಪುರಕ್ಕೆ ಕರೆದುಕೊಂಡು ಹೋದ. ಅವನು ಒಳಗೆ ಬರುತ್ತಿದ್ದ ಹಾಗೆಯೇ, "ಬಾ ಮಗು. ಕುಳಿತಿಕೋ" ಎಂದು ಆಸನ ಸೂಚಿಸಿದಳು.

"ಇರಲಿ ಪರವಾಗಿಲ್ಲ. ಅಪ್ಪಣೆಯಾಯಿತಂತೆ ?"

"ಹೌದು. ಏಕೆಂದು ಬಲ್ಲೆಯಾ ?"

"ನನ್ನ ಉದ್ಧಟತನವನ್ನು ಖಂಡಸಲು ಕರೆದಿರಬಹುದು."

"ನಿನಗೆ ಹಾಗನ್ನಿಸಿದ್ದರೆ, ನೀನೇ ತಿದ್ದಿಕೊಂಡು ವರ್ತಿಸಬಹುದಾಗಿತ್ತಲ್ಲ ?"

ಸ್ವಲ್ಪ ಪೆಚ್ಚಾದವನಂತೆ ಅವನು ಪಟ್ಟಮಹಾದೇವಿಯತ್ತ ನೋಡಿದ.

"ಹೆದರುವ ಕಾರಣವಿಲ್ಲ. ಪಟ್ಟಮಹಾದೇವಿಯವರು ಔದಾರ್ಯದಿಂದ ನೋಡಿದರು ಎಂದು ನೀನು ವಿನಯವಾಗಿ ಹೇಳಿದರೂ ನನ್ನ ನಿಲುವು ನಿನಗೆ ಪಥ್ಯವಾಗಲಿಲ್ಲ ಎಂದು ನಾನು ಭಾವಿಸಿದ್ದೇನೆ. ನನ್ನ ನಿಲುವನ್ನು ಒಪ್ಪಬೇಕೆಂಬ ಹಟವನ್ನು ನಾನೆಂದೂ ತಾಳಿದವಳಲ್ಲ. ಅದೇ ರೀತಿ ನನ್ನದು ಸರಿ ಎನಿಸಿದಾಗ ಉಳಿದವರನ್ನು ಒಪ್ಪಿಸುವುದರಲ್ಲಿ ನಾನು ಪಟ್ಟು ಹಿಡಿಯುತ್ತೇನೆ. ನೀನು ಸಹ ಅದೇ ರೀತಿ ಪಟ್ಟು ಹಿಡಿದಿದ್ದೀಯೆ ಎಂದು ಭಾವಿಸಿದ್ದೇನೆ. ಆದರೆ ಲೋಕಾನುಭವ ಹೆಚ್ಚಿದಂತೆ ಸತ್ಯಾನ್ವೇಷಣೆಯ ಜೊತೆಗೆ, ಹಿಡಿಯುವ ಪಟ್ಟಿನ ಜೊತೆಗೆ, ಔದಾರ್ಯದಿಂದಲೂ ವಿಷಯವನ್ನೂ ಪರಿಶೀಲಿಸಬೇಕೆಂಬ ಪ್ರಜ್ಞೆ ಮೂಡುತ್ತದೆ.

"ಔದಾರ್ಯದ ಉರುಳಿನಲ್ಲಿ ಸತ್ಯ ಹಿಂಜರಿಯುವಂತಾಗುವುದು ಸರಿಯಾದೀತೆ ?"

"ಸತ್ಯ ಮರೆಮಾಡಬೇಕೆಂಬುದು ಎಂದೂ ಔದಾರ್ಯದ ಗುರಿಯಾಗುವುದಿಲ್ಲ. ಯಾವುದೇ ಕೆಲಸ ಮಾಡುವಾಗ ತಪ್ಪಾಗುವುದು ಸಹಜ. ಆ ತಪ್ಪು ದುರುದ್ದೇಶ ರಹಿತವಾಗಿದ್ದರೆ, ಅಜ್ಞತೆಯಿಂದ ಆಗಿದ್ದರೆ, ಅಂತಹ ಹೊತ್ತಿನಲ್ಲಿ ಔದಾರ್ಯದಿಂದ ನೋಡುವುದು ಯುಕ್ತ. ಔದಾರ್ಯ ಯಾವಾಗಲೂ ಶಿಕ್ಷೆಯ ಮೇಲೆ ಕಣ್ಣಿಟ್ಟಿರುತ್ತದೆ. ಈಗ ಹೇಳು. ನಾನು ತೋರಿದ ಔದಾರ್ಯ ನಿನ್ನ ಸಲುವಾಗಿಯೋ ಸ್ಥಪತಿಗಳ ಸಲುವಾಗಿಯೋ ?"

"ನನಗೆ ಹೇಗೆ ಗೊತ್ತಾಗಬೇಕು ?"

"ಏಕೆ ಗೊತ್ತಾಗುವುದಿಲ್ಲ ನಿನ್ನ ನಿಲುವು ಸರಿ ಎಂದು ನೀನು ಅದನ್ನು ಸಾಧಿಸಲು ಪಣ ತೊಟ್ಟಿದ್ದೀಯೆ ಅಲ್ಲವೆ ?"

"ಹೌದು. ಆ ವಿಷಯದಲ್ಲಿ ನನ್ನ ಅಭಿಪ್ರಾಯವು ಖಚಿತವಾಗಿದೆ."

"ಎಂದಾಗ ನನ್ನ ಔದಾರ್ಯ ಸ್ಥಪತಿಗಳ ಸಲುವಾಗಿ ಎಂದು ನೀನು ಭಾವಿಸಿತಾನೆ ಆ ಮಾತನ್ನು ಆಡಿದೆ ?"

"ಇರಬಹುದು."

"ಎಂದಾಗ ನನ್ನ ಔದಾರ್ಯ ನಿನ್ನ ದೃಷ್ಟಿಯಲ್ಲಿ ವ್ಯಂಗ್ಯವಾಯಿತಲ್ಲವೆ ?"

"ಹಾಗೆಲ್ಲ ನನ್ನ ಮನಸ್ಸಿನಲ್ಲಿ ಯೋಚನೆ ಬರಲಿಲ್ಲ."

"ಮನುಷ್ಯನಿಗೆ ಎಚ್ಚೆತ್ತ ಮನಸ್ಸು, ಸುಪ್ತ ಮನಸ್ಸು ಎಂದು ಎರಡು ಮನಸ್ಸುಗಳು ಇರುತ್ತವೆ ಎಂಬುದು ನಿನಗೆ ಗೊತ್ತೆ ?"

"ನನಗೆ ಗೊತ್ತಿಲ್ಲ."

"ಅದರಿಂದಲೇ ನಿನ್ನ ಮಾತಿನ ವ್ಯಂಗ್ಯ ನಿನಗೆ ಅರ್ಥವಾಗಲಿಲ್ಲ."

"ನನಗೆ ಸನ್ನಿಧಾನದಲ್ಲಿ ಗೌರವ ಇದ್ದುದರಿಂದ ಹಾಗೆ ಹೇಳಿದೆ."

"ಹೌದು. ಗೌರವ ಇತ್ತು. ನನ್ನ ಮಾತಿಗೆ ಜನ ಬೆಂಬಲ ಸಿಗಬಹುದೆಂಬ ಹೆದರಿಕೆಯೂ ನಿನ್ನಂತರಂಗದಲ್ಲಿ ಹುಟ್ಟಿತು. ಆಗ ಸುಪ್ತ ಮನಸ್ಸು ನಿನ್ನನ್ನು ಪ್ರಚೋದಿಸಿತು. ಅದರ ಫಲವಾಗಿ ನಿನ್ನ ಮಾತಿನಲ್ಲಿ ವ್ಯಂಗ್ಯ ಬೆರೆಯಿತು. ಏಕೆಂದರೆ ಸೋಲನ್ನೆದುರುಸಿಲು ಸ್ಥಪತಿಗಳು ಹೆದರುತ್ತಾರೆಂದೂ ಈ ಅರಮನೆ, ಪಟ್ಟಮಹಾದೇವಿ ಹೆದರುತ್ತಾರೆಂದೂ ನೀನು ಭಾವಿಸಿದೆ. ಇದೆಲ್ಲ ಯೋಚನೆ ನಿನ್ನಂತರಂಗದಲ್ಲಿ ಜರುಗಿದೆ."

"ನಿಮ್ಮ ಮಾತನ್ನು ಕೇಳಿದರೆ ಇರಬಹುದೇನೋ ಎನ್ನಿಸುತ್ತದೆ. ಆದರೆ ಹಾಗೇಕೆ ನನಗೆ ಅನ್ನಿಸಬೇಕು ಎಂಬುದೇ ಅರ್ಥವಾಗಲಿಲ್ಲ."

"ಅದಕ್ಕೆ ನಿನಗೂ ತಿರುವಂಗದಾಸರಿಗೂ ನಡೆದ ಸಂವಾದ ಕಾರಣ. ಇಲ್ಲಿನ ಎಲ್ಲರೂ ನೀನು ಕಿರಿಯ ನಿನ್ನ ಮಾತಿಗೆ ಬೆಲೆ ಕೊಡದವರು ಎಂಬ ಭಾವ ನಿನ್ನಂತರಂಗದಲ್ಲಿ ಮೂಡಿ ನಿಂತಿತು. ಅದರ ಫಲವೇ ನಿನ್ನೆಲ್ಲ ಮಾತುಗಳು. ನೀನು ಆಡಿದ ಎಲ್ಲ ಮಾತುಗಳೂ ಬುದ್ಧಿಪೂರ್ವಕವಾಗಿ ಆಡಿದವಲ್ಲ. ಅವುಗಳಲ್ಲಿ ಕೆಲವು ನಿನ್ನ ಸುಪ್ತ ಮನಸ್ಸಿನ ಪ್ರೇರಣೆಗೆ ಒಳಗಾದವು. ನಿನಗದರ ಅರಿವಾಗಿದೆಯೋ ಇಲ್ಲವೋ ಹೇಳಲಾರೆ. ಶಾಂತವಾಗಿ ಆಲೋಚಿಸಿದರೆ ನಾನು ಹೇಳಿದುದು ನಿನ್ನ ಮನಸ್ಸಿಗೆ ಅರ್ಥವಾಗುವುದು."

"ಪ್ರಯತ್ನಿಸುತ್ತೇನೆ. ನನ್ನಲ್ಲಿ ಉದ್ದೇಶಿತ ವ್ಯಂಗ್ಯವಿರಲಿಲ್ಲ ಎಂದು ಮಾತ್ರ ಸನ್ನಿಧಾನ ಒಪ್ಪಿಕೊಳ್ಳಬೇಕು."

"ನನ್ನ ಮನಸ್ಸಿಗೆ ಸಮಾಧಾನವಾದರೆ ಖಂಡಿತವಾಗಿ ಒಪ್ಪಿಕೊಳ್ಳುತ್ತೇನೆ. ಆದರೆ ಆ ಪರಿಶೀಲನೆ, ಪರೀಕ್ಷೆಗಳ ಹಿನ್ನಲೆಯೆಲ್ಲ ಏನೆಂದು ನನಗೆ ಅರ್ಥವಾಗುತ್ತಿಲ್ಲ. ಈ ಮಂದಿರದ ಕೆಲಸ ಆರಂಭವಾಗಿ ಈಗ ಹೆಚ್ಚು ಕಡಿಮೆ ಒಂದೆರಡು ಸಂವತ್ಸರಗಳೇ ಕಳೆದು ಹೋಗಿವೆ. ಅದಕ್ಕೆ ಮೊದಲೇ ರೂವಾರಿಗಳಿರುವ ಎಲ್ಲ ಮುಖ್ಯ ನೀನು ಸ್ಥಳಗಳಿಗೂ ನಾವು ಸುದ್ದಿ ಮುಟ್ಟಿಸಿದ್ದವು. ಆಗಲೂ ಬರಲಿಲ್ಲ. ನಡುವೆಯೂ ಬರಲಿಲ್ಲ. ಈಗ, ಅದೂ ಮುಹೂರ್ತ ನಿಶ್ಚಯವಾಗಿರುವ ಸಮಯದಲ್ಲಿ ಬಂದಿರುವ ನಿನ್ನ ಉದ್ದೇಶದಲ್ಲಿ ಸದ್ಭಾವನೆ ಇದೆಯೆಂದು ನಾವು ಹೇಗೆ ಭಾವಿಸಬೇಕು ?"

"ಅಂದರೆ ನನ್ನ ಮಾತು ಅಪನಂಬಿಕೆಯದು ಎಂದು ಸನ್ನಿಧಾನ ಭಾವಿಸುವಿರೇನು ?''

"ಒಂದು ವ್ಯಕ್ತಿಯ ಮಾತು ಸರಿಯೆನಿಸಬೇಕಾದರೆ ಆ ವ್ಯಕ್ತಿಯ ಪೂರ್ವಾಪರವೆಲ್ಲ ಗೊತ್ತಿರಬೇಕು. ಅದೆಲ್ಲ ತಿಳಿಯುವವರೆಗೆ ಅನುಮಾನಗಳು ಇದ್ದೇ ಇರುತ್ತವೆ.''

"ಹಾಗಾದರೆ ಈ ಸ್ಥಪತಿ ಯಾರೆಂದು ತಮಗೆ ಗೊತ್ತೋ ?''

"ಗೊತ್ತಿಲ್ಲವೆಂದು ನಿನ್ನ ಭಾವನೆಯೇನು ?''

"ಇಲ್ಲಿ ಯಾರಿಗೂ ಅವರ ವಿಷಯ ಏನೂ ಗೊತ್ತಿಲ್ಲ.''

"ಯಾರಿಗೂ ಗೊತ್ತಿಲ್ಲವೆಂದರೆ ನನಗೂ ಗೊತ್ತಿಲ್ಲವೆಂದು ಅಭಿಪ್ರಾಯವೆ ?''

"ಅದು ಇಲ್ಲಿನ ಎಲ್ಲರ ತಿಳುವಳಿಕೆ ಅವರ ಬೇಕು ಬೇಡಗಳನ್ನು ನೋಡುವ ಪರಮಾಪ್ತ ಊಳಿಗದ ಮಂಚಣನಿಗೂ ಸಹ ಏನೂ ಗೊತ್ತಿಲ್ಲ.''

"ಅಂದರೆ ನೀನು ಅವರ ವಿವರ ತಿಳಿಯಲು ಆಸಕ್ತಿಪಟ್ಟಿದ್ದೆ ಎಂದು ಸ್ಪಷ್ಟವಾಯಿತು.''

"ಹೌದು.''

"ಏಕೆ ?''

"ಕುತೂಹಲ. ಇಂತಹ ಭವ್ಯ ಕಲ್ಪನೆ ಮಾಡಿದ ಸ್ಥಪತಿ ಯಾವ ಮನೆತನದವರು ? ಯಾವ ಸ್ಥಳದವರು ? ಎಂದು ಅರಿಯಬೇಕೆಂಬ ಸಹಜ ಕುತೂಹಲ.''

"ಸ್ವವಿಷಯ ಹೇಳಲಾರದ ನಿನಗೆ ಇತರರ ವಿಷಯ ಅರಿಯಲು ಏನು ಅಧಿಕಾರವಿದೆ ?''

"ಸ್ವವಿಷಯ ಹೇಳದಿರಲು ನನಗೆ ಕಾರಣವುಂಟು.''

"ಅವರಿಗೂ ಅದೇ ರೀತಿ ಕಾರಣವಿರಬಹುದು.''

"ಆ ಕಾರಣ ತಮಗೆ ತಿಳಿದಿರಬಹುದಲ್ಲ ?''

"ತಿಳಿಸಿದರು. ಒಂದು ದಿನ ಅವರ ಬಾಯಿಂದ ಹೊರಡಿಸಿದೆ. ಅಂದಿನಿಂದ ಅವರು ಬದಲಾದ ವ್ಯಕ್ತಿಯಾದರು.''

"ಹಾಗಾದರೆ ಅವರು ಯಾರು ?''

"ಅವರೊಬ್ಬ ನೊಂದ ಜೀವಿ.''

"ಎಲ್ಲಿಯವರು ?''

"ನೀನು ಎಲ್ಲಿಯವನು ? ನಿನ್ನ ತಂದೆ ಯಾರು ? ನಿನ್ನ ತಾಯಿ ಯಾರು ? ನೀನು ಇಲ್ಲಿಗೆ ಪ್ರತಿಷ್ಠಾಪನೋತ್ಸವಕ್ಕೆಂದು ಬಂದೆಯಾ ? ಅಥವಾ ಬೇರೆ ಏನಾದರೂ ಉದ್ದೇಶವಿತ್ತೋ ?''

"ನನಗೇನು ಬೇರೆ ಉದ್ದೇಶವಿರಬೇಕು ?''

"ನಿನ್ನ ಹಟಮಾರಿತನಕ್ಕೆ ಹಾಗಾದರೆ ಏನು ಕಾರಣ ?''

"ಅದು ಒಮ್ಮುಖವಲ್ಲ. ಅವರು ಒಪ್ಪಬಹುದಾಗಿತ್ತಲ್ಲ. ಈ ಬಹಿರಂಗ ಜಿಜ್ಞಾಸೆ ಏಕೆ ಬೇಕಿತ್ತು. ನಾನು ಕಿರಿಯ. ಅಧಿಕಾರಿಗಳ ಬೆಂಬಲವಿಲ್ಲದವನು. ಛೀಮಾರಿ ಹಾಕಿಸಬೇಕೆಂದು ಇರಬಾರದೇಕೆ ?''

"ನೀನು ಆ ಪ್ರಶ್ನೆ ಹಾಕಿದರೆ ನಾನೊಂದು ಪ್ರಶ್ನೆ ಹಾಕುತ್ತೇನೆ. ಹಿಂದೆ ಈ ಮಂದಿರಕ್ಕೆ ಒಬ್ಬ ಸ್ಥಪತಿ ಇದ್ದರು. ಆತನ ನಕ್ಷೆ ಒಪ್ಪಿತವಾಗಿತ್ತು. ಆ ಸಮಯದಲ್ಲಿ ಈತ ಇಲ್ಲಿಗೆ ಬಂದರು. ಈತನ ಕಲ್ಪನೆಯಲ್ಲಿ ಹೊಸತನ ತುಂಬಿತ್ತು. ಈ ನಕ್ಷೆ ಒಪ್ಪಿಗೆಯಾಗಿ ಇದೇ ರೀತಿ ಕೆಲಸ ಸಾಗಲಿ ಎಂದು ಸ್ಥಪತಿಗಳಿಗೆ ತಿಳಿಸಲಾಯಿತು. ನನ್ನ ನಕ್ಷೆ ತಿರಸ್ಕರಿಸಿರುವಾಗ ಬೇರೊಬ್ಬನ ನಕ್ಷೆಯಂತೆ ನಾನೇಕೆ ಕೆಲಸ ಮಾಡಲಿ ಎಂದು ಆತ ಹೊರಟುಹೋದರು. ಇಲ್ಲಿ ತನಗೆ ಅಪಮಾನವಾಯಿತೆಂದೂ ಅದರ ಸೇಡು ತೀರಸಲೆಂದೂ ಆತ ನಿನ್ನನ್ನು ಇಲ್ಲಿಗೆ ಕಳಿಸಿರಬಾರದೇಕೆ ?''

"ನಾನು ಹಾಗೆಲ್ಲ ಯಾರ ಪ್ರೇರಣೆಯಿಂದಲೂ ಬರಲಿಲ್ಲ. ನಾನೊಂದು ಅನ್ವೇಷಣೆಯಲ್ಲಿ ತೊಡಗಿದ್ದೇನೆಂದು ಮೊದಲೇ ತಿಳಿಸಿದ್ದೇನೆ.''

"ಅದೆಲ್ಲ ನಿಜ ಎಂದು ನಂಬುವುದು ಹೇಗೆ ? ನಿನ್ನ ಪೂರ್ಣ ವಿವರ ಕೊಟ್ಟರೆ, ನಂತರ ನಿನ್ನ ಮಾತನ್ನು ನಂಬುವ ಬಿಡುವ ವಿಷಯ ನಿರ್ಣಯಿಸುತ್ತೇವೆ.''

"ನನ್ನ ವಿವರ ನಾನು ಗುರಿ ಸಾಧಿಸುವವರೆಗೆ ನೀಡುವುದಿಲ್ಲ.''

"ನಿನ್ನ ಗುರಿ ಏನು ?''

"ಅಮೂಲ್ಯವಾದುದೊಂದನ್ನು ನಾವು ಕಳೆದುಕೊಂಡಿದ್ದೇವೆ. ಅದು ದೊರಕಬೇಕು.''

"ಅದು ಬಹಳ ಬೆಲೆಯುಳ್ಳ ಪದಾರ್ಥವೆ ?''

"ಅಲ್ಲ. ಅದು ನಮ್ಮೊಬ್ಬ ಸಂಬಂಧಿ.''

"ಯಾವಾಗಿನಿಂದ ಅನ್ವೇಷಣೆ ಮಾಡುತ್ತಿದ್ದೀಯೆ ?''

"ನನ್ನ ಅನ್ವೇಷಣೆ ಇತ್ತೀಚಿನದು. ಆದರೆ ಅನ್ವೇಷಣೆ ಮಾತ್ರ ಅನೇಕ ವರ್ಷಗಳಿಂದ ನಡೆಯುತ್ತಿದೆ.''

"ಆ ಪರಿಸ್ಥಿತಿ ಬಂದುದು ಏಕೆ ?''

"ನನಗೆ ಗೊತ್ತಿಲ್ಲ.''

"ಮತ್ತಾರಿಗೆ ಗೊತ್ತಿದೆ ?''

"ನನ್ನ ತಾಯಿಗೆ ಗೊತ್ತಿದೆ.''

"ಅವರಿರುವುದೆಲ್ಲಿ ?''

"ನಮ್ಮ ಸ್ವಗ್ರಾಮದಲ್ಲಿ.''

"ನಿಮ್ಮ ಸ್ವಗ್ರಾಮವಾವುದು ?''

"ಕ್ರೀಡಾಪುರ.''

"ಅಂದರೆ ಬಹಳ ದೂರವೇನಲ್ಲ ?''

"ಸನ್ನಿಧಾನಕ್ಕೆ ನಮ್ಮ ಗ್ರಾಮ ಗೊತ್ತೆ ?''

"ಗೊತ್ತು. ಶಿವಗಂಗೆಗೆ ಐದಾರು ಹರಿದಾರಿ ದೂರ. ಅಲ್ಲಿ ಎಷ್ಟು ರೂವಾರಿಗಳ ಮನೆತನಗಳಿವೆ?''

"ಆರು ಮನೆತನಗಳಿವೆ.''

"ಆದರೂ ಇಲ್ಲಿನ ದೇವಮಂದಿರದ ಕೆಲಸಕ್ಕೆ ಯಾರೂ ಏಕೆ ಬರಲಿಲ್ಲ ?''

"ಕೈ ಬಿಡುವಿದ್ದರೆ ಬಂದಾರು ? ಎಲ್ಲ ಮನೆತನದ ರೂವಾರಿಗಳೂ ಬೇರೆ ಬೇರೆ ಕಡೆ ಕೆಲಸ ಒಪ್ಪಿಕೊಂಡು ಹೋಗಿರುವವರೇ, ಹೆಂಗಸರು, ಹುಡುಗುರು ಮಾತ್ರ ಊರಿಲ್ಲಿ ಇರುವುದು. ಬಹುಶಃ ಈ ದೇವಮಂದಿರ ನಿರ್ಮಾಣದ ಸುದ್ದಿ ಬಂದಾಗ ಯಾರೂ ಇರಲಿಲ್ಲವೇನೋ ?''

"ನೀನು ಇದ್ದಿರಬೇಕಲ್ಲ ?''

" ನಾನು ಸಹ ಈಗ ಮೂರು ಸಂವತ್ಸರವಾಯಿತು ಊರು ಬಿಟ್ಟು ಅಲೆಯುತ್ತಿದ್ದೇನೆ.''

"ನಿಮ್ಮ ತಾಯಿಗೆ ನೀನೇ ಹಿರಿಯ ಮಗನೆ ?''

"ಹಿರಿ, ಕಿರಿ ಎಲ್ಲಾ ನಾನೊಬ್ಬನೇ !''

"ಮತ್ತೆ ಅವರೊಬ್ಬರನ್ನೇ ಹಾಗೆ ಬಿಟ್ಟು ಊರೂರು ಅಲೆಯುವುದೆ ?''

"ಅವರಿಗಾಗಿಯೆ ಅಲೆಯುವುದು. ಅವರ ಕಣ್ಣೀರನ್ನು ಯಾರೂ ನೋಡಬೇಕು ?''

"ಕಣ್ಣೀರೇಕೆ ?''

"ಕೈ ಹಿಡಿದಾತ ಕಾಣೆಯಾದ ಎಂದು.''

"ಕಾರಣ ?''

"ಆತನನ್ನೇ ಕೇಳಬೇಕು.''

"ಆದರೆ ಆತ ?''

"ಅದೇ ಗೊತ್ತಿಲ್ಲ. ಅನ್ವೇಷಣೆ ಮಾಡುತ್ತಿದ್ದೇನೆ.''

"ಹೆಸರು ?''

"ಈಗ ಹೇಳಿದ್ದನ್ನೂ ಹೇಳಬಾರದಾಗಿತ್ತು. ನಿಮ್ಮ ಮಾತಿನ ರೀತಿಯಲ್ಲಿ ಜಾರಿ ಬಂದಿದೆ.''

"ನೀನು ಊರು ಹೇಳಿದ ಮೇಲೆ ಅಲ್ಲಿಗೆ ಜನ ಕಳಿಸಿ ವಿಷಯ ತಿಳಿಯಲಾರೆವೆಂದು ಭಾವಿಸಿದೆಯಾ?''

"ಹೌದು. ಊರು ಹೇಳಿ ತಪ್ಪು ಮಾಡಿದ್ದೇನೆ.''

"ತಪ್ಪೇನು ಮಾಡಲಿಲ್ಲ. ನೀನು ನಿನಗೆ ತಿಳಿದುದನ್ನೆಲ್ಲ ಹೇಳು. ನಾವು ಅರಮನೆಯಿಂದ ನೆರವು ಕೊಟ್ಟು ಹುಡುಕಿಸುತ್ತೇವೆ.''

"ನಾನು ಕೃತಜ್ಞ. ಒಮ್ಮೆ ನಮ್ಮ ತಾಯಿಯ ಮುಖದ ಮಾಲಿನ್ಯ ಮಾಯವಾಗಿ ಅಲ್ಲಿ ಸಂತಸ ಮೂಡುವಂತಾದರೆ ಸಾಕು.''

"ಪ್ರಯತ್ನಿಸೋಣ. ಈಗ ನಾನೊಂದು ಮಾತು ಹೇಳಲೆ ?''

"ಅಪ್ಪಣೆಯಾಗಲಿ.''

"ನಾಳಿನ ಸ್ಪರ್ಧೆಯನ್ನು ಕೈಬಿಡು.''

"ಬೇರೆ ವಿಗ್ರಹವನ್ನು ಕಡೆಸುತ್ತೀರಾ ?''

"ಅದು ಸಾಧುವೇ ಮಗು ?"

"ನಿಮಗೆ, ಮಹಾರಾಜರಿಗೆ ಇದರಿಂದ ಕೆಡುಕಾಗಲು ಬರುವುದು ಸಾಧುವೇ ?"

"ನಿನಗೇನು ಕೆಡುಕಿಲ್ಲವಲ್ಲ. ನೀನೇಕೆ ಇದರಲ್ಲಿ ಹಟ ತೊಡಬೇಕು ?"

"ನಿಮ್ಮಗಳ ಶ್ರೆಯಸ್ಸೇ, ನಾಡಿನ ಶ್ರೇಯಸ್ಸು. ನಿಮ್ಮಗಳ ಕೆಡುಕೇ, ನಾಡಿನ ಕೆಡಕು."

"ಆದರೆ ಸ್ಥಪತಿಗಳು ಅದರಲ್ಲಿ ದೋಷವಿಲ್ಲ ಎಂದು ನಿರ್ಣಾಯಕವಾಗಿ ಹೇಳುತ್ತಾರಲ್ಲ?"

"ನಾನೂ ನಿರ್ಣಾಯಕವಾಗಿಯೇ ಹೇಳುತ್ತೇನೆ ದೋಷವಿದೆಯೆಂದು. ಎರಡು ಪರಸ್ಪರ ವಿರುದ್ಧ ನಿರ್ಣಯಗಳಿರುವುದರಿಂದಲೇ ಈ ಕ್ರಿಯೆ ಹುಟ್ಟಿರುವುದು. ಕ್ರಿಯೆಯ ಫಲ ಕಾದು ನೋಡೋಣ."

"ಏನೋ ಫಲವಾದರೂ ನಿಮ್ಮಿಬ್ಬರಲ್ಲೊಬ್ಬರು ತೊಂದರೆಗೆ ಒಳಗಾಗುತ್ತೀರಲ್ಲ. ಈ ಮಂದಿರ ನಿರ್ಮಾಣ ಮಾಡಿದವನ ಮೈ, ಮನಸ್ಸು ಅಥವಾ ನಿನ್ನ ಮೈ, ಮನಸ್ಸು ತೊಂದರೆಗೀಡಾಗುವ ಫಲ ನಿಮ್ಮ ಈ ಘೋಷಣೆಯ ಫಲ"

"ಅದಕ್ಕೇನು ಮಾಡಲು ಸಾಧ್ಯ ?"

"ಈ ಸ್ಫರ್ಧೆಯನ್ನು ಬಿಟ್ಟು ಬಿಡಿ."

"ಅದಕ್ಕಿರುವ ಒಂದೇ ಮಾರ್ಗ, ಇಬ್ಬರಿಗೂ ದೋಷವಿಲ್ಲವೆಂದು ಕಂಡು ಬರುವ ಶಿಲೆಯಲ್ಲಿ ಬೇರೊಂದು ವಿಗ್ರಹ ಕಡೆಯುವುದು."

"ನಾನೊಬ್ಬಳೇ ಆ ಕುರಿತು ಹೇಗೆ ನಿರ್ಣಯ ತೆಗೆದುಕೊಳ್ಳಲಿ ?"

"ಸ್ಥಪತಿಗಳನ್ನು ಕೇಳಬಹುದು. ನನ್ನ ಮಾತು ಸರಿಯೆಂದು ಸನ್ನಿಧಾನಕ್ಕೆ ತೋರಿದರೆ ಹಾಗೆಂದು ಸ್ಥಪತಿಗಳಿಗೆ ಸೂಚಿಸಬಹುದು. ಆದೇಶ ನೀಡಬಹುದು."

"ಇವೆಲ್ಲ ಆದೇಶದಿಂದ ಮಾಡುವ ಕೆಲಸವಲ್ಲ. ಮನವೊಲಿಸಿ ಮಾಡುವ ಕೆಲಸ. ಯಾವುದೇ ರೀತಿ ಆದರೂ ಕಲಾವಿದರ ಸ್ವಾತಂತ್ರ್ಯಕ್ಕೆ ಚ್ಯುತಿ ತರಲು ನನಗಿಷ್ಟವಿಲ್ಲ. ಸರಿ ಏನು ಮಾಡಬೇಕೆಂದು ಆಲೋಚಿಸುತ್ತೇನೆ."

"ಅವರಲ್ಲಿ ವಿಚಾರ ಮಾಡಿದ ಮೇಲೂ ಪರೀಕ್ಷೆ ಆಗಲೇಬೇಕು ಎಂದು ನಿರ್ಣಯವಾದರೆ ?"

"ಏಕೆ ಈ ಆತುರದ ಮಾತು ? ಅವರು ನ್ಯಾಯವಾದುದನ್ನು ಒಪ್ಪಿಕೊಳ್ಳುವವರು."

"ಆದರೂ ಯಾವ ಕಲಾವಿದನೂ ತನ್ನ ಆತ್ಮಾಭಿಮಾನಕ್ಕೆ ಚ್ಯುತಿ ತಂದು ಕೊಳ್ಳಲಾರ."

"ಅದಕ್ಕೆ ಏನಾಗಬೇಕು ?"

"ನನಗೆ ಕೆಲವು ಶ್ರೀಗಂಧದ ತುಂಡುಗಳು ಬೇಕು."

"ಅವಶ್ಯವೆನಿಸಿದಾಗ ಅವು ಸಿದ್ಧವಾಗಿರುತ್ತವೆ. ಆ ಕುರಿತು ಯೋಚಿಸ ಬೇಕಾಗಿಲ್ಲ" ಮೌನವಾರಿಸಿತು. ಯುವಕ ಏನೋ ಹೇಳಲು ಪ್ರಯತ್ನಿಸಿ ಮತ್ತೆ ಮೌನವಾದ. "ಇನ್ನೇನು ?"

"ಸನ್ನಿಧಾನ ನನ್ನ ಬಗೆಗೆ ಅಪಾರ್ಥ ಕಲ್ಪಿಸಬಾರದು."

"ನಾನು ಕಲ್ಪಿಸುವ ಕಾರಣವಿಲ್ಲ. ಆದರೆ ಅಪ್ರಬುದ್ಧರು, ನಾಲಿಗೆ ಸಡಿಲವಾದವರು ಬೇಕಾದ ಅರ್ಥ ಕಲ್ಪಿಸುತ್ತಾರೆ. ಇಬ್ಬರ ಜಗಳ ಮೂರನೆಯವರಿಗೆ ಲಾಭ ಎಂಬ ನಾಣ್ನುಡಿ ನಿನಗೆ ಗೊತ್ತಿರಬೇಕಲ್ಲ. ಈಗ ಅದೇಕೆ ? ಸ್ಥಪತಿಯೊಂದಿಗೆ ಮಾತನಾಡಿದ ಮೇಲೆ ಮುಂದಿನ ವಿಚಾರ. ಒದಗಿಸಿರುವ ವಸತಿಗೃಹ ಸರಿಯಾಗಿದೆ ತಾನೆ ?"

"ಕಗ್ಗಲ್ಲನ್ನು ನುಣುಪು ಮಾಡುವ ನಾವು ಎಲ್ಲವನ್ನೂ ಒಗ್ಗಿಸಿಕೊಳ್ಳಬಲ್ಲೆವು. ಎಂದಾಗ ಇಲ್ಲಿನ ವ್ಯವಸ್ಥೆಯ ಬಗೆಗೆ ಆಕ್ಷೇಪ ಎತ್ತುವ ಹಾಗೆ ಇಲ್ಲ. ಹಾಗಾದರೆ..."

"ಒಳ್ಳೆಯದು. ಹೋಗಿ ಬಾ."

ಸ್ಥಪತಿಯೊಂದಿಗೆ ಆಡಿದ ಮಾತು ಫಲ ನೀಡಲಿಲ್ಲ. ಅವನು ಪಟ್ಟು ಹಿಡಿದಂತೆ ಮಾತನಾಡದಿದ್ದರೂ ತರ್ಕಬದ್ಧವಾಗಿ ನಿಲುವನ್ನು ಬದಲಾಯಿಸಲಾರೆ ಎಂದು ಹೇಳಿಬಿಟ್ಟ

ಮಾರನೆಯ ಬೆಳಗ್ಗೆ ಈ ಪರೀಕ್ಷೆಯ ಪರಿಣಾಮ ನೋಡಲು ಕುತೂಹಲಿಗಳಾದ ಜನರ ಜಾತ್ರೆಯೇ ದೇವಮಂದಿರದ ಬಳಿ ನೆರೆಯಿತು. ಪ್ರಧಾನಿ, ದಂಡನಾಯಕರು, ಇತರ ಅಧಿಕಾರಿಗಳು, ಶಾಸ್ತ್ರವೇತ್ತರು, ಉತ್ಸಾಹಿಗಳು ಎಲ್ಲ ಸೇರಿದ್ದರು. ಎಂದಾಗ ನಾಲಿಗೆಗೆ ಕಡಿವಾಣವೆಲ್ಲಿ ?

ಸ್ಥಪತಿಯಾಗಲಿ, ಯುವಕನಾಗಲಿ ತಮಗಾರಿಗೂ ಸಂಬಂಧವಿಲ್ಲದಿದ್ದರೂ, ಅವರುಗಳ ಸೋಲು ಗೆಲವುಗಳು ತಮ್ಮ ಮೇಲೆ ಏನೂ ಪರಿಣಾಮ ಮಾಡುವುದಿಲ್ಲವಾದರೂ, ತಮಗೆ ತಾವೇ ಪಕ್ಷವನ್ನ ಹಿಡಿದರು ಪರ, ವಿರೋಧವಾಗಿ ಪ್ರತಿಯೊಬ್ಬರೂ ತಮ್ಮ ತಮ್ಮ ವಾಗ್ಝರಿಯನ್ನು ಪ್ರವಹಿಸಿದರು.

"ಹೀಗಾಗದೆ ಏನಾಗುತ್ತೇರಿ ? ಇನ್ನೊಬ್ಬರ ಹೊಟ್ಟೆ ಮೇಲೆ ಹೊಡೆದರೆ ದೇವರು ಸುಮ್ಮನೆ ಕಣ್ಣುಮುಚ್ಚಿ ಕುಳಿತಿರೋದಿಲ್ಲ. ಶಿಕ್ಷೆ ಮಾಡೇ ಮಾಡ್ತಾನೆ."

"ಯಾರ ಹೊಟ್ಟೆ ಮೇಲೆ ಯಾರೂ ರೀ ಹೊಡೆದವರು ?"

"ಅದೇ ಆ ಗುಟ್ಟಿನ ಸ್ಥಪತಿ ಹಿಂದಿನ ಸ್ಥಪತಿಗೆ ಕೊಕ್ ಕೊಡಲಿಲ್ಲವೆ ? ಅವನು ಚಿಕ್ಕವನಾದರೂ ಜಾಣ. ಅವನಿಗೇ ಈ ಕೆಲಸ ಅಂತ ನಿರ್ಣಯ ಆಗಿದ್ದಾಗ ಇವನೇಕೆ ಬಂದು ಅಡ್ಡಗಾಲು ಹಾಕ ಬೇಕಾಗಿತ್ತು? ಅದಕ್ಕೇ ದೇವರು ಕೊಟ್ಟ ಈಗ ಕೈನ. ಆ ಸ್ಥಪತಿಗಿಂತ ಈ ಹುಡುಗ ಇನ್ನೂ ಚಿಕ್ಕವನು. ಊರಿನವರ ಮಾನ ಹಳ್ಳೀಲಿ ಹೋಯಿತೂಂತ."

"ಆ ಸ್ಥಪತಿ ಅಂದರೆ ಯಾರು ?"

"ಅದೇರಿ, ಒಳ್ಳೆಯವರು ಕಣ್ರಿ. ಯಾವುದೋ ಹಳೇ ಕಥೆ ತಂದು ಇಲ್ಲಿಗೆ ಗಂಟು ಹಾಕ್ತೀರಲ್ಲ. ಅದಕ್ಕೂ ಇದಕ್ಕೂ ಏನ್ರಿ ಸಂಬಂಧ ? ಯಾರಾದರೂ ನಕ್ಕಾರು."

"ನಗಬೇಕಾದ್ದೇನೂ ಇಲ್ಲ. ಇದೆಲ್ಲ ಅವರವರು ಮಾಡಿದ ಕರ್ಮಫಲ."

"ಆದರೂ ಒಳ್ಳೆ ಧೀರ ಕಣ್ರಿ. ಹುಡುಗ ಹಿಡಿದ ಪಟ್ಟು ಬಿಡಲೇ ಇಲ್ಲವಂತೆ. ಈ ಹಟ ಬೇಡ ಸುಮ್ಮನೆ ದೊಡ್ಡವರಿಗೆ ಏಕೆ ಅವಮಾನ ಮಾಡ್ತಿ ಅಂತ ಯಾರಾರ್‍ಯೋ ಎಷ್ಟೆಷ್ಟೋ ಹೇಳಿದರಂತೆ. ಆದರೆ ಅವನು ಮಾತ್ರ ಜಪ್ಪಯ್ಯ ಅನ್ನಲಿಲ್ಲವಂತೆ. ಒಂದೇ ಪಟ್ಟು"

"ಅದೆಲ್ಲ ಸರಿ. ಈ ಇಬ್ಬರ ತೆವಲಿದೆಯಲ್ಲ. ಅದು ಮಾತ್ರ ನನಗೆ ಪರಮಾಶ್ಚರ್ಯವಪ್ಪ. ಕಲ್ಲಿನಲ್ಲಿ ದೋಷ ಇರಬಹುದು. ಅದಕ್ಕೆ ಇವರೇಕೆ ಕೈ ಕತ್ತರಿಸಿಕೋಬೇಕು ? ಇಬ್ಬರೂ ತಮ್ಮ ಕಸುಬಿನಲ್ಲಿ ಕುಶಲಿಗಳೇ.

ಯಾರು ಕೈ ಕಡಿದುಕೊಂಡರೂ ಅದು ಕಲೆಗೆ ಆಗುವ ನಷ್ಟವೇ ಅಂತ ಈ ಅರಮನೆಯವರಾದರೂ ಅವರಿಬ್ಬರಿಗೂ ಬುದ್ಧಿ ಹೇಳಬಾರದಾಗಿತ್ತೆ ?''

"ಎರಡೂ ದದ್ದ ಹೊರಕ್ಕೆ ಹಾಕು ಅಂತ ಒಂದು ಮಾತಿದೆ. ಹಾಗೆ ಉದು ಹೊರಕ್ಕೆ ಹಾಕೋ ತಂತ್ರ ಇರಬಹುದು.''

"ಎಲ್ಲಾದರೂ ಉಂಟೇನ್ರಿ ? ಇಂತಹ ಒಂದು ಭವ್ಯ ದೇವಮಂದಿರ ಕಟ್ಟಿದ ಮಹಾ ರೂವಾರಿಯನ್ನು ಹೊರಕ್ಕೆ ಹಾಕೋದು ನ್ಯಾಯವೇನ್ರಿ ? ಇದ್ದೀತಪ್ಪ ಕ್ಲಿನಲ್ಲಿ ದೋ। ಯಾರಾದರೂ ಹೊಟ್ಟೆ ಬಗೆದು ಒಳಗಿರೋ ದೋಷ ನೋಡಕ್ಕೆ ಅಗುತ್ಯೆ ?''

"ಆದರೆ ಈ ವಿಗ್ರಹ ಠಸ್ ಅಂದರೆ ಎಲ್ಲಾ ಮುಂದಕ್ಕೆ ಹೋಗುತ್ತೆ.''

"ಏನಾಗುತ್ತೇ ಅಂತ ತಿಳಿಯೋದಕ್ಕೆ ಮೊದಲೇ ಇವರು ಠಸ್ ಅಂತಾರೆ. ಅದೇನು ಹೊಟ್ಟೆಯೊಳಗಿನ ಗಾಳಿಯೇನ್ರಿ ?''

"ಅಂದರೆ ನಿಮಗೆ ಗಾಳಿ ರೋಗಾಂತ ಕಾಣುತ್ತೆ.''

"ಯಾರಿಗ್ರೀ ಗಾಳಿ ರೋಗ ?''

"ಹಾಗ್ಯಾಕೆ ಸಿಟ್ಟು ಮಾಡಿಕೊಳ್ತೀರಿ ? ಇಲ್ಲದಿದ್ದರೆ ಇಲ್ಲ ಅಂದರೆ ಅಯಿತಪ್ಪ. ಇದ್ದರೆ ತೆಪ್ಪಗೆ ಒಪ್ಪಿಕೊಂಡರೆ ಆಯ್ತು.''

ಹೀಗೆ ನೆಲೆಯಿಲ್ಲದೆ, ನೀತಿಯಿಲ್ಲದೆ ಸಾಗಿತ್ತು ಜನ ಜಂಗುಳಿಯ ವಿಚಾರಧಾರೆ.

ಸ್ಥಪತಿ ಕಡೆದ ವಿಗ್ರಹವನ್ನು ರಾತ್ರಿಯೇ ಹೊಸದಾಗಿ ನಿರ್ಮಾಣವಾದ ತಡಿಕೆಯ ಭಿತ್ತ ಹೊಂದಿದ ಒಂದು ಪುಟ್ಟ ಕಾವಣದೊಳಗೆ ಇಡಲಾಗಿತ್ತು. ಅದರ ಒಳಗೆ ಸ್ಥಪತಿ, ಯುವಕ ಮತ್ತು ಇಬ್ಬರು ರೂವಾರಿಗಳು ಮಾತ್ರ ಇದ್ದರು. ಒಳಗೆ ಏನು ನಡೆಯುತ್ತಿದೆಯೆಂದು ಯಾರಿಗೂ ತಿಳಿಯದು. ಆದರೆ ಕುತೂಹಲ ತುಂಬಿದ ಜನ ಮಾತ್ರ ಅದರತ್ತಲೇ ದೃಷ್ಟಿಯನ್ನು ಇರಿಸಿದ್ದರು.

ಸ್ವಲ್ಪ ಸಮಯದಲ್ಲಿಯೇ ಉದಯಾದಿತ್ಯರಸ ಮತ್ತು ಬಿಟ್ಟಿಯಣ್ಣ ಬಂದರು. ಆ ಕಾವಣದ ಪೂರ್ವಭಿತ್ತಿಯ ಬಳಿ ನಿಂತಿದ್ದ ಕಾಪಿನವನು ಇಬ್ಬರಿಗೂ ಒಳಗೆ ಹೋಗಲು ಅವಕಾಶ ಮಾಡಿಕೊಟ್ಟ

ಸ್ವಲ್ಪ ಹೊತ್ತಾದ ಮೇಲೆ ಅವರಿಬ್ಬರೂ ಹೊರಗೆ ಬಂದರು.

ಉತ್ಸಾಹೀ ಜನ, "ಏನು ! ಏನು !'' ಎಂದು ಕೇಳಿದರು.

ಇನ್ನೂ ಸ್ವಲ್ಪ ತಾಳಿಕೊಳ್ಳಿ ಎನ್ನುವಂತೆ ಸನ್ನೆಮಾಡಿ ಅವರಿಬ್ಬರೂ ಹೊರಟು ಹೋದರು.

ಮತ್ತೆ ಸ್ವಲ್ಪ ಹೊತ್ತಿಗೆ ಮಹಾರಾಜ, ಪಟ್ಟಮಹಾದೇವಿ, ಇತರ ರಾಣಿಯರು ಬಂದರು. ಅವರೊಂದಿಗೆ ಸಕಾಷ್ಟು ಜನ ಅಂಗರಕ್ಷಕರು ಇದ್ದರು. ಜೊತೆಗೆ ಉದಯಾದಿತ್ಯರಸ, ಕುವರ ಬಿಟ್ಟಿಯಣ್ಣ ಸಹ ಇದ್ದರು.

ರಾಣಿಯರಿಗಾಗಿ ಸಿದ್ಧವಾಗಿದ್ದ ಆಸನಗಳ ಮೇಲೆ ಅವರು ಕುಳಿತರು. ಮಹಾರಾಜ ಮತ್ತು ಪಟ್ಟಮಹಾದೇವಿಯವರು ವಿಗ್ರಹವಿದ್ದ ಕಾವಣದೊಳಕ್ಕೆ ಹೋದರು. ಕೆಲವು ಅಂಗರಕ್ಷಕರು ಅದರ ಭಿತ್ತಿಯ ಹೊರಗೆ ನಿಂತರು.

ಸ್ವಲ್ಪ ಹೊತ್ತಿನಲ್ಲಿ ರೂವಾರಿಯೊಬ್ಬ ಹೊರಗೆ ಬಂದು ಇಬ್ಬರು ಅಂಗರಕ್ಷಕರನ್ನು ಒಳಕ್ಕೆ ಕರೆದೊಯ್ದ. ಅದಾದ ತುಸು ಸಮಯದಲ್ಲಿ ಮಹಾರಾಜ, ಪಟ್ಟಮಹಾದೇವಿಯರು ಹೊರಕ್ಕೆ ಬಂದರು. ಅವರ ಹಿಂದೆ ಸ್ಥಪತಿ ಮತ್ತು ಯುವಕ ಹೊರಬಂದರು. ಅವರ ಕೈಗಳನ್ನು ಹಿಂಗಟ್ಟು ಮುರಿಯಾಗಿ ಕಟ್ಟಲಾಗಿತ್ತು. ಅಗರಕ್ಷಕರ ಕಾವಲಿನಲ್ಲಿ ಅವರು ಹೆಜ್ಜೆ ಇಡುತ್ತಾ ಮುಂದೆ ಬಂದರು. ಅವರ ಹಿಂದೆಯೇ ಒಳಗಿದ್ದ ಇಬ್ಬರು ರೂವಾರಿಗಳೂ ಹೊರಕ್ಕೆ ಬಂದರು.

"ಮಹಾಜನಗಳೇ, ನಾವೆಲ್ಲರೂ ಇಂದು ವಿಚಿತ್ರವಾದ ಒಂದು ಪರಿಸ್ಥಿತಿಯನ್ನು ಇದಿರಿಸುತ್ತಿದ್ದೇವೆ. ಈ ರೂವಾರಿದ್ವಯರು ಕಲಾನಿಪುಣರು. ಆದರೆ ತಾವೂ ಸ್ಪರ್ಧೆಗೆ ತೊಡಗಿ ನಮ್ಮನ್ನೂ ಸ್ಪರ್ಧೆಗೆ ತೊಡಗಿಸಿದರು. ಈಗ ಸ್ಪರ್ಧೆಯ ಫಲಿತಾಂಶ ಬಹಿರಂಗವಾಗುವುದಕ್ಕೆ ಮುಂಚೆಯೇ ಅವರಿಬ್ಬರನ್ನೂ ಈ ರೀತಿಯ ಬಂಧನಕ್ಕೊಳಗು ಮಾಡಬೇಕೆಂದು ನಾವು, ಪಟ್ಟಮಹಾದೇವಿಯವರು ನಿರ್ಣಯ ಕೈಕೊಂಡೆವು. ಈ ನಿರ್ಣಯವು ನಮ್ಮ ಪ್ರಧಾನಿಗಳಿಗಾಗಲಿ, ಸಚಿವರಿಗಾಗಲಿ, ಕಡೆಗೆ ನಮ್ಮ ಸಹೋದರರಿಗಾಗಲಿ ತಿಳಿಯದು. ಎಂದಾಗ ಈ ರೂವಾರಿದ್ವಯರಿಗೂ ಗೊತ್ತಿಲ್ಲ. ವಾಸ್ತವವಾಗಿ ಅವರುಗಳು ಪ್ರತಿಭಟಿಸದಿದ್ದರೂ ಆಶ್ಚರ್ಯಚಕಿತರಾಗಿದ್ದಾರೆ. ನೀವೂ ಆಶ್ಚರ್ಯಚಕಿತರೇ ಆಗಿರಬೇಕು. ಏಕೆ ಹಾಗೆ ಮಾಡಿದ್ದೇವೆಂಬ ವಿಚಾರವು ಕಡೆಗೆ ನಿಮಗೆ ತಿಳಿಯುತ್ತದೆ. ಈಗ ವಿಗ್ರಹದ ಶಿಲೆಯಲ್ಲಿ ದೋಷವಿದೆಯೆ ಇಲ್ಲವೆ ಎಂಬುದಕ್ಕೆ ಇಬ್ಬರಿಗೂ ಒಪ್ಪಿತವಾದ ಚಿಕಿತ್ಸೆ ನಡೆದಿದೆ. ಅದೇನೆಂದು ಎಲ್ಲರೂ ನೋಡಬಹುದು" ಎಂದು ಹೇಳಿ ಕಾವಣದ ಭಿತ್ತಿಗಳನ್ನು ತೆಗೆಯುವಂತೆ ಅಪ್ಪಣೆ ಮಾಡಿದ ಬಿಟ್ಟಿದೇವ.

ಮಂಗಳಸ್ನಾನ ಮಾಡಿ ಹೊನ್ನುಡಿಗೆ ಧರಿಸಿ ಹರಿದಳವನ್ನು ತನ್ನ ಅಂಗಾಂಗ ಭೂಷಣಗಳಿಗೆಲ್ಲಾ ಧರಿಸಿ ನಿಂತ ಪ್ರತಿಮೆಯನ್ನು ಜನ ಕಂಡರು.

"ಮುಕುಟದ ತುಟ್ಟ ತುದಿಯಿಂದ ಹಿಡಿದು ಒಂದು ಕಣದಷ್ಟೂ ಸ್ಥಳ ಬಿಡದೆ ಇಡೀ ವಿಗ್ರಹದ ಎಲ್ಲ ಭಾಗವೂ ಪೀಠದ ಸಮೇತ ಶ್ರೀಗಂಧದಿಂದ ಲೇಪಿತವಾಗಿದೆ. ಲೇಪನಕಾರ್ಯ ಈಗ ತಾನೆ ಮುಗಿಯಿತು. ಹಸಿಯಿದೆ. ಈಗ ಲೇಪಸಿರುವ ಶ್ರೀಗಂಧ ಸಂಪೂರ್ಣವಾಗಿ ಒಂದೇ ಸಮನಾಗಿ ಒಣಗಿದರೆ ಶಿಲೆಯಲ್ಲಿ ದೋಷವಿಲ್ಲ. ಅದು ಬಿಟ್ಟು ಈ ವಿಗ್ರಹದ ಯಾವುದಾದರೂ ಭಾಗದಲ್ಲಿ ಲೇಪನಗೊಂಡ ಶ್ರೀಗಂಧ ಹಸಿ ಹಸಿಯಾಗಿ ಉಳಿದು, ಉಳಿದ ಭಾಗವೆಲ್ಲ ಒಣಗಿದರೆ ಇದು ದೋಷಯುಕ್ತ ಎಂದು. ಇದು ಈ ಇಬ್ಬರಿಗೂ ಸಮ್ಮತವಾಗಿರುವ ಪರೀಕ್ಷೆ. ಲೇಪನಕ್ರಿಯೆ ಯುಕ್ತವಾದ ರೀತಿಯಲ್ಲಿ ನಡೆದಿದೆ ಎನ್ನುವುದಕ್ಕೆ ಆ ಕಾರ್ಯಾರಂಭದಿಂದ ಒಳಗೆ ಇದ್ದ ಈ ಇಬ್ಬರು ರೂವಾರಿಗಳೂ ಸಾಕ್ಷಿ. ಈ ಬಗೆಯ ಪರಿಶೀಲನೆ, ಪರೀಕ್ಷೆ ಈವರೆಗೆ ಎಲ್ಲೂ ನಡೆದುದು ನಮಗೆ ತಿಳಿಯದು. ಇರಲಿ. ಎಲ್ಲಾ ಒಳ್ಳೆಯದಕ್ಕೆ ಎಂಬ ಮಾತನ್ನೂ ನಮ್ಮ ಹಿರಿಯರು ಆಡುತ್ತಿದ್ದರು. **ಶ್ರೇಯಾಂಸಿ ಬಹು ವಿಘ್ನಾನಿ** ಎಂಬ ಉಕ್ತಿಯೂ ಉಂಟು. ಅದರಿಂದ ನಾವು ಆ ಒಳ್ಳೆಯದಕ್ಕಾಗಿ, ಶ್ರೇಯಸ್ಸಿಗಾಗಿ ಪ್ರಾರ್ಥಿಸೋಣ" ಎಂದು ಹೇಳಿದ ಬಿಟ್ಟಿದೇವ.

ಆಮೇಲೆ ಮಹಾರಾಜ, ಪಟ್ಟಮಹಾದೇವಿಯವರು ನಿಯೋಜಿತ ಆಸನಗಳ ಮೇಲೆ ಕುಳಿತರು. ಉಳಿದವರೂ ಕುಳಿತರು. ರೂವಾರಿಗಳೂ ಒಂದು ಬದಿಯ ಆಸನಗಳ ಮೇಲೆ ಕುಳಿತರು. ಅವರ ಸಾನ್ನಿಧ್ಯವಿದ್ದುದರಿಂದ ಮತ್ತು ಕಾಪಿನವರು ಅಲ್ಲಲ್ಲಿ ಬಂದು ಶಸ್ತ್ರ ಹಿಡಿದು ನಿಂತಿದ್ದುದರಿಂದ ಬೇಕಾಬಿಟ್ಟಿ ಮಾತುಗಳು ನಿಂತವು. ಒಂದು ಬಗೆಯ ವಿಚಿತ್ರ ಕುತೂಹಲ ಇಡೀ ವಾತಾರವಣದಲ್ಲಿ ಹೆಪ್ಪುಗಟ್ಟಿ ನಿಂತಿತು. ಎಲ್ಲರ ದೃಷ್ಟಿಯೂ ಶ್ರೀಗಂಧ ಲೇಪಿತವಾದ ಕೇಶವ ವಿಗ್ರಹದತ್ತ ಕೇಂದ್ರೀಕೃತವಾಯಿತು.

ಫಾಲ್ಗುಣದ ಕಡೆಯ ದಿನ. ಮೋಡವಿಲ್ಲದ ಶುಭ್ರ ಆಕಾಶ. ಪ್ರಖರವಾದ ಸೂರ್ಯರ ರಶ್ಮಿ. ಬೇಗಲೆ ಶ್ರೀಗಂಧ ಒಣಗತೊಡಗಿತು. ಬಿಸಿಲಿನ ಝಳ ಏರಿದಂತೆ ಜನರ ಕುತೂಹಲ ಸಹ ಏರತೊಡಗಿತು. ಒಂದರ್ಧ ಪ್ರಹರ ಕಾಲ ಹಾಗೆಯೇ ಮೌನವಾಗಿ ಕಳೆಯಿತು. ಶ್ರೀಗಂಧ ಕಣಕಣವಾಗಿ ಒಣಗುತ್ತಿದ್ದುದು ಗೋಚರಿಸುವಷ್ಟು ತೀಕ್ಷ್ಣವಾಗಿ ಜನ ನೋಡುತ್ತಿದ್ದರು. ವಿಗ್ರಹದ ಬಹು ಭಾಗವೆಲ್ಲಾ ಒಣಗಿತು. ಕಿರೀಟ, ಮುಖ, ಬಾಹುದ್ವಯಗಳು, ಭುಜ, ಕಂಠ, ಪಾದಗಳು, ಕಾಲುಗಳು, ತೊಡೆಗಳು, ಪೀಠ, ಎದೆ, ಎಲ್ಲಾ ಭಾಗಗಳೂ ಒಣಗಿದವು. ಆದರೆ ಉದರದ ಮೇಲೆ, ಹೊಕ್ಕುಳಿನ ಸುತ್ತ ಹೆಚ್ಚು ಕಡಿಮೆ ಅಂಗೈ ಅಗಲ ಭಾಗ ಮಾತ್ರ ಇನ್ನೂ ಒಣಗಿರಲಿಲ್ಲ. ಒಂದು ಬಗೆಯ ಗುಜು ಗುಜು ಪ್ರಾರಂಭವಾಯಿತು. ಜನ ಆಗಲೇ ನಿರ್ಣಯ ಕೈಗೊಳ್ಳುವ ರೀತಿ ವರ್ತಿಸುವರೆಂಬ ಸುಳಿವು ಕಂಡುಬಂತು.

ಮಹಾರಾಜ ಎದ್ದು ನಿಂತ.

"ಸದ್ದು, ಸದ್ದು. ಸನ್ನಿಧಾನ ಹೇಳುವುದನ್ನು ಆಲಿಸಿ'' ಎಂದು ವಂದಿಮಾಗಧ ಅಬ್ಬರಿಸಿದ. ಮೌನವಾವರಿಸಿತು.

"ಆತುರಬೇಡ. ಅಕಸ್ಮಾತ್ ಆ ಭಾಗದಲ್ಲಿನ ಲೇಪವು ಉಳಿದ ಭಾಗಕ್ಕಿಂತ ದಪ್ಪವಾಗಿದ್ದರೆ ಆರಲು ಸಮಯ ಬೇಕಾಗುತ್ತದೆ. ಅದರಿಂದ ಕಾಯೋಣ'' ಎಂದು ಕುಳಿತ.

ಸ್ಥಪತಿ ಎದ್ದು ನಿಂತು ರಾಜದಂಪತಿಗಳತ್ತ ನೋಡಿದ.

"ಏನಾದರೂ ಹೇಳುವುದಿದೆಯೆ ಸ್ಥಪತಿಗಳೆ ?'' ಎಂದು ಮಹಾರಾಜ ಕೇಳಿದ.

"ಇದೆ. ಅಪ್ಪಣೆ ಕೊಟ್ಟರೆ ಹೇಳುತ್ತೇನೆ'' ಎಂದ ಸ್ಥಪತಿ.

"ಹೇಳಿ.''

"ಇನ್ನು ಕಾದು ಸಮಯ ದಂಡ ಮಾಡಬೇಕಾಗಿಲ್ಲ. ಶಿಲೆಯಲ್ಲಿ ದೋಷವಿದೆ ಎಂದು ನಾನೊಪ್ಪಿಕೊಳ್ಳುತ್ತೇನೆ. ಈಗ ನಾನು ಆಡಿದ ಮಾತನ್ನು ಉಳಿಸಿಕೊಳ್ಳಲು ಸನ್ನಿಧಾನ ನನಗೆ ಅವಕಾಶ ಮಾಡಿಕೊಡಬೇಕು. ಇಂದಿನಿಂದ ನನಗೆ ಈ ಕೈಯನ್ನು ಇರಿಸಿಕೊಳ್ಳುವ ಹಕ್ಕಿಲ್ಲ. ಈ ಸಂದರ್ಭದಲ್ಲಿ ನಾನೊಂದು ಮಾತನ್ನು ಹೇಳಬಯಸುತ್ತೇನೆ. ಪ್ರಜ್ಞೆ, ಗ್ರಹಣಶಕ್ತಿಯ ಮೇಲೆ ಅವಲಂಬಿತವಾಗಿರುತ್ತದೆ. ಬರೀ ಅನುಭವವಷ್ಟೇ ಸಾಲದು. ಈ ಯುವಕನ ಪ್ರಜ್ಞೆಗೆ ನಾನು ಮರುಳಾಗಿದ್ದೇನೆ. ಅವನನ್ನು ನಂಬದೆ ಅವನ ಕೌಶಲ್ಯವನ್ನು ಪರೀಕ್ಷಿಸಲು ವೇಣುಗೋಪಾಲ ವಿಗ್ರಹವನ್ನು ಕಡೆಯ ಹೇಳಿದಾಗ ಅವನು ಕೆಲಸ ಮಾಡುತ್ತಿದ್ದ ರೀತಿಯನ್ನು ನೋಡಿ ನಾನು ಬೆರಗು ಪಟ್ಟಿದ್ದೇನೆ. ನಾನು ಇಂದು ಸೋತಿದ್ದೇನೆ. ಕಿರಿಯ ವಯಸ್ಸಿನವನಿಂದ ಈ ಹಿರಿಯ ಸೋತ. ಇದಕ್ಕಿಂತ ಇನ್ನು ಅವಮಾನ ಬೇಕೇ ಎಂಬ ಭಾವನೆ ಅಸಹಜವೇನಲ್ಲ. ಆದರೆ ನನಗೆ ಅವಮಾನವಾಯಿತೆಂದು ನಾನು ಭಾವಿಸಿಲ್ಲ. ಹೆಚ್ಚಿನ ಜ್ಞಾನಕ್ಕೆ, ತಿಳಿವಳಿಕೆಗೆ, ಪ್ರತಿಭೆಗೆ ಮನ್ನಣೆ ಸಿಕ್ಕಿತು ಎಂದು ನಾನು ಆನಂದಿಸುತ್ತೇನೆ. ಆ ಆನಂದದಲ್ಲಿಯೇ ಈ ಇಷ್ಟು ಜನರೆದಿರಿಗೆ ನನ್ನ ವಚನವನ್ನು ಪಾಲಿಸಲು ಅವಕಾಶ ನೀಡಬೇಕು.''

"ಸ್ಥಪತಿಗಳೆ, ನಿಮ್ಮ ಭಾವನೆ ಮಾನ್ಯವಾದುದು. ಪ್ರತಿಯೊಂದು ಕೆಲಸ ಮಾಡುವುದಕ್ಕೂ ಉಚಿತಾನುಚಿತಗಳು ಉಂಟು. ವಚನ ಪಾಲನೆಯನ್ನು ಮಾಡಲು ಯುಕ್ತ ವಾತಾವರಣವನ್ನು ಪಟ್ಟಮಹಾದೇವಿಯವರೇ ಸೂಚಿಸುತ್ತಾರೆ. ಅವರ ಕಾರ್ಯಾಚರಣೆಯ ಸದುದ್ದೇಶಗಳಲ್ಲಿ ನಿಮಗೆ ನಂಬಿಕೆ

ಇದೆಯೆಂದು ಭಾವಿಸಿದ್ದೇವೆ. ಅದರಿಂದ ಆ ವಿಷಯವೆಲ್ಲ ಅವರಿಗೆ ಬಿಟ್ಟುದು. ಸಧ್ಯದಲ್ಲಿ ನೀವು ಮೌನ ಪ್ರೇಕ್ಷಕರು ಮಾತ್ರ'' ಎಂದು ಹೇಳಿ ಯುವಕ ರೂವಾರಿಯತ್ತ ತಿರುಗಿ, ''ಏನು? ಇನ್ನೂ ಕಾಯಬೇಕೆ ? ಅಥವಾ ಸ್ಥಪತಿಗಳು ಒಪ್ಪಿದ್ದರಿಂದ ಈ ಪರೀಕ್ಷೆ ಇಲ್ಲಿಗೇ ಮುಗಿಸೋಣವೆ?'' ಎಂದು ಬಿಟ್ಟಿದೇವ ಕೇಳಿದ.

''ಅವರು ಒಪ್ಪಿದ ಮೇಲೆ ಮುಗಿದಂತೆ ತಾನೆ ?'' ಎಂದ ಯುವಕ ರೂವಾರಿ.

''ದೋಷವಿದೆಯೆಂದಾಯಿತು ? ಯಾವ ಬಗೆಯ ದೋಷ ಎಂದು ತಿಳಿಯದಲ್ಲ ?'' ಎಂದಳು ಶಾನ್ತಲದೇವಿ.

''ಆ ಶಿಲೆಯಲ್ಲಿ ತೇವವಿದೆ. ನೀರಿನಂಶದಿಂದ ಕೂಡಿರುವ ಶಿಲೆ ದೋಷಯುಕ್ತ. ತೇವವಿರುವುದರಿಂದ ಆ ಭಾಗ ಆರಲಿಲ್ಲ. ತೇವವಿಲ್ಲದ ಭಾಗವೆಲ್ಲ ಆರಿತು'' ಎಂದ ಯುವಕ ರೂವಾರಿ.

''ಬರೀ ತೇವವಲ್ಲ. ನೀರೇ ಇದೆ. ಆ ನೀರಿನಲ್ಲಿ ಜೀವರಾಶಿ ಸಹ ಇರಬೇಕು'' ಎಂದ ಸ್ಥಪತಿ.

''ಅದರೊಳಗೆ ಜೀವರಾಶಿ ಬದುಕಿರಲು ಹೇಗೆ ಸಾಧ್ಯ ?'' ಎಂದ ಯುವಕ ರೂವಾರಿ.

''ಪರೀಕ್ಷಿಸಿದರೆ ತಿಳಿಯುತ್ತದೆ'' ಎಂದ ಸ್ಥಪತಿ.

ಶಾನ್ತಲದೇವಿ ಮಹಾರಾಜನ ಕಿವಿಯಲ್ಲಿ ಏನನ್ನೋ ಹೇಳಿದಳು.

ಅದನ್ನು ನೋಡಿದ ಜನರಲ್ಲಿ ಮುಂದೇನು ಎಂಬ ಕುತೂಹಲ ಕೆರಳಿ ನಿಂತಿತು.

ಕಡೆಗೆ ಮಹಾರಾಜ, ''ಆ ಪರೀಕ್ಷೆಯೂ ಆಗಿ ಬಿಡಲಿ. ಇದರಲ್ಲಿ ಯಾರ ಅಭಿಪ್ರಾಯ ಸರಿ ಎಂಬುದನ್ನೂ ಅರಿಯೋಣ'' ಎಂದು ನಿರ್ಣಯವನ್ನೇ ಕೊಟ್ಟ

ವಿಗ್ರಹದ ಶುದ್ಧೀಕರಣವಾಯಿತು. ರೂವಾರಿಯೊಬ್ಬನಿಗೆ ಅಪ್ಪಣೆ ಮಾಡಲಾಯಿತು. ಅವನು ಮೆದುವಾಗಿ ಕೇಶವಸ್ವಾಮಿಯ ಹೊಕ್ಕಳಿನ ಕುಳಿಯನ್ನು ವಿಸ್ತರಿಸಲು ಚಾಣವಿಟ್ಟು ಮೆದುವಾಗಿ ತಾಗಿಸಿದ. ಒಂದು ಗುಂಡಿನ ಹೆಕ್ಕಳಿಕೆ ಚಿಮ್ಮಿ ಬಂತು. ಹೊಕ್ಕಳಿನಿಂದ ನೀರು ಜಿನುಗಿತು. ಒಂದು ದೊಡ್ಡ ಕಾಡು ನೋಣದಷ್ಟು ಇದ್ದ ಪುಟ್ಟ ಮಂಡೂಕ ಪುಣಕ್ಕನೆ ಹಾರಿ ರೂವಾರಿಯ ಅಂಕದಲ್ಲಿ ಬಿತ್ತು. ''ಮಂಡೂಕ ಚನ್ನಕೇಶವನ ಗರ್ಭದಲ್ಲಿ'' ಎಂಬ ಮಾತು ರೂವಾರಿಯ ಬಾಯಿಂದ ಹೊರಬಿತ್ತು.

ಜನ, ''ಕಲ್ಲಿನಲ್ಲಿ ಕಪ್ಪೆ, ಕಲ್ಲಿನಲ್ಲಿ ಕಪ್ಪೆ'' ಎಂದು ಹೇಳತೊಡಗಿತು.

''ಹೌದು. ಕಲ್ಲಿನಲ್ಲಿ ಕಪ್ಪೆ ಹೇಗೆ ಜೀವಿಸಿರಬಲ್ಲದು ?''

''ಭಗವಂತನಿಗೆ ಇಚ್ಛೆ ಬಂದರೆ ಏನೆಲ್ಲಾ ಆಗಬಹುದು. ಬೆಂಕಿಯಲ್ಲಿ ಸುಡದಿರಬಹುದು. ಕುದಿವ ಎಣ್ಣೆ ಕೊಪ್ಪರಿಗೆಯಲ್ಲಿ ಹಾಕಿದರೂ ಒಂದು ಹೊಪ್ಪಲೆ ಏಳದೆ ಹೊರಗೆ ಬಂದವರು ಭಗವಂತನ ದಯದಿಂದಲೇ ಬಂದರು.''

''ಅದು ಸರಿ, ಈ ಕಪ್ಪೆ ಅದೇನು ನಾಭಿಯನ್ನು ಆಶ್ರಯಿಸಿತ್ತು ?''

''ಅಯ್ಯೋ ಮಂಕೆ, ಮೊದಲು ಬ್ರಹ್ಮ ಹುಟ್ಟಿದ್ದು ಅಲ್ಲೇ, ಕೇಶವನ ನಾಭಿಯಿಂದ ಉದ್ಭವವಾದ ಕಮಲದಲ್ಲಿ. ಆ ಕಮಲ ಹುಟ್ಟುವುದು ನೀರಿನಲ್ಲಿ. ಅದು ಭೂಮಿಯ ಮೇಲೆ ಬೆಳೆಯಲೇಲಾರದು. ಎಂದಾಗ ನಾಭಿಯಲ್ಲಿ ನೀರಿರುತ್ತದೆ.''

''ಇರಬಹುದು. ಆದರೆ ಕಪ್ಪೆ ಒಳಗೆ ಹೋದ ಬಗೆ ?''

"ಅದೇ ಭಗವಂತನ ಲೀಲೆ."

"ಲೀಲೇ ಅವನದಲ್ಲ. ಈಗ ಪಾಪ ಆ ರೂವಾರಿಗಳದು. ಏನೋ ಮಾಡಲು ಹೋಗಿ ಏನೋ ಆಗಿ ಕೂತಿದೆ. ಅಂತೂ ಈ ಪ್ರಪಂಚ ಬಹಳ ವಿಚಿತ್ರವಪ್ಪ"

"ವಿಚಿತ್ರವಾದ್ದರಿಂದಲೇ ಅದನ್ನು ಪ್ರಪಂಚ ಅನ್ನುವುದು."

ಅತ್ತ ಮಹಾರಾಜ ಹಾಗು ಪಟ್ಟಮಹಾದೇವಿಯವರು ವಿಗ್ರಹದ ಬಳಿ ಸಾರಿ ಕೇಶವಗರ್ಭದಿಂದ ಜನಿಸಿ ಬಂದ ಕಪ್ಪೆ ಮರಿಯನ್ನು ನೋಡಿ ತಮ್ಮ ಸ್ಥಾನಕ್ಕೆ ಹಿಂತಿರುಗಿದರು. ಉಳಿದ ರಾಣಿಯರು, ಮುಖ್ಯರು ಸಹ ಹೋಗಿ ನೋಡಿ ಬಂದರು.

ಜನಗಳಲ್ಲಿನ ಮಾತುಕತೆ ನಡೆದೇ ಇತ್ತು. ಕುತೂಹಲಭರಿತರಾದ ಜನರೆಲ್ಲ ನಿಂತಲ್ಲೇ ಇರುವಂತೆ ಮಾಡುವುದು ಕಾಪಿನವರಿಗೆ ಬಹಳ ಪ್ರಯಾಸದ ಕೆಲಸವಾಗಿತ್ತು. ಆದರೂ ಒಂದು ಬಗೆಯ ಶಿಸ್ತರಿತ ಜನ ಅವರಾದ್ದರಿಂದ ಗೊಂದಲವಾಗಲಿಲ್ಲ.

ತಿರುವರಂಗದಾಸನಂತೂ ಆ ವಿಗ್ರಹದ ನಾಭಿಯನ್ನೂ ಅದರಿಂದ ಹೊರಬಂದ ಮಂಡೂಕವನ್ನು ನೋಡಿಯೇ ನೋಡಿದ. ಅವನ ತಲೆಯಲ್ಲಿ ಯಾವುದೋ ವಿಚಾರ ಹೊಕ್ಕಿತು. ಅದೇನೆಂದು ಅವನೇ ಇನ್ನೂ ಗುರುತಿಸಲಾರದವನಾಗಿದ್ದ. ಆದರೆ ಆ ವಿಚಾರ ಅವನನ್ನು ತೀವ್ರವಾದ ಲೆಕ್ಕಾಚಾರಕ್ಕೆ ಒಳಗು ಮಾಡಿಬಿಟ್ಟಿದೆ ಎಂಬುದು ಅವನ ಮುಖಭಾವದಿಂದಲೇ ಗೊತ್ತಾಯಿತು. ಅವನು ಅದೇ ಪರಿಸ್ಥಿತಿಯಲ್ಲಿ ಮೆಲ್ಲಗೆ ಹೆಜ್ಜೆಯಿಡುತ್ತಾ ತನ್ನಾಸನದತ್ತ ಹೋಗಿ ಕುಳಿತ.

ಮತ್ತೆ ಮಹಾರಾಜ ಎದ್ದು ನಿಂತ.

ವಂದಿ ಮಾಗಧರು, "ಸದ್ದು, ಸದ್ದು. ಸನ್ನಿಧಾನ ಮಾತನಾಡ ಬಯಸಿದ್ದಾರೆ" ಎಂದು ಗಟ್ಟಿಯಾಗಿ ಹೇಳಿದರು. ಸದ್ದಡಗಿ, ಮೌನವಾರಿಸಿತು.

"ಕೇಶವ ಗರ್ಭ ಸಂಜಾತವಾದ ಈ ಕಿರಿ ಮಂಡೂಕ ಅಲ್ಲಿದ್ದುದು ಸಮಸ್ಯೆಯಾದರೂ ನಮಗೊದಗಿದ್ದ ಒಂದು ಸಮಸ್ಯೆಯನ್ನು ಅದು ಪರಿಹಾರ ಮಾಡಿತು. ಆ ವಿಷಯವನ್ನು ಮುಂದೆ ಪಟ್ಟಮಹಾದೇವಿಯವರು ತಿಳಿಸುತ್ತಾರೆ. ಈ ದೇವ ಮಂಡೂಕವನ್ನು ನೋಡಲು ಎಲ್ಲರೂ ಕುತೂಹಲಿಗಳಾಗಿರುವುದು ಸಹಜ. ಅದಕ್ಕೆ ತಕ್ಕ ವ್ಯವಸ್ಥೆಯನ್ನು ಮಧ್ಯಾಹ್ನತ್ಪರ ಮಾಡಲಾಗುತ್ತದೆ. ಒಬ್ಬರ ಮೇಲೊಬ್ಬರು ನುಗ್ಗದೆ ನೋಡಬಹುದು. ಈಗ ಮುಂದೇನು ಮಾಡಬೇಕೆಂಬುದು ಪಟ್ಟಮಹಾದೇವಿಯವರಿಗೆ ಸೇರಿದುದು. ಅವರು ನಿರೂಪಿಸುತ್ತಾರೆ" ಎಂದು ಹೇಳಿ ಸಿಂಹಾಸನದಲ್ಲಿ ಕುಳಿತ.

ಪಟ್ಟಮಹಾದೇವಿ ಎದ್ದು ನಿಂತಳು. ಎಲ್ಲರ ದೃಷ್ಟಿ ಅವಳತ್ತ ಹೋಯಿತು. ಕಿವಿಗಳು ಚುರುಕಾದವು. ಏಕಾಗ್ರತೆಯಿಂದ ಅವಳು ಹೇಳುವುದನ್ನು ಕೇಳತೊಡಗಿದರು. ಅವಳು, "ನಮ್ಮ ಪೊಯ್ಸಳ ರಾಜ್ಯದ ಪ್ರೀತಿಯ ಜನಗಳೇ, ಈ ದಿವಸ ವೇಲಾಪುರಿಯ ಇತಿಹಾಸದಲ್ಲಿ ಮತ್ತು ಪೊಯ್ಸಳರ ಇತಿಹಾಸದಲ್ಲಿ ಮಹತ್ತರವಾದ ದಿವಸ. ನಾವಾರೂ ಕನಸು ಮನಸ್ಸಿನಲ್ಲಿಯೂ ಕಲ್ಪಿಸಲಾಗದಿದ್ದ ಘಟನೆಗಳು ನಿನ್ನೆ ಮೊನ್ನೆಯಿಂದ ಇಲ್ಲಿ ನಡೆದು ಬಿಟ್ಟಿವೆ. ಅದರ ಒಂದು ಭಾಗ ಈಗ ನಿಮಗೆಲ್ಲ ವೇದ್ಯವಾಗಿದೆ. ಶಿಲೆಯು ದೋಷಪೂರಿತವಲ್ಲ ಎಂದು ಹೇಳಿ ಸ್ಥಪತಿಗಳು ಸೋಲನ್ನೊಪ್ಪಿದ್ದಾರೆ. ಹಾಗೆಯೇ ಕಲ್ಲಿನಲ್ಲಿ ಜೀವರಾಶಿ

ಇರಲಾರದೆಂದು ಹೇಳಿ ಈ ಯುವಕ ರೂವಾರಿ ಸೋತಿದ್ದಾರೆ. ಇಲ್ಲಿ ಎರಡು ಗೆಲುವುಗಳು, ಎರಡು ಸೋಲುಗಳು ಜರುಗಿವೆ. ಈಗ ಅರಮನೆಯ ಮುಂದೆ ಬಹಳ ಹೊಣೆಗಾರಿಕೆಯ ಪ್ರಶ್ನೆಗಳು ಉದ್ಭವವಾಗಿ ನಿಂತಿವೆ. ಗೆಲುವುಗಳಿಗೆ ಮನ್ನಣೆ ನೀಡುವುದೆಂತು ? ಸೋಲುಗಳಿಗೆ ಶಿಕ್ಷೆ ಮಾಡುವುದೆಂತು ? ಈ ವಿಷಯಗಳನ್ನೂ ಅವರಿದಿರಿಗೆ ಚರ್ಚಿಸುವುದು ನಮಗೆ ಅಷ್ಟು ಸಮರ್ಪಕ ಎಂದೆನಿಸುವುದಿಲ್ಲ. ಅದರಿಂದ ಸನ್ನಿಧಾನ ಇವರಿಬ್ಬರನ್ನೂ ಸ್ವಲ್ಪ ಕಾಲ ಇಲ್ಲಿಂದ ದೂರವಾಗಿ ಇಡಿಸುವ ಕೃಪೆ ಮಾಡಬೇಕು'' ಎಂದಳು.

ಮಹಾರಾಜ, ಉದಯಾದಿತ್ಯನತ್ತ ನೋಡಿದ. ಅವನು ಮತ್ತು ಕುವರ ಬಿಟ್ಟಿಯಣ್ಣರು ಎದ್ದು ಇಬ್ಬರೂ ರೂವಾರಿಗಳನ್ನು ಅಂಗರಕ್ಷಕರ ನೆರವಿನೊಡನೆ ಬೇರೆ ಕಡೆಗೆ ಕರೆದೊಯ್ದರು.

ಆಮೇಲೆ ಶಾನ್ತಲದೇವಿ, ''ನಾವು ಏನೇನೋ ಆಸೆಗಳನ್ನು ಪೋಷಿಸಿ ಬೆಳೆಸುತ್ತೇವೆ. ಆದರೆ ಫಲ ನಮಗೆಂತಹುದು ದೊರೆಯುತ್ತದೆಯೋ ತಿಳಿಯದು. ತಾಯಿಯ ಆಸೆಯನ್ನು ನೆರವೇರಿಸಲು ಅವರೊಂದಿಗೆ ಬಾಹುಬಲಿ ದರ್ಶನಕ್ಕೆ ಹೊರಟ ಚಾವುಂಡರಾಯರಿಗೆ ಬೆಳುಗೊಳದಲ್ಲಿಯೇ ಬಾಹುಬಲಿಯ ದರ್ಶನವಾಯಿತು. ಅದು ಅನಿರೀಕ್ಷಿತ. ಆದರೆ ಅದರ ಫಲ, ಅವರ ತಾಯಿಯ ಆಸೆಯ ಫಲ ನಮ್ಮ ಕನ್ನಡ ನಾಡಿಗೆ ಲಭ್ಯವಾದ ಭವ್ಯ ಬಾಹುಬಲಿಸ್ವಾಮಿ. ಈ ಮಾತೇಕೆ ಎಂದು ನೀವುಗಳು ಕೇಳಬಹುದು. ಇಲ್ಲಿಯೂ ಒಬ್ಬ ತಾಯಿಯ ಆಸೆ ನೆರವೇರಿಸಲು ಕೆಲಸ ನಡೆದಿದ. ನಾವುಗಳು ಚಾವುಂಡರಾಯರನ್ನಾಗಲೀ, ಅವರ ಮಾತೃಶ್ರೀ ಅವರನ್ನಾಗಲೀ ನೋಡಿದವರಲ್ಲ. ಆದರೆ ಇಂದು ಇಲ್ಲಿಗೆ, ಈ ದಿವಸಕ್ಕೆ ಮಹತ್ವ ತಂದು ಕೊಟ್ಟ ಆ ಮಹಾಸಾಧ್ವಿಯನ್ನು ನಾನು ನೋಡಿದ್ದೇನೆ. ತಾವೆಲ್ಲರೂ ನೋಡಬಹುದು. ಆ ಸಾಧ್ವಿಯ ಕುಮಾರನೇ ಯುವಕ ರೂವಾರಿ. ತನ್ನ ಪ್ರಜ್ಞೆಯಿಂದ ಶಿಲೆಯೊಳಗಿನ ದೋಷವನ್ನು ತೋರಿಸಿದವನು. ಅವನು ತನ್ನ ತಾಯಿಯ ಆಸೆಯನ್ನು ಅರಿತು ಅದನ್ನು ಪೂರೈಸಲು ಮನೆಬಿಟ್ಟು ಹೊರಟ. ಕೃತಕಾಯನಾಗದೆ ಹಿಂತಿರುಗುವುದಿಲ್ಲ ಎಂದು ತಾಯಿಯ ಬಳಿ ಘೋಷಿಸಿದ್ದನಂತೆ. ಅವನು ಮನೆ ಬಿಟ್ಟು ಎರಡು ಮೂರು ಸಂವತ್ಸರಗಳ ಮೇಲಾಯಿತು. ಹಿಂತಿರುಗಲಿಲ್ಲವೆಂದು ಭಯಗ್ರಸ್ತಳಾದ ಆ ತಾಯಿ, ಇಲ್ಲಿ ಸಿಗಬಹುದೆಂದು ಊಹಿಸಿ ನಿನ್ನೆ ಇಲ್ಲಿಗೆ ಬಂದು ಮುಟ್ಟಿದ್ದಾರೆ. ಮಗನ ಸ್ವಭಾವ ತಾಯಿಗಿಂತ ಬೇರೆ ಯಾರಿಗೆ ಗೊತ್ತು ? ಇಲ್ಲಿನ ವಿದ್ಯಮಾನ, ಸ್ಪರ್ಧೆ, ಪರೀಕ್ಷೆ ಇವುಗಳ ವಿಷಯ ತಿಳಿದು ಆಕೆ ಬಂದು ನಮ್ಮ ಸಂದರ್ಶನವನ್ನು ಬಯಸಿದರು. ಜೊತೆಗೆ ಆಕೆಯ ಸೋದರನೂ ಇದ್ದ. ಆಕೆಗೆ ಸ್ಥಪತಿಯನ್ನೂ ಯುವಕ ರೂವಾರಿಯನ್ನೂ ತೋರಿಸಲಾಯಿತು. ಆದರೆ ತಮ್ಮನ್ನು ಬೇರೆ ಯಾರೋ ನೋಡಿ ಗುರುತಿಸಿದ್ದಾರೆಂಬ ವಿಷಯ ಅವರಿಬ್ಬರಿಗೂ ತಿಳಿಯದು. ಆಕೆ ತನ್ನ ಆಸೆ ಏನೆಂದು ನಮಗೆ ತಿಳಿಸಿದರು. ಯುವಕ ಆ ವಿಷಯ ಮರೆಮಾಚಿದ್ದ. ಆದರೆ ಅವನಿಂದ ಅವನ ಗ್ರಾಮ ಯಾವುದೆಂದು ತಿಳಿಯೋಣವೆಂಬ ಆಲೋಚನೆಯಲ್ಲಿದ್ದಾಗ ಆಕೆಯೇ ಇಲ್ಲಿ ಉಪಸ್ಥಿತರಾದುದರಿಂದ ನಮ್ಮ ಕೆಲಸ ಹಗುರವಾಯಿತು. ಆ ತಾಯಿ ಬಂದಿರುವ ವಿಷಯವನ್ನು ಯುವಕ ರೂವಾರಿಗೆ ತಿಳಿಸಿಲ್ಲ. ಆದರೆ ನಿಮಗ ತಿಳಿಸಿದ್ದಕ್ಕೆ ಕಾರಣ, ಈಗ ನಿಮ್ಮಿದಿರಿಗೆ ಒಂದು ಸ್ವಾರಸ್ಯಪೂರ್ಣ ಪ್ರಸಂಗ ಜರುಗಲಿದೆ. ಅದು ನಿಮಗೆ ಮಹದಾನಂದವನ್ನು ತಂದುಕೊಡಬಹುದೆಂದು ನನಗನ್ನಿಸಿದೆ. ಆ ಆನಂದದ ಹೊನಲಿನಲ್ಲಿ ತಪ್ಪುಗಳು ಅಂತರ್ಗತವಾಗುವವೆಂದು ನನಗನ್ನಿಸಿದೆ. ಆಮೇಲೆ ನೀವೇ ನಿರ್ಣಯಿಸಿರಿ'' ಎಂದು ಮಹಾರಾಜನತ್ತ ತಿರುಗಿ, ''ಆ ರೂವಾರಿಗಳನ್ನು ಬರಮಾಡಬಹುದು'' ಎಂದಳು.

ಮಹಾರಾಜರ ಸಾಂಕೇತಿಕ ಅಪ್ಪಣೆಯಾಯಿತು.

ರೂವಾರಿಗಳಿಬ್ಬರೂ ಮತ್ತೆ ಬಂದರು. ತಮ್ಮ ಸ್ಥಾನದಲ್ಲಿ ಕುಳಿತರು. ಅವರ ಹಿಂಗಟ್ಟು ಮುರಿಗೆ ಹಾಗೆಯೇ ಇತ್ತು.

ಆಮೇಲೆ ಶಾನ್ತಲದೇವಿ, "ಕ್ರೀಡಾಪುರದ ರೂವಾರಿಗಳೆ" ಎಂದು ಯುವಕನತ್ತ ತಿರುಗಿದಳು.

ಅವನು, "ಏನು ?" ಎಂದು ಮೆಲ್ಲನುಸುರಿದ.

ಶಾನ್ತಲದೇವಿ ಆಗ ಸ್ಥಪತಿ ಏನು ಮಾಡುತ್ತಿದ್ದಾನೆಂದು ನೋಡಿದಳು. ಅವನು ಒಮ್ಮೆ ಯುವಕನತ್ತ ದೃಷ್ಟಿ ಹೊರಳಿಸಿ ತಾನು ಹಾಗೆ ಮಾಡಲಿಲ್ಲವೆಂಬಂತೆ ಬೇಗ ದೃಷ್ಟಿಯನ್ನು ಬೇರತ್ತ ಹೊರಳಿಸಿದ. ವಾಸ್ತವವಾಗಿ ಆಗ ಆವನಿಂದ ಕ್ರಿಯೆ ಮಾಡಿಸಿದ್ದು ಅವನ ಸುಪ್ತ ಮನಸ್ಸು.

"ನೀವು ನಿಮ್ಮ ಊರನ್ನು ಬಿಟ್ಟುದೇಕೆ ? ಎಷ್ಟು ಕಾಲವಾಯಿತು ?"

"ಅದೆಲ್ಲ ಉಳಿದವರಿಗೆ ಅಪ್ರಕೃತ. ನಾನವನ್ನು ಹೇಳಲಾರೆ."

"ನೀವೇ ಹೇಳಿದರೆ ಚೆನ್ನ. ಇಲ್ಲವಾದರೆ ನಿಮ್ಮಂತರಂಗದ ಒಳಹೊಕ್ಕು ನಾವೇ ಅದನ್ನು ಹೇಳಬೇಕಾಗುತ್ತದೆ."

"ನನ್ನ ಅನ್ವೇಷಣೆ ಮುಗಿದಿಲ್ಲ. ನಾನು ಏನು ಶಿಕ್ಷೆ ಬೇಕಾದರೂ ಅನುಭವಿಸಿಯೇನೇ ವಿನಾ ಸಾರ್ವಜನಿಕರ ಇದಿರಿಗೆ ಬಾಯಿ ಬಿಡುವುದಿಲ್ಲ. ಅವರಿಗದು ಅಪ್ರಕೃತ. ತಾವುಗಳಾದರೂ ತಮ್ಮ ಅಧಿಕಾರ ಪ್ರಯೋಗಿಸಿ ನನ್ನಿಂದ ಬಾಯಿ ಬಿಡಿಸಲಾರಿರಿ. ಏಕೆಂದರೆ ಅದು ಕೇವಲ ನಮ್ಮ ಮನೆತನಕ್ಕೇ ಮಿತವಾದ ವಿಷಯ. ಸಂತೆಯಲ್ಲಿ ಪ್ರದರ್ಶನಕ್ಕೆ ಇಡುವ ವಿಷಯವಲ್ಲ. ಸನ್ನಿಧಾನ ನನ್ನನ್ನು ಕ್ಷಮಿಸಬೇಕು."

"ನೀವು ಈಗ ಒಂದು ರೀತಿ ಬಂಧನದಲ್ಲಿದ್ದೀರಿ. ನಿಮಗೆ ಬಿಡುಗಡೆ ಬೇಡವೆ ?"

"ನಮ್ಮ ಮನೆತನದ ಗುಟ್ಟನ್ನು ಭಯದ ಕಾರಣವಾಗಿ ಬಹಿರಂಗ ಪಡಿಸಲಾರೆ. ನಮ್ಮ ವಂಶ ಪವಿತ್ರವಾದ ವಂಶ. ಅದರ ಬಗೆಗೆ ಎಲ್ಲರೂ ಆಡಿಕೊಳ್ಳಲು ಬಿಡುವುದಿಲ್ಲ."

"ನಿಮಗೆ ತಿಳಿಯದು. ಆಡಿ ಆಡಿ ಸೋತು ಆಡುವುದನ್ನು ನಿಲ್ಲಿಸಿ ಈಗ ಮರೆತಿದ್ದಾರೆ. ನೀವಾಗ ಇನ್ನೂ ಮಗು. ಅದರಿಂದ ನಿಮಗೇನೂ ಗೊತ್ತಿಲ್ಲ."

"ಇರಬಹುದು. ಈ ನಮ್ಮ ಗ್ರಾಮದಲ್ಲಿ ಮರೆತದ್ದನ್ನು ಇಲ್ಲಿ ಎಲ್ಲರ ಬಾಯಿಗೆ ತರಲಾರೆ. ಅದು ಮಾತೃದ್ರೋಹವಾಗುತ್ತದೆ."

"ಮಾತೃದ್ರೋಹವೋ ಪಿತೃದ್ರೇಹವೋ ?"

ಯುವಕ ಥಟ್ಟನೆ ಉತ್ತರಿಸಲಿಲ್ಲ. ಪಟ್ಟಮಹಾದೇವಿಯತ್ತ ಪ್ರಶ್ನಾರ್ಥಕವಾಗಿ ನೋಡಿದ.

"ನಾನವರನ್ನು ನೇಡಿಯೇ ಇಲ್ಲ"

"ನೀವು ನೋಡಿದ್ದೀರಿ ಎಂದು ನಾನು ಸಾಕ್ಷಿ ಮಾಡಿಕೊಟ್ಟರೆ ?"

"ಗುರುತಿಸಲು ಆಗಿಲ್ಲದಿರಬಹುದ."

"ಅಂದ ಮೇಲೆ ನನಗೆ ನಿಮ್ಮ ವಿಷಯ ಸಾಕಷ್ಟು ತಿಳಿದಿದೆಯೆಂದು ಒಪ್ಪಿಕೊಳ್ಳುತ್ತೀರಾ?"

ಯುವಕ ಏನೂ ಉತ್ತರಿಸಲಿಲ್ಲ. ಪಿಳಿ ಪಿಳಿ ಕಣ್ಣು ಬಿಟ್ಟು ಶಾನ್ತಲದೇವಿಯತ್ತ ನೋಡಿದ

"ಮೌನ ಸಮ್ಮತಿ ಎಂದು ಭಾವಿಸುತ್ತೇನೆ. ನಿಮ್ಮ ತಾಯಿಗೆ ಯಾರು ಆಶ್ರಯ ?"

"ಇನ್ನಾರು ? ನಾನೆ."

"ಅದರ ಅರಿವೇ ನಿಮಗಿಲ್ಲವಾಗಿದೆ."

"ಅಂದರೆ ?"

"ಮಾತೆತ್ತಿದರೆ ನಾಲಗೆ ಕತ್ತರಿಸಿಕೊಳ್ಳುತ್ತೇನೆ. ಕೈ ತುಂಡರಿಸಿಕೊಳ್ಳುತ್ತೇನೆ ಎನ್ನುತ್ತೀರಿ. ಈ ನಿಮ್ಮ ದೇಹ, ನಿಮ್ಮ ಚತುರತೆ, ಕೈಚಳಕ, ವಾಕ್‌ಚಾತುರ್ಯ, ಸಿದ್ಧಿ, ಸಾಮರ್ಥ್ಯ ಎಲ್ಲಕ್ಕೂ ನೀವು ನಿಮ್ಮ ಮಾತಪಿತೃಗಳಿಗೆ ಹೊಣೆಯಲ್ಲವೆ ?"

"ಹುಟ್ಟಿನ ಮಟ್ಟಿಗಂತೂ ನಿಜ."

"ಆಮೇಲೆ ಅವರು ನಿಮಗೇನೂ ಮಾಡಲಿಲ್ಲವೆ ?"

"ತಾಯಿ, ನನ್ನನ್ನು ಉಳಿಸಿಕೊಳ್ಳಲು, ಬೆಳೆಸಿ ವಂಶದ ವಿದ್ಯೆಯಲ್ಲಿ ಪರಿಣತಿ ಪಡೆಯಲು ಶ್ರಮ ವಹಿಸಿದಳು."

"ಆ ಋಣವನ್ನು ನೀವು ಹೇಗೆ ತೀರಿಸುತ್ತೀರಿ ? ಅವರ ಆಸೆಗೆ ಭಂಗ ತಂದೆ ? ಅವರ ಇಡೀ ಬಾಳನ್ನು ಗೋಳುಮಯ ಮಾಡಿದೆ ?"

"ಈಗ ಅಂತಹ ಕೆಲಸ ನಾನೇನು ಮಾಡಿದ್ದೇನೆ ?"

"ಪುಣ್ಯಕ್ಕೆ ಇನ್ನೂ ಮಾಡಿಲ್ಲ. ಹಾಗೇನಾದರೂ ಮಾಡಿಬಿಟ್ಟರೆಂದೇ ನಿಮಗೆ ಈ ಹಿಂಗಟ್ಟು ಮುರಿಗೆ ಬಂಧನ."

"ನನ್ನ ಪಂಥದಲ್ಲಿ ಗೆದ್ದಿದ್ದೇನಲ್ಲ. ಅಂದಾಗ....."

"ಆದರೆ ಸೋತಿದ್ದರೆ ಏನು ಮಾಡುತ್ತಿದ್ದೀರಿ ?"

"ಆಡಿದ ಮಾತನ್ನು ಉಳಿಸಿಕೊಳ್ಳುತ್ತಿದ್ದೆ."

"ಉಳಿಸಿಕೊಳ್ಳುತ್ತಿದ್ದಿರಿ. ಅದರಿಂದ ಮಾತೃದ್ರೋಹ ಎಸಗುತ್ತಿದ್ದಿರಿ. ನಿಮ್ಮಿಂದ ಅಂತಹ ಕೆಲಸವಾಗಬಾರದೆಂದು ನಾವು ಎಚ್ಚರಿಕೆ ವಹಿಸಿದೆವು. ಒಂದರಲ್ಲಿ ನೀವು ಗೆದ್ದರೂ ಇನ್ನೊಂದರಲ್ಲಿ ಸೋತಿರಿ. ಸ್ಥಪತಿಗಳ ಹಣೆಬರಹವೂ ಅಂತಹುದೇ. ಅವರೂ ಸೋತಿದ್ದಾರೆ, ಗೆದ್ದಿದ್ದಾರೆ. ಅವರು ಸಹ ನಿಮ್ಮ ಹಾಗೆಯೇ ಹಟವಾದಿ. ಅಲ್ಲ, ಅಲ್ಲ. ನೀವೇ ಅವರ ಹಾಗೆ ಹಟವಾದಿ. ನಿಮ್ಮ ಈ ಪರೀಕ್ಷಾಕ್ರಿಯೆಯ ಫಲವಾಗಿ ನಿಮಗೆ ಯಾವ ಬಗೆಯ ಶಿಕ್ಷೆ ಮಾಡಬೇಕೆಂಬುದನ್ನು ನನಗೆ ಮಹಾಸನ್ನಿಧಾನ ಬಿಟ್ಟು ಕೊಟ್ಟಿದ್ದಾರೆ. ಆದರೆ ಆ ಕೆಲಸವನ್ನು ನಾನು ಮಾಡುವುದಿಲ್ಲ. ಈಗ ನನ್ನ ಪರವಾಗಿ ಒಬ್ಬ ನ್ಯಾಯದೇವತೆಯನ್ನು ನಿಮ್ಮ ಮುಂದೆ ತಂದು ನಿಲ್ಲಿಸುತ್ತೇನೆ. ನಂತರ ಏನಾಗುತ್ತದೆಯೆಂಬುದು ನಿಮ್ಮ ಮೂವರಿಗೆ ಸೇರಿದುದು. ರೇವಿಮಯ್ಯ ಆ ಮಹಾತಾಯಿಯನ್ನು ಬರಮಾಡು" ಎಂದಳು ಶಾನ್ತಲದೇವಿ.

ನಾಲ್ಕೆಂಟು ಕ್ಷಣಗಳಲ್ಲಿ ಒಂದು ಅಂದಳ ಅಲ್ಲಿಗೆ ಬಂತು. ಅದರೊಳಗಿನಿಂದ ಒಬ್ಬಾಕೆ ಇಳಿದು ನಿಂತಳು. "ನೀವಿಬ್ಬರೂ ಈ ನ್ಯಾಯದೇವತೆ ಹೇಳಿದಂತೆ ಈಗ ಕೇಳಬೇಕೆಂಬುದು ಮಹಾಸನ್ನಿಧಾನದ ನಿರ್ಣಯ" ಎಂದು ಶಾನ್ತಲದೇವಿ ಹೇಳಿದಳು.

ಇಬ್ಬರೂ ಅವಕ್ಕಾಗಿ ಆಕೆಯನ್ನು ನೋಡಿದರು.

"ಲಕ್ಷ್ಮೀ, ನೀನು ಇಲ್ಲಿ !" ಎಂಬ ಉದ್ಗಾರ ಸ್ಥಪತಿಯ ಬಾಯಿಂದ ಕೂಡಲೇ ಹೊರಬಿತ್ತು.

“ಅಮ್ಮ, ನೀನು ಇಲ್ಲಿ !” ಎಂದು ಯುವಕ ಉದ್ಗರಿಸಿದ.

ಆಕೆ ಸ್ಥಪತಿಯ ಬಳಿಗೆ ಬಂದು ಅವನ ಪಾದಗಳಿಗೆರಗಿ, “ನಾನೇನು ತಪ್ಪು ಮಾಡಿದ್ದರೂ ಕ್ಷಮಿಸಿ ಸ್ವಾಮಿ. ಯಾವುದೋ ಪೂರ್ವಜನ್ಮದ ಪಾಪ ನಮ್ಮಿಬ್ಬರನ್ನೂ ಇಷ್ಟು ವರ್ಷ ಅಗಲಿಸಿತ್ತು. ನಿಮ್ಮ ಅನ್ವೇಷಣೆಗೆ ಹೊರಟ ನಿಮ್ಮ ಮಗ ಡಂಕಣ ಸಂವತ್ಸರಗಳು ಉರುಳಿದರೂ ಹಿಂತಿರುಗಲಿಲ್ಲವೆಂದು ನನ್ನ ಅಣ್ಣನಿಗೆ ಸುದ್ದಿ ಮುಟ್ಟಿಸಿದೆ. ಅವನು ಇಲ್ಲಿನ ದೇವಮಂದಿರದ ಪ್ರತಿಷ್ಠಾಪನೋತ್ಸವದ ಎಲ್ಲಾ ವಿವರ ತಿಳಿಸಿ ನನ್ನಿಲ್ಲಿಗೆ ಕರೆತಂದ ಇಲ್ಲಿನ ಕಥೆ. ಇಂದು ಬೆಳಗ್ಗೆ ನಡೆದ ಪ್ರಸಂಗ ಕೇಳಿದ ನಾನು ಆ ತಂದೆಗೆ ಸರಿಯಾದ ಮಗ ಇವನು ಎಂದುಕೊಂಡು ಸ್ವವಿಷಯವನ್ನೆಲ್ಲ ಪಟ್ಟಮಹಾದೇವಿಯವರಿಗೆ ನಿವೇದಿಸಿಕೊಂಡೆ. ಅವರ ಕರುಣೆ. ಈ ಸಮಾಗಮದ ಭಾಗ್ಯ ನಮಗೆಲ್ಲ ಲಭ್ಯವಾಯಿತು” ಎಂದು ಶಾನ್ತಲದೇವಿಯತ್ತ ತಿರುಗಿ, “ಈ ತಂದೆ ಮಕ್ಕಳ ಹಟಮಾರಿತನವನ್ನು ಸರಿಪಡಿಸುವ ಸಾಮರ್ಥ್ಯ ನನಗಿಲ್ಲವಾದ್ದರಿಂದ ಅದರ ನೋವನ್ನು ಮಾತ್ರ ಇಷ್ಟು ದೀರ್ಘಕಾಲ ಉಂಡಿದ್ದೇನೆ. ಪಣತೊಟ್ಟಿದ್ದವೆ. ಮಾತು ನಾಲಗೆಯಲ್ಲಿ ಬಂದಿದೆ. ಸೋತುದಕ್ಕೆ ಶಿಕ್ಷೆ ಅನುಭವಿಸಿಯೇ ತೀರುತ್ತೇವೆ ಎಂದು ಇಬ್ಬರೂ ಹಟ ಹಿಡಿದರೆ ನನಗೆ ದಿಕ್ಕಾರು ? ಅದರಿಂದ ಸನ್ನಿಧಾನದಲ್ಲಿ, ಈ ರಾಜ್ಯದ ಅಧಿಕಾರಿಗಳಲ್ಲಿ ನನ್ನ ವಿನಂತಿ ಇಷ್ಟೆ. ಯಾವ ಶಾರೀರಕ ಚ್ಯುತಿಯೂ ಮಾಡಿಕೊಳ್ಳದಂತೆ ಇವರಿಬ್ಬರನ್ನೂ ಉಳಿಸಿಕೊಡಿ. ಅವರ ತಪ್ಪನ್ನು ಮನ್ನಿಸಿ ಔದಾರ್ಯ ತೋರಿ. ಮನೆಯಿಂದ ಹೆಚ್ಚಾಗಿ ಹೊರಗೆ ಬಂದೇ ನನಗೆ ಗೊತ್ತಿಲ್ಲ. ಇಲ್ಲಿ ಬಂದು ಈ ಸಮೂಹದದಿರಿನಲ್ಲಿ ಇಷ್ಟು ಮಾತನ್ನು ಹೇಳುವ ಧೈರ್ಯವನ್ನು ಭಗವಂತ ಕೊಟ್ಟನಲ್ಲಾ. ಅಷ್ಟೇ ಸಾಕು. ನನ್ನಲ್ಲಿ ಸತ್ಯವಿಲ್ಲದಿದ್ದರೆ ಭಗವಂತ ಎಂದೂ ನನಗೆ ಈ ಧೈರ್ಯವನ್ನು ಕೊಡುತ್ತಿರಲಿಲ್ಲ” ಎಂದು ಕೈಮುಗಿದಳು.

ಶಾನ್ತಲದೇವಿ, “ಸನ್ನಿಧಾನದ ಮುಂದೆ ನೊಂದ ಪ್ರಜೆಯ ಮನವಿಯೊಂದು ಇದೆ. ನಿರ್ಣಯ ಕೊಡುವ ಕೃಪೆದೋರಬೇಕು” ಎಂದಳು.

ಬಿಟ್ಟಿದೇವ, “ರೂವಾರಿ ಡಂಕಣರೇ. ನಿಮ್ಮ ಅನ್ವೇಷಣೆ ಮುಗಿಯಿತಲ್ಲವೆ ?” ಎಂದು ಕೇಳಿದ.

“ಮುಗಿಯಿತು ಪ್ರಭು.”

“ಅದೇನೆಂದು ಈಗ ಹೇಳಬಹುದಲ್ಲ ?”

“ಹೇಳಲು ಉಳಿದಿರುವುದಾದರೂ ಏನು ?”

“ಇದೆ, ನಿಮ್ಮ ಮಾತೃಶ್ರೀ ಅವರು ನಿಮ್ಮ ನಾಮಧೇಯ ಹೇಳಿದರು. ಆದರೆ ನಿಮ್ಮ ತಂದೆಯವರ ಹೆಸರು ಇನ್ನೂ ಯಾರಿಗೂ ತಿಳಿಯದಲ್ಲ ?”

“ಅವರು ಕ್ರೀಡಾಪುರದ ಜಕಣಾಚಾರ್ಯರು.”

“ಸ್ಥಪತಿ ಜಕಣಾಚಾರ್ಯರೆ, ನೀವಿನ್ನು ಯಾತ್ರಿಕ ರೂವಾರಿಯಲ್ಲ ತಿಳಿಯಿತೆ ?”

“ತಿಳಿಯಿತು.”

“ನೀವು ಮತ್ತು ನಿಮ್ಮ ಕುಮಾರ ಇಬ್ಬರೂ ಇಂದು ನಮಗೊಂದು ವಚನ ಕೊಡಬೇಕು.”

“ಅಪ್ಪಣೆಯಾಗಲಿ.”

“ನೀವಿಬ್ಬರೂ ಹಟದ ಆ ವಿಷಗಳಿಗೆಯಲ್ಲಿ ಆಡಿದ ಮಾತಿನತ್ತ ಯಾವ ರೀತಿಯಿಂದಲೂ ಗಮನಕೊಡಬಾರದು. ಎರಡು ತಪ್ಪು, ಎರಡು ಸರಿ. ಅಲ್ಲಿಗಲ್ಲಿಗೆ ಸರಿಯಾಯಿತು. ಯಾವ ಏರುಪೇರಿಗೂ

ಅವಕಾಶವಿಲ್ಲ. ನೀವು ಭಗವಂತನ ಮೇಲೆ ಭರವಸೆ ಕೊಟ್ಟು ಈ ಪರೀಕ್ಷೆ, ಪಣದ ಮಾತನ್ನು ಮರೆಯುತ್ತೇವೆ. ಆ ಸಂಬಂಧದಲ್ಲಿ ಆಡಿದ ಮಾತು ಅಲ್ಲಿಗಷ್ಟೇ ಕಾರ್ಯ ರೂಪಕಲ್ಲ ಎಂದು ಈ ಸಾಧ್ವಿಗೆ ವಚನ ಕೊಟ್ಟು ನಿಮ್ಮ ಆ ಕೈಗಳು ಈಕೆಯ ರಕ್ಷಣೆಗೆ ಎಂದು ವಾಗ್ದಾನ ಮಾಡಿದರೆ ನೀವು ಬಂಧ ಮುಕ್ತರಾಗುವಿರಿ'' ಎಂದು ಬಿಟ್ಟಿದೇವ ಹೇಳಿದ.

''ನಾವು ಆಡಿದುದು ಸಾರ್ವಜನಿಕರ ಸಾಕ್ಷಿಯಾಗಿ, ನಾಳೆ ಅವರಿಂದ ತಲೆಗೊಂದು ಮಾತು ಬರಬಾರದು. ಅವರ ಅಭಿಪ್ರಾಯವನ್ನು ಸನ್ನಿಧಾನ ಕೇಳಬೇಕು'' ಎಂದು ಜಕಣಾಚಾರಿ ಹೇಳಿದ. ಬಿಟ್ಟಿದೇವನ ಸನ್ನೆಯ ಮೇಲೆ ಇಬ್ಬರ ಕಟ್ಟುಗಳನ್ನೂ ಬಿಚ್ಚಲಾಯಿತು.

ಮಹಾರಾಜ ಸಾರ್ವಜನಿಕರಿಗೆ ಸ್ಥಪತಿಯ ಮಾತನ್ನು ತಿಳಿಸಿದ.

''ಈ ತಂದೆ ಮಕ್ಕಳ ಕೈಯಲ್ಲಿ ಇಂತಹ ನೂರಾರು ದೇವಮಂದಿರಗಳು ನಿರ್ಮಾಣವಾಗಿ ಶಾಶ್ವತವಾದ ಕೀರ್ತಿಗೆ ಅವರುಗಳು ಇನ್ನೂ ಒಳಗಾಗಬೇಕು. ಅದು ನಾಡಿಗೆ ಅವರಿಂದ ವಚನ ಅಮೋಘ ಕೊಡುಗೆ. ಎಂದಾಗ ಕೈಗಳು ಹಾಗೆಯೇ ಇರಬೇಕು. ಅವರಿಗೆ ಶಿಕ್ಷೆಯಲ್ಲ. ಪುರಸ್ಕಾರ ನೀಡಬೇಕು'' ಎಂದು ಜನತೆ ನಿರ್ಣಯಿಸಿತು.

''ನಾನು ಜನತೆಯ ಮಾತಿಗೆ ಬದ್ಧ'' ಎಂದು ಜಕಣಾಚಾರಿ ತನ್ನ ಪತ್ನಿಯ ಕೈಮೇಲೆ ಕೈ ಹಾಕಿದ.

''ನಾನೂ ಅಷ್ಟೆ'' ಎಂದು ಡಂಕಣನೂ ತನ್ನ ಕೈ ಅವರಿಬ್ಬರ ಕೈಮೇಲೆ ಹಾಕಿದ.

ಮೂವರೂ ಪರಸ್ಪರ ಒಬ್ಬರನ್ನೊಬ್ಬರು ನೇರ ದೃಷ್ಟಿಯಿಂದ ಈಕ್ಷಿಸಿದರು. ಮೂವರ ಮುಖದ ಮೇಲೂ ಮುಗುಳ್ನಗೆ ಮೂಡಿತು. ಒಂದಿಗೇ ಆನಂದಬಾಷ್ಪ ಸಹ ಉಕ್ಕಿ ಹರಿಯ ತೊಡಗಿತು

ದೇವಮಂದಿರ ಮತ್ತು ಆ ಇಡೀ ವಾತಾವರಣವೇ ಜನತೆಯ ಹರ್ಷೋದ್ಗಾರದಿಂದ ಝೇಂಕರಿಸಿತು.

''ಇದೊಂದು ಅದ್ಭುತ ಸಮಾಗಮವಲ್ಲವೆ ?'' ಎಂದು ಶಾಂತಲದೇವಿ ಬಿಟ್ಟಿದೇವನ ಕಿವಿಯಲ್ಲಿ ಉಸುರಿದಳು.

''ದೇವಿ, ಇದೆಲ್ಲ ನಿನ್ನ ಪವಾಡ. ಎಲ್ಲೆಡೆಯೂ ಸೌಹಾರ್ದವನ್ನು ತುಂಬುವ ನಿನ್ನ ಶಕ್ತಿ ಎಂತಹುದೆಂಬುದೇ ತಿಳಿಯದು. ಶ್ರೀಮದಾಚಾರ್ಯರಿಂದ ಹೆದರಿ ಹಿಂಜರಿದು ತಲೆಮರೆಸಿಕೊಂಡ ಜಕಣಾಚಾರ್ಯರು ಈ ಕೆಲಸ ಒಪ್ಪಿಕೊಂಡ ಮೇಲೆ ಹೇಗೆ ಬದಲಾದರೆಂಬುದೇ ಆಶ್ಚರ್ಯ'' ಎಂದು ಬಿಟ್ಟಿದೇವ ಹೇಳಿದ.

''ಅದನ್ನೆಲ್ಲ ನಿಧಾನವಾಗಿ ವಿಶ್ಲೇಷಿಸೋಣ. ಈಗ ಈ ಸಭೆ ಮುಗಿಸಿ. ನಮಗೆ ಇನ್ನೂ ಬಹಳ ಕೆಲಸವಿದೆ. ಈಗ ಬೇರೊಂದು ದೇವವಿಗ್ರಹವಾಗಬೇಕಾಗಿದೆ. ಮುಹೂರ್ತಕ್ಕೆ ಇರುವುದು ಐದು ದಿನಗಳು ಮಾತ್ರ'' ಎಂದಳು ಶಾಂತಲದೇವಿ.

ಅಂತೆಯೇ ಸಂತೋಷ ಉಕ್ಕಿ ಹರಿಯುತ್ತಿದ್ದ ಆ ಸಭೆ ಮುಗಿಯಿತು.

ಆದರೂ ತಿರುವರಂಗದಾಸನಿಗೆ ಮಾತ್ರ ಸಂತೋಷವಾಗಲಿಲ್ಲ. ಯಾರದ್ದಾದರೂ ಕೈ ಕತ್ತರಿಸಲೇ ಬೇಕಿತ್ತು. ಹಾಗಾಗುವುದನ್ನೇ ನೋಡಲು ಅವನು ಇಚ್ಛಿಸಿದ್ದ.

ಇತರರ ಕೇಡಿನಲ್ಲಿ ಅವರಿಗೆಂತಹ ಸಂತೋಷವೋ ದೇವರೇ ಬಲ್ಲ.

# ೧೩. ಧರ್ಮ ದಿಗ್ವಿಜಯ

ಸೇರಿದ್ದ ಜನತೆ ತಮ್ಮ ನಿವಾಸಗಳಿಗೆ ಹಿಂದಿರುಗಿತು. ಮಹಾರಾಜ ರಾಣಿಯರು ಮೊದಲಾದವರು ಅರಮನೆಗೆ ತೆರಳಿದರು. ಅಧಿಕಾರಿಗಳು ತಮ್ಮ ತಮ್ಮ ನಿವಾಸಗಳಿಗೆ ತೆರಳಿದರು.

ಜಕಣಾಚಾರ್ಯ, ಅವನ ಪತ್ನಿ ಲಕ್ಷ್ಮೀ ಮತ್ತು ಮಗ ಡಂಕಣ ಸ್ಥಪತಿಯ ಬಿಡಾರಕ್ಕೆ ತೆರಳಿದರು.

ವಿವಾದಕ್ಕೊಳಗಾಗಿ, ಮಹಾದ್ಭುತವೊಂದನ್ನು ಪ್ರದರ್ಶಿಸಿದ ಕೇಶವ ದೇವ ಮಾತ್ರ ಹೊಕ್ಕುಳಿಗೆ ಪೆಟ್ಟು ತಿಂದಿದ್ದರೂ ಆ ಕಾವಣದಲ್ಲಿ ತನ್ನ ಮುಗುಳುನಗೆ ಬೀರುತ್ತಾ ಒಂಟಿಯಾಗಿ ನಿಂತಿದ್ದ. ಕಾವಣದ ಸುತ್ತಲೂ ಬಂಬುಗಳನ್ನು ಕಟ್ಟಿ ಸಮೀಪಕ್ಕೆ ಯಾರೂ ಹೋಗದಂತೆ, ಆದರೆ ಎಲ್ಲರಿಗೂ ಕಾಣುವಂತೆ ವ್ಯವಸ್ಥೆ ಮಾಡಿ ಅಲ್ಲಿ ಕಾಪಿನವರನ್ನು ಇರಿಸಲಾಯಿತು. ಮಂಡೂಕವನ್ನು ಸಹ ಪ್ರದರ್ಶನಕ್ಕೆ ಅಲ್ಲೆ ಇಡಲಾಗಿತ್ತು. ಅದಿದ್ದ ಒಂದು ಪರಾತದಲ್ಲಿ ನೀರಿತ್ತು. ಮೇಲಿನ ಮುಚ್ಚಳಕ್ಕೆ ರಂಧ್ರಗಳಿದ್ದವು. ಒಬ್ಬ ಕಾಪಿನವನು ಅದನ್ನು ಬಂದವರಿಗೆಲ್ಲಾ ತೋರಿಸುವ ವ್ಯವಸ್ಥೆಗೆ ನಿಯೋಜಿತನಾಗಿದ್ದ.

ತಿರುವರಂಗದಾಸ ಸಹ ತನ್ನ ಬಿಡಾರಕ್ಕೆ ತೆರಳಿದ.

ಜಕಣಾಚಾರ್ಯರ ಕುಟುಂಬವು ಬಿಡಾರಕ್ಕೆ ಬರುವ ವೇಳೆಗೆ ತನ್ನ ಬಿಡಾರವು ತಳಿರುತೋರಣಗಳಿಂದ ಅಲಂಕೃತವಾದುದನ್ನು ರೂವಾರಿ ನೋಡಿದ. ಲಕ್ಷ್ಮೀ, ಅವಳ ಸೋದರ ಹಾಗೂ ಡಂಕಣನ ಸಾಮಾನುಗಳೆಲ್ಲ ಆಗಲೇ ಈ ಬಿಡಾರವನ್ನು ಸೇರಿದ್ದವು. ಮಲ್ಲೋಜ, ರೂವಾರಿದ್ವಯರಿಗೆ, ತನ್ನ ಸೋದರಿಗೆ ಸ್ವಾಗತ ಕೋರಿದ. ಒಳಗಿನಿಂದ ಚಟ್ಟಲೆ ಮತ್ತು ದಾಸವ್ವೆಯರು ಬಂದು ಸಮಾಗಮಿತ ಕುಟುಂಬಕ್ಕೆ ಆರತಿ ಬೆಳಗಿದರು.

ಒಳಗೆ ಪ್ರವೇಶಿಸುವ ಮುನ್ನ ಹೊಸ್ತಿಲಿನ ಮೇಲಿದ್ದ ಧಾನ್ಯವನ್ನು ಒಳಗೆ ಚಿಮ್ಮ ಬೇಕೆಂದು ಚಟ್ಟಲೆ, ಲಕ್ಷ್ಮೀಗೆ ಹೇಳಿದಳು.

ಅವಳು ಆಶ್ಚರ್ಯದಿಂದ ಅವಳತ್ತ ನೋಡಿದಳು. ತನ್ನ ಕೈಹಿಡಿದಾತನತ್ತ ನೋಡಿದಳು.

"ಪಟ್ಟಮಹಾದೇವಿಯವರು ಮನೆ ತುಂಬಿಸಿ ಹೆಣ್ಣನ್ನು ಒಳಕ್ಕೆ ಬರಮಾಡಿಕೊಳ್ಳಬೇಕೆಂದು ಅಪ್ಪಣೆ ಮಾಡಿದ್ದಾರೆ" ಎಂದಳು ಚಟ್ಟಲೆ.

ಧಾನ್ಯ ಚಿಮ್ಮಿ ಲಕ್ಷ್ಮೀ ಒಳಗೆ ಅಡಿ ಇಟ್ಟಳು. ಅವಳನ್ನು ಜಕಣಾಚಾರ್ಯ ಮತ್ತು ಡಂಕಣರು ಹಿಂಬಾಲಿಸಿದರು.

ಜಕಣಾಚಾರ್ಯ ತನ್ನ ಬಿಡಾರ ಸಜ್ಜಾಗಿರುವ ರೀತಿಯನ್ನು ನೋಡಿ ಆಶ್ಚರ್ಯ ಪಟ್ಟ. ಅವನ

ಮನಸ್ಸು ಯಾವುದೋ ಗತಕಾಲದ ಸುಖ ಸಮಯದತ್ತ ಓಡಿತು. ತನಗೆ ಯೋಚಿಸಲು ಸಹ ಅವಕಾಶವನ್ನು ನೀಡದೆ ತನ್ನ ಬಾಳಿನಲ್ಲಿ ಕಳೆದು ಹೋದ ಬೆಳಕು ನೀಡಿದ ಪಟ್ಟಮಹಾದೇವಿಯ ಮನೋವೈಶಾಲ್ಯವನ್ನು ನೆನೆಯುತ್ತ ಅವನು ತುಸು ವಿಶ್ರಾಂತಿ ತೆಗೆದುಕೊಳ್ಳುತ್ತ ಭಾವ ಮೈದುನಂದರು ಕುಶಲ ಪ್ರಶ್ನೆಯಲ್ಲಿ ತೊಡಗಿದರು. ಡಂಕಣ ತನ್ನ ಅನ್ವೇಷಣೆಯ ಕಥೆಯನ್ನು ತಾಯಿಗೆ ಅರುಹುತ್ತಿದ್ದ.

ಬೇಗಲೆ ಆರೋಗಣೆಗೆ ಕರೆಬಂತು.

ಅದು ಸಾಮಾನ್ಯ ಆರೋಗಣೆಯೆನಿಸಲಿಲ್ಲ. ರಾಜೌತಣದಂತೆ ಇತ್ತು.

"ಮಂಚಣ ಇದೆಲ್ಲ ಏಕೆ ಮಾಡಿದೆ ?'' ಎಂದು ಜಕಣಾಚಾರ್ಯ ಕೇಳಿದ.

"ಪಟ್ಟಮಹಾದೇವಿಯವರ ಅಪ್ಪಣೆ ಮೀರಿ ನಾನು ಬದುಕಬಲ್ಲೆನೆ ?'' ಎಂದ ಮಂಚಣ.

"ಇದೇನು ಇವತ್ತು ಎಂದಿಗಿಂತ ರುಚಿಯಾಗಿದೆಯಲ್ಲ ಅಡಿಗೆ ?'' ಎಂದು ಜಕಣಾಚಾರ್ಯ ಕೇಳಿದ.

"ತಮ್ಮ ಮನಸ್ಸಿಗೆ ಸಿಕ್ಕ ನೆಮ್ಮದಿ ಆ ರುಚಿಯ ರೂಪದಲ್ಲಿ ಕಾಣಿಸುತ್ತಿದೆ ಅಷ್ಟೆ ನನ್ನ ಅಡಿಗೆ ಒಂದೇ ರುಚಿ. ತಮಗೆ ತಿಳಿಯದೆ ?'' ಎಂದ ಮಂಚಣ.

ಭೋಜನ ಮುಗಿಯುತ್ತಲೂ ಜಕಣಾಚಾರ್ಯ, "ಲಕ್ಷ್ಮೀ, ನಾವು ಈಗ ಅರಮನೆಗೆ ಹೋಗಬೇಕಾಗಿದೆ. ಡಂಕಣನೂ ಜೊತೆಗೆ ಬರುತ್ತಾನೆ. ನಿನ್ನ ಜೊತೆಗೆ ಹೇಗೂ ಮಲ್ಲೋಜರು ಇರುತ್ತಾರೆ'' ಎಂದ.

"ನನಗೆ ಮತ್ತೆ ನಿಮ್ಮ ಪಾದ ಸಿಕ್ಕಿತಲ್ಲ. ಅದರ ನೆನಪಿನಲ್ಲೇ ನಾನು ಕಾಲ ಕಳೆಯಬಲ್ಲೆ. ನೀವು ನಿಮ್ಮ ಕೆಲಸಗಳಿಗೆ ಹೋಗಿ. ಪಟ್ಟಮಹಾದೇವಿಯವರು ನನಗೆ ಇಲ್ಲಿನ ಹೊಣೆಗಾರಿಕೆಯನ್ನೆಲ್ಲ ತಿಳಿಸಿದ್ದಾರೆ. ಇಷ್ಟಕ್ಕೂ ನಾನೇನು ಇನ್ನೂ ಪುಟ್ಟ ಹುಡುಗಿಯೆ ? ಅಣ್ಣ ಬೇಕಾದರೆ ಹಾಗೆಯೇ ಬಿಡಾರ ಸುತ್ತಿ ಬರಲಿ. ಪಾಪ ಇಲ್ಲಿ ಕುಳಿತು ಮಾಡುವುದೇನು ? ಜೊತೆಗೆ ಈ ದಾಸವ್ವೆಯಂತೂ ಇದ್ದೇ ಇರುತ್ತಾಳೆ. ಅಲ್ಲದೆ ನಾನು ಪಟ್ಟಮಹಾದೇವಿಯವರ ಮಾತಾಪಿತೃಗಳ ಆಶೀರ್ವಾದವನ್ನು ಪಡೆದು ಬರಬೇಕು. ಅಲ್ಲಿಗೆ ಹೋಗಿ ಬರುತ್ತೇನೆ'' ಎಂದಳು ಲಕ್ಷ್ಮೀ.

ಸರಿ. ಅಲ್ಲಿಗೆ ಒಂದು ಪರಿಷ್ಕೃತ ಕಾರ್ಯಕ್ರಮವೇ ರೂಪಿತವಾದಂತಾಯಿತು. ಜಕಣಾಚಾರ್ಯ ಮತ್ತು ಡಂಕಣಾಚಾರ್ಯರು ಅರಮನೆಗೆ ಬಂದರು. ಮುಂದೇನು ಮಾಡಬೇಕೆಂಬ ಬಗೆಗೆ ರೂವಾರಿಗಳ, ಆಗಮಶಾಸ್ತ್ರಜ್ಞರ ಹಾಗೂ ಅಧಿಕಾರಿಗಳ ಕೂಡುಹವಿತ್ತು.

ಎಲ್ಲರೂ ಸಮಾವೇಶಗೊಂಡರು. ಮಹಾರಾಜರು, ಪಟ್ಟಮಹಾದೇವಿಯವರು ಬಂದರು. ವಿಚಾರವನ್ನು ವಿಸ್ತಾರವಾಗಿ ಚರ್ಚಿಸಲಾಯಿತು. ಮೂಲ ವಿಗ್ರಹವನ್ನು ಬೇರೆಯೇ ಕಡೆಯಬೇಕೆಂದು ಅಂತಿಮವಾಗಿ ನಿರ್ಣಯವಾಯಿತು. ಅದಕ್ಕಾಗಿ ದೋಷರಹಿತ ಶಿಲೆಯನ್ನು ಆರಿಸಿ ಡಂಕಣಾಚಾರ್ಯ ಕಡೆಯ ತಕ್ಕದ್ದೆಂದು ನಿರ್ಣಯವಾಯಿತು.

ಪರೀಕ್ಷೆಗೆ ಒಳಗಾಗಿದ್ದ ಚೆನ್ನಕೇಶವ ವಿಗ್ರಹದ ಪಾಡಿನ ಬಗೆಗೆ ಚರ್ಚೆಯಾಯಿತು. ಶಾನ್ತಲದೇವಿ, "ಈಗ ಅದರ ದೋಷ ನಿವಾರಣೆಯಾಗಿದೆ. ನನಗೆ ಆ ವಿಗ್ರಹ ತುಂಬ ಪ್ರಿಯವೆನಿಸಿದೆ. ಆಗಮೋಕ್ತ ರೀತಿಯಲ್ಲಿ ಅದನ್ನೂ ಪ್ರತಿಷ್ಠಾಪಿಸಲು ಅವಕಾಶವಿದ್ದರೆ ಅದನ್ನು ಇದೇ ಆವರಣದಲ್ಲಿಯೇ ಬೇರೊಂದೆಡೆ ಪ್ರತಿಷ್ಠಾಪಿಸಬಹುದು'' ಎಂದು ಸೂಚಿಸಿದಳು.

"ವಾಸ್ತವವಾಗಿ ಇದನ್ನೇ ದೋಷ ಪರಿಹಾರ ಮಾಡಿ ಪ್ರತಿಷ್ಠಾಪಿಸಬಹುದೆಂದು ನಾವು ಮೊದಲೇ ಹೇಳಿಯಾಗಿರುವಾಗ ಈಗ ಪ್ರತಿಷ್ಠಾಪನೆಗೇನೂ ಅಡ್ಡಿಯಿಲ್ಲ. ಆದರೆ ಅದಕ್ಕೆ ಕನಿಷ್ಠ ಒಂದು ಗರ್ಭಗೃಹವಾದರೂ ನಿರ್ಮಾಣವಾಗಬೇಕಲ್ಲ. ಇದೇ ಮುಹೂರ್ತಕ್ಕೆ ಅದು ಆದೀತೆ ?'' ಎಂದು ಆಗಮಿಕ ಕೇಳಿದ.

"ಆ ಚಿಂತೆ ನೀವು ಬಿಡಿ. ಮೂಲ ದೇಮಂದಿರದ ದಕ್ಷಿಣಕ್ಕೆ ಅದನ್ನು ನಿರ್ಮಿಸೋಣ'' ಎಂದು ದಾಸೋಜ ಹೇಳಿದ.

ಸಭೆ ಮುಗಿಯಿತು. ಅದರ ಅನುಸಾರವಾಗಿ ಕೆಲಸಗಳು ಮುಂದುವರಿದವು. ಡಂಕಣ ಮೂಲ ಚೆನ್ನಕೇಶವ ವಿಗ್ರಹದ ಕೆತ್ತನೆಯಲ್ಲಿ ತಲ್ಲೀನನಾದ. ದಾಸೋಜರ ನೇತೃತ್ವದಲ್ಲಿ ಪ್ರಸ್ತುತ ವಿಗ್ರಹಕ್ಕೆ ಗರ್ಭಗೃಹ ನಿರ್ಮಾಣದ ಕೆಲಸ ಸಾಗಿತು.

ಉಗಾದಿಯಂದು ಒಂದು ರಾಜಸಭೆ ವರ್ಷಂಪ್ರತಿ ನಡೆಯುವಂತೆ ನಡೆಯಿತು. ಊರಿನ ಗಣ್ಯರು, ಪ್ರಮುಖರು, ಅಧಿಕಾರಿಗಳು, ರಾಜ್ಯದ ಬೇರೆ ಬೇರೆ ಭಾಗದಿಂದ ಬಂದ ನಾಯಕರು ಎಲ್ಲರೂ ರಾಜದಂಪತಿಗಳಿಗೆ ವಂದಿಸಿ ತಮ್ಮ ನಿಷ್ಠೆಯನ್ನು ಸೂಚಿಸಿ ತೆರಳಿದರು. ಮತ್ತೆ ವಿಜಯೋತ್ಸವದ ಸಮಾರಂಭ ಇರುವುದರಿಂದ ಇಲ್ಲಿ ಮಾತುಕತೆಗೆ ಅವಕಾಶ ಕೊಡದೆ ಕೇವಲ ಔಪಚಾರಿಕವಾದ ರೀತಿಯಲ್ಲಿ ಸಭೆ ಸಾಗಿತು.

ಜಕಣಾಚಾರ್ಯ ಏಕಾಗ್ರತೆಯಿಂದ ರಾಜಸಭೆಯನ್ನು ವೀಕ್ಷಿಸಿದ. ಆ ರಾತ್ರಿ ಅದನ್ನು ತನ್ನ ಕಲ್ಪನೆಯಂತೆ ಚಿತ್ರೀಕರಿಸಿದ.

ದೇವಮಂದಿರದ ಮಹಾ ದ್ವಾರದ ಮೇಲೆ ಹೊಂದಿಸಲು ಪ್ರಭಾವಳಿಯುಕ್ತ ರೀತಿಯಲ್ಲಿ ಅದನ್ನು ಕಡೆಯಲು ತೊಡಗಿದ.

ವಾಸ್ತವವಾಗಿ ಮಲ್ಲೋಜನಿಗೆ ಯಾವ ನಿಯೋಜಿತ ಕೆಲಸವೂ ಇರಲಿಲ್ಲ. ಅವನು ಎಲ್ಲೂ ಬಹಿರಂಗದಲ್ಲಿ ಪ್ರಕಟವಾಗಿರಲಿಲ್ಲವಾಗಿ ಬಹಳ ಜನಕ್ಕೆ ಅವನು ಸ್ಥಪತಿಯ ಸಂಬಂಧಿ ಎಂಬ ವಿಚಾರ ತಿಳಿಯದು. ಅದೊಂದು ರೀತಿ ಅವನಿಗೆ ಸ್ವಾರಸ್ಯವನ್ನು ಪಡೆಯಲು ನೆರವಾಗಿತ್ತು. ಯಾರಿಗೇ ಸಂಬಂಧಿಸಿದ ಯಾವುದೇ ಲೋಕಾಭಿರಾಮದ ಮಾತುಗಳನ್ನು ಕೇಳಲು ಅವನಿಗೆ ಅನುವಾಗಿತ್ತು.

ಹೇವಿಳಂಬಿ ಸಂವತ್ಸರದ ಉಗಾದಿ ಕಳೆದುದೇ ಕಳೆದುದು, ಎರಡೇ ದಿವಸಗಳಲ್ಲಿ ವೇಲಾಪುರಿಯಲ್ಲಿ ಎಲ್ಲಿ ನೋಡಿದರೂ ನಾಮಧಾರಿಗಳೇ ಕಣ್ಣಿಗೆ ಬೀಳುತ್ತಿದ್ದರು. ಇಷ್ಟು ಜನ ಎಲ್ಲೆಲ್ಲಿಂದ ಬಂದರೋ ತಿಳಿಯದು. ಅಂತೂ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಅವರು ವೇಲಾಪುರಿಯಲ್ಲಿ ಸೇರಿದರು.

ಏನೋ ಗುಸು ಗುಸು ಆರಂಭವಾಯಿತು. ಕೆಲ ಕೆಲವು ಮಾತುಗಳು ಅವನ ಕಿವಿಗೆ ಬಿದ್ದವು. ಆ ಎಲ್ಲ ಮಾತುಗಳ ಸಾರಾಂಶವನ್ನೂ ಅವನು ತೃತೀಯೆಯ ರಾತ್ರಿ ಬಿಡಾರದಲ್ಲಿ ಉಸುರಿದ – "ಪಟ್ಟಮಹಾದೇವಿ ಜೈನಳು. ಮಾತೆತ್ತಿದರೆ ಅವಳಿಗೆ ಆ ನಗ್ನ ಗೊಮ್ಮಟನ ಸ್ಮರಣೆಯೇ. ಯಾವುದಕ್ಕೂ ತನ್ನ ಧರ್ಮವನ್ನೇ ಮುಂದು ಮಾಡುತ್ತಾಳೆ. ತಾನು ಜೈನಳೆಂದೇ ಸೋಗು ಹಾಕುತ್ತಾಳೆ. ಶ್ರೀವೈಷ್ಣವನ ತಂಬಲ ತಿನ್ನುವವಳಿಗೆ, ಅವನೊಂದಿಗೆ ಶಯನ ಸುಖ ಅನುಭವಿಸುವವಳಿಗೆ ಕುಲವೆಲ್ಲಿ ಬಂತು ? ಆದರೆ ಪದವಿ ಅವಳ ಬೆಂಬಲಕ್ಕಿದೆ. ಕುರುಡು ಮಹಾರಾಜನಿಗೂ ಅವಳ ಬಗೆಗೊಂದು ಕಕಲಾತಿ ಇದೆ. ಯಾರ ಮಾತನ್ನೂ ಕೇಳುವುದಿಲ್ಲ. ಅವಳ ಮಾತೆಂದರೆ ಅವನಿಗೆ ವೇದವಾಕ್ಯ. ಅವಳು ವಾಸ್ತವವಾಗಿ ಮಂದಿರ

ನಿರ್ಮಾಣದಲ್ಲಿ ನೆರವು ನೀಡುವ ಸೋಗು ಹಾಕಿ ಸ್ಥಪತಿಯೊಡನೆ ಸರಸವಾಡಿದಳು. ಕಾರಣ ಇಷ್ಟೆ. ಅವನನ್ನು ಕುಣಿಸಿದರೆ ಈ ದೇವರ ವಿಗ್ರಹ ದೋಷಯುಕ್ತ ಶಿಲೆಯಲ್ಲಿ ಕೆತ್ತಿಸಲು ಸಾಧ್ಯ ಎಂದು ಹಾಗೆಯೇ ಮಾಡಿದಳು. ಅಂತಹ ಶಿಲೆಯಲ್ಲಿ ವಿಗ್ರಹ ಕೆತ್ತಲ್ಪಟ್ಟಿತು. ಅದು ಪ್ರತಿಷ್ಠಾಪನೆ ಆಗಿದ್ದರೆ ಆಚಾರ್ಯರಿಗೆ, ಮಹಾರಾಜರಿಗೆ, ಅವರನ್ನು ಧರ್ಮೋಕ್ತವಾಗಿ ಪಾಣಿಗ್ರಹಣ ಮಾಡಿದ ಹೊಸ ರಾಣಿ ಲಕ್ಷ್ಮೀದೇವಿಗೆ ಕೆಡುಕಾಗಲಿ ಎಂದು. ಸುಂದರ ವಿಗ್ರಹಗಳನೇಕವೆಲ್ಲ ಆಕೆಯದೇ ಭಂಗಿಯಂತೆ. ನಗ್ನ ವಿಗ್ರಹ ಕೊರೆಯಲು ಒಂದು ರಾಜ್ಯದ ಪಟ್ಟಮಹಾದೇವಿ ಗುಟ್ಟಾಗಿ ತನ್ನ ಅಂತಃಪುರದಲ್ಲಿ ಆ ಸ್ಥಪತಿಗೊಬ್ಬನಿಗೇ ನಗ್ನವಾಗಿ ಭಂಗಿ ನೀಡಿದಳಂತೆ. ಸರ್ವಾಸಹ್ಯ ವ್ಯವಹಾರ. ಹಾಗೆ ಗಂಟೆಗಟ್ಟಲೆ ಇದ್ದಾಗ, ಅದೂ ಏಕಾಂತದಲ್ಲಿ ಇದ್ದಾಗ ಬೇರೇನೂ ಆಗದಿರಲು ಸಾಧ್ಯವೆ ? ಎಷ್ಟಾದರೂ ಅವರುಗಳದು ಉಪ್ಪುಕಾರ ತಿನ್ನುವ ದೇಹವಲ್ಲವೆ ? ಸ್ಥಪತಿ ಅಲೆಮಾರಿಯಾಗಿದ್ದ. ಅರಮನೆ ಆಶ್ರಯ ಸಿಕ್ಕಿ ಕೊಬ್ಬಿದ್ದ. ತಾನಾಗಿ ಬಂದ ಆನಂದವನ್ನು ಕೈ ಬಿಟ್ಟಾನೆ ? ಒಂದಾದ ಮೇಲೆ ಇನ್ನೇನು ? ಯೋಜನೆ ಹಾಕಿದರು. ಶಿಲೆಯಲ್ಲಿ ನೀರು, ಮಂಡೂಕ ಇದೆಯೆಂದು ಗೊತ್ತಿದ್ದರೂ ಅದರಲ್ಲೇ ವಿಗ್ರಹ ಕಡೆಸಿದರು. ದೇವರು ಕಣ್ಣುಮುಚ್ಚಿ ಕುಳಿತಿರುತ್ತಾನೆ ಎಂದು ಅವರು ಭಾವಿಸಿರಬೇಕು. ಅವನು ನೋಡಿದ. ತನ್ನ ಪರಮ ಭಕ್ತರಾದ ಶ್ರೀಮದಾಚಾರ್ಯರಿಗೆ ಕೆಡುಕಾಗಲು ಅವಕಾಶ ಕೊಡಬಾರದು ಎಂದು. ಆ ಯುವಕನನ್ನು ಪ್ರೇರೇಪಿಸಿ ಇಲ್ಲಿಗೆ ಯುಕ್ತ ಸಮಯಕ್ಕೆ ಬರುವಂತೆ ಮಾಡಿದ. ಅದರಿಂದ ಮೋಸ ಬಯಲಾಯಿತು. ಈಗ ಸರಿಯಾದ ವಿಗ್ರಹ ಸಿದ್ಧವಾಗುತ್ತದೆ. ಆದರೆ ಈ ಪ್ರತಿಷ್ಠಾಪನೋತ್ಸವಕ್ಕೆ ಮಹಾರಾಜನ ಜೊತೆಗೆ ಆ ವಿಧರ್ಮೀಯಳಾದ ಪಟ್ಟಮಹಾದೇವಿ ಕೂಡುವುದಾದರೆ ಬಹಿಷ್ಕರಿಸಬೇಕು. ಅದು ಶ್ರೀವೈಷ್ಣವ ಪಂಥಕ್ಕೆ ಎಸಗುವ ಅಪಚಾರ. ಅದಕ್ಕೆಡೆಗೊಡಬಾರದು. ಅದನ್ನು ಪ್ರತಿಭಟಿಸಲೇಬೇಕು ಮುಂತಾದ ಮಾತುಗಳು, ಮತ್ತು ಒಟ್ಟಿನ ಮೇಲೆ ಪಟ್ಟಮಹಾದೇವಿಯ ಮೇಲೆ, ಸ್ಥಪತಿಯ ಮೇಲೆ ಚಿತ್ರವಿಚಿತ್ರವಾದ ರೀತಿಯ ಮಾತುಗಳು ಹೊಮ್ಮತೊಡಗಿವೆ'' ಎಂದು ಹೇಳಿದ.

ಡಂಕಣಾಚಾರ್ಯ ಕೂಡಲೇ ಏನೂ ಪ್ರತಿಕ್ರಿಯೆಯನ್ನೂ ತೋರಿಸಲಿಲ್ಲ.

“ಈ ಎಲ್ಲವನ್ನೂ ಪಟ್ಟಮಹಾದೇವಿಯವರಿಗೆ ತಿಳಿಸುವುದು ಒಳತು'' ಎಂದು ಮಲ್ಲೋಜ ಮೆಲ್ಲನೆ ಸೂಚಿಸಿದ.

“ಅವರಿಗೆ ಮೈಯೆಲ್ಲಾ ಕಣ್ಣು. ಇದೆಲ್ಲ ಆಗಲೇ ಅವರಿಗೆ ಮುಟ್ಟಿರುತ್ತದೆ. ಜನಗಳ ನಡುವೆ ಅರಮನೆಯ ಹೇರಿಗರು ಎಷ್ಟು ಜನ ಇದ್ದಾರೆಂಬುದು ನಿನಗೆ ಗೊತ್ತಿರಲಾರದು. ಅವರನ್ನು ವೇಷದಿಂದ ಗುರುತಿಸಲು ಸಾಧ್ಯವೇ ಇರುವುದಿಲ್ಲ. ನಾವು ನಿರಾಸಕ್ತಿಯಿಂದ ಮೂಕ ಪ್ರೇಕ್ಷಕರಾಗಬೇಕು. ನಾವು ಆಸಕ್ತಿ ತೋರಿಸಿದರೆ ಅದಕ್ಕೆ ಬೇರೆ ಅರ್ಥ ಬರಬಹುದು'' ಎಂದು ಜಕಣಾಚಾರ್ಯ ಮಲ್ಲೋಜನಿಗೆ ತಿಳಿಸಿದ.

“ನಾಳೆ ಒಳ್ಳೆ ಮುಹೂರ್ತದ ಸಮಯಕ್ಕೆ ಇದು ಧರ್ಮದ ಹೋರಾಟಕ್ಕೆ ಪರಿವರ್ತಿತವಾಗಿ, ಎರಡು ಬಣಗಳಾಗಿ ಕೈ ಕೈ ಘರ್ಷಣೆಯಾಗುವ ಪರಿಸ್ಥಿತಿ ಒದಗಿದರೆ ?.... ಪಾಪ, ಏನೂ ಅರಿಯದ ಜನಕ್ಕೆ, ಇಲ್ಲಿನ ವೈಭವಾದಿಗಳನ್ನು ನೋಡಿ ಆನಂದಿಸಿ ಹಿಂದಿರುಗಬೇಕೆಂದು ಬಂದಿರುವ ಜನಕ್ಕೆ ತೊಂದರೆ ಆಗುತ್ತದೆ. ದಂಡಿನಲ್ಲಿ ಸೋದರಮಾವನೆ ಎಂಬಂತೆ ಅವರ ಪರಿಸ್ಥಿತಿ ಆಗಿಬಿಡುತ್ತದೆ. ಅದರಿಂದ ನಮಗೆ ಗೊತ್ತಿರುವುದನ್ನು ಅರಮನೆಗೆ ಸೂಚಿಸದಿದ್ದರೆ ಹೇಗೆ ? ಸೂಚಿಸುವುದು ಯುಕ್ತ ಎಂದು ನನಗನ್ನಿಸುತ್ತದೆ'' ಎಂದು ಮತ್ತೆ ಮಲ್ಲೋಜ ಹೇಳಿದ.

"ಏನೂ ಆಗುವುದಿಲ್ಲ. ನೀನು ಹೆದರಬೇಡ. ನನಗೆ ಇಲ್ಲಿನ ರೀತಿಯ ಪೂರ್ಣಾನುಭವ ಇದೆ. ನಮಗೆ ಇವೆಲ್ಲ ಗೊತ್ತಿರಬಹುದೆಂದು ಅರಮನೆಗೆ ಹೇಗೆ ಗೊತ್ತಾಗುತ್ತದೆ ?"

"ಉಳಿದ ವಿಷಯ ಗೊತ್ತಾದ ಹಾಗೆ. ನಾನು ಕದ್ದು ಮುಚ್ಚಿ ಎಲ್ಲೂ ಹೋಗಿಲ್ಲ. ಅರಮನೆಯ ಹೇರಿಗರಿಗೆ ನಾನಾರೆಂಬುದು ತಿಳಿದೇ ಇರುತ್ತದೆ. ಅದರಿಂದ ಸೂಚಿಸುವುದು ಸೂಕ್ತ. ಅಲ್ಲದೆ ಇದರಲ್ಲಿ ವ್ಯಕ್ತಿ ಚಾರಿತ್ರ್ಯಕ್ಕೆ ಮಸಿ ಬಳಿಯುವ ಕೆಲಸ ಸಹ ನಡೆದಿದೆ. ಅದರಲ್ಲಿ ಸನ್ನಿಧಾನಕ್ಕೋ ಪಟ್ಟಮಹಾದೇವಿಯವರಿಗೋ ತಿಳಿಸುವುದು ಸೂಕ್ತ."

"ಸರಿ, ಯೋಚಿಸೋಣ. ಏನಿದ್ದರೂ ನಾಳೆ ಸೂರ್ಯೋದಯದ ನಂತರ ತಾನೆ" ಎಂದು ಜಕಣಾಚಾರ್ಯ ಆ ಮಾತನ್ನು ಅಲ್ಲಿಗೆ ನಿಲ್ಲಿಸಿದ.

ಸೂರ್ಯೋದಯಕ್ಕೆ ಮುಂಚೆಯೇ ಸ್ಥಪತಿಗೆ ಅರಮನೆಯಿಂದ ಕರೆ ಬಂತು.

ಸ್ಥಪತಿ ವೇಳೆಗೆ ಸರಿಯಾಗಿ ಅರಮನೆಗೆ ಬಂದ. ಶ್ರೀಮದಾಚಾರ್ಯರು ಪ್ರತಿಷ್ಠಾಪನೋತ್ಸವಕ್ಕೆ ಕಳುಹಿಸಿದ ಆಗಮಿಕರು ಬಂದಿದ್ದರು. ಸ್ಥಪತಿಯನ್ನು ಕಂಡು ಎದ್ದು ವಂದಿಸಿದರು. ಅವನು ಅವರುಗಳಿಗೆ ಪ್ರತಿವಂದನೆಗೈದ.

ಆಗಮಿಕರ ಮುಖಂಡರು, "ಸ್ಥಪತಿಗಳೇ. ಇದೇನು ಈ ಅವುಸರದ ಕರೆ ?" ಎಂದು ಕೇಳಿದರು.

"ನನಗೇನು ಗೊತ್ತು. ನನಗೂ ಬೆಳಿಗ್ಗೆ ಬರಬೇಕೆಂದು ಅಪ್ಪಣೆಯಾಯಿತು. ಬಂದೆ. ವಿಷಯವೇನೆಂಬುದು ತಿಳಿಯದು."

"ನಿಮ್ಮ ಕುಮಾರನ ಕೈ ಬಲುಚುರುಕು ಸ್ವಾಮಿ. ತಂದೆಯನ್ನು ಮೀರಿಸುವ ಕಲೆಗಾರ ಅವನು. ಕೇಶದೇವರು ಅವನಿಗೆ ಪೂರ್ಣಾಯಸ್ಸನ್ನು ಕರುಣಿಸಿ, ನಿಮ್ಮ ಹೆಸರನ್ನು ಶಾಶ್ವತವಾಗಿ ಉಳಿಸುವಂತೆ ಅವನು ಪ್ರಕಾಶಕ್ಕೆ ಬರಲಿ."

"ನಿಮ್ಮ ಈ ಆಶೀರ್ವಾದಕ್ಕೆ ನಾವಿಬ್ಬರೂ ಕೃತಜ್ಞರು."

ತುಂಬಾ ಬೆಲೆ ಬಾಳುವ ಉಡಿಗೆ ತೊಟ್ಟು ಎದ್ದು ಕಾಣುವಂತೆ ಲಾಂಛನ ಧರಿಸಿ, ತಿರುವರಂಗದಾಸ ತನಗೆ ಪದಸ್ತಿಕೆ ಇದೆಯೆಂಬಂತೆ ಶ್ರೀಮದ್ಗಾಂಭೀರ್ಯದಿಂದ ಬಂದ. ಅಷ್ಟರಲ್ಲಿ ಉದಯಾದಿತ್ಯರಸ, ಪ್ರಧಾನ ಗಂಗರಾಜರು ಬಂದರು. ಎಲ್ಲರ ಗಮನವು ಅತ್ತ ಹೋಯಿತು. ವಂದನೆ ಪ್ರತಿ ವಂದನೆಗಳಾದವು. ಯುಕ್ತ ವೇಳೆಯಲ್ಲಿ ಆ ಮೊಗಸಾಲೆಯು ಆಹ್ವಾನಿತರಿಂದ ತುಂಬಿತು. ವೇಲಾಪುರಿಯವರಲ್ಲದ ಅನೇಕ ಶ್ರೀವೈಷ್ಣವ ವೈದಿಕರು ಸಹ ಅಲ್ಲಿಗೆ ಬಂದಿದ್ದರು.

ವಂದಿಮಾಗಧರು ಬಂದು ಬಿರುದಾವಳಿಗಳನ್ನು ಘೋಷಿಸಿದರು.

ಎಲ್ಲರೂ ಎದ್ದು ನಿಂತರು. ಪ್ರಧಾನಿ ಗಂಗರಾಜ ಮಹಾರಾಜರನ್ನು ಗೌರವದಿಂದ ಕರೆದುತಂದ. ಜೊತೆಗೆ ಪಟ್ಟಮಹಾದೇವಿ, ರಾಣಿ ಲಕ್ಷ್ಮೀದೇವಿಯರು ಬಂದರು. ಅವರುಗಳು ಮಂಡಿಸಿದ ಮೇಲೆ ಉಳಿದವರೆಲ್ಲರೂ ಮಂಡಿಸಿದರು.

ವೇಲಾಪುರಿಯ ಅರಮನೆಯ ಮೊಗಸಾಲೆ ಅಷ್ಟು ಜನ ಆಹ್ವಾನಿತರಿಂದ ತುಂಬಿದ್ದುದನ್ನು ಈವರೆಗೆ ಯಾರೂ ಕಾಣರು.

ಬಿಟ್ಟಿದೇವ, "ಧರ್ಮಶ್ರದ್ಧೆಯುಳ್ಳ ಆಸ್ತಿಕ ಮಹಾಶಯರೆ, ಈ ಕೂಡುಹವನ್ನು ಸೇರಿಸುವುದಕ್ಕೆ

ಒಂದು ಕಾರಣವಿದೆ. ಆ ಕಾರಣವೇನೆಂಬುದನ್ನು ನಮ್ಮ ಚಾವಿಮಯ್ಯ ಈ ಸಭೆಗೆ ತಿಳಿಸುತ್ತಾನೆ'' ಎಂದು ಸೂಚಿಸಿದ.

ಚಾವಿಮಯ್ಯ ಮುಂದೆ ಬಂದು ಬಾಗಿ ವಂದಿಸಿ, "ಮಹಾಸನ್ನಿಧಾನದಲ್ಲಿ ಸವಿನಯ ವಿನಂತಿ. ನಾನು ಅರಮನೆಯ ಹೇರಿಗ. ರಾಜಧಾನಿಯಲ್ಲಿ ಏನೇನು ನಡೆಯುತ್ತದೆ ಎಂಬ ವಿಷಯವನ್ನು ಸಂಗ್ರಹಿಸಿ ಅರಮನೆಗೆ ಅರುಹಬೇಕಾದುದು ನನ್ನ ಕರ್ತವ್ಯ. ನಾನು, ಹಾಗೂ ನನ್ನ ಕೈ ಕೆಳಗಿನ ಊಳಿಗದವರು ನಮ್ಮ ಮೇಲಧಿಕಾರಿ ಮಾಯಣರ ಆಜ್ಞೆಯಂತೆ ಈಗೆರಡು ಮೂರು ದಿವಸದಿಂದ, ರಾಜಧಾನಿಯ ಎಲ್ಲ ಭಾಗಗಳನ್ನೂ, ಹೊಸದಾಗಿ ತಾತ್ಕಾಲಿಕವಾಗಿ ನಿರ್ಮಿಸಿರುವ ಅತಿಥಿ ಗೃಹಗಳ ಹರವುಗಳನ್ನೂ, ಮಾರುಕಟ್ಟೆಗಳನ್ನೂ ಸುತ್ತಿದೆವು. ಸುತ್ತಿ ಸುತ್ತಿ ಸಂಗ್ರಹಿಸಿದ ವಿಷಯಗಳನ್ನು ಮಹಾಸನ್ನಿಧಾಕ್ಕೆ ನಾನು ನಿವೇದಿಸಿದೆ. ಅದು, ನಾಳೆಯ ದಿವಸ ನೆರವೇರಬೇಕಾದ ಪ್ರತಿಷ್ಠಾಪನೋತ್ಸವಕ್ಕೆ ಸಂಬಂಧಿಸಿದುದು. ಒಂದು ಬಗೆಯ ಒಳಗುದಿ, ಅಸಮಾಧಾನ ಕೆಲವರಲ್ಲಿ, ಅದರಲ್ಲಿಯೂ ಮುಖ್ಯವಾಗಿ ಶ್ರೀವೈಷ್ಣವರಲ್ಲಿ ವ್ಯಕ್ತಪಟ್ಟಿದೆ. ಇಲ್ಲಿನ ಪ್ರತಿಷ್ಠಾಪನೋತ್ಸವವನ್ನು ಅಶ್ರೇಯಸ್ಕರ ರೀತಿ ನೆರವೇರಿಸುವ ಸಂಚು ನಡೆದಿದೆಯೆಂದೂ, ಅದಕ್ಕೆ ಧರ್ಮ ಸಹಿಷ್ಣುತೆಯು ಇಲ್ಲದೆ ಇರುವುದೆ ಕಾರಣವೆಂದೂ, ಆದರೆ ಅಧಿಕಾರಾರೂಢರಿಂದಲೇ ಈ ಅಶ್ರೇಯಸ್ಕರ ಪ್ರತಿಷ್ಠಾಪನೋತ್ಸವವು ನಡೆಯಲಿದೆಯೆಂದೂ, ಅದನ್ನು ಶ್ರೀವೈಷ್ಣವ ಮತಾನುಯಾಯಿಗಳು ತೀವ್ರವಾಗಿ ಪ್ರತಿಭಟಿಸಬೇಕು ಎಂದೆಲ್ಲ ಅವರುಗಳು ಮಾತನಾಡಿ ಕೊಳ್ಳುತ್ತಿದ್ದುದು ನನಗೂ ನನ್ನ ಇತರೆ ಸಹಾಯಕ ಹೇರಿಗರಿಗೂ ತಿಳಿದು ಬಂದಿದೆ. ಅದರಿಂದ ಈ ಸಭೆಯಲ್ಲಿ ಉಪಸ್ಥಿತರಿರುವಂತೆ ಅವರನ್ನೂ ಆಹ್ವಾನಿಸಲಾಗಿದೆ. ಈಗ ಸನ್ನಿಧಾನ ಅವರನ್ನೇ ಆಹ್ವಾನಿಸಿ ಈ ಮಹಾಸಭೆಯ ಮುಂದೆ ತಮ್ಮ ವಿಚಾರವನ್ನು ಮಂಡಿಸಬೇಕೆಂದು ಸೂಚಿಸುತ್ತಾರೆ. ಅವರು ಬಂದು ತಮ್ಮ ಅನಿಸಿಕೆಯನ್ನು ನಿಸ್ಸಂಕೋಚವಾಗಿ, ಧೈರ್ಯವಾಗಿ ಹೇಳಬಹುದು. ಮಹಾಸನ್ನಿಧಾನ ಈ ಮೂಲಕ ಎಲ್ಲರಿಗೂ ಒಂದು ಆಶ್ವಾಸನೆಯನ್ನು ನೀಡುತ್ತಾರೆ. ತಪ್ಪಿತಸ್ಥರು ಯಾರೇ ಇರಲಿ, ಅವರ ಸ್ಥಾನವನ್ನು ಸಹ ಗಣನೆಗೆ ತೆಗೆದುಕೊಳ್ಳದೆ ಶಿಕ್ಷಿಸುತ್ತಾರೆ. ಇದರ ಮೂಲ ಉದ್ದೇಶ ಬೇರೇನೂ ಇಲ್ಲ. ಶ್ರೀಮದಾಚಾರ್ಯರ ಆದೇಶದಂತೆ ಅವರ ಇಚ್ಛಾಪೂರ್ತಿಗಾಗಿಯೇ ಈ ಮಂದಿರದ ನಿರ್ಮಾಣವಾಗಿದೆ. ಧರ್ಮಶ್ರದ್ಧೆಯನ್ನು ರೂಪಿಸುವುದೇ ಈ ದೇವಮಂದಿರದ ಗುರಿ. ಎಂದಾಗ ಧರ್ಮಚ್ಯುತಿಗೆ ಇಲ್ಲಿ ಎಂದಿಗೂ ಅವಕಾಶವಿಲ್ಲ ಎಂಬ ಆಶ್ವಾಸನೆಯೂ ಸಹ ಸನ್ನಿಧಾನದಿಂದ ದೊರೆತಿದೆ. ಸಾಮಾನ್ಯವಾಗಿ ಎಲ್ಲ ರಾಜಸಭೆಗಳಲ್ಲಿಯೂ ಪಟ್ಟಮಹಾದೇವಿಯವರೇ ಮಹಾಸನ್ನಿಧಾನದೊಂದಿಗೆ ಪೀಠವನ್ನು ಅಲಂಕರಿಸಬೇಕು. ಆದರೆ ಇದು ವಿಧರ್ಮೀಯರಿಂದ ಧರ್ಮಚ್ಯುತಿ ಉಂಟಾಗಿದೆ ಎಂಬ ಮಾತು ಬಂದುದರಿಂದ ಜೈನ ಮತಾವಲಂಬಿಗಳಾಗಿಯೇ ತಮ್ಮ ಬಾಳನ್ನು ಸಾಗಿಸಬೇಕೆಂದಿರುವ ನಮ್ಮ ಪಟ್ಟಮಹಾದೇವಿಯವರು ನನ್ನ ಈ ಪ್ರಾಸ್ತಾವಿಕ ವಿಚಾರ ಮಂಡನೆ ಮುಗಿದ ಕೂಡಲೇ ತಮ್ಮ ಸ್ಥಾನವನ್ನು ತೆರವು ಮಾಡಿ ಬೇರೆಡೆಯಲ್ಲಿ ಕೂಡುತ್ತಾರೆ'' ಎಂದು ಮತ್ತೆ ಬಾಗಿ ವಂದಿಸಿ ಮಾತು ನಿಲ್ಲಿಸಿದ.

ಪಟ್ಟಮಹಾದೇವಿ ಶಾನ್ತಲದೇವಿ ತನ್ನ ಭದ್ರಾಸನದಿಂದ ಎದ್ದು ತೆರವಾಗಿದ್ದ ದೂರದ ಇನ್ನೊಂದು ಆಸನದ ಮೇಲೆ ಹೋಗಿ ಮಂಡಿಸಿದಳು.

ಪ್ರಧಾನಿ ಎದ್ದು ನಿಂತು ಮಹಾರಾಜನತ್ತ ನೋಡಿದ.

ಅತ್ತ ತಿರುವರಂಗದಾಸ, ರಾಣಿ ಲಕ್ಷ್ಮೀದೇವಿಯತ್ತ ನೋಡಿ ತನ್ನ ಸಂತಸವನ್ನು ವ್ಯಕ್ತಪಡಿಸಿದ.

'ಮಗಳು ಎಂದರೆ ಮಗಳು ! ರಾತ್ರಿ ಚೆನ್ನಾಗಿ ಕಿವಿ ತಿರುವಿರಬೇಕು. ಎಲ್ಲಾ ನನಗನುಕೂಲವಾಗಿ ನಡೆಯತೊಡಗಿದೆ' ಎಂದು ಮನದಲ್ಲಿ ಅಂದುಕೊಂಡ.

"ಸನ್ನಿಧಾನದಲ್ಲಿ ನನ್ನದೊಂದು ಬಿನ್ನಪ" ಎಂದ ಗಂಗರಾಜ.

"ಹೇಳಿ, ಎರಡು ದಿವಸಕ್ಕೆಂದು ಇಲ್ಲಿಗೆ ಬಂದವರಿಗೇ ನಾವು ವಾಕ್ ಸ್ವಾತಂತ್ರ್ಯವನ್ನು ಕೊಟ್ಟಿರುವಾಗ, ನಮ್ಮ ರಾಜ್ಯದ ಪ್ರಧಾನಿಗಳಾದ ನಿಮಗೆ ಆ ಸ್ವಾತಂತ್ರ್ಯವಿಲ್ಲವೆ ?" ಎಂದ ಬಿಟ್ಟಿದೇವ.

"ಸನ್ನಿಧಾನ ಒಪ್ಪಿಗೆ ಕೊಟ್ಟುದಕ್ಕೆ ನಾನು ಕೃತಜ್ಞ. ಈ ಜನಕ್ಕೆ ಆಶ್ಚರ್ಯವಾಗಬಹುದು. ಈ ಕೂಡುಹದ ಕಾರಣವೇನೆಂಬುದು ಪ್ರಧಾನಿಯಾದ ನನಗೇ ಈವರೆಗೆ ತಿಳಿದಿರಲಿಲ್ಲ. ಇದು ನನಗೆ ತಿಳಿಯದಿರುವಂತೆ ಪೂರ್ಣ ಯೋಜನೆ ಇದ್ದಂತೆ ನನಗೆ ಗೋಚರವಾಗುತ್ತದೆ. ಏಕೆಂದರೆ ನಾನೂ ಸಹ ಪಟ್ಟಮಹಾದೇವಿಯವರಂತೆ ಜಿನಭಕ್ತ. ಮೊದಲು ತಿಳಿಯಲಿಲ್ಲವೆಂಬ ವ್ಯಥೆ ನನಗಿಲ್ಲ. ತಿಳಿಯದಿದ್ದುದರಿಂದ ನನ್ನ ಗೌರವಕ್ಕೆ ಚ್ಯುತಿ ಬಂತೆಂದೂ ನಾನು ಭಾವಿಸುವುದಿಲ್ಲ. ನಾನು ಪ್ರಧಾನಿಯಾಗಿರುವವರೆಗೆ ರಾಜಸಭೆ ಹೇಗೆ ನಡೆಯಬೇಕೋ ಹಾಗೆ ನಡೆಯಬೇಕು. ಅದರಲ್ಲಿ ಕ್ಷಮಿಸಬೇಕು, ಮಹಾಸನ್ನಿಧಾನ ಸಹ ಸ್ವಾತಂತ್ರ್ಯ ವಹಿಸುವುದು ಸರಿಯಾಗದು. ಪಟ್ಟಮಹಾದೇವಿಯವರು ತಮ್ಮ ಸ್ಥಾನದಲ್ಲಿದ್ದರೆ ಅದು ಕ್ರಮಬದ್ಧವಾದ ಸಭೆಯಾಗುತ್ತದೆಯೇ ವಿನಾ ಅವರನ್ನು ಹೀಗೆ ಸ್ಥಾನ ಪಲ್ಲಟ ಮಾಡುವುದರಿಂದ ಸಭೆ ಅಕ್ರಮವಾಗುತ್ತದೆ. ಅದು ಕಾರಣ, ಪಟ್ಟಮಹಾದೇವಿಯವರು ಅವರ ಯುಕ್ತ ಸ್ಥಾನದಲ್ಲಿಯೇ ಮಂಡಿಸಲು ಅವಕಾಶವಿಯಬೇಕು. ಅವರು ಉಪಸ್ಥಿತರಿದ್ದೂ ಆ ಸ್ಥಾನ ಬರಿದಾಗಿ ಇರಬಾರದು. ಅದು ಸಂಪ್ರದಾಯವಲ್ಲ" ಎಂದು ಗಂಗರಾಜ ನಿಖರವಾಗಿ ಹೇಳಿದ.

ಗಂಗರಾಜನ ಮಾತು ಪ್ರಭಾವ ಬೀರಿತ್ತು. ಅಲ್ಲಲ್ಲೇ ಪಿಸುಗುಟ್ಟುವಿಕೆ ಆರಂಭವಾಯಿತು. ಪೆಚ್ಚಾದ ತಿರುವರಂಗದಾಸ ಮತ್ತೆ ತನ್ನ ದೃಷ್ಟಿಯನ್ನು ಮಗಳತ್ತ ಹೊರಳಿಸಿದ.

ಪಟ್ಟಮಹಾದೇವಿ ಎದ್ದು ನಿಂತಳು. ಪಿಸುಗುಟ್ಟುವಿಕೆ ನಿಂತು ನಿಶ್ಶಬ್ದವಾಯಿತು. "ಮಹಾಸನ್ನಿಧಾನದಲ್ಲಿ ನನ್ನದೊಂದು ಬಿನ್ನಪ. ಅಂತೆಯೇ ಪ್ರಧಾನಿಗಳಲ್ಲಿ ಸಹ ಒಂದು ವಿಚಾರ ಮಂಡನೆ" ಎಂದು ಮಾತನ್ನು ನಿಲ್ಲಿಸಿದಳು ಪಟ್ಟಮಹಾದೇವಿ.

ಮುಂದೇನೆಂದು ನಿರೀಕ್ಷಿಸಿದರು ಜನ.

"ಪ್ರಧಾನಿಗಳೆ, ದಂಡಾರ್ಹ ಆರೋಪಕ್ಕೆ ಒಳಗಾದವರಿಗೆ ನಮ್ಮ ಆಸ್ಥಾನದಲ್ಲಿ ಯಾವ ಸ್ಥಾನವಿರುತ್ತದೆ ?" ಎಂದು ಕೇಳಿದಳು.

"ಆರೋಪಿ ಆರೋಪಿಯೇ. ಅವನಿಗೆ ಆರೋಪಿಯ ಸ್ಥಾನವೇ."

"ಒಂದು ವೇಳೆ ತಾವೇ ಆರೋಪಿಯಾಗಿದ್ದರೆ ಆಗಲೂ ನೀವು ಪ್ರಧಾನಿಯ ಸ್ಥಾನದಲ್ಲಿ ಕೂಡಬಹುದೆ ?"

"ಅದು ಹೇಗೆ ಸಾಧ್ಯ ?"

"ಅಂದ ಮೇಲೆ ಇದೂ ಸಾಧ್ಯವಿಲ್ಲ. ಧರ್ಮದ ಮಾತು. ಅದರೊಂದಿಗೆ ಇನ್ನೂ ಬೇರೆ ಬಗೆಯ ಮಾತುಗಳು ಸೇರಿ ಪ್ರತಿಷ್ಠಾಪನೋತ್ಸವಕ್ಕೆ ಬಹಿಷ್ಕಾರ ಎನ್ನುವ ಘಟ್ಟ ಮುಟ್ಟಿದಾಗ, ನಾವು ನಮ್ಮ ಅಧಿಕಾರದಿಂದ ಅದನ್ನು ಹತ್ತಿಕ್ಕಿ ಕೆಲಸ ಮಾಡುವುದು ಉಚಿತವಲ್ಲ. ಈಗ ನಿಮಗೆ ಇನ್ನೂ ಪೂರ್ಣವಿವರ

ಗೊತ್ತಿಲ್ಲ. ಏನೇನು ಈ ಸಭೆಯಲ್ಲಿ ಬಯಲಾಗುತ್ತದೆಯೋ ಯಾವ ಯಾವ ಮಹಾತ್ಮರ ಹೃದಯದಲ್ಲಿ ಯಾವ ಯಾವ ದೇವರು ಕುಳಿತು ಏನೇನು ನುಡಿಸುತ್ತಾನೆಯೋ ಅದನ್ನೆಲ್ಲ ಈ ಸಂದರ್ಭದ ಆರೋಪಿಗಳು ಇದಿರಿಸಬೇಕು. ನನ್ನನ್ನೂ ಆರೋಪಿಯೆಂದು ಸೂಚಿಸಿರುವುದರಿಂದ ನಾನು ಆ ಸ್ಥಾನದಲ್ಲಿ ಕುಳಿತಿರುವುದು ಯುಕ್ತವಲ್ಲ. ಸನ್ನಿಧಾನದ ಆಶ್ರಯದಲ್ಲಿ ನ್ಯಾಯ ದೊರಕದೆಂಬ ಭಾವನೆ ಯಾರ ಮನಸ್ಸಿನಲ್ಲಿಯೂ ಉಂಟಾಗಬಾರದು. ಅದ್ದರಿಂದ ನಾನು ಈಗ ಇರುವ ಸ್ಥಾನವೇ ಯುಕ್ತವಾದ ಸ್ಥಳ. ನೀವು ಪ್ರಧಾನಿಗಳಾಗಿ ಪಟ್ಟಮಹಾದೇವಿಯ ಸ್ಥಾನಕ್ಕೆ ಇತ್ತ ಗೌರವಕ್ಕೆ ನಾನು ಕೃತಜ್ಞಳು'' ಎಂದು ಹೇಳಿ ಕುಳಿತಳು.

ಸಭೆ ಒಂದು ತರಹ ಪೆಚ್ಚು ಮುಖಮುದ್ರೆಯನ್ನು ಧಾರಣೆ ಮಾಡಿತು.

ಬಿಟ್ಟಿದೇವ, ‘‘ಚಾವಿಮಯ್ಯ, ನೀನು, ಯಾರು ಯಾರು ಏನೇನು ಮಾತನಾಡಿದರು ಎಂಬುದನ್ನು ಪಟ್ಟಿ ಮಾಡಿದ್ದೀಯಲ್ಲ. ಅದನ್ನು ಇಲ್ಲಿ ಕೊಡು'' ಎಂದ.

ಚಾವಿಮಯ್ಯ ಅದನ್ನು ಕೊಂಡು ಹೋಗಿ ಮಹಾರಾಜನಿಗಿತ್ತ.

‘‘ಸಾಲಿಗಾವೆಯ ಶ್ರೀನಿವಾಸ ವರದಾಚಾರ್ಯರು ವೇದಿಕೆಗೆ ಬರಬೇಕು'' ಎಂದು ಬಿಟ್ಟಿದೇವ ಹೇಳಿದ.

ಚಾವಿಮಯ್ಯ ಅದೇ ಹೆಸರನ್ನು ಮತ್ತೆ ಧ್ವನಿಯೇರಿಸಿ ಹೇಳಿದ.

ಒಬ್ಬ ಹಿರಿಯರು ಹೆದರಿಕೆಯಿಂದ ಎದ್ದು ನಿಂತರು. ಅವರ ಕೈಗಳು ನಡುಗುತ್ತಿದ್ದವು. ವಯಸ್ಸಾಗಿದ್ದುದರಿಂದಲೋ ಹೆದರಿಕೆಯಿಂದಲೋ ಎಂಬುದು ತಿಳಿಯಲಿಲ್ಲ.

‘‘ತಮ್ಮ ವಾಸ ?''

‘‘ಸಾಲಿಗಾವೆ.''

‘‘ತಾವು ಯಾವ ಮತದವರು ?''

‘‘ಶ್ರೀಮದಾಚಾರ್ಯ ರಾಮಾನುಜರ ಶಿಷ್ಯರು.''

‘‘ಯಾವಾಗಿನಿಂದ ?''

‘‘ಎರಡು ಮೂರು ಸಂವತ್ಸರವಾಯಿತು.''

‘‘ಅದಕ್ಕೆ ಮುಂಚೆ ?''

‘‘ಹೆಬ್ಬಾರರು.''

‘‘ಅಂದರೆ ?''

‘‘ಹಿರಿಯ ಹಾರುವರು. ಶಂಕರಾಚಾರ್ಯರ ಶಿಷ್ಯರು.''

‘‘ಅಂದರೆ ಆಗ ಅದ್ವೈತಿಗಳು ?''

‘‘ಈಗ ವಿಶಿಷ್ಟಾದ್ವೈತಿಗಳು.''

‘‘ಸಂತೋಷ. ತಾವಿಲ್ಲಿಗೆ ಬಂದುದು ಯಾವಾಗ ?''

"ಮೂರು ದಿವಸವಾಯಿತು."

"ಅಂದರೆ ?"

"ಇಲ್ಲಿ ವಿಗ್ರಹ ಪರಿಶೀಲನೆಯಾದ ದಿವಸ ಸಾಯಂ ಸಮಯದಲ್ಲಿ."

"ಅಂದರೆ ನೀವಿಲ್ಲಿಗೆ ಹೊಸಬರು ?"

"ಹೌದು."

"ಹಾಗಾದರೆ ನಿಮಗೆ ಏನೇನೋ ವಿಷಯ ಗೊತ್ತಿದೆಯೆಂಬಂತೆ ಒಂದು ಗೋಷ್ಠಿಯನ್ನು ಕೂಡಿಸಿಕೊಂಡು ಮಾತನಾಡುತ್ತಿದ್ದಿರಂತೆ ?"

"ಹೌದು."

"ಹಾಗೆಲ್ಲ ಸುಳ್ಳು ಹೇಳಬಹುದೆ ?"

"ಸುಳ್ಳು ನಾನು ಯಾಕೆ ಹೇಳಲಿ ? ನಾನು ಹೇಳಿದ್ದೆಲ್ಲ ಸತ್ಯ ಎಂಬ ನಂಬಿಕೆಯಿದೆ. ಹೇಳಿದೆ."

"ಅದು ಸತ್ಯವಾಗಿರಬೇಕಾದರೆ ನೀವು ಅದನ್ನು ಕಂಡಿರಬೇಕಲ್ಲವೆ ?"

"ಎಲ್ಲವನ್ನೂ ಕಾಣಲು ಹೇಗೆ ಸಾಧ್ಯ ? ಕಂಡವರು ಹೇಳಿದ್ದನ್ನು ಕೇಳಿ ನಂಬಹುದಲ್ಲ?"

"ಅಂದರೆ ನೀವು ಹೇಳಿದುದರ ಸಂತ್ಯಾಂಶ ನಿಮಗೆ ತಿಳಿಯದು. ಆದರೂ ಯಾರ ಬಾಯಿಂದ ಕೇಳಿದಿರೋ ಅವರ ಮಾತು ನಂಬಿಕೆಗೆ ಅರ್ಹ ಎಂದು ಭಾವಿಸಿ ಹೇಳಿದಿರಿ ಎಂದಾಯಿತು."

"ಹೌದು."

"ಆ ಕೇಳಿದ್ದರ ಫಲವಾಗಿ ನಿಮ್ಮಲ್ಲಿ ಏನೇನು ಭಾವನೆ ಬಂತು ?"

"ಅವನ್ನೆಲ್ಲ ಇಲ್ಲಿ ಇಷ್ಟು ಜನರಿದಿರಿಗೆ ಹೇಗೆ ಹೇಳುವುದು ?"

"ಹೆದರಿಕೆಯೇನು ?"

"ಹಾಗೆನ್ನುವುದಕ್ಕಿಂದ ಸಂಕೋಚ ಎನ್ನಿ. ಊರಿನ ಗೋಷ್ಠಿಯಲ್ಲಿ ಲೋಕಾಭಿರಾಮವಾಗಿ ಹರಿಬಿಟ್ಟ ತಮ್ಮ ನಾಲಗೆ ಈಗ ನುಡಿಯಲು ಸಂಕೋಚ ಪಡುತ್ತಿದೆ. ಯಾಕೆ ಗೊತ್ತೆ ? ನಿಮ್ಮ ನಿಲುಮೆಯಲ್ಲಿದ್ದ ನಂಬಿಕೆ ಈಗ ಸಡಿಲವಾಗಿದೆ."

"ಇರಬಹುದೇನೋ !"

"ಹೋಗಲಿ ನಿಮ್ಮ ನಿಲುವೇನಾಗಿತ್ತು ?"

"ಇಲ್ಲಿ ನಮ್ಮ ಶ್ರೀವೈಷ್ಣವ ಧರ್ಮಕ್ಕೆ ಅಪಾಯವಾಗುವ ಸಂಭವವಿದೆ. ಅನ್ಯಧರ್ಮೀಯರು ಈ ಧರ್ಮಕ್ಕೆ ಪೆಟ್ಟುಕೊಡಬಯಸಿದ್ದಾರೆ ಎಂದು."

"ಅವರು ಯಾರು ಎಂದು ನೀವು ಭಾವಿಸಿದ್ದಿರಿ ?"

"ಅದೂ ಸಹ ನಾವು ಕೇಳಿದುದನ್ನೇ ಅವಲಂಬಿಸಿದುದು."

"ಏನೆಂದು ಕೇಳಿದ್ದಿರಿ ?"

"ಸ್ಥಪತಿಗಳನ್ನು ಗುಟ್ಟಾಗಿ ಒಳಹಾಕಿಕೊಂಡು, ವಿಧರ್ಮೀಯರಾದ ಪಟ್ಟಮಹಾದೇವಿಯವರು ಶ್ರೀ ವೈಷ್ಣವ ಧರ್ಮಕ್ಕೆ ಉದ್ದೇಶ ಪೂರ್ವಕವಾಗಿ ಅಪಚಾರವೆಸಗಬೇಕೆಂದೂ. ಆ ಮತಾಚಾರ್ಯರಿಗೆ ಕೆಡುಕಾಗಬೇಕೆಂದೂ ದೋಷಯುಕ್ತ ದೇವವಿಗ್ರಹ ಕಡೆಸಿದ್ದರೆಂದು....."

"ಯಾರೋ ಹೇಳಿದರು. ನೀವು ನಂಬಿದಿರಿ."

"ಹೌದು."

"ಒಂದು ರಾಜ್ಯದ ಪಟ್ಟಮಹಾದೇವಿಯೆಂದರೆ ಅವರ ಸ್ಥಾನವೇನು ? ಅವರ ಹೊಣೆಗಾರಿಕೆಯೇನು ಎಂಬುದು ನಿಮಗೆ ತಿಳಿದಿದೆಯೇನು ?"

"ನಮಗೇನು ಗೊತ್ತು ? ನಮ್ಮ ಮನೆಯಲ್ಲಿ ನಮ್ಮ ಹಿರಿಯ ಪತ್ನಿ ಇರುವ ಹಾಗೆ ಎಂಬುದು ನಮ್ಮ ತಿಳಿವಳಿಕೆ."

"ಅಂದಾಗ ನೀವು ನಂಬುವುದು ಸಹಜವೆ! ಪಾಪ, ಏನೂ ಅರಿವಿಲ್ಲದ ನೀವು ಹೇಳಿದವರ ಮಾತಿಗೆ ಮರುಳಾದಿರಿ. ನಮ್ಮ ಸಹಾನುಭೂತಿ ಇದೆ. ಇನ್ನೊಂದು ವಿಷಯ. ತಾವು ಅದ್ವೈತಿಗಳಾಗಿದ್ದಾಗ ಏನು ಉದ್ಯೋಗದಲ್ಲಿದ್ದಿರಿ ?"

"ನಾನು ಆಗ ಪರಿಚಾರಕ. ದೇವಮಂದಿರದ ಅಡಿಗೆಯ ಪರಿಚಾರಕ."

"ಈಗ ?"

"ಪಾರುಪತ್ತೆಗಾರ."

"ಓಹೋ ! ಮತ ಪರಿವರ್ತನೆಗೆ ಇದೇ ನಿಮಗೆ ಆಮಿಷವೆಂದು ಕಾಣುತ್ತದೆ."

"ಅದೂ ಒಂದು. ಜೊತೆಗೆ ಮಹಾಸನ್ನಿಧಾನ ತಾವೇ ಶ್ರೀಮದಾಚಾರ್ಯರ ಶಿಷ್ಯರಾದ ಮೇಲೆ, ಪ್ರಜೆಗಳಾದ ನಮಗೇನು ಅಡ್ಡಿ ?"

ಥಟ್ಟನೆ ಬಿಟ್ಟಿದೇವನ ದೃಷ್ಟಿ ಶಾನ್ತಲದೇವಿಯತ್ತ ಹೋಯಿತು. ಅವಳು ಸಹ ಮಹಾರಾಜನ ಆ ದೃಷ್ಟಿಗೆ ಪ್ರತಿದೃಷ್ಟಿ ಕೊಟ್ಟಳು. ಅವನಿಗೆ ಆ ಹಿಂದಿನ ಚರ್ಚೆ ಸ್ಮರಣೆಗೆ ಬಂತು. ಆದರೆ ಈಗ ಅವನು ಇಟ್ಟ ಹೆಜ್ಜೆಯನ್ನು ಹಿಂದಿಡುವಂತಿರಲಿಲ್ಲ.

"ಅದನ್ನು ಒಪ್ಪೋಣ. ಯಥಾ ರಾಜಾ ತಥಾ ಪ್ರಜಾ ಎಂಬ ಉಕ್ತಿಯೂ ಇದೆ. ಇಲ್ಲಿ ರಾಜರು ನವೀನ ಧರ್ಮದಲ್ಲಿ ಹೊಸ ಬೆಳಕನ್ನು ಕಂಡು ಅವಲಂಬಿಸಿದರೇ ವಿನಾ ಯಾವ ಆಮಿಷಕ್ಕೂ ಒಳಗಾಗಿ ಅಲ್ಲ ಎಂಬುದನ್ನು ಮರೆಯಬೇಡಿ. ನಮಗೆ ಯಾತರ ಕೊರತೆಯಿತ್ತು ? ನೀವು ಸಹ ನಮ್ಮ ಹಾಗೆ ಧರ್ಮದಲ್ಲಿ ಹೊಸ ನಂಬಿಕೆಯನ್ನು ತಳೆದು ಪರಿವರ್ತಿತರಾಗಿದ್ದರೆ ಅದೊಂದು ರೀತಿಯಾಗುತ್ತಿತ್ತು. ಅದು ಬಿಟ್ಟು ನೀವು ಕೇವಲ ಆಮಿಷಕ್ಕೆ ಒಳಗಾಗಿ ಮತಾಂತರ ಹೊಂದಿದ್ದೀರಿ."

"ಒಬ್ಬೊಬ್ಬರ ಆಮಿಷ ಒಂದೊಂದು ಬಗೆ ಇರುತ್ತದೆ."

"ಅಂದರೆ ?"

"ನಾನು ಬಡವ. ಸಂಸಾರ ದೊಡ್ಡದು. ಬದುಕುಬೇಕು. ಉತ್ತಮ ವೃತ್ತಿ ಸಿಕ್ಕರೆ ನನಗೆ ಅದೇ ಆಮಿಷ. ಹಾಗೆಯೇ ಸನ್ನಿಧಾನಕ್ಕೆ ಪುಟ್ಟ ಶ್ರೀವೈಷ್ಣವ ಕನ್ಯೆಯಯೇ ಆಮಿಷ."

"ಛೆ, ಛೆ. ಇದೆಂತಹ ಮಾತು ? ಹೀಗೆ ಆಡಬಹುದೆ ?'' ಎಂದು ಗುಜು ಗುಜು ಆರಂಭವಾಯಿತು ಕೂಡುಹದಲ್ಲಿ.

ಗಂಗಾರಜ ಎದ್ದು ನಿಂತ. ಚಾವಿಮಯ್ಯ ಗಟ್ಟಿಯಾಗಿ, "ಸದ್ದು, ಸದ್ದು'' ಎಂದು ಅಬ್ಬರಿಸಿದ.

"ಮಹಾರಾಜರು ಹಲವಾರು ರಾಣಿಯರನ್ನು ಪಡೆದುಕೊಳ್ಳುವ ಹಕ್ಕುಳ್ಳವರು. ಅವರು ಆಮಿಷಕ್ಕೆ ಒಳಗಾಗಿ ಯಾವ ಪಾಣಿಗ್ರಹಣವನ್ನೂ ಮಾಡಿಕೊಂಡಿಲ್ಲ. ಪ್ರತಿಯೊಂದು ಸಂದರ್ಭದಲ್ಲಿಯೂ ಎಲ್ಲರ ಅನುಮತಿ ಪಡೆದು ಪಾಣಿಗ್ರಹಣವನ್ನೂ ಮಾಡಿಕೊಂಡಿದ್ದಾರೆ. ನೀವು ಆಡಿದ ಮಾತು ಅನುಚಿತ ಆಚಾರ್ಯರೆ. ನೀವು ಹಿರಿಯರೆಂದು ಸುಮ್ಮನಿರಬೇಕಾಗಿದೆ. ನಿಮ್ಮ ಮಾತು ಸಿಂಹಾಸನಕ್ಕೆ ಅಪಮಾನವೆಸಗುವ ಮಾತು ಇಂತಹ ಮಾತು ಇನ್ನೊಮ್ಮೆ ನಿಮ್ಮ ಬಾಯಲ್ಲಿ ಬಂದರೆ ರಾಜ್ಯದಿಂದ ಗಡೀಪಾರು ಮಾಡಬೇಕಾಗುತ್ತದೆ. ಎಚ್ಚರಿಕೆ'' ಎಂದ ಗಂಗರಾಜ.

"ನಾನು ಕೇಳಿದ್ದನ್ನು, ನಂಬಿದ್ದನ್ನ ಮನಬಿಚ್ಚಿ ಹೇಳುತ್ತಿದ್ದೇನೆ. ಸನ್ನಿಧಾನ ಹಾಗೆ ಅಪ್ಪಣೆ ಮಾಡಿದ್ದರಿಂದ ಹೇಳಿದೆ. ಬೇಡ ಎಂದರೆ ಬಿಡುತ್ತೇನೆ. ನಾನಾಗಿಯೇ ಇಲ್ಲಿಗೆ ಬರಲಿಲ್ಲ. ಕರೆ ಬಂತು. ಬಂದೆ. ಅಪ್ಪಣೆಯಾಯಿತು. ಹೇಳುತ್ತಿದ್ದೇನೆ.''

"ಒಳ್ಳೆಯದು ಆಚಾರ್ಯರೆ. ನಿಮಗೆ ಈ ಎಲ್ಲ ವಿಷಯಗಳನ್ನು ತಿಳಿಸಿದವರು ಯಾರು ? ಅವರು ನಿಮಗೆ ಹೇಗೆ ನಂಬಿಕೆ ಅರ್ಹರು ಎಂಬುದನ್ನು ತಿಳಿಸಿ'' ಎಂದ ಬಿಟ್ಟದೇವ.

ಶ್ರೀನಿವಾಸ ವರದಾಚಾರ್ಯರು ಮಂಕಾಗಿ ನಿಂತರು. ಅತ್ತ ಇತ್ತ ಕಕ್ಕು ಬಿಕ್ಕಾಗಿ ನೋಡಿದರು.

"ಬೇಡ ಬಿಡಿ. ಯಾರೆಂಬುದು ಅರಮನೆಗೆ ಗೊತ್ತಿದೆ. ಚಾವಿಮಯ್ಯ ಈಗ ಕೇಶವಾಚಾರ್ಯರು ನುಡಿಯಲಿ ಕರೆಸು'' ಎಂದು ಬಿಟ್ಟದೇವ ಸೂಚಿಸಿದ.

"ಕೇಶಾವಾಚಾರ್ಯರು'' ಚಾವಿಮಯ್ಯ ಗಟ್ಟಿಯಾಗಿ ಕರೆದ.

ಯಾರೂ ಏಳಲಿಲ್ಲ.

"ಕಿಕ್ಕೇರಿ ಕೇಶವಾಚಾರ್ಯರು ವೇದಿಕೆಗೆ ಬರಬೇಕು'' ಎಂದು ಮತ್ತೆ ಕರೆದ.

ಯಾರು ಏಳಲಿಲ್ಲ.

"ಬಂದಿದ್ದರು ಪ್ರಭು. ಹಿಂದಿನ ಸಾಲಿನಲ್ಲಿ ದ್ವಾರದ ಬಳಿ ಕುಳಿತಿದ್ದರು.''

"ಅಂದರೆ, ಇಲ್ಲಿ ನಮ್ಮಿಂದಿರಿಗೆ, ಈ ಸಭೆಯ ಇದಿರಿಗೆ, ನಿಂತು ಮಾತನಾಡಲು ಅಂಜಿರಬೇಕು. ಶ್ರೀನಿವಾಸ ವರದಾಚಾರ್ಯರೆ, ಅವರೇ ಅಲ್ಲವೆ ನಿಮಗೆ ನೀವು ಹೇಳಿದ ವಿಷಯಗಳನ್ನೆಲ್ಲ ತಿಳಿಸಿದವರು?''

"ಹೌದು ಮಹಾಪ್ರಭು.''

"ನೋಡಿದಿರಾ. ಅವರೇಕೆ ಇಲ್ಲಿಂದ ಜಾರಿಕೊಳ್ಳಬೇಕು ? ಅದೂ ಬಂದವರು ಹೊರಟು ಹೋಗಿದ್ದಾರೆ ಎಂದರೆ ಸತ್ಯ ವಿಷಯ ಹೇಳಲು ಧೈರ್ಯವಿಲ್ಲ ಎಂದು ತಾನೆ ? ಎಂದಾಗ ನೀವು ಸತ್ಯ ಎಂದು ನಂಬಿದ್ದ ವಿಷಯದ ಗತಿ ಏನಾಯಿತು ?''

ಶ್ರೀನಿವಾಸ ವರದಾಚಾರ್ಯರು ತಲೆ ತಗ್ಗಿಸಿದರು.

"ನೀವು ತಿಳಿದುದು ತಪ್ಪು, ಆಡಿದುದು ಮತ್ತೂ ತಪ್ಪು ಎಂದು ನಿಮ್ಮ ಮನಸ್ಸಿಗೆ ವೇದ್ಯವಾಗಿದ್ದರೆ

ನಮಗಷ್ಟೇ ಸಾಕು. ಸದ್ಯಕ್ಕೆ ಕೂಡಿ. ಕೇಶವಾಚಾರ್ಯರಿಗೆ ಯಾರೂ ಹೇಳಿದರು ಎಂಬ ವಿಷಯವು ಸಹ ಅರಮನೆಗೆ ಗೊತ್ತಿದೆ. ಈ ಸಭೆಗೂ ಈಗ ವೇದ್ಯವಾಗಿರಬಹುದು. ಆ ಕರೆ ಏತಕ್ಕಾಗಿ ಎಂದು. ಧರ್ಮದ ದುರುಪಯೋಗ, ವಿಪರೀತ ಅಂಧಶ್ರದ್ಧೆ ಎರಡರ ಸಲುವಾಗಿ ಈ ಬಗೆಯ ಕಿಂವದಂತಿಗಳು ಹುಟ್ಟಿ ಜನರನ್ನು ಚಿತಾವಣೆ ಮಾಡುವ ಕೆಲಸ ಸಾಗುತ್ತದೆ. ಇಷ್ಟೆಲ್ಲ ಹಣವನ್ನು ವ್ಯಯಮಾಡಿ, ದೇಶದ ನಾನಾ ಮೂಲೆಗಳ ರೂವಾರಿ ಶ್ರೇಷ್ಠರನ್ನು ಕರೆಯಿಸಿ, ಈ ದೇವಮಂದಿರ ನಿರ್ಮಾಣವಾಗಿರುವುದು ಬರೀ ನಾಮಧಾರಿ ಶ್ರೀವೈಷ್ಣವರಿಗಾಗಿ ಮಾತ್ರವಲ್ಲ. ಈ ಪೊಯ್ಸಳ ಸಾಮ್ರಾಜ್ಯದ ಎಲ್ಲ ಆಸ್ತಿಕ ಮಹಾಶಯರ ಮನಃಶಾಂತಿ, ನೆಮ್ಮದಿಗೆ; ಅವರ ಜ್ಞಾನ, ಸಂಸ್ಕೃತಿಗಳ ವಿಕಾಸಕ್ಕೆ. ನಿಮಗೆ ಇರುವುದು ಮೂಢನಂಬಿಕೆ. ಈ ಮಾತುಗಳನ್ನು ನಾವು ಹೇಳಿದೆವೆಂದು ನೀವು ಅಸಮಾಧಾನ ಮಾಡಿಕೊಳ್ಳಬಾರದು. ನೀವು ಹಿರಿಯರು. ಆದರೂ ಮೂಢನಂಬಿಕೆಯ ಕಾರಣವಾಗಿ ನೀವು ಬರೀ ಬಾಹ್ಯಕ್ಕೆ ಮೋಸ ಹೋಗುವವರೇ ವಿನಾ ನಿಮಗೆ ಈ ಮುಖಾಡಂಬರದ ಜನಗಳ ಆಂತರ್ಯ ಅರ್ಥವಾಗುವುದಿಲ್ಲ. ಅರಮನೆಗೆ ಸತ್ಯಸಂಗತಿಗಳನ್ನು ತಿಳಿದುಕೊಳ್ಳುವ ಸಾಮರ್ಥ್ಯವಿದೆ. ನಿಮಗೆ ಹೇಳಿದ ಕೇಶವಾಚಾರ್ಯನು ನಿಜವಾಗಿ ಶ್ರೀವೈಷ್ಣವನೇ ಅಲ್ಲ. ಅವನೊಬ್ಬ ನಮ್ಮ ಶತ್ರುವಿನ ಹೇರಿಗ. ಬಹುಶಃ ಆತನ ಬೇಹುತನ ನಮಗೆ ಅರಿವಾಗಿಲ್ಲವೆಂದು ಆತ ಭಾವಿಸಿರಬಹುದು. ಅದ್ದರಿಂದಲೇ ಇಲ್ಲಿ ತಾನು ಜನಗಳ ಮುಂದೆ ನಿಲ್ಲಬೇಕಾದ ಪ್ರಸಂಗವನ್ನು ತಪ್ಪಿಸಿಕೊಳ್ಳಬೇಕೆಂದು ಜಾರಿಕೊಂಡಿದ್ದಾನೆ. ಆದರೂ ಅವನು ತಲೆಮರೆಸಿಕೊಂಡು ಎಲ್ಲಿಗೂ ಹೋಗಿರಲಾರ. ಅವನ ಹಿಂದೆ ನಮ್ಮ ಹೇರಿಗರು ಸದಾ ಇರುತ್ತಾರೆ. ಸ್ವಲ್ಪ ಸಮಯದಲ್ಲಿಯೇ ಆತನನ್ನು ಈ ಸಭೆಯ ಮುಂದೆ ನಿಲ್ಲಿಸಲಾಗುವುದು. ಅವನು ಬಾಯಿ ಬಿಟ್ಟಾಗ, ಈಗ ಜನಗಳ ಬಾಯಲ್ಲಿ ಬರುವ ಅನೇಕ ಮಾತುಗಳು ಅರಮನೆಗೆ ಸಂಬಂಧಿಸಿದವರಿಂದಲೇ ಹುಟ್ಟಿದೆ ಎಂಬ ಮತ್ತೂ ಪರಮಾಶ್ಚರ್ಯಕರವಾದ ಸಂಗತಿ ಬಯಲಿಗೆ ಬರುತ್ತದೆ'' ಎಂದು ಬಿಟ್ಟಿದೇವ ಹೇಳಿದ.

ತಿರುವರಂಗದಾಸನ ಮೈಮೇಲಿನ ಶಹಲು ಪದೇ ಪದೇ ಜಾರ ತೊಡಗಿತು. ಅವನು ಅದನ್ನು ಆತುರ ಆತುರವಾಗಿ ಸರಿಪಡಿಸಿಕೊಳ್ಳುತ್ತಿದ್ದ. ನಡು ನಡುವೆ ಲಕ್ಷ್ಮೀ ದೇವಿಯತ್ತ ದೃಷ್ಟಿ ಹೊರಳಿಸುತ್ತಿದ್ದ. ಅವಳು ದಿಗ್ಭ್ರಮೆ ಹಿಡಿದವಳಂತೆ ಕುಳಿತಿದ್ದಳು.

ಪಟ್ಟಮಹಾದೇವಿ ಎದ್ದು ನಿಂತಳು. ''ಮಹಾಸನ್ನಿಧಾನದಲ್ಲಿ ನನ್ನದೊಂದು ನಮ್ರ ವಿನಂತಿ ಇದೆ. ನಾನು ಈಗ ಪಟ್ಟಮಹಾದೇವಿಯಾಗಿ ಮಾತನಾಡುತ್ತಿಲ್ಲ. ಒಬ್ಬ ಸಾಮಾನ್ಯ ಜೈನ ಪ್ರಜೆಯಾಗಿ ಮಾತನಾಡಲು ಅಪ್ಪಣೆಯನ್ನು ಬೇಡುತ್ತೇನೆ'' ಎಂದು ಮಾತು ನಿಲ್ಲಿಸಿ, ಬಿಟ್ಟಿದೇವನ ಕಣ್ಸನ್ನೆಯ ಒಪ್ಪಿಗೆ ದೊರತಮೇಲೆ, ''ಈಗ ರಾಜಧಾನಿಯಲ್ಲಿ ಹರಿದು ಬಂದಿರುವ ಮಾತನ್ನು ಕೇಳಿದರೆ ಮಹಾಸನ್ನಿಧಾನದಂತೆ ಶ್ರೀವೈಷ್ಣವ ಮಾತವಂಲಬನೆ ಮಾಡಿದವರು ಮೊದಲ ವರ್ಗದ ಜನರು, ಉಳಿದವರು ಎರಡನೆಯ ವರ್ಗದ ಜನರು ಎಂಬ ಭಾವನೆ ಮೂಡುವುದು ಸಹಜ. ಹಾಗೆಂಬ ರೀತಿಯಲ್ಲಿ ಪ್ರಧಾನಿಗಳೇ ಮೊದಲಾದ ಕೆಲವು ಜನ ನನ್ನೊಂದಿಗೆ ತಿಳಿಸಿದ್ದಾರೆ. ಎಲ್ಲ ಮತಾವಲಂಬಿಗಳೂ ಸಮಾನರು. ಹೌದೇ ? ಅಲ್ಲವೇ ? ಎಂಬುದು ನಮ್ಮ ಮುಂದಿರುವ ಪ್ರಶ್ನೆ. ಅದರ ಬಗೆಗೆ ಮಹಾಸನ್ನಿಧಾನ ತಮ್ಮ ನಿರ್ಣಯವನ್ನು ನೀಡಬೇಕು'' ಎಂದು ಹೇಳಿ ಶಾನ್ತಲದೇವಿ ಕುಳಿತಳು.

''ಪೊಯ್ಸಳರು ಎರಡು ನಾಲಿಗೆಯವರಲ್ಲ. ಅದಕ್ಕೆ ನಮ್ಮ ಪಟ್ಟಮಹಾದೇವಿಯವರು ಜೈನರಾಗಿಯೇ ಉಳಿದಿರುವುದು ಸಾಕ್ಷಿ. ಮತಾವಲಂಬನೆ ವೈಯಕ್ತಿಕ ವಿಚಾರ. ಆಡಳಿತವು ಅದರ ಕಾರಣದಿಂದಲೇ

ಯಾರನ್ನೂ ಮೇಲೆಂದಾಗಲಿ, ಕೀಳೆಂದಾಗಲಿ ಭಾವಿಸುವುದಿಲ್ಲ. ಆ ವಿಷಯದಲ್ಲಿ ಯಾರೂ ಅನುಮಾನ ಪಡಬೇಕಾದುದೇನೂ ಇಲ್ಲ'' ಎಂದು ಬಿಟ್ಟಿದೇವ ಒತ್ತಿ ಹೇಳಿದ.

"ಈಗ ಮುಂದೆ ನಡೆಯಬೇಕಾಗಿರುವ ಕೆಲಸ ಹೇಗೆಂದು ನಿರ್ಣಯವಾಗಬೇಕು. ಎಲ್ಲರೂ ಸಮಾನ ಎಂಬ ತೀರ್ಪಿನ ಹಿನ್ನೆಲೆಯಲ್ಲಿಯೇ ಈ ವಿಷಯವನ್ನು ಪರಿಶೀಲಿಸಬೇಕಾಗುತ್ತದೆ'' ಎಂದು ಶಾನ್ತಲದೇವಿ ಮುಖ್ಯ ವಿಷಯಕ್ಕೆ ಬಂದಳು.

ಆಗಮಿಕರ ಮುಖ್ಯಸ್ತರನ್ನು ಕುರಿತು, "ತಮ್ಮ ಅಭಿಪ್ರಾಯವನ್ನು ಈ ಸಭೆಗೆ ತಿಳಿಸಿ. ಏಕೆಂದರೆ ಈ ಕೆಲಸ ಶ್ರೀಮದಾಚಾರ್ಯರ ಆದೇಶದಂತೆ ಆಗಬೇಕಾಗಿದೆ. ಅವರು ತಮಗೆ ಈ ಕುರಿತು ಸೂಚನೆ ನೀಡಿರಬೇಕು ಎಂದು ಭಾವಿಸಿದ್ದೇನೆ'' ಎಂದ ಬಿಟ್ಟಿದೇವ.

"ನಮ್ಮ ಸಂಪ್ರದಾಯದಂತೆ ಪ್ರತಿಷ್ಠಾಪನೋತ್ಸವ ನಡೆಯಲಿ ಎಂದು ಅಪ್ಪಣೆ ಮಾಡಿದ್ದರು.''

"ಅಂದರೆ ?''

"ಅಂದರೆ ಶ್ರೀವೈಷ್ಣವ ಸಂಪ್ರದಾಯದಂತೆ ಇದು ನೆರವೇರಬೇಕು ಎಂಬುದು ಸ್ವಯಂ ಸ್ಪಷ್ಟ'' ಎಂದು ನಡುವೆಯೇ ತಿರುವರಂಗದಾಸ ಉಸುರಿದ.

ಅವನತ್ತ ತಿರುಗಿ, "ಆಯಿತು. ಚಿಂತೆಯಿಲ್ಲ. ನಮಗೆ ಅವರು ನಿರ್ದೇಶನವಿತ್ತರೂ ಒಂದೆ. ತಾವು ಕೊಡುವ ನಿರ್ದೇಶನ ಅವರುಗಳಿಗೆ ಒಪ್ಪಿತವಾದರೂ ಒಂದೇ. ಅದೇನು ಸಂಪ್ರದಾಯ?'' ಎಂದು ಬಿಟ್ಟಿದೇವ ಕೇಳಿದ.

"ಮೂಲದೇವ ವಿಗ್ರಹ ಶ್ರೀವೈಷ್ಣವ ಮತ ಸಂಕೇತ. ಪ್ರತಿಷ್ಠಾಪನ ಕರ್ತರೆಲ್ಲರೂ ಶ್ರೀವೈಷ್ಣವರಾಗಿರಬೇಕೆಂಬುದು ಸಂಪ್ರದಾಯ. ಅಲ್ಲವೆ ಆಗಮಿಕರೆ ?'' ಎಂದು ತಿರುವರಂಗದಾಸ ಉದ್ಘೋಷಿಸಿದ. ತನಗೇನೋ ಭದ್ರ ನೆಲೆ ಸಿಕ್ಕಿದೆ ಎಂದು ಅವನಿಗನ್ನಿಸಿತ್ತು ಆಗ.

"ಶ್ರೀವೈಷ್ಣವ ಸಂಪ್ರದಾಯವೇನು ? ಎಲ್ಲಾ ಸಂಪ್ರದಾಯಗಳೂ ಅದನ್ನೇ ಹೇಳುತ್ತವೆ. ಆ ವಿಚಾರ ಸನ್ನಿಧಾನಕ್ಕೆ ಗೊತ್ತಿಲ್ಲದೇ ಇಲ್ಲವಲ್ಲ'' ಎಂದು ಅರಮನೆ ಪುರೋಹಿತರು ಹೇಳಿದರು

"ಪಟ್ಟಮಹಾದೇವಿಯವರಿಗೆ, ಅರಮನೆ ಪುರೋಹಿತ ವರ್ಗಕ್ಕೆ, ಆಗಮಿಕರಿಗೆ, ನಮಗೆ, ಸ್ಥಪತಿಗಳಿಗೆ ಎಲ್ಲರಿಗೂ ಈ ವಿಷಯವು ಸ್ಪಷ್ಟವಾಗಿ ಗೊತ್ತಿದೆ. ಆದರೆ ಮತ ಎಂಬುದು ತನ್ನ ದುಷ್ಟ ಹೆಡೆಯನ್ನು ಎತ್ತಿದಾಗ ಅದರ ಉಸಿರು ಎಲ್ಲೆಲ್ಲಿ ಏನೇನು ಗುಪ್ತಭಾವನೆಗಳನ್ನು ಮೂಡಿಸಿವೆಯೋ ಅದನ್ನು ಅರಿತು ನಾವಿಂದು ಮುಂದಡಿ ಇಡಬೇಕಾಗಿದೆ. ಮುಹೂರ್ತದ ವೇಳೆಗೆ ಯಾವ ಬಗೆಯ ತೊಡಕೂ ಬರಬಾರದು. ಇಲ್ಲಿ ನಿರ್ಣಯ ಮಾಡಿದ ಮೇಲೆಯೂ ಯಾರಾದರೂ ತೊಡಕು ತಂದರೆ ಅವರನ್ನು ಯಾವ ರೀತಿ ನೋಡಿಕೊಳ್ಳಬೇಕೆಂಬುದು ಅರಮನೆಗೆ ಗೊತ್ತಿದೆ. ಅದರಿಂದ ಸೇರಿರುವ ಶ್ರೀವೈಷ್ಣವ ಮತಾನುಯಾಯಿಗಳೆಲ್ಲ ಅವಶ್ಯಕವೆನಿಸಿದರೆ ವಿಚಾರ ವಿನಿಮಯ ಮಾಡಿಕೊಂಡು ತಿಳಿಸಿ. ನಂತರ ಏನು ಮಾಡುವುದೆಂಬ ನಿರ್ಣಯಕ್ಕೆ ಬರೋಣ'' ಎಂದು ಬಿಟ್ಟಿದೇವ ಹೇಳಿದ.

ಚಾವಿಮಯ್ಯ ಸನಿಯಕ್ಕೆ ಬಂದು ಬಾಗಿ ವಂದಿಸಿದ.

"ಆ ಹೇರಿಗ ಸಿಕ್ಕಿದನೆ ?''

"ಅಪ್ಪಣೆಯಾದರೆ ಕರೆತರುತ್ತೇನೆ.''

"ಬರಲಿ."

ಪಟ್ಟೆ ಪಟ್ಟೆ ನಾಮಧಾರಣೆ ಮಾಡಿಕೊಂಡ ಕೇಶವಾಚಾರ್ಯನನ್ನು ಇಬ್ಬರು ಅಂಗರಕ್ಷಕರು ಕರೆದು ತಂದು ಮುಂದ ನಿಲ್ಲಿಸಿದರು.

"ನೀನು ಯಾರು ?" ಬಿಟ್ಟಿದೇವ ಕೇಳಿದ.

"ಕೇಶಾವಾಚಾರ್ಯ."

"ಎಲ್ಲಿಯವನು ?"

"ಕಿಕ್ಕೇರಿಯವನು"

"ಸುಳ್ಳು."

"ನನ್ನ ಮಾತಿಗೆ ಬೆಲೆಯಿಲ್ಲದಿದ್ದರೂ ನನ್ನ ಲಾಂಛನಕ್ಕಾದರೂ ಬೆಲೆ ಸಿಗಬೇಡವೆ ?"

"ಬೆಲೆ ಬಯಸುವವರು ಇಲ್ಲಿಂದ ಜಾರಿಕೊಂಡು ಹೊದದ್ದೇಕೆ ?"

"ನಾನೆಲ್ಲಿ ಜಾರಿಕೊಂಡು ಹೋಗಿದ್ದೆ ?"

"ಒಳಕ್ಕೆ ಬಂದಿರಲಿಲ್ಲವೆ ?"

"ಬಂದಿದ್ದೆ."

"ಕೂತಿರಲಿಲ್ಲವೆ ?"

"ಕೂತಿದ್ದೆ."

"ಮತ್ತೆ ಹೊರಟುಹೊದದ್ದೇಕೆ ?"

"ಹೊಟ್ಟೆ ತೊಂದರೆ ಕೊಡಲು ಪ್ರಾರಂಭಿಸಿತು. ನಿಸರ್ಗಬಾಧೆ ತೀರಿಸಿಕೊಂಡು ಬರೋಣವೆಂದು ಹೊರಟೆ."

"ನಿನ್ನಿನ ರಾತ್ರಿ ನೀನು ಸೇವಿಸಿದ ಮಾಂಸ ಯಾವ ಪ್ರಾಣಿಯದು ?"

"ಆ ! ನಾನು.....ಮಾಂಸ !"

"ಹೌದು. ಆ ಮಾಂಸವೇ ನಿನಗೆ ಈಗ ನಿಸರ್ಗ ಬಾಧೆ ಕೊಡುತ್ತಿದೆ."

"ನಾನು ವೈದಿಕ. ಶ್ರೀವೈಷ್ಣವ."

"ಹಾಗೆ ಹೇಳಬೇಡ. ನಿಜವಾದ ವೈದಿಕ ಶ್ರೀವೈಷ್ಣವರ ಹೆಸರಿಗೆ ಕಳಂಕ ಬರುತ್ತದೆ."

"ಈ ಶ್ರೀನಿವಾಸ ವರದಾಚಾಯರಿಯೋ ತಿರುವರಂಗದಾಸನೋ ಚಾಡಿ ಹೇಳಿರಬೇಕು."

"ಚಾವಿಮಯ್ಯ ಅವನ ಎರಡೂ ಕೈಗಳನ್ನು ಭದ್ರವಾಗಿ ಹಿಂದಕ್ಕೆ ಕಟ್ಟಿಸು."

ಅದರಂತೆ ಅಂಗರಕ್ಷಕರು ಮಾಡಿದರು.

"ಈಗ ಅವನು ಹೊದೆದಿರುವ ಆ ಶಹಲನ್ನು ತೆಗಿ." ತೆರೆದಾಯಿತು. "ಯಜ್ಞೋಪವೀತವೆಲ್ಲಿ ?" ಅವನು ತಲೆ ತಗ್ಗಿಸಿದ. "ಹು, ಈಗ ಹೇಳು. ನೀನು ಯಾರು ?"

"ಹೇಳುವುದಿಲ್ಲ."

"ಅದರಿಂದ ನಿನಗೇ ತೊಂದರೆ."

"ಈ ಪ್ರತಿಷ್ಠಾಪನೆಗೆ ನನ್ನ ಬಲಿಯೇ ಆಗಲಿ. ನಾನು ಹೆದರುವುದಿಲ್ಲ"

"ಇಲ್ಲಿ ಅದಕ್ಕೆ ಅವಕಾಶವಿಲ್ಲ. ನೀನಾಗಿಯೇ ಹೇಳಿದರೆ ಸರಿ. ಇಲ್ಲದಿದ್ದರೆ ಅದನ್ನು ಹೊರಡಿಸುವ ಮಾರ್ಗ ನಮಗೆ ಗೊತ್ತಿದೆ."

"ನನ್ನ ಪ್ರಾಣ ಹೋದರೂ ಚಿಂತೆಯಿಲ್ಲ. ನನ್ನ ಸ್ವಾಮಿಗೆ ನಾನು ದ್ರೋಹ ಬಗೆಯುವುದಿಲ್ಲ"

"ನಿನ್ನಿಷ್ಟ. ನೀನು ಉಚ್ಚಂಗಿ ಪಾಂಡ್ಯನ ಕಡೆಯ ಹೇರಿಗ. ನಿನ್ನ ಹೆಸರು ಚೊಕ್ಕಣ."

ಅವನು ಗಟ್ಟಿಯಾಗಿ ನಕ್ಕುಬಿಟ್ಟ

"ಏಕೆ ನಗುತ್ತೀಯೆ ?"

"ಬೇರೇನು ಮಾಡಲಿ ? ಇಂತಹ ರಾಜ್ಯ ನಡೆಸಲು ಜಾಣರಾದ ನೀವು ನೀರನ್ನ ನೀರೆಂದೂ ಹಾಲನ್ನ ಹಾಲೆಂದು ತಿಳಿಯಲಾರಿರಲ್ಲ ?"

"ಹಳೆಯ ಕಥೆ ನಿನಗೆ ಮರೆತಿರಬಹುದು. ನೀನು ಅದೇ ಚೊಕ್ಕಣ ಎಂಬುದನ್ನು ನಖ ಶಿಖಾಂತವಾಗಿ ಬಲ್ಲ ನಮ್ಮ ಚಟ್ಟಲದೇವಿ ಸಾಕ್ಷಿ ಮಾಡಿಕೊಡಬಲ್ಲಳು."

"ಚಟ್ಟಲು ಬಟ್ಟಲು ನನಗೊಂದು ಗೊತ್ತಿಲ್ಲ."

"ಚಾವಿಮಯ್ಯ, ಚಟ್ಟಲದೇವಿಯನ್ನು ಬರಮಾಡು."

ಅವಳು ಬಂದಳು. ಅವಳನ್ನು ನೋಡಿದ ಕೇಶವಾಚಾರಿಗೆ ಜಂಘಾಬಲವೇ ಉಡುಗಿಹೋಯಿತು. ಚಟ್ಟಲದೇವಿ ಬಂದವಳೇ ಬಾಗಿ ವಂದಿಸಿದಳು.

"ಇವನನ್ನು ನೀನು ಬಲ್ಲೆಯಾ ?

"ಬಲ್ಲೆ."

"ಇವನ ಹೆಸರು ?"

"ಚೊಕ್ಕಣ."

"ಇವನನ್ನು ಎಲ್ಲಿ ಬಲ್ಲೆ ?"

"ಯುದ್ಧ ಶಿಬಿರದಲ್ಲಿ. ಜಗದೇವ ನಮ್ಮ ಮೇಲೆ ದಾಳಿ ಮಾಡಿದಾಗ ಈತ ಅವರ ಹೇರಿಗರ ಪಡೆಗೆ ಬಂದು ಸೇರಿದ. ಉಚ್ಚಂಗಿ ಪಾಂಡ್ಯರ ಹೇರಿಗನೆಂದು ಹೇಳಿಕೊಂಡು ಸೇರಿದ. ಇವನನ್ನು ಈಗ ಒಂದು ನಾಲ್ಕು ದಿನಗಳ ಕೆಳಗೆ ಯಾದವಪುರಿಯ ಲಕ್ಷ್ಮೀ ನಾರಾಯಣಸ್ವಾಮಿಯ ದೇವಮಂದಿರದ ಧರ್ಮದರ್ಶಿ ಅವರೊಡನೆ ಕಂಡಾಗ ನನಗೆ ಆಶ್ಚರ್ಯವಾಯಿತು. ತೀರ ಉನ್ನತ ಮಟ್ಟದಲ್ಲಿ ಇವನು ಕೆಲಸ ನಡೆಸಿದ್ದಾನೆಂದು ಭಾವಿಸಿ ಸನ್ನಿಧಾನಕ್ಕೆ ಅರಿಕೆ ಮಾಡಿದೆ. ಅವನ ಚಲನ ವಲನದ ಮೇಲೆ ಚಾವಿಮಯ್ಯ ಕಣ್ಣಿಟ್ಟಿದ್ದ. ಉಳಿದ ವಿಷಯವೆಲ್ಲ ಷನ್ನಿಧಾನಕ್ಕೆ ಗೊತ್ತಿದೆ" ಎಂದಳು ಚಟ್ಟಲದೇವಿ.

"ಈಗಲಾದರೂ ಒಪ್ಪಿಕೊಳ್ಳುವೆಯಾ ?"

ಸುಮ್ಮನೆ ತಲೆ ಹಾಕಿದ.

"ನೀನು ಇಲ್ಲಿಗೇಕೆ ಬಂದೆ ?"

"ಇಲ್ಲಿ ಜನರಲ್ಲಿ ಅಸಮಾಧಾನ ಹರಡಲು. ಮತ ಸಂಬಂಧವಾಗಿ ಬಂಡಾಯವನ್ನು ಪ್ರಚೋದಿಸಲು."

"ನಿನಗೇನು ಲಾಭ ?

"ನನ್ನ ಧಣಿಗೆ ಲಾಭ. ನಿಮ್ಮ ದೌರ್ಬಲ್ಯ ಅವರ ಗೆಲುವಿಗೆ ನಾಂದಿ."

"ನೀನು ಕೃತಕೃತ್ಯನಾಗಿರುವದಂತೆ ಭಾವಿಸಿದ ಹಾಗೆ ಕಾಣುತ್ತದೆ."

"ಕಾದು ನೋಡಿ. ಏನೆಲ್ಲ ಆದೀತೆಂದು."

"ಏನು ಆದೀತೆಂದು ನಮಗೆಲ್ಲ ಗೊತ್ತಿದೆ. ಆ ಚಾಲುಕ್ಯ ಚಕ್ರವರ್ತಿಯ ಮನೋದೌರ್ಬಲ್ಯವನ್ನು ದುರುಪಯೋಗಪಡಿಸಿಕೊಂಡು ನಿನ್ನ ಧಣಿ, ಹಾಗೆಯೇ ಇಂತಹ ಇನ್ನೂ ಹನ್ನೊಂದು ಜನ ಧಣಿಗಳು ಒಟ್ಟಿಗೆ ಸೇರಿ ನಮ್ಮ ರಾಜ್ಯದ ಮೇಲೆ ದಾಳಿ ಮಾಡುವ ಸಿದ್ಧತೆಯ ವಿಷಯ ನಮಗೆ ತಿಳಿದಿಲ್ಲವೆಂದು ಭಾವಿಸಬೇಡ. ನಿನ್ನನ್ನು ಈಗ ಶಿಕ್ಷಿಸುವುದಿಲ್ಲ. ವಿಜಯೋತ್ಸವದಂದು ನೀನು ಈ ನಾಡಿನ ಜನಸ್ತೋಮವನ್ನು ನೋಡು. ಅನಂತರ ನಿನ್ನನ್ನು ಗಡೀಪಾರು ಮಾಡುತ್ತೇವೆ. ಹೋಗಿ ನಿನ್ನ ಧಣಿಗೂ ಉಳಿದ ಈ ಪುಟ್ಟ ಧಣಿಗಳಿಗೂ, ಮಹಾಧಣಿ ಶಕಪುರುಷರಿಗೂ ಕಂಡುದನ್ನು ಹೇಳು. ಆಮೇಲೆ ದಾಳಿ ಮಾಡಿದರೆ ಅವರ ದುರದೃಷ್ಟಕ್ಕೆ ನಾವೇನು ಮಾಡಬಲ್ಲೆವು ? ನನ್ನ ಪೂಜ್ಯ ತಂದೆಯವರನ್ನು ಅವರು ಸೋದರರೆಂದು ಭಾವಿಸಿದ್ದ ಕಾಲವೊಂದಿತ್ತು. ಆ ಕಕಲಾತಿಯಿಂದ ನಿನ್ನನ್ನು ಕಳಿಸುತ್ತೇವೆ. ಇವನನ್ನು ಬಂಧನದಲ್ಲಿಡಿ."

ಅವನನ್ನು ಅಲ್ಲಿಂದ ಕರೆದೊಯ್ಯಲಾಯಿತು.

"ಮತೀಯ ವಿಚಾರದಲ್ಲಿ ಜನರ ತಲೆಕೆಡಿಸುವ ಕೆಲಸ ಯಾರೇ ಮಾಡಲಿ ಅವರಿಗೆ ಇಲ್ಲಿ ಸ್ಥಳವಿಲ್ಲ ಎಂಬುದನ್ನು ಅರಿಯಬೇಕು. ಆ ಚೊಕ್ಕಣನ ಕಥೆ ಇಲ್ಲಿಗೇ ಮುಗಿದಿಲ್ಲ ಇನ್ನೂ ಬಹಳವಿದೆ. ಆದರೆ ಈಗ ಅದಕ್ಕೆ ಸಮಯವಿಲ್ಲ. ಈಗ ನಮ್ಮ ಮುಂದಿರುವ ಪ್ರಶ್ನೆ, ಪ್ರತಿಷ್ಠಾಪನೋತ್ಸವದ್ದು. ಅದರ ಬಗೆಗೆ ನಿರ್ಣಯ ಮಾಡಿ. ಶ್ರೀವೈಷ್ಣವವೆಂಬುದು ನಮಗೆ ಪ್ರಿಯವೆನಿಸಿದ್ದರೂ ಅದರ ರೀತಿಯು ಇರುವ ಸಂಪ್ರದಾಯಕ್ಕಿಂತ ಭಿನ್ನ ಎಂದು ನಾವು ಭಾವಿಸಿಲ್ಲ. ನಮ್ಮ ಪಟ್ಟಮಹಾದೇವಿಯವರ ತಂದೆಯವರು ಗ್ರಾಮದಲ್ಲಿ ಧರ್ಮೇಶ್ವರ ಸ್ಥಾಪನೆ ಮಾಡಿಸಿದರು. ಅವರ ಪತ್ನಿಯವರು ಜೈನರಾಗಿದ್ದರೂ ಧರ್ಮಚ್ಯುತಿಯಿಲ್ಲದೆ ಪ್ರತಿಷ್ಠೆಯು ಸಾಂಗವಾಗಿ ನೆರವೇರಿತು. ನಮ್ಮ ಅರಮನೆಯ ಸಂಪ್ರದಾಯವೊಂದಿದೆ. ಅದರಂತೆ ಮಾಡಬಹುದೆಂದು ನಮಗೆ ತೋರುತ್ತದೆ."

"ಹಾಗೆಯೇ ಮಾಡಬಹುದು. ಶ್ರೀಮದಾಚಾರ್ಯರಿಗೆ ಅದು ಮಾನ್ಯ" ಎಂದು ಆಗಮಿಕರ ಮುಖಂಡರು ಹೇಳಿದರು.

"ಮಹಾರಾಜ ಯಾವುದೇ ಧಾರ್ಮಿಕ ಕೆಲಸ ಮಾಡಿದರೂ ದಾನಧರ್ಮಗಳನ್ನು ಮಾಡಿದರೂ ಅದು ಪಟ್ಟಮಹಾದೇವಿಯವರ ಜೊತೆಗೂಡಿಯೇ ಆಗಬೇಕು. ಅದು ಅರಮನೆಯ ಸಂಪ್ರದಾಯ" ಎಂದು ಉದಯಾದಿತ್ಯರಸ ಹೇಳಿದ.

ಆಗಮಿಕರು ಹೇಳಿದ ಕೂಡಲೇ ಹಾಗೆಯೇ ಮಾಡಬಹುದು ಎಂದು ಹೇಳಬೇಕೆಂದಿದ್ದವರು ಉದಾಯದಿತ್ಯನ ಮಾತನ್ನು ಕೇಳಿ ತಮ್ಮ ನಾಲಗೆಯನ್ನು ಹಿಂದೆ ಸರಿಸಿಕೊಂಡರು.

"ಏನು ಧರ್ಮದರ್ಶಿಗಳೆ ನಿಮ್ಮ ಅಭಿಪ್ರಾಯ ?" ಎಂದು ಉದಯಾದಿತ್ಯ ನೇರವಾಗಿ ತಿರುವರಂಗದಾಸನನ್ನು ಕೇಳಿದ.

"ಕೇಶವ, ನಾರಾಯಣ ಎನ್ನುವ ನಾವು ಇಂತಹ ಕಡೆ ಬಾಯಿ ಹಾಕಬಾರದು. ನಮ್ಮನ್ನ ಹೆಡ್ಡರನ್ನು ಮಾಡಿಬಿಡುತ್ತಾರೆ ಈ ಜನ. ಆ ಚಂಡಾಳ, ಹೇರಿಗನೆಂದು ನನಗೇನು ಗೊತ್ತು ? ಬಂದು ಏನೇನೋ ಹೇಳಿಕೊಂಡ. ತನಗೇನೋ ಕಷ್ಟ ಎಂದು ಹೇಳಿಕೊಂಡ. ನನಗೂ ಅನುಕಂಪ ಹುಟ್ಟಿತು. ನನ್ನ ಹಿಂದೆ ಅವನು ತಿರುಗಿದ್ದುಂಟು. ಅದಷ್ಟಕ್ಕೇ ನನ್ನನ್ನೂ ಇದರಲ್ಲಿ ಸೇರಿಸಿಬಿಟ್ಟಂತೆ ಕಾಣುತ್ತಿದೆ. ಆಗಮಿಕರುಂಟು. ಸನ್ನಿಧಾನವುಂಟು'' ಎಂದ ತಿರುವರಂಗದಾಸ. ಸಧ್ಯ ಅಲ್ಲಿಂದ ಬಿಡುಗಡೆ ಮಾಡಿಕೊಂಡರೆ ಸಾಕೆಂಬಂತೆ ಇತ್ತು ಅವನ ಮಾತಿನ ರೀತಿ.

"ಅಂದರೆ, ಅರಮನೆಯ ಸಂಪ್ರದಾಯಕ್ಕೆ ತಮ್ಮ ವಿರೋಧವಿಲ್ಲ ಎಂದು ನಾವು ಭಾವಿಸಬಹುದೆ ಧರ್ಮದರ್ಶಿಗಳೇ ?'' ಎಂದು ಮತ್ತೆ ಉದಯಾದಿತ್ಯರಸ ಕೇಳಿದ.

"ಅರಮನೆಯ ಸಂಪ್ರದಾಯವನ್ನು ವಿರೋಧಿಸಲು ನಾನಾರು ?'' ಎಂದು ತುದಿ ನಾಲಿಗೆಯ ಒಪ್ಪಿಗೆಯನ್ನು ಪರ್ಯಾಯವಾಗಿ ತಿರುವರಂಗದಾಸ ಸೂಚಿಸಿದ.

"ಆಗಮಿಕರ ಅಭಿಪ್ರಾಯ ?'' ಎಂದು ಉದಯಾದಿತ್ಯ ಅವರತ್ತ ತಿರುಗಿದ.

"ಯಾವುದೋ ದುಷ್ಟ ಗಾಳಿ ರಾಜಧಾನಿಯಲ್ಲೆಲ್ಲ ಸುಳಿದು ಮನತೆರೆದು ಮಾತನಾಡಲು ಹಿಂಜರಿಕೆಯಾಗುತ್ತದೆ. ನಾವು ಪ್ರಧಾನವಾಗಿ ಶ್ರೀಮದಾಚಾರ್ಯರ ಕಿಂಕರರು. ಅವರು ನಮಗೆ ಏನನ್ನು ಬೋಧಿಸುದ್ದಾರೆಯೋ ಅದರಂತೆ ನಡೆವವರು. ಅದರಿಂದ ಶ್ರೀಮದಾಚಾರ್ಯರಿಗೆ ಯಾವುದು ಸರಿಯೆಂದು ಅನ್ನಿಸಬಹುದೋ ಆ ರೀತಿ ಮಾಡುವುದುಚಿತಮೆಂದು ನಮ್ಮ ಅಭಿಪ್ರಾಯ. ಇಲ್ಲಿ ಪಟ್ಟಮಹಾದೇವಿಯವರಂತಹ ಸಾಧ್ವಿಯವರ ವಿಷಯ ಕಣ್ಣೆದಿರಿಗಿದ್ದಾಗ ಅವರಂತರಂಗವನ್ನು, ಮನೋವೈಶಾಲ್ಯವನ್ನು ಬಲ್ಲ ಯಾರೇ ಆಗಲಿ ಅವರ ನೇತೃತ್ವದಲ್ಲಿ ನಡೆವ ಕೆಲಸವೆಲ್ಲ ನಿಷ್ಕಲ್ಮಷತೆಯಿಂದ ಸಮಗ್ರವಾಗಿ ನಡೆವ ಕೆಲಸ ಎಂದು ಭಾವಿಸುತ್ತಾರೆ. ಶ್ರೀಮದಾಚಾರ್ಯರಿಗೆ ಅವರು ಪುತ್ರೀ ಸಮಾನ. ಅದರಿಂದ ಅವರು ಅನ್ಯಮತಾನುಯಾಯಿ ಆಗಿದ್ದರೂ ಕೂಡ ಪಟ್ಟಮಹಾದೇವಿ ಎಂಬ ಸ್ಥಾನಗೌರವದಿಂದ ಸಹ ಮಹಾರಾಜನ ಕೈಂಕರ್ಯಗಳಲ್ಲಿ ಅಗ್ರಸ್ಥಾನ ಅವರಿಗೆ ದೊರೆಯಬೇಕೆಂಬುದು ನ್ಯಾಯಸಮ್ಮತ; ಧರ್ಮ ಸಮ್ಮತ. ಅಚಾರ್ಯರು ಸಮ್ಮತ ಎಂದಾಗ ಅರಮನೆಯ ಸಂಪ್ರದಾಯಕ್ಕೆ ವಿರೋಧವಿರಲಿಕ್ಕೆ ಸಾಧ್ಯವಿಲ್ಲವೆಂಬುದನ್ನು ನಾವು ಸ್ಪಷ್ಟೀಕರಿಸುತ್ತೇವೆ. ಪಟ್ಟಮಹಾದೇವಿಯವರು ಒಂದು ವೇಳೆ ಶ್ರೀವೈಷ್ಣವಾವಲಂಬಿಯಾಗಿದ್ದರೆ ಅದು ಪರಮಸೂಕ್ತವೂ, ಮಹೋನ್ನತವೂ ಆಗುತ್ತಿತ್ತು. ಅರಮನೆಯ ಸಂಪ್ರದಾಯ ನಮಗೆ ಒಪ್ಪಿಗೆ'' ಎಂದು ಅವರು ಅಭಿಪ್ರಾಯ ವಿವರಣೆ ನೀಡಿದರು.

"ಸರಿ. ಈಗ ವಿಷಯ ಒಂದು ರೀತಿ ಇತ್ಯರ್ಥವಾಗಿದೆ ಅದರಂತೆ ಕಾರ್ಯ ನಡೆಯಲಿ. ಈ ಮತಗಳನ್ನು ಮುಂದುಮಾಡಿ ಜನಗಳನ್ನು ಎತ್ತಿಕಟ್ಟುವ ಕೆಲಸಕ್ಕೆ ನೆರವಾಗುವುದೆಂಬ ನಂಬಿಕೆಯಿಂದ ಆ ಜನ ಇದರಲ್ಲಿ ಮುಖ್ಯವಾದವರ ಬಗೆಗೆ ಸಹ ಬಾಯಿಗೆ ತೋಚಿದಂತೆ ಆಡಿದ್ದಾರೆಯಂತೆ. ಶೀಲಾದಿಗಳ ಬಗೆಗೆ ಚರ್ಚಿಸಿದ್ದಾರಂತೆ. ಸ್ವಾರ್ಥ ಸಾಧಕರ ರೀತಿಯೇ ಹಾಗೆ. ಇದ್ದ ನಂಬಿಕೆಗಳನ್ನ ಚದುರಿಸಿದರೆ, ತಮ್ಮ ಕೆಲಸ ಮಾಡಿಕೊಳ್ಳಲು ದಾರಿ ಸುಗಮ ಎಂದು ಹೀಗೆಲ್ಲಾ ಮಾಡುತ್ತಾರೆ. ಹಿಂದೆ ಬಲಿಪುರದಲ್ಲಿ ಚಾಲುಕ್ಯ ಪಿರಿಯರಸಿ ಚಂದಲದೇವಿಯವರು ಕಾರಣಾಂತರದಿಂದ, ರೂಪಾಂತರದಲ್ಲಿ ಪಟ್ಟಮಹಾದೇವಿಯವರ ಮನೆಯಲ್ಲಿ ಇರಬೇಕಾಗಿತ್ತು. ಅಲ್ಲೂ ಸಹ ಆ ಪಿರಿಯರಸಿಯವರು, ಹೆಗ್ಗಡೆ ಮಾರಸಿಂಗಯ್ಯನವರ ಶೀಲಕ್ಕೆ ಕಳಂಕ ಅಂಟಿಸಿ ಜನ ಮಾತನಾಡುವಂತೆ ಮಾಡಿದರು. ಪರಮಸಾಧ್ವಿಗಳ ಮೇಲೆ ಸುಳ್ಳು ಆರೋಪ

ಮಾಡಿದರೆ ಅವರು ಪ್ರತಿಕ್ರಿಯೆ ತೋರಿಸದಿದ್ದರೂ ನೊಂದುಕೊಳ್ಳುತ್ತಾರೆ. ಆ ನೋವು ಆಡಿಕೊಂಡವರಿಗೆ ಶಾಪವಾಗುತ್ತದೆ. ಎಂತಲೇ ಮಾಡಿದವನ ಪಾಪ ಆಡಿದವನ ಮೇಲೆ ಎಂಬ ಮಾತು ಬಂದುದು. ಮಾಡಿದ ಪಾಪವನ್ನು ಎತ್ತಿ ಆಡಿದ್ದರಿಂದಲೇ ಪಾಪ ತಟ್ಟಿದರೆ ಮಾಡದಿದ್ದವರ ಮೇಲೆ ಸುಳ್ಳು ಪಾಪವನ್ನು ಹೊರಿಸುವವರ ಗತಿಯೇನು ? ನಾವು ದೈವಭಕ್ತರು, ಕೇಶವ, ನಾರಾಯಣ ಬಿಟ್ಟು ನಮ್ಮ ನಾಲಗೆಯು ಬೇರೇನೂ ನುಡಿಯುವುದಿಲ್ಲ ಎಂದು ಹೇಳಿಕೊಳ್ಳುತ್ತಾ ಹರಿದಾರಿ ದೂರದವರೆಗೂ ಕಾಣುವ ಆಡಂಬರದ ಲಾಂಛನ ಧರಿಸಿ, ಕಳ್ಳತನದಲ್ಲಿ ಅರಿವು ಸಾಲದ ಅಜ್ಞಾನಿಗಳ ಗುಂಪಿನಲ್ಲಿ ಸುಳ್ಳು ಸಮಾಚಾರ ಹರಡುವವರಿಗೆ ಯಾವ ನರಕ ಕಾದಿದೆಯೋ ದೇವರೇ ಬಲ್ಲ. ಅದರಿಂದ ನಿಮ್ಮಲ್ಲಿ ನಮ್ರ ವಿನಂತಿ ಇಷ್ಟೆ: ಯಾರ ಬಗೆಗೇ ಆಗಲಿ, ಯಾವ ವಂಶದ ಬಗೆಗೇ ಆಗಲಿ ಯಾರಾದರೂ ಕೆಟ್ಟಮಾತನ್ನು ಆಡಿದರೆ ಅದಕ್ಕೆ ಕಿವಿಗೊಟ್ಟು ವಿಚಲಿತರಾಗಬೇಡಿ. ಸಾಧ್ಯವಿದ್ದರೆ ಅಲ್ಲಲ್ಲೇ ಅವರ ಮಾತನ್ನು ಖಂಡಿಸಿಬಿಡಿ. ಈಗಾಗಲೇ ರಾಜಧಾನಿಯಲ್ಲಿ ನಾನಾ ಭಾಗಗಳಿಂದ ಹತ್ತಾರು ಸಾವಿರ ಜನ ಬಂದಿದ್ದಾರೆ. ನೂರಾರು ಸಂಖ್ಯೆಯಲ್ಲಿ ಹೇರಿಗರು ಇದ್ದಾರೆ. ಪತ್ತೆಯಾದವರನ್ನು ನಾವು ಜನ ಹಿಂತಿರುಗುವವರೆಗೆ ಬಂಧನದಲ್ಲಿ ಇಟ್ಟಿರುತ್ತೇವೆ. ಸುಳ್ಳು ಸುದ್ದಿ ಹೊರಡಿಸುವವರೆಲ್ಲ ಶತ್ರುಗಳ ಹೇರಿಗರೆಂಬ ಸೂತ್ರದ ಮೇಲೆ ಬಂಧನ ಮಾಡಲಾಗುತ್ತದೆ. ಅದರಿಂದ ನಾಲಿಗೆ ಹರಿಬಿಟ್ಟು ಯಾರೂ ಇಬ್ಬಂದಿಗೆ ಸಿಕ್ಕಬಾರದು. ಅಧಿಕಾರಿಗಳಿಗೆ ಕಡ್ಡಾಯವಾಗಿ ಅಪ್ಪಣೆ ಮಾಡಲಾಗಿದೆ. ಅಧಿಕಾರ, ಸಂಬಂಧ ಯಾವುದನ್ನೂ ಗಮನಿಸದೆ ಬಂಧಿಸಿ ಎಂದು. ಅಷ್ಟೇ ಅಲ್ಲ ಇಂದು ಇಡೀ ಜನತೆಗೆ ಈ ವಿಷಯ ತಿಳಿಯುವಂತೆ ಡಂಗೂರ ಹಾಕಿಸುತ್ತೇವೆ'' ಎಂದು ಬಿಟ್ಟಿದೇವ ಹೇಳಿದ.

''ಡಂಗೂರ ಹಾಕಿಸಿದರೆ ಹೇರಿಗರು ಬಾಯಿಗೆ ಬೀಗ ಹಾಕುತ್ತಾರೆ. ಆಮೇಲೆ ಅವರನ್ನು ಪತ್ತೆ ಮಾಡುವುದು ಕಷ್ಟವಾಗಬಹುದಲ್ಲ. ಕಡೇ ಗಳಿಗೆಯಲ್ಲಿ ಏನಾದರೂ ಚಿತಾವಣೆಗಳು ಆಗಿಬಿಟ್ಟರೆ ಗುಂಪನ್ನು ಶಿಸ್ತಿಗೊಳಪಡಿಸುವುದಕ್ಕೆ ಕಷ್ಟವಾಗುತ್ತದೆ. ಅದರಿಂದ ಡಂಗೂರದ ವಿಷಯ ಮತ್ತೆ ಪರ್ಯಾಲೋಚಿಸಿದರೆ ಒಳಿತಲ್ಲವೆ ?'' ಎಂದು ಕುವರ ಬಿಟ್ಟಿಯಣ್ಣ ಸೂಚಿಸಿದ.

''ಸಾರ್ವಜನಿಕರಿಗೆ ಎಚ್ಚರಿಕೆ ನೀಡಬೇಕಾದುದು ಈಗ ಅತ್ಯಂತ ಅವಶ್ಯಕ. ಹತ್ತು ಜನ ಹೇರಿಗರು ನಮಗೆ ಸಿಗದಿದ್ದರೂ ಚಿಂತೆಯಿಲ್ಲ. ಜನಗಳ ಗುಂಪು ಉದ್ರೇಕಗೊಳ್ಳದಂತೆ ಮುನ್ನೆಚ್ಚರಿಕೆ ಕೊಡುವುದು ಉತ್ತಮಪಕ್ಷ. ಸ್ಥಪತಿಗಳೆ, ನಿಮ್ಮ ಬಹಳ ಸಮಯ ದಂಡವಾಯಿತು. ಆದರೆ ವಿಧಿಯಿರಲಿಲ್ಲ. ನೀವು ಹೇಗಾದರೂ ಸರಿ, ಮುಗಿಸುತ್ತೀರಿ ಎಂಬ ನಂಬಿಕೆ ನಮಗಿದೆ. ಈ ಸಭೆಯನ್ನು ನಾವು ಈಗ ವಿಸರ್ಜಿಸಿದ್ದೇವೆ. ಯಾವುದನ್ನೂ ಮನಸ್ಸಿಗೆ ತಂದುಕೊಳ್ಳದೆ ಕೆಲಸವನ್ನು ಸುಸೂತ್ರವಾಗಿಸಿ'' ಎಂದು ಬಿಟ್ಟಿದೇವ ಎದ್ದುನಿಂತ. ಉಳಿದವರೂ ಎದ್ದು ನಿಂತರು. ರಾಜಕುಟುಂಬ ಅರಮನೆಯೊಳಕ್ಕೂ ಉಳಿದವರು ತಮ್ಮ ತಮ್ಮ ಕೆಲಸದತ್ತಲೂ, ಬಿಡಾರದತ್ತಲೂ, ವಸತಿಗಳತ್ತಲೂ ಹೊರಟರು.

ಬೆಳಗಿನ ಜಾವವೇ ಮಹಾರಾಜ, ಪಟ್ಟಮಹಾದೇವಿಯರಿಗೆ ಮಂಗಳ ಸ್ನಾನವಾಗಬೇಕಾಗಿತ್ತು. ಮಾಚಿಕಬ್ಬೆ ಮತ್ತು ಪ್ರಧಾನಿಗಳ ಧರ್ಮಪತ್ನಿ ಲಕ್ಕಲದೇವಿಯರು ಎಣ್ಣೆಶಾಸ್ತ್ರ ಮಾಡಿದರು. ಉಳಿದ ರಾಣಿಯರೂ ಮಂಗಳಸ್ನಾನ ಮಾಡಬೇಕೆಂದು ಬಿನ್ನವಿಸಲಾಯಿತು.

ಮಂಗಳಸ್ನಾನ ಮುಗಿಸಿ ಶ್ರೀಮದಾಚಾರ್ಯರು ಕಳುಹಿಸಿದ್ದ ನೂತನ ವಸ್ತ್ರಧಾರಣೆ ಮಾಡಿಕೊಂಡು ದೇವಮಂದಿರಕ್ಕೆ ಬಿಜಯ ಮಾಡಿಸಲು ರಾಜದಂಪತಿಗಳು ಸಿದ್ಧರಾದರು. ಇಡೀ ವೇಲಾಪುರಿಯೇ ಮಂಗಳವಾದ್ಯಗಳಿಂದ ಮೊಳಗುತ್ತಿತ್ತು. ಜಾತಿ, ಮತ ಭೇದವಿಲ್ಲದೆ ವೇಲಾಪುರಿಯ ಜನರೆಲ್ಲ

ಶುಭ್ರಸ್ನಾತರಾಗಿ, ಶುಭ್ರವಸ್ತ್ರಧಾರಣೆ ಮಾಡಿ ದೇವಮಂದಿರದತ್ತ ಪಾದ ಬೆಳೆಸಿದರು. ಇಡೀ ವೇಲಾಪುರಿಯೇ ಉತ್ಸಾಹದಿಂದ ತುಂಬಿ ತುಳುಕುತ್ತಿತ್ತು. ಬರೀ ರಾಜಬೀದಿಯಷ್ಟೇ ಅಲ್ಲ ಸಂದುಗೊಂದುಗಳೂ ಶುಭ್ರವಾಗಿ ರಂಗೋಲಿಯಿಂದ ಬೆಳಗುತ್ತಿದ್ದವು. ಭೂಮಿದೇವಿಯೇ ಸರ್ವಾಲಂಕಾರ ಭೂಷಿತಳಾಗಿ ಬೆಳಗುತ್ತಿದ್ದಾಳೆ ಎಂಬ ಭಾವನೆ ಮೂಡುವಂತೆ ನಗರದ ಮನೆ ಮನೆಯೂ ಅಲಂಕೃತವಾಗಿತ್ತು. ಹಿಂದಿನ ಸೂರ್ಯಸ್ತಮಾನ ಸಮಯದಿಂದಲೇ ದೇವಮಂದಿರದಲ್ಲಿ ನೂತನ ವಿಗ್ರಹಕ್ಕೆ ಅಭಿಷೇಕ ಪೂಜಾದಿಗಳು, ಜಲ ಧಾನ್ಯಾಧಿವಾಸಗಳು ಮೊದಲಾದುವೆಲ್ಲ ನಡೆಯುತ್ತಿದ್ದವು. ದೇವಮಂದಿರದ ಕಲ್ಯಾಣಮಂಟಪ ಬಹುಮಟ್ಟಿಗೆ ನಾಮಧಾರಿಗಳಿಂದಲೇ ತುಂಬಿತ್ತು. ಉಳಿದವರು ಇರಲಿಲ್ಲವೆಂದಲ್ಲ. ನಾಮಧಾರಿಗಳಿಗೆ ಅಗ್ರಸ್ಥಾನವಿತ್ತೆಂದು ಮಾತ್ರ ಹೇಳಬಹುದು. ದೇವಮಂದಿರದ ಹೊರವಲಯದಲ್ಲಿ ಸುತ್ತಲೂ ಹಾಕಿದ್ದ ವಿಸ್ತಾರವಾದ ಕಾವಣದದಲ್ಲಿ ಜನ ತುಂಬಿ ನಿಂತಿತ್ತು.

ಪ್ರತಿಷ್ಠಾಪನೋತ್ಸವ ನೆರವೇರಿಸಲು ಶುಭ್ರರಾದ ರಾಜದಂಪತಿಗಳು ಸಕಲ ರಾಜಮರ್ಯಾದೆಯೊಡನೆ ಕಾಲ್ನಡಿಗೆಯಲ್ಲಿ ಲಾಂಛನ ಸಮೇತರಾಗಿ ಬಂದರು. ಅವರಿಗೂ ರಾಜಕುಟುಂಬಕ್ಕೂ ಆಸನಗಳು ಪೂರ್ವನಿಯೋಜಿತವಾಗಿದ್ದವು. ಅವರುಗಳು ಅಲ್ಲಿ ಮಂಡಿಸಿದರು. ಆಗಮಿಕ ಪಂಚರು ಶಾಸ್ತ್ರೋಕ್ತ ರೀತಿಯಲ್ಲಿ ಸರ್ವಕಲಾಪಗಳನ್ನೂ ರೂವಾರಿಗಳ ನೆರವಿನಿಂದ ಮಾಡಿಸಿ ಪೀಠದಲ್ಲಿ ಸುಭದ್ರಗೊಳಿಸಿದ್ದ ಮೂರ್ತಿಗೆ ಪ್ರಾಣಪ್ರತಿಷ್ಠೆಯನ್ನು ಮಾಡಿಸುವುದು ಉಳಿದಿತ್ತು.

ಎಲ್ಲ ಭಕ್ತರ ಒಪ್ಪಿಗೆಯನ್ನು ನಿರೀಕ್ಷಿಸಿ ಆಗಮಿಕ ನಾಯಕರು, "ಪ್ರಾಣ ಪ್ರತಿಷ್ಠೆಗೆ ಒಪ್ಪಿಗೆಯೇ? ಮುಹೂರ್ತ ಸನ್ನಿಹಿತವಾಯಿತು" ಎಂದು ಕೇಳಿದಳು.

ಸ್ಥಪತಿ, ಆತನ ಮಗ ಮತ್ತು ಮೂರು ನಾಲ್ಕು ಜನ ರೂವಾರಿಗಳು ಸಹ ಮಂಗಳಸ್ನಾನ ಮಾಡಿ ವಿಗ್ರಹದ ನಿಲುವು ಕ್ರಮವಾಗಿರಬೇಕೆಂದು ಅದನ್ನು ಹಿಡಿದು ನಿಂತಿದ್ದರು.

ಜನರ ಒಕ್ಕೊರಲಿನ ಒಪ್ಪಿಗೆ ಸಿಕ್ಕಿತು. ವೇದೋಕ್ತ ಮಂತ್ರಗಳಿಂದ ಚೆನ್ನಕೇಶವ ಸ್ವಾಮಿಯ ಶಿಲಾವಿಗ್ರಹದಲ್ಲಿ ರಾಜದಂಪತಿಗಳ ದ್ವಾರ ಪ್ರಾಣಪ್ರತಿಷ್ಠೆ ಮಾಡಿಸಲಾಯಿತು. ಮೂರ್ತಿಯು ಅಚಲವಾಗಿ ನಿಲ್ಲುವಂತೆ ರೂವಾರಿಗಳು ಅದನ್ನು ಅಷ್ಟಬಂಧನದಿಂದ ಭದ್ರಗೊಳಿಸಿದರು. ಮಂಗಳವಾದ್ಯಗಳು ಮೊಳಗಿದವು.

ಆಗಮಿಕ ನಾಯಕರು, "ಶ್ರೀಮದಾಚಾರ್ಯರ ಆದೇಶಾನುಸಾರವಾಗಿ ಈ ಚೆನ್ನಕೇಶವಸ್ವಾಮಿಯ ವಿಗ್ರಹವನ್ನು ಸ್ಥಾಪಿಸಿ ಇದಕ್ಕೆ ಪ್ರಾಣಪ್ರತಿಷ್ಠೆಯನ್ನು ನಿಯೋಜಿತ ಅಭಿಜಿನ್ ಮುಹೂರ್ತದಲ್ಲಿ ವಿಧಿಪೂರ್ವಕ ಮಾಡಲಾಯಿತು. ಪೊಯ್ಸಳ ಮಹಾರಾಜರು ಈಚಿನ ವರ್ಷಗಳಲ್ಲಿ ಗಳಿಸಿದ ವಿಜಯಗಳ, ಅದರಲ್ಲಿಯೂ ತಲಕಾಡು ಗೆದ್ದು ಗಂಗಾವಾಡಿಯನ್ನು ಚೋಳರಿಂದ ಮರಳಿ ಪಡೆದುಕೊಂಡು ಶುಭ ಅವುಸರದ ಸಂಕೇತವಾಗಿ ಈ ಸ್ವಾಮಿಗೆ ವಿಜಯನಾರಾಯಣ ಎಂಬ ಅಭಿದಾನವನ್ನು ನೀಡಲಾಗುವುದು. ಆ ಅಭಿದಾನ ನೀಡುವ ಮುನ್ನ ಪ್ರತಿಷ್ಠಾಪಿತವಾದ ಈ ಸ್ವಾಮಿಗೆ ಪಂಚಾಮೃತ ಅಭಿಷೇಕವನ್ನು ಪಂಚನದೋಕದಿಂದ ಅಭಿಷೇಕವನ್ನೂ ಒಳಗೊಂಡ ಷೋಡಶೋಪಚಾರ ಪೂಜೆಯನ್ನು ಮಾಡಲು ಈಗ ಅಪ್ಪಣೆ ಬೇಡುತ್ತೇನೆ" ಎಂದರು.

ಜನ ಹರ್ಷೋದ್ಗಾರದಿಂದ ಒಪ್ಪಿಗೆ ಸೂಚಿಸಿದರು. ಜಾಗಟೆ, ನಗಾರಿ, ಘಂಟೆಗಳು ನಾದಗೈದವು. ಆಗಮಿಕರು ಹೇಳಿದಂತೆ ಪೂಜೆ ಆರಂಭಿಸಿದರು. ಕ್ಷೀರ, ದಧಿ, ಮಧು, ಘೃತ, ಫಲ, ಶರ್ಕರೆಯೊಡಗೂಡಿದ

ಮಹಾಭಿಷೇಕ ನಡೆಯಿತು. ಕಾವೇರಿ, ಕಪಿಲ, ತುಂಗ, ಭದ್ರೆ, ವರದೆಯರ ನೀರಿನಿಂದ ಸ್ವಾಮಿಗೆ ಮಂಗಳಸ್ನಾನ ಸಹ ಆಯಿತು. ನಂತರ ಗಂಧ, ಅಕ್ಷತೆ, ಯಜ್ಞೋಪವೀತ, ಹರಿದ್ರಾ, ಕುಂಕುಮ, ಸಿಂಧೂರಗಳಿಂದ ಅಲಂಕರಿಸಿ ಪುಷ್ಪಾರ್ಚನೆ, ಸಹಸ್ರನಾಮಾರ್ಚನೆ, ಧೂಪ, ದೀಪ, ನೈವೇದ್ಯಗಳು, ಆರತಿಗಳು ನಡೆದವು. ಕಡೆಗೆ ಸೈದ್ಧಾಂತಿಕ ಸೇವೆಗಳು ಪ್ರತಿಷ್ಠಾಪಿತ ಸ್ವಾಮಿಗೆ ಆಗಬೇಕು. ಅದಕ್ಕಾಗಿ ಯಾರೂ ಯಾರೂ ಏನೇನು ಎಂಬುದೆಲ್ಲವೂ ಪೂರ್ವ ನಿಶ್ಚಿತವಾಗಿತ್ತು. ಅದರಂತೆ ನಾಲ್ಕು ವೇದಗಳ ಸೇವೆ ಮಂತ್ರಪುಷ್ಪದ ನಂತರ ನೆರವೇರಿದವು. ಸಂಗೀತ ಸೇವೆ ನಡೆಯಲಿ ಎಂದಾಗ ಧ್ವನಿ ಹೊರಡಲಿಲ್ಲ. ಬರೀ ವಾದ್ಯಗಳು ಇದ್ದವು. ಹಾಡುವವರು ಯಾರೂ ಇರಲಿಲ್ಲ. ರಾಜದಂಪತಿಗಳು ಅತ್ತ ಇತ್ತ ನೋಡಿದರು. ಯಂತ್ರ ಚಾಲಿತವೆಂಬಂತೆ ಈವರೆಗಿನ ಎಲ್ಲ ಕೆಲಸಗಳೂ ನಡೆದಿರುವಾಗ ಇದು ತಡವಾದರೆ ಸಹಿಸಲುಂಟೆ?

"ಯಾರವರು ? ಸಂಗೀತ ಸೇವೆಗೆ ನಿಯೋಜಿತರಾಗಿದ್ದವರು ?" ಮಹಾರಾಜ ಕೇಳಿದ.

"ಕೊಯತೂರಿನ ಆನಂದಾಳ್ವಾರರು."

"ಅವರೆಲ್ಲಿ ?"

"ಬೆಳಗಿನಿಂದ ಇಲ್ಲೇ ಇದ್ದರು. ಒಳ್ಳೆ ಸಮಯದಲ್ಲಿ ಹೀಗಾಯಿತೆ ?" ಎಂದು ಆಗಮಿಕರು ಕೈ ಕೈ ಹಿಸುಕಿಕೊಂಡರು.

ತನ್ನ ಹಿಂದೆ ನಿಂತಿದ್ದ ಕುವರ ಬಿಟ್ಟಿಗನನ್ನು ತನ್ನ ಬಳಿಗೆ ಬರುವಂತೆ ಸಂಕೇತಿಸಿದ ಪಟ್ಟಮಹಾದೇವಿ, "ಮರಿಡಣ್ಣಾಯಕ ತಂಬೂರಿಯನ್ನು ನುಡಿಸಲಿ. ಶ್ರುತಿ ಶುದ್ಧವಾಗಿರಲಿ" ಎಂದಳು. ಅವನು ಒಡನೆಯೇ ಶ್ರುತಿ ಮಾಡಿ ತಂಬೂರಿಯನ್ನು ನುಡಿಸತೊಡಗಿದ.

ಪಟ್ಟಮಹಾದೇವಿ ಶಾನ್ತಲದೇವಿ ತನ್ನ ಸುಮಧುರ ಕಂಠದಿಂದ ಶ್ರುತಿಲೀನವಾಗಿ ಹಾಡಿದಳು. ಇಡೀ ಜನಸ್ತೋಮ ನಿಬ್ಬೆರಗಾಗಿ ನಿಶ್ಶಬ್ದವಾಗಿ ಆ ದೇವಗಾನವನ್ನು ಆಲಿಸಿತು. ಹಾಡಿದವರಾರೆಂದು ಬಹುಜನಕ್ಕೆ ಮೊದಲು ತಿಳಿಯಲಿಲ್ಲ. ಆದರೆ ಆ ಗಾನಮಾಧುರ್ಯ ಅವರನ್ನು ದೇವಲೋಕಕ್ಕೆ ಕರೆದೊಯ್ಯಿತು. ಚೆನ್ನಕೇಶವಸ್ವಾಮಿ ನಿಜವಾಗಿ ಸುಪ್ರೀತನಾದ.

ಪಟ್ಟಮಹಾದೇವಿ ಹಾಡಿದ ಹಾಡು ಅಶುಕವಿತ್ವ. ಅದರ ಸಾರಾಂಶ ಇಷ್ಟು: ಬೇರೆ ಬೇರೆ ಹೆಸರುಗಳಿಂದ ಬೇರೆ ಬೇರೆ ಮತಾವಲಂಬಿಗಳು ನಿನ್ನನ್ನು ಕರೆಯುತ್ತಾರೆ. ಕಾಣುತ್ತಾರೆ. ಆದರೆ ಸರ್ವವ್ಯಾಪಿಯಾದ ನೀನೇ ಆ ಎಲ್ಲ ಸ್ವರೂಪಧಾರಣೆ ಮಾಡಿ, ಕಾಣಿಸಿಕೊಂಡು ಭಕ್ತರನ್ನು ತೃಪ್ತಿಗೊಳಿಸುವವನು. ಎಲ್ಲರನ್ನೂ ಚೆನ್ನಾಗಿ ಕಾಪಾಡು.

ಪಟ್ಟಮಹಾದೇವಿಗೆ ಏನು ಹೊಳೆಯಿತೋ "ಡಣ್ಣಾಯಕ ಮುರಜವನ್ನು ನುಡಿಸುತ್ತೀಯಾ?" ಎಂದು ಕೇಳಿದಳು.

"ನುಡಿಸಿಯೇನು ? ಆದರೆ ಏತಕ್ಕೆ ?"

"ಹೇಳುತ್ತೇನೆ. ಎರಡಿದೆಯಲ್ಲ ಒಂದನ್ನು ಇಲ್ಲಿ ಕೊಡು. ನಾನು ನುಡಿಸುತ್ತೇನೆ. ನೀನು ಅನುಸರಿಸುತ್ತಾ ಹೋಗು. ನಂತರ ನೀನೆ ಹೊಂದಿಕೊಳ್ಳುವೆ. ನೃತ್ಯ ಸೇವೆಗೂ ಬೇರೆ ಯಾರೂ ಇದ್ದಂತೆ ಇಲ್ಲ. ಸನ್ನಿಧಾನ ಅಪ್ಪಣೆ ಕೊಡಬೇಕು. ಈ ಸೇವೆ ಸಲ್ಲದೆ ಪೂಜೆ ಪರಿಪೂರ್ಣವಾಗುವುದಿಲ್ಲ. ಇಷ್ಟು ದೊಡ್ಡರಾಜರು ನೆರವೇರಿಸಿದ ಪ್ರತಿಷ್ಠಾಪನೆಯಲ್ಲಿ ಸೇವೆಗಳ ಕೊರತೆ ಇತ್ತು ಎಂಬ ಮಾತು ಬರಬಾರದು."

ಬಿಟ್ಟಿದೇವ ಒಪ್ಪಿಗೆ ಸೂಚಿಸಿದ.

ಪಟ್ಟಮಹಾದೇವಿ, ರಾಣಿ ಬಮ್ಮಲದೇವಿಯನ್ನು ಕರೆದು ತಾನು ನೃತ್ಯಸೇವೆ ಮಾಡಿ ಹಿಂತಿರುಗುವವರೆಗೆ ಮಹಾರಾಜರ ಪಕ್ಕದಲ್ಲಿ ತಾನಿದ್ದ ಸ್ಥಾನದಲ್ಲಿರಬೇಕೆಂದು ಸೂಚಿಸಿ ನೃತ್ಯ ಸೇವೆಗೆ ನಿಗದಿಯಾಗಿದ್ದ ಸ್ಥಾನಕ್ಕೆ ಸುಕನಾಸಿಯ ಮುಂದೆ ಪ್ರತಿಷ್ಠಾಪಿತ ಮೂರ್ತಿಗಿದಿರಾಗಿ ಮುರಜೆಯೊಂದಿಗೆ ನಿಂತಳು. ತಾನೇ ಹಾಡುತ್ತ ಮುಜರವನ್ನು ಬಾಜಿಸುತ್ತಾ ತಾಂಡವೇಶ್ವರಿಯಂತೆ ಆಮೋದ ಭರಿತಳಾಗಿ ಲಾಸ್ಯ ತುಂಬಿ ಜಗನ್ಮೋಹಿನಿಯಂತೆ ನೃತ್ಯ ಮಾಡಿದಳು. ಅವಳ ಹೆಜ್ಜೆಯ ಗತಿ ಹಿಡಿದು ಕುವರ ಬಿಟ್ಟಿಗ ಅಲ್ಲಿದ್ದ ಮುರಜವನ್ನು ನುಡಿಸಿದ. ತನ್ನ ಪಾದಗಳಲ್ಲಿ ತಾಳ ಹಿಡಿದು ಗತಿ ಸೂಚಕ ತಾಳ ಹಾಕಿದ. ಇಬ್ಬರೂ ಕಲ್ಪನಾಲೋಕಕ್ಕೆ ತೆರಳಿಬಿಟ್ಟರು. ನೃತ್ಯ ಸೇವೆಯಿಂದ ಚೆನ್ನಕೇಶವ ಸುಂಪ್ರೀತನಾದ. ಗರ್ಭಗುಡಿಯಿಂದ ಗೆಜ್ಜೆಯ ನಾದ ಹೊಮ್ಮತೊಡಗಿತು. ಸ್ವಾಮಿ ಧರಿಸಿದ್ದ ಪುಷ್ಪಮಾಲಿಕೆ ಹಾಗೆಯೇ ಗೆಜ್ಜೆ ನಾದಕ್ಕೆ ಹೊಂದಿಕೊಂಡು ಹಾರುತ್ತ ಉಳಿಯುತ್ತ ಬಲಭುಜದಿಂದ ಜಾರಿತು. ಆಗಮಿಕರು ಆ ಮಾಲೆಯನ್ನು ಕೈಗೆತ್ತಿಕೊಂಡು ನೃತ್ಯ ಸೇವೆ ಮುಗಿದ ಕೂಡಲೇ ಪಟ್ಟಮಹಾದೇವಿಗೆ ಇತ್ತು, "ಚೆನ್ನಕೇಶವಸ್ವಾಮಿ ಕರುಣಿಸಿದ ಪ್ರಸಾದ. ಸ್ವೀಕರಿಸಬೇಕು" ಎಂದರು. ಮಹಾರಾಜನತ್ತ ತಿರುಗಿ, "ಮಹಾಸನ್ನಿಧಾನದಲ್ಲಿ ನಮ್ಮದೊಂದು ಮನವಿ ಇದೆ. ಶ್ರೀಮದಾಚಾರ್ಯರು ನಮಗೆ ಸೂಚಿಸಿದ್ದರು. ಸನ್ನಿಧಾನಕ್ಕೂ ತಿಳಿಸಿರಬಹುದು. ಸ್ವಾಮಿಯ ಕೊರಳಿನಿಂದ ಮಾಲೆ ಹೀಗೆ ಬಲಭುಜದ ಮೂಲಕ ಜಾರಿದರೆ ಪ್ರತಿಷ್ಠಾಪನೆಯು ಶಾಸ್ತ್ರೋಕ್ತವೆಂದು ಭಾವಿಸಿ. ಆ ಸಮಯಕ್ಕೆ ಬೇರೆ ಬೇರೆ ಗ್ರಾಮಗಳ ಇಬ್ಬರು ಚಮ್ಮಾರರು ಸ್ವಾಮಿಯ ಪಾದಗಳಿಗೆ ರಕ್ಷೆಗಳನ್ನು ಮಾಡಿ ತರುತ್ತಾರೆ. ಅವರು ತರುವ ಆ ಪಾದರಕ್ಷೆಗಳನ್ನು ಸಕಲ ಮರ್ಯಾದೆಗಳ ಸಮೇತ ಒಳಕ್ಕೆ ತಂದು ಸ್ವಾಮಿಯ ಪಾದದ ಬಳಿ ಇಡಿಸಿ. ಪ್ರತಿವರ್ಷದಲ್ಲೂ ಈ ದಿವಸ ಚಮ್ಮಾರರಿಗೂ ದೇವದರ್ಶನಾವಕಾಶ ಕೊಡಿ ಎಂದು ಆದೇಶವಿತ್ತಿದ್ದಾರೆ" ಎಂದರು.

ಹೊರಗಡೆ ನಗಾರಿಗಳ ಶಬ್ದ ಆಕಾಶವನ್ನು ಭೇದಿಸಿದವು.

"ಚೆನ್ನಕೇಶವ ಸ್ವಾಮಿಯ ಪಾದರಕ್ಷೆಗಳು ಬಂದಿವೆ. ಅದರಿಂದಲೇ ನಗಾರಿಯ ನಾದ" ಎಂದು ಬಿಟ್ಟಿದೇವ ಹೇಳಿದ.

ಪಟ್ಟಮಹಾದೇವಿ, ಕುವರ ಬಿಟ್ಟಿಯಣ್ಣನ ಸಮೇತ ಆಗಮಿಕರ ನಾಯಕರನ್ನು ಮುಂದಿಟ್ಟುಕೊಂಡು ದೇವಮಂದಿರದ ಹೊರಕ್ಕೆ ಬಂದಳು. ಅವು ಬಂದಾಗ ಅವನ್ನು ಮೊದಲು ಇಡಿಸಲು ಎರಡು ಪೀಠಗಳು ದೇವಸ್ಥಾನದ ಮಹಾದ್ವಾರದಿದಿರು ಇಡಲ್ಪಟ್ಟಿದ್ದವು. ಕೆಂಪು ವಸ್ತ್ರ ಸುತ್ತಿದ ಒಂದೊಂದು ಪಾದರಕ್ಷೆಯನ್ನು ಒಬ್ಬೊಬ್ಬರು ತಲೆಯ ಮೇಲೆ ಹೊತ್ತು ತಂದು ನಿಯೋಜಿತ ಪೀಠಗಳ ಮೇಲೆ ಇಟ್ಟರು. ಅವಕ್ಕೆ ಸುತ್ತಿದ ವಸ್ತ್ರವನ್ನು ಬಿಚ್ಚುವಂತೆ ಆಗಮಿಕರು ಸೂಚಿಸಿದರು.

ಪಟ್ಟಮಹಾದೇವಿ ಅವುಗಳ ಬಳಿ ಸಾರಿ ವೀಕ್ಷಿಸಿ ಅವಕ್ಕೆ ಪ್ರದಕ್ಷಿಣೆ ಹಾಕಿದಳು.

"ನೋಡಿದೆಯಾ ಬಿಟ್ಟಿ ಇವು ಎರಡನ್ನು ಬೇರೆ ಬೇರೆ ಗ್ರಾಮದ ಚಮ್ಮಾರರು ಮಾಡಿದ್ದಾರೆ. ಒಬ್ಬರಿಗಿನ್ನೊಬ್ಬರು ಪರಿಚಯವಿಲ್ಲ. ಆದರೆ, ರೂಪ, ಆಕಾರ, ಅಳತೆ, ರೀತಿ, ಉಪಯೋಗಿಸಿರುವ ಚರ್ಮ ಎಲ್ಲ ಒಂದೇ ರೀತಿ ಇವೆ. ಇದನ್ನು ಸಿದ್ಧ ಮಾಡಿದ ಇಬ್ಬರೂ ದೇವರ ಆದೇಶದಂತೆ ಒಂದೊಂದು ಪಾದರಕ್ಷೆಯನ್ನು ಮಾಡಿತಂದಿದ್ದಾರೆ. ನಿಜವಾಗಿ ಇದೊಂದು ಅದ್ಭುತವಲ್ಲವೆ ?" ಎಂದಳು ಶಾನ್ತಲದೇವಿ.

“ಅದ್ಭುತವೆ. ಅದಕ್ಕಿಂತ ಅದ್ಭುತ ಎಂದರೆ ಈ ವಿಷಯವನ್ನು ನಿಮಗೆ ಬಹಳ ಮೊದಲೇ ಶ್ರೀಮದಾಚಾರ್ಯರು ಹೇಳಿದುದು” ಎಂದ ಬಿಟ್ಟಿಯಣ್ಣ.

ಆಗಮಿಕರು ಅದಕ್ಕೆ ಮಂತ್ರೋದಕವನ್ನು ಸಂಪ್ರೋಕ್ಷಿಸಿ, ಅದನ್ನು ತಂದವರಿಗೂ ಸಂಪ್ರೋಕ್ಷಿಸಿ, ಇದನ್ನು ನೀವಿಬ್ಬರೂ ಇಲ್ಲಿಗೆ ತಂದಂತೆಯೇ ಶಿರಸ್ಸಿನ ಮೇಲೆ ಹೊತ್ತು ದೇವಮಂದಿರಕ್ಕೆ ಒಂದು ಪ್ರದಕ್ಷಿಣೆ ಹಾಕಿ ಒಳಗೆ ತಂದು ದೇವರ ಸಾನ್ನಿಧ್ಯದಲ್ಲಿ ಇಡಬೇಕು” ಎಂದರು.

ಹತ್ತಿರದಲ್ಲಿ ಇದ್ದ ಒಬ್ಬ ನಾಮಧಾರಿ, “ಏನು ಚಮ್ಮಾರರು ದೇವಮಂದಿರದೊಳಕ್ಕೆ ಬರುವುದೆ?” ಎಂದು ಪ್ರಶ್ನಿಸಿದ.

“ಹೌದು. ಈ ಪಾದರಕ್ಷೆಗಳು ಕೇಶವದೇವರ ಅಪ್ಪಣೆಯಂತೆ ಸಿದ್ಧವಾದವು” ಎಂದರು ಆಗಮಿಕರು.

“ಹೌದಲ್ಲವೆ ? ಆ ದೇವರು ಬಂದು ನಿಮಗೆ ಹೇಳಿದನೇನು ? ಇನ್ನೂ ಈಗ ತಾನೆ ಪ್ರಾಣಪ್ರತಿಷ್ಠೆ ಆಗಿದೆ. ಅದಕ್ಕೆ ಮುಂಚೆ ಈ ದೇವರಿಗೆಲ್ಲಿ ಅಸ್ತಿತ್ವವಿತ್ತು ?” ನಾಮಧಾರಿಯ ಧ್ವನಿ ಏರಿತ್ತು.

“ಕೇಶವಸ್ವಾಮಿ ಹಾಗಾದರೆ ಈಗ ಸೃಷ್ಟಿಯಾದನೆ ? ನಿಮ್ಮ ಮಾತು ವಿಚಿತ್ರವಾಗಿದೆ. ಮಾನವನ ಸೃಷ್ಟಿಗೆ ಕಾರಣನಾದ ಕೇಶವಸ್ವಾಮಿಯ ಅಸ್ತಿತ್ವಕ್ಕೆ ಪೆಟ್ಟು ಕೊಡುವ ನಿಮ್ಮ ನಂಬಿಕೆಗೆ ಆಧಾರವೇ ಇಲ್ಲವಾಯಿತೆ ? ನಿಮ್ಮ ಶರೀರದಾದ್ಯಂತ ತುಂಬಿ ನಿಂತಿರುವ ಈ ನಾಮಗಳಿಗೇನು ಬೆಲೆ ? ನಂಬಿಕೆಯಿಲ್ಲದ, ಮನಃಶುದ್ಧಿ ಇಲ್ಲದ ನಿಮಗೆ ಇದರ ವಿಷಯವೇ ಅರ್ಥವಾಗುವುದಿಲ್ಲ.”

“ನನಗೆ ಅರ್ಥವಾಗುವುದಿಲ್ಲವೆ ? ಬೇಡ -ಇನ್ನೂ ನೂರು ಜನ ಇದ್ದಾರೆ. ನೂರಾರು ಜನರೂ ಇರಬಹುದು. ಅವರನ್ನೆಲ್ಲ ಬರಮಾಡಿ ಕೇಳಿ. ಚಮ್ಮಾರರನ್ನು ಒಳಗೆ ಬಿಡೆಂದು ಯಾವ ಕೇಶವದೇವ ಹೇಳುತ್ತಾನೆ ? ಅವರು ಹೇಳಲಿ. ಆತುರ ಪಡಬೇಡಿ. ಈ ಪವಿತ್ರ ಕೆಲಸಮಾಡಿ ನೀವು ಈಗ ತಾನೆ ಪ್ರಾಣಪ್ರತಿಷ್ಠೆಗೊಂಡ ದೇವರನ್ನು ಅಪವಿತ್ರಗೊಳಿಸಬೇಡಿ. ಈಗ ಬಂದೆ” ಎಂದು ಗುಂಪಿನಲ್ಲಿ ಮಾಯವಾದ.

ನಾಲ್ಕೇ ಕ್ಷಣದಲ್ಲಿ ಸಿದ್ಧಪಡಿಸಿಕೊಂಡ ಸೈನ್ಯದಂತೆ ಒಂದು ದೊಡ್ಡ ತಂಡವನ್ನೇ ನಾಮಧಾರಿ ತಂದ, “ದಾರಿ, ದಾರಿ” ಎಂದು ಅಬ್ಬರಿಸುತ್ತಾ. ಆ ತಂಡ ಬಂದು ಮಹಾದ್ವಾರದಿಂದ ಪಾದರಕ್ಷೆಗಳವರೆಗೆ ಅಡ್ಡಗಟ್ಟಿ ನಿಂತಿತು. “ಇದನ್ನು ಒಳಕ್ಕೊಯ್ಯ ಬೇಕಾದರೆ ನಮ್ಮನ್ನು ತುಳಿದುಕೊಂಡು ಹೋಗಬೇಕು. ಎಲ್ಲರೂ ನಿಂತಲ್ಲೇ ಕೂತು ಬಿಡಿ” ಎಂದು ಆ ತಂಡದ ನಾಯಕ ನಾಮಧಾರಿ ಅಬ್ಬರಿಸಿದ.

ಆಗಮಿಕ ಪಟ್ಟಮಹಾದೇವಿಯತ್ತ ನೋಡಿದ.

ಕುವರ ಬಿಟ್ಟಿಯಣ್ಣನ ಕಿವಿಯಲ್ಲಿ ಶಾನ್ತಲದೇವಿ ಏನನ್ನೋ ಹೇಳಿದಳು. ಅವನು ಅಲ್ಲಿಂದ ಹೊರಟುಹೋದ.

ಪಟ್ಟಮಹಾದೇವಿ, “ಈ ಪಾದರಕ್ಷೆಯನ್ನು ಸಿದ್ಧಮಾಡಿರುವ ಚಮ್ಮಾರರು ನನ್ನ ಬಳಿ ಬಂದು ನಿಲ್ಲಲಿ” ಎಂದಳು.

ಅವರು ತುಸು ಸಂಕೋಚದಿಂದ ಬಂದು ನಿಂತರು.

“ಈ ಪಾದರಕ್ಷೆಯನ್ನು ಮಾಡಿತರಲು ನಿಮಗೆ ಅರಮನೆಯ ಆದೇಶವಿತ್ತೇ ?” ಎಂದು ಶಾನ್ತಲದೇವಿ ಕೇಳಿದಳು.

"ಇಲ್ಲ" ಎಂದು ಇಬ್ಬರೂ ಹೇಳಿದರು.

"ಹಾಗಾದರೆ ಇಲ್ಲಿಗೇಕೆ ಇದನ್ನು ತಂದಿರಿ ?"

"ಆ ನಮ್ಮಪ್ಪ ಕನಸಿನಲ್ಲಿ ಬಂದು ಅಪ್ಪಣೆ ಮಾಡಿದ. ಮಾಡಿ ತಂದೆವು" ಎಂದು ಇಬ್ಬರೂ ಹೇಳಿದರು.

"ಏನು ಅಪ್ಪಣೆ ಮಾಡಿದ ?"

"ನಾನು ಕೇಶವದೇವ. ವೇಲಾಪುರಿಯಲ್ಲಿ ಶಕವರ್ಷ ೧೦೩೯ಕ್ಕೆ ಸಲ್ಲುವ ಹೇವಳಂಬಿ ಸಂವತ್ಸರದ ಚೈತ್ರ ಶುದ್ಧ ಪಂಚಮಿ ಸ್ಥಿರವಾರದಲ್ಲಿ ಅಭಿಜಿನ್ ಮುಹೂರ್ತದಲ್ಲಿ ಸ್ಥಾಪಿತವಾಗುವ ಚೆನ್ನಕೇಶವದೇವನಲ್ಲಿ ನನ್ನ ಅಂಶ ಸೇರಿಕೊಳ್ಳುತ್ತದೆ. ಅಂದಿಗೆ ಸರಿಯಾಗಿ ಮುಹೂರ್ತದ ಸಮಯಕ್ಕೆ ಹೊಂದುವಂತೆ ಪಾದರಕ್ಷೆ ಸಿದ್ಧಪಡಿಸಿ ತರಬೇಕು. ಆದರೆ ಜೋಡಿ ಕೂಡದು. ನನ್ನ ಬಲಗಾಲಿನ ಅಳತೆ ತೆಗೆದುಕೊ. ಅದಕ್ಕೆ ಹೊಂದುವ ಒಂದು ಪಾದರಕ್ಷೆ ಸಿದ್ಧಮಾಡುವ ಕೆಲಸ ನಿನ್ನದು. ಆ ಪಾದರಕ್ಷೆ ಹೇಗಿರಬೇಕೆಂದು ನಾನು ನಂತರ ಹೇಳುತ್ತೇನೆ. ಈಗ ಅಳತೆ ತೆಗೆದುಕೊ ಎಂದು ಸ್ವಾಮಿ ಹೇಳಿದಂತೆ ಅಳತೆ ತೆಗೆದುಕೊಂಡೆ. ಆಮೇಲೆ ಸ್ವಾಮಿ ಯಾವ ಚರ್ಮ ಉಪಯೋಗಿಸಬೇಕು ? ಅದು ಎಷ್ಟು ಎತ್ತರ ಇರಬೇಕು ? ಮೇಲ್ಕಟ್ಟುಗಳು ಹೇಗಿರಬೇಕು ?ಉಂಗುಷ್ಟದ ಉಂಗುರ ಕುಣಿಕೆ ಹೇಗಿರಬೇಕು ? ಎಂದೆಲ್ಲ ವಿವರಿಸಿ, ಆ ದಿವಸ ಬೆಳಗಿನ ಜಾವ ಎದ್ದು, ಸ್ನಾನಮಾಡಿ ಒದ್ದೆವಸ್ತ್ರದಲ್ಲಿ ಇದನ್ನು ಹೊತ್ತು ನೀನೇ ಯಾರನ್ನೂ ಮುಟ್ಟದೆ ಕಾಲ್ನಡಿಗೆಯಲ್ಲಿ ವೇಲಾಪುರಿಗೆ ತಂದು ಮುಟ್ಟಿಸಬೇಕು. ನಾನು ಅದನ್ನು ಮೆಟ್ಟಿನೋಡಿ ಸರಿ ಎನ್ನುವವರೆಗೆ ನೀನು ಅದರೊಂದಿಗೆ ಇರಬೇಕು ಎಂದು ಅಪ್ಪಣೆ ಮಾಡಿದ. ಅದರಂತೆ ಮಾಡಿ ತಂದಿದ್ದೇನೆ" ಎಂದು ಉತ್ತರದ ಗ್ರಾಮದಿಂದ ಬಂದವನು ಹೇಳಿದ.

ಅದೇ ಮಾತನ್ನು ದಕ್ಷಿಣದಿಂದ ಬಂದಿದ್ದ ಚಮ್ಮಾರ ಹೇಳಿದ.

"ಇನ್ನೊಂದು ಪಾದರಕ್ಷೆ ಯಾರು ಮಾಡುತ್ತಾರೆ ಎಂದು ನೀವು ಕೇಳಲಿಲ್ಲವೆ ?"

"ಕೇಳಿದೆವು. ನಿಮಗೇಕೆ ಆ ವಿಷಯ. ಹೇಳಿದಷ್ಟು ಮಾಡಿ. ಆಗದಿದ್ದರೆ ಹೇಳಿ, ಬೇರೆ ಚಮ್ಮಾರನಿಗೆ ಹೇಳುತ್ತೇನೆ ಎಂದು ಸ್ವಾಮಿ ನುಡಿದ."

"ಅಂದರೆ ನೀವಿಬ್ಬರೂ ಈ ಮೊದಲು ಒಬ್ಬರನ್ನೊಬ್ಬರು ನೋಡಲಿಲ್ಲ ?"

"ಇಲ್ಲ. ಇದೇ ಈಗ ಸ್ವಲ್ಪ ಹೊತ್ತಿಗೆ ಮುಂಚೆ ಕಂಡುದಷ್ಟೆ"

ಇಷ್ಟು ಮಾತು ನಡೆವಷ್ಟರಲ್ಲಿ ಮಹಾರಾಜ ಮತ್ತು ಬಮ್ಮಲದೇವಿ ಅಲ್ಲಿಗೆ ಬಂದರು. ಅವರೊಂದಿಗೆ ಶಸ್ತ್ರಸಜ್ಜಿತರಾದ ಹತ್ತಾರು ಕಾಪಿನವರಿದ್ದರು.

ಶಾನ್ತಲದೇವಿ ವಿಷಯವನ್ನು ಮಹಾರಾಜನಿಗೆ ಅರುಹಿದಳು.

ಅವನು ಆ ನಾಮಧಾರಿಯನ್ನು ಕರೆದು, "ಶ್ರೀಮದಾಚಾರ್ಯರು ನಮಗೆ ಹೇಗೆ ಅಪ್ಪಣೆ ಮಾಡಿದ್ದಾರೆಯೋ ಹಾಗೆ ನಾವು ಕಾರ್ಯ ನಿರ್ವಹಿಸುವವರು. ನಮಗೆ ಅವರ ಆದೇಶದಲ್ಲಿ ಸಂಪೂರ್ಣ ನಂಬಿಗೆಯುಂಟು. ಅವರ ಆದೇಶಕ್ಕೆ ವಿಘ್ನವುಂಟು ಮಾಡುವ ಯಾವ ಕೆಲಸಕ್ಕೂ ನಾವು ಅವಕಾಶವನ್ನು ಕೊಡುವುದಿಲ್ಲ. ಈಗ ನೀವುಗಳು ಅಡ್ಡಿ ಮಾಡದೆ ದಾರಿ ಬಿಡಿ" ಎಂದು ತುಸು ಬಿರುಸಾಗಿ ಹೇಳಿದ.

"ಇದು ಧರ್ಮಕ್ಕೆ ಸಂಬಂಧಿಸಿದುದು. ನಮಗೆ ಆ ಧರ್ಮದ ಸ್ವರೂಪ ಗೊತ್ತು. ನಾವು ಈ ದೇವಮಂದಿರವು ಅಪವಿತ್ರವಾಗಲು ಆವಕಾಶ ಕೊಡುವುದಿಲ್ಲ. ಸನ್ನಿಧಾನ ನಮ್ಮನ್ನು ಅಪಾರ್ಥ ಮಾಡಿಕೊಳ್ಳಬಾರದು. ಈ ದೇವಮಂದಿರವು ಭಕ್ತರದು; ಅರಮನೆಯ ಸ್ವತ್ತಲ್ಲ'' ಎಂದು ನಾಮಧಾರಿ ಮೊಂಡು ಧೈರ್ಯದಿಂದ ಹೇಳಿದ.

"ದೇವರ ಸಾನ್ನಿಧ್ಯದಲ್ಲಿ ಮೊಂಡುತನ ಸಲ್ಲದು. ನಿಮ್ಮನ್ನು ಚೆಂಡಾಡಿ ದಾರಿ ಬಿಡಿಸಿಕೊಂಡು ಹೋಗುವ ಶಕ್ತಿ ನಮ್ಮಲ್ಲಿದೆ. ಆದರೆ ಶ್ರೋತ್ರೀಯರ ರಕ್ತ ಚೆಲ್ಲಬಾರದೆಂಬ ಗೌರವದಿಂದ ಮತ್ತೊಮ್ಮೆ ಪ್ರಾರ್ಥಿಸಿಕೊಳ್ಳುತ್ತೇನೆ. ದಾರಿ ಬಿಡಿ'' ಎಂದು ಬಿಟ್ಟಿದೇವ ಧ್ವನಿ ಏರಿಸಿ ಹೇಳಿದ.

"ಆ ಚಮ್ಮಾರರ ನೆರಳು ಬಿದ್ದರೆ ನಾವು ಅಪವಿತ್ರವಾಗುತ್ತೇವೆ. ಮಿಂದು ಮಡಿ ವಸ್ತ್ರ ಧರಿಸಿ ಶುದ್ಧೀಕರಣ ಮಾಡಿಕೊಳ್ಳುತ್ತೇವೆ. ಅಂತಹವರನ್ನು ಮಂದಿರದೊಳಗೆ ಕರೆದೊಯ್ಯುವುದೆ ? ಇದು ಧರ್ಮದ್ರೋಹ. ನಮ್ಮ ರಕ್ತ ಹರಿದರೂ ಚಿಂತೆಯಿಲ್ಲ. ನಾವು ದಾರಿ ಬಿಡುವುದಿಲ್ಲ.''

"ಅಂದರೆ ನೀವು ಶ್ರೇಷ್ಠ. ಅವರು ಅಶ್ರೇಷ್ಠ ಎಂದು ಹೇಳಿದಂತಾಯಿತು ?''

"ಎಂತಲೇ ನಾವು ಉತ್ತಮ ವಂಶದಲ್ಲಿ ಜನಿಸಿದೆವು.''

"ಈ ಜಗತ್ತು ಯಾರ ಸೃಷ್ಟಿ ?''

"ಆ ದೇವನ ಸೃಷ್ಟಿ''

"ತಮಗೆಷ್ಟು ಜನ ಮಕ್ಕಳು ?''

"ಆರು.''

"ಅವರಲ್ಲಿ ಶ್ರೇಷ್ಠರು ಯಾರು ? ಅಶ್ರೇಷ್ಠರು ಯಾರು ?''

"ನನ್ನ ಮಕ್ಕಳೆಲ್ಲ ನನಗೆ ಸಮ.''

"ಅಂದರೆ ನಿಮಗ ಮಾತ್ರ ನಿಮ್ಮ ಮಕ್ಕಳಲ್ಲಿ ಸಮಾನತ್ವ. ದೇವರಿಗೆ ಅವನ ಮಕ್ಕಳಲ್ಲಿ ಆ ಸಮಾನತ್ವವಿಲ್ಲವೆಂದು ತಿಳಿದಿದ್ದೀರೇನು ? ನೀನು ತಾನು ಎಂಬ ಭೇದವನ್ನು ನಾವು ಕಲ್ಪಿಸಬಹುದು. ಅವನಿಗೆ ಆ ಭೇದವಿಲ್ಲ. ಆಚಾರ್ಯರು ಅದನ್ನೇ ಹೇಳಿದ್ದಾರೆ. ಘರ್ಷಣೆಗೆ ಅವಕಾಶವಿಲ್ಲದಂತೆ ದಾರಿ ಬಿಡಿ.''

"ನಮಗೆ ಇದು ಒಗ್ಗುವುದಿಲ್ಲ.''

"ಹಾಗಿದ್ದರೆ ಹೊರಟುಹೋಗಬಹುದು. ಇಲ್ಲಿ ಇರಿ ಎಂದು ಯಾರೂ ಬಲವಂತ ಮಾಡುವುದಿಲ್ಲ. ಯಾರೋ ಕೆಲವರಿಗೆ ಬೇಡವಾಯಿತೆಂದು ಜನತೆಗೆ ಬೇಕಾದ, ಆಚಾರ್ಯರಿಗೆ ಬೇಕಾದ ಕೆಲಸ ನಿಲ್ಲಿಸಲು ಸಾಧ್ಯವಿಲ್ಲ.''

"ಧರ್ಮಪೋಷಕರಾದ ಮಹಾರಾಜರು ಧರ್ಮವಿರೋಧಿ ಕೆಲಸ ಮಾಡುವುದ ಸರಿಯೆ?''

"ನಮಗೆ ಧರ್ಮದ ವಿಷಯ ಗೊತ್ತಿದೆ. ಅದರ ಪಾಠ ನಿಮ್ಮಿಂದ ಆಗಬೇಕಿಲ್ಲ''

"ಹಾಗೆ ಹೇಳುವುದರ ಅರ್ಥ ನಮಗೆ ಗೊತ್ತು. ಹೆಸರಿಗೆ ಶ್ರೀವೈಷ್ಣವ, ಕ್ರಿಯೆಯಲ್ಲಿ ಜೈನ ಎಂಬ ಸಿದ್ಧಾಂತ ಮಹಾರಾಜರದು ಎಂದಾಯಿತು. ಈ ಜೈನ ಪಟ್ಟಮಹಾದೇವಿಯನ್ನು ಮುಂದಿಟ್ಟುಕೊಂಡು ಎಲ್ಲ ಕೆಲಸ ಮಾಡುವ ನಿಮ್ಮ ಧರ್ಮ ಏನೆಂಬುದು ಈಗ ಲೋಕಕ್ಕೆ ಗೊತ್ತಾದ ಹಾಗಾಯಿತು. ಚಮ್ಮಾರರು

ಪ್ರವೇಶಿಸಿ ದೇವಮಂದಿರ ಅಪವಿತ್ರವಾಗುವುದಕ್ಕಿಂತ ನಮ್ಮಂತಹ ಶ್ರೇಷ್ಠರ ರಕ್ತ ಹರಿದು ಇದು ಪವಿತ್ರವಾಗಿ ಉಳಿಯುವುದು ವಾಸಿ. ರಣರಂಗದಲ್ಲಿ ರಕ್ತ ಕೊಟ್ಟರೆ ನಿಮಗೆ ವೀರಸ್ವರ್ಗವೆಂದ ಹಾಗೆ ನಮಗೆ ಇಲ್ಲಿ ರಕ್ತಕೊಟ್ಟರೆ ಧರ್ಮಸ್ವರ್ಗ. ಅಹಿಂಸೆಯ ಸೋಗು ಹಾಕುವ ಈ ಜಿನ ಭಕ್ತರು ಈಗೇನು ಮಾಡುತ್ತಾರೆಂಬುದನ್ನು ನಾವೂ ನೋಡಿಯೇ ಬಿಡುತ್ತೇವೆ'' ಎಂದ.

''ಅರ್ಹನ್, ಧರ್ಮದ ಹೆಸರಿನಲ್ಲಿ ಎಂತಹ ಮೌಢ್ಯವಡಗಿದೆ ? ಅದಕ್ಕೇ 'ತಮಸೋಮಾ ಜ್ಯೋತಿರ್ಗಮಯ' ಎಂದು ಉಪನಿಷತ್ಕಾರರು ಹೇಳಿದರು. ಧರ್ಮಮೌಢ್ಯಕ್ಕಿಂತ ಮಿಗಿಲಾದ ತಮಸ್ಸು ಬೇರಾವುದಿದೆ ? ಇವರಲ್ಲಿ ಬೆಳಕು ಮೂಡುವಂತೆ ಮಾಡು'' ಎಂದು ಕೈ ಮುಗಿದು, ಎಲ್ಲ ಕ್ರಿಯೆಗಳಿಗೂ ಸರ್ವಸಾಕ್ಷಿಯಾದ, ಬೆಳಕು ನೀಡುವ, ಸಸ್ಯ ಜಾತಿಗೆ ಚೇತನ ಸ್ವರೂಪನಾದ ನಡುನೆತ್ತಿಯ ಮೇಲೆ ಬೆಳಗುತ್ತಿರುವ ಸೂರ್ಯ ನಾರಾಯಣನನ್ನು ನೋಡಿ, ನಂತರ ಕಣ್ಮುಚ್ಚಿ, 'ಶ್ರೀ ಗೊಂಮಟ ಜಿನನಂ' ಎಂಬ ಪ್ರಾರ್ಥನಾ ಶ್ಲೋಕವನ್ನು ಹಾಡಿದಳು. ಜನತೆಯ ಮೌಢ್ಯದ ಕಾರಣವಾಗಿ ಅವಳ ಮನವನ್ನು ಕಲಕುತ್ತಿರುವ ಅವಳಂತರಂಗದ ನೋವು, ಪ್ರತಿಸ್ಪಂದನಗೊಂಡು ಎಲ್ಲರ ಹೃದಯವನ್ನೂ ಪ್ರವೇಶಿಸಿತು. ಬಿಸಿಯೇರಿದ್ದ ಇಡೀ ವಾತಾವರಣದಲ್ಲಿ ಒಂದು ಬಗೆಯ ಪ್ರಶಾಂತತೆ ಮೂಡಿತು.

''ಪ್ರಭು, ಬಾಹುಬಲಿಸ್ವಾಮಿ ಕರುಣಿಸಿದ್ದಾನೆ. ನಾನೇ ಈ ಪಾದರಕ್ಷೆಗಳನ್ನು ತಲೆಯ ಮೇಲೆ ಹೊತ್ತು ದೇವಮಂದಿರವನ್ನು ಪ್ರವೇಶಿಸುತ್ತೇನೆ. ಇದರ ಕರ್ತೃಗಳಿಬ್ಬರೂ ನನ್ನ ಇಕ್ಕೆಲಗಳಲ್ಲಿ ಬರುತ್ತಾರೆ. ಸನ್ನಿಧಾನ ನಮಗೆ ಮಾರ್ಗದರ್ಶಕರಾಗಬೇಕು. ಆಗಮಿಕರು ಘಂಟಾನಾದ ಮಾಡುತ್ತಾ ಮುಂದುವರಿಯಬೇಕು. ಈ ಜನತೆ ತಾವೇ ದಾರಿ ಮಾಡಿಕೊಡುತ್ತಾರೆ. ಇಲ್ಲಿ ಹಿಂಸೆಗೆ, ಕ್ರೋಧಕ್ಕೆ ಜಾಗವಿಲ್ಲ. ಪ್ರೇಮವೇ ನಮಗೆ ದಾರಿದೀಪ. ನಾವು ಸಿದ್ಧವಾಗುವಷ್ಟರಲ್ಲಿ ಬಾಹುಬಲಿಸ್ವಾಮಿಯೇ ಇಲ್ಲಿ ವಿರಾಜಮಾನನಾಗಿ ದಾರಿ ಬಿಡಿಸುತ್ತಾನೆ. ಚಿಂತಿಸಬೇಡಿ. ಮುನ್ನಡೆಯಿರಿ'' ಎಂದು ಶಾನ್ತಲದೇವಿ ಎರಡು ಪಾದರಕ್ಷೆಗಳನ್ನೂ ತನ್ನ ತಲೆಯ ಮೇಲೆ ಧರಿಸಿದಳು.

ಆಗಮಿಕ ಘಂಟಾನಾದ ಮಾಡುತ್ತಾ ದೇವಮಂದಿರ ದ್ವಾರದತ್ತ ಅಡಿಯಿಟ್ಟ ಅಡ್ಡಗಟ್ಟಿದ ನಾಮಧಾರಿ ಗುಂಪು ಕೈಮುಗಿದು ನಡುವೆ ದಾರಿಮಾಡಿ ಇಬ್ಭಾಗವಾಯಿತು. ಎಲ್ಲರೂ ದೇವಮಂದಿರ ಪ್ರವೇಶಮಾಡಿದರು. ಕಾಪಿನವರ ಹಿಂದೆ ನಾಮಧಾರಿಗಳು ಮಂದಿರದೊಳಕ್ಕೆ ಪ್ರವೇಶಿಸುವುದರಲ್ಲಿ ಇದ್ದವರು ದ್ವಾರದಲ್ಲಿಯೇ ಬೆಪ್ಪಾಗಿ ನಿಂತರು. ಮತ್ತೆ ಇಬ್ಭಾಗವಾಗಿ ದಾರಿ ಮಾಡಿಕೊಟ್ಟರು. ತುಸು ಸಮಯಾನಂತರ ಕಣ್ಣು ತಿಕ್ಕಿ ತಿಕ್ಕಿ ಪಿಳಿಪಿಳಿ ಬಿಟ್ಟು ನೋಡಿದರು. ''ಎಲ್ಲೋ ನಮ್ಮ ಮೇಲೆ ಮಂಕುಬೂದಿ ಎರಚಿರಬೇಕು. ಇಲ್ಲದಿದ್ದರೆ ಇದು ಹೇಗೆ ಸಾಧ್ಯ ? ಮಂದಿರ ಪ್ರವೇಶ ಮಾಡಿದುದು ಕೇಶವಸ್ವಾಮಿ. ಕ್ಷಣಾರ್ಧದಲ್ಲಿ ಮಂದಿರದೊಳಗಿಂದ ಹಿಂತಿರುಗಿ ಬಂದುದು ನಗ್ನ ಬಾಹುಬಲಿಸ್ವಾಮಿ. ಹೀಗೆಲ್ಲಾ ಸಾಧ್ಯವೆ?'' ಎಂದು ನಿಬ್ಬೆರಗಾದವರಂತೆ ಆ ನಾಮಧಾರಿಗಳು ಉದ್ಗರಿಸಿದರು.

ದೇವಮಂದಿರದೊಳಗಿನ ಎಲ್ಲ ಶಾಸ್ತ್ರೋಕ್ತವಿಧಿಗಳೂ ಮುಗಿದವು. ಆಪರ್ಯಂತ ಚಮ್ಮಾರರಿಬ್ಬರೂ ಪಟ್ಟಮಹಾದೇವಿಯ ಬದಿಯಲ್ಲೇ ನಿಂತು ಆನಂದಭಾಷ್ಪ ಸುರಿಸಿದರು. ಮಹಾಮಂಗಳಾರತಿ, ತೀರ್ಥ ಪ್ರಸಾದ ವಿನಿಯೋಗ ನಡೆದವು. ನಂತರ ಮಹಾಪ್ರಸಾದ ಭೋಜನವಾಯಿತು. ಅದ್ಭುತವಾದ ವ್ಯವಸ್ಥೆ ಇದ್ದುದರಿಂದ ಎಲ್ಲವೂ ಪ್ರಶಾಂತವಾಗಿ ಜರುಗಿದವು. ಮುಂದ ಯಾವ ಬಗೆಯ ತೊಡಕೂ ಉದ್ಭವವಾಗಲಿಲ್ಲ.

ಸಂಜೆಯ ಉತ್ಸವ ವಿಗ್ರಹದ ಪಲ್ಲಕ್ಕಿ ಉತ್ಸವ. ವೇಲಾಪುರಿಯ ರಾಜಬೀದಿಯಲ್ಲಿ ನಡೆಯಿತು. ಸಂಜೆಯ ಅರ್ಚನಾದಿಗಳೂ ಶಾಸ್ತ್ರೋಕ್ತವಾಗಿ ನಡೆದವು.

ಪ್ರತಿಷ್ಠಾಪನೋತ್ಸವ, ಎಡರು ತೊಡರುಗಳು ಬಂದರೂ ಬಹಳ ಪ್ರಶಸ್ಥವಾದ ಹಾಗು ಪ್ರಶಾಂತವಾದ ರೀತಿಯಲ್ಲಿ ಜರುಗಿದುದರಿಂದ ಆಗಮಿಕರಿಗೆ ಮಹದಾನಂದವಾಯಿತು. ಸ್ವಾಮಿಯನ್ನು ಶಯನಕ್ಕೆ ಬಿಡುವ ಮುಂಚಿನ ಮಂಗಳಾರತಿಯನ್ನು ಪಟ್ಟಮಹಾದೇವಿಗೆ ಕೊಡುವ ಸಮಯದಲ್ಲಿ ಪ್ರಧಾನ ಆಗಮಿಕ, "ಪೊಯ್ಸಳರಾಷ್ಟ್ರದ ಏಳಿಗೆಗೆ ಈ ಶ್ರೇಯಸ್ಕರವಾದ ಪ್ರತಿಷ್ಠಾಪನೋತ್ಸವವು ಪುಣ್ಯ ಭೂಮಿಕೆಯಾಯಿತು" ಎಂದು ವಿನಂತಿಸಿದ.

"ಆದರೆ ಎಷ್ಟೆಲ್ಲ ವಿಘ್ನ ? ಎಷ್ಟೆಲ್ಲ ಮನಃಕ್ಲೇಶ ?" ಎಂದಳು ಶಾನ್ತಲದೇವಿ.

"ಶ್ರೇಯಾಂಸಿ ಬಹು ವಿಘ್ನಾನಿ ಎಂಬ ಆರ್ಯೋಕ್ತಿಯಿರುವುದು ಪಟ್ಟಮಹಾದೇವಿಯವರಿಗೆ ತಿಳಿದಿದೆಯಲ್ಲ."

"ತಿಳಿದಿದೆ. ಆದರೂ ಮಾನವನ ನೀಚತನ ನೆನಸಿಕೊಂಡಾಗ ಜೀವ ಹಿಂಡಿ ಹೋಗುತ್ತದೆ."

"ಅದೂ ನಿಜ. ಆದರೂ ಚಿನ್ನ ಪುಟವಾಗಬೇಕಾದರೆ ಕಾವು ತಾಕಲೇಬೇಕಲ್ಲ ?"

"ಎಲ್ಲಾ ಅವನಿಚ್ಛೆ" ಎಂದಳು ಶಾನ್ತಲದೇವಿ. ಪ್ರಸಾದ ಬಂತು. ಅದನ್ನು ಸ್ವೀಕರಿಸಿ ಪಟ್ಟಮಹಾದೇವಿ ಮೌನವಾಗಿ ನಿಂತಿದ್ದ ಬಿಟ್ಟದೇವನತ್ತ ಹಾಗು ಇತರ ರಾಣಿಯರು, ರಾಜ ಪರಿವಾರದತ್ತ ನೋಡಿದಳು. ಅಷ್ಟರಲ್ಲಿ ಸ್ವಾಮಿಯ ಗರ್ಭವಾಸದ ಸುಕನಾಸಿಗೆ ರೇಶಿಮೆಯ ತೆರೆ ಅಡ್ಡವಾಗಿ ಹರಡಿತು.

ಎಲ್ಲರೂ ಬೀಳ್ಕೊಂಡರು.

ಎರಡನೆಯ ದಿವಸ ಸಹ ವಿಶೇಷವಾದ ರೀತಿಯಲ್ಲಿ ಅರ್ಚನಾದಿಗಳೂ ಸಂತರ್ಪಣೆ ನಡೆದವು. ಇಡೀ ರಾಜಕುಟುಂಬ ಅಂದು ಎಲ್ಲದರಲ್ಲಿಯೂ ಪಾಲುಗೊಂಡಿತ್ತು.

ಮಾರನೆಯ ದಿವಸ ಅಂದರೆ ಸಪ್ತಮಿ ಇಂದುವಾರದಂದು ಹಿರಣ್ಯಗರ್ಭ ಮತ್ತು ತುಲಾಪುರುಷ ಸಮಾರಂಭಗಳು ಜರುಗಿದವು.

ಸಿದ್ಧವಾಗಿದ್ದ ಚಿನ್ನದ ಗೋವಿನ ಗರ್ಭ ಪ್ರವೇಶಿಸಿ ಮಹಾರಾಜ ಬಿಟ್ಟಿದೇವ ಹೊರಬಂದ. ನಂತರ ಪಟ್ಟಮಹಾದೇವಿ, ರಾಣಿಯರು ಬಮ್ಮಲದೇವಿ, ರಾಜಲದೇವಿ, ಲಕ್ಷ್ಮೀದೇವಿಯರು ಮತ್ತು ಶಾನ್ತಲದೇವಿಯ ಮಕ್ಕಳು, ಗೋಗರ್ಭ ಪ್ರವೇಶಿಸಿ ಹೊರಬಂದರು. ಇದಾದ ನಂತರ ಮಹಾರಾಜ ಬಿಟ್ಟಿದೇವನ ತುಲಾಭಾರವಾಯಿತು. ಆ ಸಂದರ್ಭದಲ್ಲಿ ಪಟ್ಟಮಹಾದೇವಿ ಶಾನ್ತಲದೇವಿ ತನ್ನ ಮೇಲಿದ್ದ ಚಿನ್ನಾಭರಣಗಳನ್ನು ತುಲಾಭಾರಕ್ಕೆ ನೀಡದಳು. ಪಟ್ಟಮಹಾದೇವಿಯ ಈ ಆಭರಣಗಳು ತಲಕಾಡಿನಿಂದ ತಂದಿದ್ದ ಚೋಳರ ಹೊನ್ನರಾಶಿಯ ಜೊತೆಗೆ ಸೇರಿದ್ದವು. ತುಲಾಭಾರ ಮುಗಿಯುವಷ್ಟರಲ್ಲಿ ಚಿನ್ನದ ಗೋವನ್ನು ತುಂಡರಿಸಿದ್ದರು. ಎರಡನ್ನೂ ಒಟ್ಟುಗೂಡಿಸಿ ಅದರ ಸ್ವಲ್ಪ ಭಾಗವನ್ನು ಅಲ್ಲಿ ಉಪಸ್ಥಿತರಿದ್ದ ಶಿಲ್ಪಿಗಳು, ಶೈವ, ಜೈನ, ಶ್ರೀವೈಷ್ಣವ ಶ್ರೋತ್ರೀಯರಿಗೆ ದಾನವಾಗಿ ಕೊಡಲಾಯಿತು. ಉಳಿದುದೆಲ್ಲವನ್ನೂ ಯುದ್ಧದಲ್ಲಿ ಜೀವದ ಹಂಗು ತೊರೆದು ವಿಶೇಷ ನೈಪುಣ್ಯವನ್ನು ತೋರಿಸಿದ ಯೋಧರಿಗೂ, ಹೇರಿಗರಿಗೂ ಮತ್ತು ಯುದ್ಧದಲ್ಲಿ ವೀರ ಮರಣವಪ್ಪಿದ ಯೋಧರ ಕುಟುಂಬಗಳಿಗೂ ಹಂಚಲಾಯಿತು. ಎಂದಾಗ ಮಾಯಣ, ಚಟ್ಟಲದೇವಿಯರಿಗೂ ದಾನದ ಹೊನ್ನು ಬಂದಿತೆಂದು ಮತ್ತೆ ಹೇಳಬೇಕಾಗಿಲ್ಲವಷ್ಟೆ. ಈ ಅಪರೂಪದ

ಸಮಾರಂಭವನ್ನು ವೀಕ್ಷಿಸಿದ ಜನತೆ ತಮ್ಮ ಜನ್ಮ ಸಾರ್ಥಕವಾಯಿತೆಂದು ಭಾವಿಸಿತು. ಹರ್ಷೋದ್ಗಾರಗಳಿಂದ ತಮ್ಮ ತೃಪ್ತಿಯನ್ನು ಸೂಚಿಸಿ ಮಧ್ಯಾಹ್ನದ ಭೋಜನಕ್ಕೆ ತೆರಳಿತು.

ಅದೇ ರೀತಿ ವಿಜಯೋತ್ಸವ ಸಹ ಜರುಗಿತು. ಮಹಾರಾಜ ಬಿಟ್ಟಿದೇವ **ತಲಕಾಡು ಗೊಂಡ** ಎಂಬ ಬಿರುದನ್ನು ಧರಿಸಿದ. ಪೊಯ್ಸಳ ಸೈನ್ಯ ಸಾಗರ ಸಾಲುಗಟ್ಟಿ ಧ್ವಜವಂದನೆ ಮಾಡಿತು. ನಿಬ್ಬೆರಗಾದ ಜನಸ್ತೋಮ ಅದನ್ನೆಲ್ಲ ನೋಡಿ ತಮ್ಮ ಮೆಚ್ಚಿಕೆಯನ್ನು ಸೂಚಿಸಿತು.

ನಂತರ ಮಹಾರಾಜ ಬಿಟ್ಟಿದೇವ, "ಪೊಯ್ಸಳ ನಾಡಿಗರೇ, ನಮ್ಮ ರಾಷ್ಟ್ರದ ಇತಿಹಾಸದಲ್ಲಿ ಒಂದು ಪ್ರಮುಖವಾದ ದಿವಸ ಇಂದು. ಬಹಳ ಕಾಲದಿಂದ ಕಳೆದುಕೊಂಡಿದ್ದ ಗಂಗವಾಡಿ ಮತ್ತೆ ನಮ್ಮದಾದ ದಿನ. ನಾವು ನಿಮಿತ್ತಕ್ಕೆ 'ತಲಕಾಡುಗೊಂಡ' ಎಂಬ ಬಿರುದನ್ನು ಇಂದು ಧರಿಸಿದೆವು. ಅದು ನಾವು ವೈಯಕ್ತಿಕವಾಗಿ ಧರಿಸಿದ ಬಿರುದಲ್ಲ. ಅದು ಇಡೀ ನಾಡು ಧರಿಸಿದ ಬಿರುದು. ಈ ಬಿರುದು ನಮ್ಮ ನಾಡಿನದಾಗುವಲ್ಲಿ ಬಹಳ ಶ್ರಮದ ಕೆಲಸ ಮಾಡಿ, ಜೀವನದ ಹಂಗುದೊರೆದು ತಮ್ಮ ಮುಂದಾಳತನದಲ್ಲಿ ನಮ್ಮ ಪ್ರಧಾನಗಳು ಗಂಗರಾಜರು ತೋರಿದ ಜಾಣ್ಮೆ ಸಾಹಸಗಳು ಕಾರಣ. ಆ ತಿಗುಳರು ಅಟ್ಟಹಾಸದ ಮಾತನ್ನು ಆಡಿದ್ದರು. 'ಬಾಯಿಗೆ ಬಂದಂತೆ ಬೊಗಳುವ ಬಿಟ್ಟಿಗ ಬರೀ ಬಡಾಯಿಗಾರ' ಎಂದು ಪ್ರಾಸಬದ್ಧವಾಗಿ ನಮ್ಮನ್ನು ತೆಗಳಿದ್ದರು. ನಮ್ಮನ್ನು ತೆಗಳಿದ್ದರು ಎಂದರೆ ನಮ್ಮ ನಾಡಿಗರನ್ನು ತೆಗಳಿದ್ದರು. ತಿಗುಳರು ತೆಗಳುವುದರಲ್ಲಿ ತಜ್ಞರು. ಕನ್ನಡಿಗರು ಬಳೆ ತೊಟ್ಟು ಕೂಡುವ ಹೆಣ್ಣುಗಳಲ್ಲ. ಬಳೆ ತೊಡುವ ಕನ್ನಡ ಹೆಣ್ಣು ಸಹ ಕರವಾಲ ಹಿಡಿವ ಸಾಮರ್ಥ್ಯವನ್ನು ಪಡೆದವಳು ಎಂದು ತೋರಿಸುವುದು ನಮ್ಮ ಕೆಲಸವಾಯಿತು. ಈ ಸಲದ ಗೆಲವಿಗೆ ಮುಖ್ಯ ಕಾರಣರು ಗಂಗರಾಜರು. ಅವರಿಗೆ ನಾವಿಂದು 'ಮಹಾಪ್ರಧಾನಿ' ಎಂಬ ಬಿರುದನ್ನು ದಯಪಾಲಿಸುತ್ತೇವೆ. ಕನ್ನಡ ದ್ರೋಹಿಗಳ ರಕ್ತ, ಕಾವೇರಿಯ ಕೋಪವುಕ್ಕಿಸಿ ಅವರನ್ನು ಆಚೆಗೆ ಓಡಿಸಿತು. ಅವಳ ಕೋಪ ಶಮನಮಾಡಲು **ದ್ರೋಹಘರಟ್ಟ** ಗಂಗರಾಜರು ಅವಳಿಗೆ ಶತ್ರುಗಳ ರಕ್ತದಿಂದ ಸ್ನಾನ ಮಾಡಿಸಿದರು. ತಲಕಾಡಿನಲ್ಲಿ ಕಿರಿದಾದ ಕೀರ್ತಿನಾರಾಯಣ ಸ್ವಾಮಿಯ ಮಂದಿರ ನಿರ್ಮಾಣವೂ, ಈ ವೇಲಾಪುರಿಯಲ್ಲಿ ಈಗ ನಿರ್ಮಿತವಾಗಿರುವ ವಿಜಯನಾರಾಯಣ ದೇವಮಂದಿರವೂ ಅವರು ಕನ್ನಡನಾಡಿಗೆ, ಪೊಯ್ಸಳ ರಾಜ್ಯಕ್ಕೆ ತಂದಿತ್ತ ಗೆಲುವಿನ ಸಂಕೇತ. ಎಂತಲೇ ಈ ದಿವಸ ನಮ್ಮ ಇತಿಹಾಸದಲ್ಲಿ ಬಹು ಮುಖ್ಯ ದಿವಸ ಎಂದು ನಾವು ಹೇಳಿದೆವು. ಎರಡೂ ಮಂದಿರಗಳೂ ವೈಷ್ಣವ ಮಂದಿರಗಳು. ಈವರೆಗೆ ರಾಜರೂ ಸೇರಿ ಆಡಳಿತ ಸೂತ್ರ ಬಹುಮಟ್ಟಿಗೆ ಜೈನರ ಕೈಯಲ್ಲಿಯೇ ಇತ್ತು. ಈಗ ರಾಜರು ಕಾರ್ಯಕಾರಣ ಸಂಯೋಗದಿಂದ ಶ್ರೀವೈಷ್ಣವ ಮತಾವಲಂಬಿಗಳಾದರು. ಅದು ಕೇವಲ ವೈಯಕ್ತಿಕ. ಆದರೂ ಸಹ ಮಹಾಜಿನಭಕ್ತರಾದ ಗಂಗರಾಜರು ಒಂದು ಕಡೆ ನಮಗೆ ತಂದಿತ್ತ ಗೆಲುವಿನಿಂದಲೂ, ಅದ್ವಿತೀಯ ಜಿನಾಗ್ರೇಸರರಾದ ನಮ್ಮ ಪಟ್ಟಮಹಾದೇವಿಯವರ ಶ್ರದ್ಧಾಸಕ್ತಿಗಳ ಫಲವಾಗಿಯೂ, ಶ್ರೀ ವೈಷ್ಣವ ಸಂಕೇತ ದೇವಮಂದಿರ ನಿರ್ಮಿತವಾದವು. ಇದು ನಮ್ಮ ರಾಜ್ಯದ ಮತಸಹಿಷ್ಣುತೆಗೆ ಸಂಕೇತವಾಗಿದೆ. ಮತವನ್ನು ಕೇವಲ ವೈಯಕ್ತಿಕವಾಗಿ ನಮ್ಮ ನಮ್ಮ ಗೃಹದೊಳಗೆ ಇಟ್ಟುಕೊಂಡಿದ್ದರೆ ಸಾಕು. ಅದನ್ನು ಬೀದಿಗೆಳೆದು ಸರಿ ತಪ್ಪುಗಳ ಗೊಂದಲವನ್ನು ಬೀದಿಯಲ್ಲಿ, ಸಾರ್ವಜನಿಕ ಸ್ಥಳಗಳಲ್ಲಿ ಮಾಡಹೊರಡುವುದು ಧರ್ಮದ್ರೋಹವಾಗುತ್ತದೆ. ಈಚೆಗೆ ಇಲ್ಲಿ ಅದೇ ವಾತಾವರಣ ಉಂಟಾಗಿತ್ತು. ಆದರೆ ಆ ದೇವರ ಕರುಣೆ, ಹಾಗೆಯೇ ನಿವಾರಣೆಯಾಯಿತು. ಚಮ್ಮಾರರಿಗೆ ದೇವಮಂದಿರದ ಪ್ರವೇಶವನ್ನು ನಿಷೇಧಿಸಬೇಕೆಂಬ ನೆವದಲ್ಲಿ ಜೈನಮತವನ್ನೂ ತೆಗಳಿದ ಮತಾಂಧರಿಗೆ ಬಾಹುಬಲಿಸ್ವಾಮಿಯೇ ಎರಡೂ ರೂಪ ತೋರಿಸಿ, ಇಲ್ಲವೇ ಕೇಶವಸ್ವಾಮಿಯೇ ಎರಡೂ



6

ರೂಪ ತೋರಿಸಿ ಅವರಿಗೆ ದಿಗ್ಭ್ರಮೆ ಹಿಡಿಸಿದ್ದಾನೆ. ಇದರಿಂದಲಾದರೂ ನಾವೆಲ್ಲಾ ಒಂದೇ ಎಂಬ ಪಾಠವನ್ನು ಕಲಿಯಬೇಕು. ನಮ್ಮ ನಾಡಿನಲ್ಲಿ ಧರ್ಮ ಸಹಿಷ್ಣುತೆ ಎಲ್ಲ ಸಾರ್ವಜನಿಕ ಕ್ಷೇತ್ರಗಳಲ್ಲಿಯೂ ಕಾಣಬೇಕು. ಆದ್ದರಿಂದ ಮೇಲು, ಕೀಳು ಭಾವನೆ ಸಲ್ಲ ದೇವರ ಇದಿರಿನಲ್ಲಿ ನಾವೆಲ್ಲ ಸಮ.

ಈ ತಲಕಾಡು ಪಡೆದುಕೊಂಡುದು ಬಹಳ ಮುಖ್ಯವಾದುದಾದರೂ ನಾವು ಶತ್ರುಗಳ ಕಿರುಕುಳದಿಂದ ಪಾರಾಗಿದ್ದೇವೆ ಎಂದು ಭಾವಿಸುವಂತಿಲ್ಲ. ನಮಗಿಂತ ಹಿರಿಯ ಸಾಮ್ರಾಜ್ಯವನ್ನು ಸ್ಥಾಪಿಸಿ ವೈಭವದಿಂದ ಬಾಳಿದ ಚಾಲುಕ್ಯ ಚಕ್ರವರ್ತಿಗಳು ವಿನಾಕಾರಣ ನಮ್ಮ ಮೇಲೆ ಕುಪಿತರಾಗಿದ್ದಾರೆ. ಅವರಿಗಾಗಿ ಪೊಯ್ಸಳರು ಪ್ರಾಣ ತೆರಲು ಸಿದ್ಧರಾಗಿದ್ದ ಕಾಲವೊಂದಿತ್ತು. ಆದರೆ ಕನ್ನಡಗಿರ ದುರದೃಷ್ಟ ಅವರು ನಮ್ಮನ್ನು ಶತ್ರುವೆಂದು ಭಾವಿಸಿ ಮಟ್ಟಲು ಹವಣಿಸುತ್ತಿದ್ದಾರೆಂದು ಬೇಹು ಬಂದಿದೆ. ಈಗಾಗಲೇ ಹನ್ನೆರಡು ಜನ ಸಾಮಂತ ವರ್ಗವನ್ನು ಹುರಿದುಂಬಿಸಿ ಯುದ್ಧ ಸಿದ್ಧತೆಯನ್ನು ಮಾಡಿಕೊಂಡಿದ್ದಾರೆ. ಆ ಹನ್ನೆರಡು ಜನ ಸಾಮಂತವರ್ಗದ ಹೇರಿಗರು ಈ ಜನಜಂಗುಳಿಯ ಮಧ್ಯದಲ್ಲಿ ನಮ್ಮ ಕೈಸೆರೆ ಸಿಕ್ಕಿದ್ದಾರೆ. ಅದರಿಂದ ನಾವು ಬಿರುದು ಧರಿಸಿದ ಈ ಶುಭ ಸನ್ನಿವೇಶದಲ್ಲಿಯೇ ಮುಂದಿನ ಜೈತ್ರಯಾತ್ರೆಯನ್ನು ನಿರ್ಧರಿಸುತ್ತೇವೆ. ಆಚೆ ನಾಳಿದ್ದು ದಶಮಿ, ಬೃಹಸ್ಪತಿ ವಾರ. ನಮ್ಮ ಸೈನ್ಯ ರಾಜಧಾನಿಯಿಂದ ಚಲಿಸುತ್ತದೆ. ಈ ಸಮಯದಲ್ಲಿ ನಮ್ಮ ಮನವಿ ನಿಮ್ಮಲ್ಲಿ ಇಷ್ಟೆ ರಾಷ್ಟ್ರಕ್ಕಾಗಿ ಎಲ್ಲರೂ ಸರ್ವತ್ಯಾಗಕ್ಕೂ ಸಿದ್ಧರಾಗಿರಬೇಕು. ಈ ಶುಭ ಸುಂದರ್ಭದಲ್ಲಿ ಬಾಹುಬಲಿಸ್ವಾಮಿಯ ಹೆಸರಿನಲ್ಲಿ, ವಿಜಯನಾರಾಯಣಸ್ವಾಮಿಯ ಹೆಸರಿನಲ್ಲಿ, ಧರ್ಮೇಶ್ವರನ ಹೆಸರಿನಲ್ಲಿ, ನಿಮ್ಮ ನಿಷ್ಠೆಯ ಬಗೆಗೆ ಪ್ರತಿಜ್ಞೆ ಮಾಡಬೇಕು. ಯಾವ ಯಾವ ಹಂತದಲ್ಲಿ ಎಲ್ಲೆಲ್ಲಿಂದ ಜನ ನಮ್ಮ ಸೈನ್ಯದೊಂದಿಗೆ ಸೇರಬೇಕೆಂದು ಮುಂದೆ ಆಯಾಯ ಸಮಯಕ್ಕೆ ತಿಳಿಸಲಾಗುವುದು'' ಎಂದು ಘೋಷಿಸಿದ.

''ನಾಡಿನ ರಕ್ಷಣೆಗಾಗಿ ನಾವು ನಮ್ಮ ತನು ಮನ ಧನಗಳನ್ನು ಅರ್ಪಿಸಲು ಸದಾಸಿದ್ಧರೆಂದು ದೇವರ ಹೆಸರಿನಲ್ಲಿ ಈ ಶಾರ್ದೂಲ ಲಾಂಛನದಡಿಯಲ್ಲಿ ಪ್ರತಿಜ್ಞೆ ಮಾಡುತ್ತೇವೆ. ಮತ್ತು ಪೊಯ್ಸಳ ರಾಜ್ಯಕ್ಕೆ ನಮ್ಮ ನಿಷ್ಠೆ ಶಾಶ್ವತ ಎಂದು ಘೋಷಿಸಿ, ಕನ್ನಡ ಧರ್ಮ, ಸಂಸ್ಕೃತಿ ರಕ್ಷಣೆಗೆ ನಾವು ಬದ್ಧಕಂಕಣರಾಗಿರುತ್ತೇವೆ'' ಎಂದು ಜನಸ್ತೋಮ ಘೋಷಿಸಿತು. ಅಲೆ ಅಲೆಯಾಗಿ ಘೋಷಣೆ ಮೇಲಿಂದ ಮೇಲೆ ನುಗ್ಗಿ ಬಂತು.

ಆ ಘೋಷಣೆ ಮುಗಿಲಿನಾಚೆಗೂ ವ್ಯಾಪಿಸಿತು.
ಪಂಚ ಮಹಾವಾದ್ಯಗಳು ಮೊಳಗಿದವು.
ನಂತರ ವಾತಾರವಣ ಶಬ್ದರಹಿತವಾಯಿತು.

ಮತ್ತೆ ಬಿಟ್ಟಿದೇವ, ''ಈ ದೇವಮಂದಿರದ ನಿರ್ಮಾಣದಿಂದ ನಾವು ಇನ್ನೊಂದು ಮಹತ್ಸಾಧನೆಯನ್ನು ಮಾಡಿದ್ದೇವೆ. ನಾಡಿನ ವಾಸ್ತುಶಿಲ್ಪಕ್ಕೆ ಒಂದು ಹೊಸ ಆಯಾಮವನ್ನು ಕಲ್ಪಿಸಿಕೊಟ್ಟಿದ್ದೇವೆ. ಅದಕ್ಕೆಲ್ಲ ಕಾರಣರು ಈ ದೇವಾಲಯದ ನಕ್ಷೆ, ಯೋಜನೆ ಸಿದ್ಧಪಡಿಸಿ ಇದನ್ನು ರೂಪಿಸಿಕೊಟ್ಟಿರುವ ಮಾನ್ಯ ಸ್ಥಪತಿಗಳು. ಈ ದೇವಮಂದಿರದ ಕಲ್ಪನೆ ರಚನೆಗಳಿಂದ ಅವರ ಬಾಳಿಗೊಂದು ಶಾಶ್ವತ ಕೀರ್ತಿಯಷ್ಟೇ ಅಲ್ಲ, ಅತ್ಯಂತ ಅವಶ್ಯಕವಾಗಿದ್ದ ಶಾಂತಿಯೂ ಸಹ ಸಿಕ್ಕಿತು. ಬಿರಿದು ಹೋಗಿದ್ದ ಅವರ ಸಾಂಸಾರಿಕ ಜೀವನ ಪುನರಾರಂಭವಾಯಿತು. ಅವರ ಸಂಸಾರ ಸಮಾಗಮ ಸಹ ಒಂದು ಸ್ವಾರಸ್ಯಕರ ಘಟನೆಯಾಗಿ, ಅನುಭವವಾಗಿ ನಮಗೆ ಮಾರ್ಗದರ್ಶನ ನೀಡಿತು. ಈ ಅಪರೂಪದ ತಂದೆ ಮಕ್ಕಳ ಹೆಸರು ಜನಜನಿತವಾಗಿ ಯುಗಯುಗಾಂತರಗಳವರೆಗೆ ಜನಪದ ನಾಲಗೆಯಲ್ಲಿ ಉಳಿಯಲಿ. ಈ ಮಾದರಿ

ವಾಸ್ತುಕಲೆ ಜಕಣ ವಾಸ್ತುವೆಂದೇ ಅಭಿದಾನ ಪಡೆಯಲಿ. ಇಡೀ ದಕ್ಷಿಣ ಭಾರತಕ್ಕೆ ಇದು ಮಾದರಿಯಾಗಿ ಈ ಸ್ಥಪತಿಗಳು ದಕ್ಷಿಣದ ರೂವಾರಿಗಳಿಗೇ ಆಚಾರ್ಯರಾಗಿ ದಕ್ಷಿಣಾಚಾರ್ಯರೆಂಬ ಬಿರುದಿಗೆ ಅವರು ಅರ್ಹರಾಗಿದ್ದಾರೆ. ಅದರಿಂದ ನಾವು ಜನತೆಯ ಪರವಾಗಿ ಅವರಿಗೆ ಅದನ್ನು ಅರ್ಪಿಸುತ್ತೇವೆ. ಅವರು ಇದನ್ನು ಸ್ವೀಕರಿಸಬೇಕು'' ಎಂದ.

ಸ್ಥಪತಿ ಜಕಣಾಚಾರ್ಯ ಎದ್ದು ಬಾಗಿ ವಂದಿಸಿ,''ಮಹಾಸನ್ನಿಧಾನದಲ್ಲಿ ನನ್ನ ನಮ್ರ ವಿಜ್ಞಾಪನೆ. ನಾನು ಅಲೆಮಾರಿಯಾಗಿದ್ದೆ. ಜನಗಳೇ ನನಗೆ ಬೇಡವಾಗಿದ್ದರು. ಲೋಕವೇ ಶತ್ರು ಎಂಬ ಭಾವನೆ ಮೂಡಿತ್ತು. ಆದರೆ ನನ್ನ ಪೂರ್ವಜನ್ಮದ ಪುಣ್ಯ. ಈ ಅಪರೂಪದ ರಾಜಮನೆತನದ ಸಂಪರ್ಕವಾಯಿತು. ಕಲ್ಲನ್ನು ಕುಣಿಸಬಲ್ಲ ನನ್ನ ಹೃದಯವೇ ಕಲ್ಲಾಗಿತ್ತು. ಆದರೆ ಆ ಕಲ್ಲಾದ ಹೃದಯವನ್ನು ಕರಗಿಸಿ ಅಲ್ಲಿ ಮಾನವೀಯತೆಯನ್ನು ತುಂಬಿಸಿದ ಪಟ್ಟಮಹಾದೇವಿಯವರು ಜಗನ್ಮಾತೆಯ ಅವತಾರ ಅವರಿಂದ ನನ್ನ ಕಲೆ, ಬಾಳು ಎರಡೂ ವಿಕಾಸವನ್ನು ಪಡೆದವು. ಅದರಿಂದ ಆ ಕಲೆಯ ಕೀರ್ತಿಯೆಲ್ಲಾ ಅವರದೇ. ನಾನು ವ್ಯಕ್ತಿ. ಈ ಕಲೆ, ಶಾಶ್ವತವಾಗಿ ನಿಲ್ಲುವ ಶಕ್ತಿ. ಅದರಿಂದ ಈ ಕಲೆ ಪೊಯ್ಸಳ ಕಲೆಯೆಂದೇ ವಿಶ್ವದಲ್ಲಿ ನಿಲ್ಲಲಿ. ಇದನ್ನು ಕಲ್ಪಿಸಿದವನು ನಾನೆಂಬ ಹೆಮ್ಮೆ ನನಗಿಲ್ಲ. ರೂಪಿಸಿದವನು ನಾನೆಂಬ ಬಿಮ್ಮು ನನಗಿಲ್ಲ. ನನ್ನಲಿಲ ಕಲ್ಪನೆ ಮೂಡಲು ಬಂದ ಪ್ರೇರಣೆ ಯಾವುದು ? ಅದು ಪರಂಪರಾಗತವಾಗಿ ನಮಗೆ ದತ್ತವಾಗಿ ಬಂದು, ಕಾಲ ಕಾಲಕ್ಕೆ ಅನುಗುಣವಾಗಿ ಬದಲಾದ ರೂಪಧಾರಣೆ ಮಾಡುತ್ತ ಬಂದಿರುವ ಶಾಸ್ತ್ರೀಯ ಶಿಲ್ಪಕಲೆ. ಆ ಪರಂಪರಾಗತ ಪ್ರೇರಣೆ ಇಲ್ಲದೆ ಇದ್ದಿದ್ದರೆ ಬದಲಾದ ಕಲ್ಪನೆಗೆ ಅವಕಾಶವೆಲ್ಲಿ ? ಅದರಿಂದ ಈ ಬಗೆ, ನಮ್ಮ ವಾಸ್ತು ಪ್ರಪಂಚದಲ್ಲಿ ಇದು ಒಂದು ಘಟ್ಟವಷ್ಟೇ. ಇದು ಸ್ಥಾಯಿಯಾಗಿ ಹೀಗೆಯೇ ನಿಲ್ಲಲು ಸಾಧ್ಯವಿಲ್ಲ ಇದರಿಂದ ಬದಲಾದ ರೂಪಲಾವಣ್ಯಗಳು ನಮ್ಮ ವಾಸ್ತುವಿಗೆ ಮುಂದೆ ಕೈಗೂಡಬೇಕು. ಅದಕ್ಕೆ ಈ ವಾಸ್ತು, ಸ್ವಾಗತವಷ್ಟೇ ಆಗಿದೆ. ಮನುಷ್ಯ ತನ್ನ ಪ್ರತಿಷ್ಠೆಯಿಂದ, ಅಜ್ಞತೆಯಿಂದ ತಪ್ಪು ಮಾಡುತ್ತಾನೆ. ಅದರಿಂದ ಈ ಎರಡೂ ಸಲ್ಲ ಎಂಬ ತಿಳಿವಳಿಕೆ ಮೂಡಿತು ನನಗೆ. ಆ ತಿಳಿವಳಿಕೆಯ ಫಲವಾಗಿ ಯಾರೂ ಸರ್ವಜ್ಞರಲ್ಲ. ಸರ್ವಜ್ಞ ಆ ಜಗದೀಶ್ವರನೊಬ್ಬನೇ ಎಂಬ ಅರಿವೂ ಬಂದಿದೆ. ನಾನು ಪಾರಂಗತನೆಂದು ಭಾವಿಸಿದ್ದ ಎರಡೂ ಶಾಸ್ತ್ರಗಳಲ್ಲಿಯೂ ನಾನು ಎಡವಿದೆ; ಎಚ್ಚೆತ್ತುಕೊಂಡೆ. ಎಲ್ಲರ ಪ್ರೀತಿಯನ್ನೂ ಸಂಪಾದಿಸಿದೆ. ಈ ಮಹಾ ಕೆಲಸ ಸಾಧಿತವಾಗಲು ಈ ಸ್ಥಪತಿಗೆ ವಿಶ್ವರೂಪ ಕೊಟ್ಟು ಅವನ ಎರಡು ಕೈಗಳನ್ನೂ ಅನಂತವನ್ನಾಗಿ ಮಾಡಿ ಮಹೋನ್ನತ ಸೃಷ್ಟಿಗೆ ಕಾರಣರಾಗಿರುವ ನನ್ನ ರೂವಾರಿ ಮಿತ್ರರ ನೆರವು ಕಾರಣ. ಅವರಿಲ್ಲದೆ ನಾನು ಶೂನ್ಯ. ಅವರಿಂದ ನನ್ನ ಕಲ್ಪನೆಗೊಂದು ಸಾಕಾರ ಸಿದ್ಧಿಸಿದೆ. ಅದರಿಂದ ಈ ಎಲ್ಲ ರೂವಾರಿಗಳ ಸಹಕಾರಕ್ಕೆ ನಾನು ಅತ್ಯಂತ ಋಣಿಯಾಗಿದ್ದೇನೆ'' ಎಂದು ಬಾಗಿ ವಂದಿಸಿದ.

ಪಟ್ಟಮಹಾದೇವಿ, ''ವಸ್ತಾವವಾಗಿ ನಾನು ಏನೂ ಮಾತನಾಡಬಾರದೆಂದೇ ಇದ್ದೆ. ಸ್ಥಪತಿಗಳು ಒಂದು ಮಾತನ್ನಾಡಿದರು. ಅದು ಕಾರಣ ಒಂದು ವಿಷಯವನ್ನು ಸನ್ನಿಧಾನದಲ್ಲಿ ಬಿನ್ನವಿಸುತ್ತೇನೆ. ಕಲೆಯ ವಿಕಾಸವನ್ನು ಗುರುತಿಸಲು ನೆರವಾಗುವಂತೆ, ಇದುವರೆವಿಗಿನ ಅಮೂಲ್ಯ ಶಿಲ್ಪ ಪರಂಪರೆ ತ್ರುಟಿತವಾಗದಂತೆ ಅನೂಚಾನವಾಗಿ ಸಾಗಿಬರಲು ಮತ್ತು ಪರಂಪರೆ ಹೊಸ ವಿಕಾಸ ಕಲ್ಪನೆಗಳಿಗೆ ದಾರಿ ಮಾಡಿಕೊಡಲು ನೆರವಾಗುವಂತೆ ಒಂದು ಶಿಲ್ಪಶಾಲೆಯನ್ನು ಇಲ್ಲಿ ತೆರೆಯಲು ಸನ್ನಿಧಾನ ಒಪ್ಪಿಗೆ ಕೊಡಬೇಕು. ಮತ್ತು ಅದನ್ನು ರೂಪಿಸಿ ಬೆಳೆಸುವ ಹೊಣೆಯನ್ನು ಸ್ಥಪತಿಗಳು ಒಪ್ಪಿಕೊಳ್ಳುವಂತೆ ಅವರ ಮನವೊಲಿಸಬೇಕು'' ಎಂದಳು.

ಅದಕ್ಕೆ ವಿರೋಧವೇ ಬರಲಿಲ್ಲ

ಇಡೀ ದಿವಸ ತಿರುವರಂಗದಾಸ ಮಾತ್ರ ಎಲ್ಲೂ ಹೆಚ್ಚಾಗಿ ಪ್ರಕಟವಾಗಲಿಲ್ಲ. ಹಾಗನ್ನುವುದಕ್ಕಿಂತ ಅವನಿದ್ದುದು ಯಾರ ಗಮನಕ್ಕೂ ಬರಲಿಲ್ಲ ಎನ್ನುವುದು ಸೂಕ್ತ. ಇನ್ನೂ ಬೆಳಗಾಗುವುದಕ್ಕಿಲ್ಲ ಮಗಳ ಸಂದರ್ಶನ ಮಾಡಿ. ಯಾದವಪುರಿಗೆ ಹೊರಡುವುದಾಗಿ ತಿಳಿಸಿದ.

ರಾಜಧಾನಿಯ ಮತ್ತು ಹೊಸದಾಗಿ ಪಡೆದುಕೊಂಡ ತಲಕಾಡಿನ ರಕ್ಷಣೆಗೆ ಯುಕ್ತ ವ್ಯವಸ್ಥೆಯನ್ನು ಮಾಡಿ, ರಾಣಿ ಲಕ್ಷ್ಮೀದೇವಿಯನ್ನು ಯಾದವಪುರಿಗೂ ಕಳಿಸುವ ವ್ಯವಸ್ಥೆ ಮಾಡಿ, ಮಹಾರಾಜ ದಶಮಿಯ ದಿವಸ ಸೈನ್ಯ ಸಮೇತ ಯುದ್ಧಯಾತ್ರೆಯನ್ನು ಕೈಕೊಂಡ.

ಎರಡು ದಿವಸ ವಿಶ್ರಾಂತಿ ತೆಗೆದುಕೊಂಡು ಇನ್ನೂ ಕಳೆದುಳಿದ ದೇವಮಂದಿರದ ಕೆಲಸವನ್ನೂ ಮುಗಿಸಲು ಸ್ಥಪತಿಗಳಿಗೆ ತಿಳಿಸಿ, ಮೊದಲು ಕಡೆದ ವಿಗ್ರಹ ಇನ್ನೂ ಪ್ರತಿಷ್ಠಾಪಿತವಾಗಿರಲಿಲ್ಲವಾಗಿ ಅದನ್ನು ಪ್ರತಿಷ್ಠಾಪಿಸುವ ಸಲುವಾಗಿ ಒಂದು ಪುಟ್ಟ ಮಂದಿರವನ್ನು ನಿರ್ಮಿಸಲು ಆದೇಶವಿತ್ತು ಶಾನ್ತಲದೇವಿ ಬೆಳುಗೊಳದ ಪ್ರಯಾಣವನ್ನು ನಿಶ್ಚಯಿಸಿದಳು. ಅವಳು ಮೊದಲೇ ಯೋಚಿಸಿದಂತೆ ತಾನು, ಮಾತಾಪಿತೃಗಳು, ರಾಜಲದೇವಿ, ತನ್ನ ಮಕ್ಕಳು ಮತ್ತು ಬಲ್ಲಾಳ ಮಹಾರಾಜನ ರಾಣಿಯರು, ರೇವಿಮಯ್ಯ ಹೊರಡುವುದೆಂದಾಗಿತ್ತು. ಮುಂಗಡವಾಗಿ ಅಲ್ಲಿಗೆ ಸುದ್ದಿ ಮುಟ್ಟಿಸಲಾಗಿತ್ತು. ಆದರೆ ಈ ವಿಷಯ ತಿಳಿದ ಸ್ಥಪತಿ ತಾನೂ ಪತ್ನೀ ಪುತ್ರ ಸಮೇತ ಬೆಳುಗೊಳಕ್ಕೆ ಬರುವುದಕ್ಕೆ ಒಪ್ಪಿಗೆ ಕೊಡಬೇಕೆಂದು ಪಟ್ಟಮಹಾದೇವಿಯನ್ನು ಪ್ರಾರ್ಥಿಸಿದ. ಅವಳು ಸುಲಭವಾಗಿಯೇ ಒಪ್ಪಿದಳು. ಅವನು ಕೆಲಸಗಳ ನಿರ್ವಹಣೆಯನ್ನು ದಾಸೋಜರಿಗೆ ವಹಿಸಿ ಪಟ್ಟಮಹಾದೇವಿಯೊಂದಿಗೆ ಬೆಳುಗೊಳಕ್ಕೆ ಪ್ರಯಾಣ ಮಾಡಿದ.

# ೧೪. ಉಪಸಂಹಾರ

ಪಟ್ಟಮಹಾದೇವಿಯು ಬರುತ್ತಾಳೆಂದರೆ ಬೆಳುಗೊಳದಲ್ಲಿ ಉತ್ಸಾಹ. ಆ ಅರ್ಚಕ ವಯಸ್ಸಿನ ಕಾರಣದಿಂದ ಈಚೆಗೆ ದಿನಾ ಗೊಮ್ಮಟ ಅರ್ಚನೆಗೆ ಬೆಟ್ಟವೇರಿ ಹೋಗುತ್ತಿರಲಿಲ್ಲ. ಆತನ ಕುಮಾರ ಈ ಕೆಲಸವನ್ನು ನಿರ್ವಹಿಸುತ್ತಿದ್ದ. ಪಟ್ಟಮಹಾದೇವಿ ಬರುತ್ತಾಳೆಂದರೆ ಆ ವೃದ್ಧನಿಗೂ ಯೌವನದ ಉತ್ಸಾಹ ಚಿಗುರಿತ್ತು. ಬೆಳಗಿನ ಜಾವವೇ ಎದ್ದು ಗೊಮ್ಮಟಾರ್ಚನೆಗೆ ಬೆಟ್ಟವೇರಿ ಹೋಗಿದ್ದ.

ಪೂರ್ವಯೋಜಿತವಲ್ಲದಿದ್ದರೂ ಮಹಾವೀರ ಜಯಂತಿಯ ವೇಳೆಗೆ ಶಾನ್ತಲದೇವಿಯ ದಿಬ್ಬಣ ಬೆಳುಗೊಳವನ್ನು ಮುಟ್ಟಿಯಾಗಿತು. ಅಂದು ದೊಡ್ಡಬೆಟ್ಟದಲ್ಲಿ, ಕಟವಪ್ರದಲ್ಲಿ ಕೆಳಗೆ ಬೆಳುಗೊಳದಲ್ಲಿನ ಎಲ್ಲ ಜಿನಾಲಯಗಳಲ್ಲಿಯೂ ವಿಶೇಷ ಅರ್ಚನೆಯ ವ್ಯವಸ್ಥೆ ಇತ್ತು. ಬೆಳಗೊಳ ಗ್ರಾಮದಲ್ಲಿನ ಬಸದಿಗಳನ್ನು ದರ್ಶಿಸಿ ಬೇಗಲೇ ಎಲ್ಲರೂ ಬೆಟ್ಟವರೇರಿದರು.

ವಯಸ್ಸಾದ ಮಾರಸಿಂಗಯ್ಯ,ಮಾಚಿಕಬ್ಬೆಯರು ಏರಲು ಸ್ವಲ್ಪ ತಡವಾಯಿತು. ಹಿಂದೆ ತಾವು ಬೆಳುಗೊಳ ಶಿವಗಂಗೆಗಳಿಗೆ ಹೋದಾಗ ಅವರವರ ದೇವರ ಬಗೆಗೆ ಜಿಜ್ಞಾಸೆ ಮಾಡಿದ ಈ ಹಿರಿಯ ದಂಪತಿಗಳು ಈಗ ಆ ವಿಚಾರವನ್ನೇ ಪ್ರಸ್ತಾಪಿಸದೆ ಮೌನವಾಗಿದ್ದರು.

ಹಿರಿಯ ಅರ್ಚಕ ಪಾಂಗಿತವಾಗಿ ಅರ್ಚನೆ ಮಾಡಿದ. ಕಡೆಯಲ್ಲಿ "ಪಟ್ಟಮಹಾದೇವಿಯವರು ಗೊಮ್ಮಟ ಸ್ತುತಿಯನ್ನು ಹಾಡಬೇಕು. ಮತ್ತೊಮ್ಮೆ ತಮ್ಮ ಮಧುರವಾಣಿಯಿಂದ ಆ ಸ್ತುತಿಯನ್ನು ಕೇಳಲು ನನಗೆ ಅವಕಾಶ ಸಿಗುತ್ತದೆಯೋ ಇಲ್ಲವೋ ಕಾಣೆ. ವಾಸ್ತವವಾಗಿ ನನಗೆ ವೇಲಾಪುರಿಯ ಪ್ರತಿಷ್ಠಾಪನೋತ್ಸವಕ್ಕೆ ಬರಬೇಕೆಂಬ ಆಸೆಯಿತ್ತು. ಆದರೆ ಅಷ್ಟು ದೂರದ ಪ್ರಯಾಣ ಕಷ್ಟವಾಗಬಹುದೆಂದು ಹೆದರಿ ಹಿಂಜರಿದೆ" ಎಂದ.

"ಆದರೆ ಈಗ ಈ ಬೆಟ್ಟವನ್ನು ಹೇಗೆ ಏರಿದಿರಿ ?" ಎಂದು ಶಾನ್ತಲದೇವಿ ಕೇಳಿದಳು.

"ಪಟ್ಟಮಹಾದೇವಿಯ ಸಾನ್ನಿಧ್ಯ ಏನೆಲ್ಲ ಮಾಡಿಸಬಲ್ಲದು."

"ಆದರೆ ಇದೇ ಪಟ್ಟಮಹಾದೇವಿ ಅಲ್ಲೂ ಇದ್ದಳಲ್ಲ"

"ಆದರೂ ಅದು ಕೇಶವ ಪ್ರತಿಷ್ಠೆಯಲ್ಲವೆ ? ಅಷ್ಟುಕಷ್ಟು ಉತ್ಸಾಹ ಕಡಿಮೆ ಆಯಿತು."

"ಅಂದರೆ ಜಿನಾಲಯವಾಗಿದ್ದಿದ್ದರೆ ಉತ್ಸಾಹ ಉಕ್ಕುತ್ತಿತ್ತು ಅನ್ನಿ."

"ಸ್ವಾಭಾವಿಕವಲ್ಲವೆ ? ನಾನು ಹೀಗೆಂದರೆ ಉಳಿದುದು ನಿಕೃಷ್ಟ ಎಂಬುದು ನನ್ನ ಭಾವನೆಯಲ್ಲ"

"ನಿಮ್ಮ ಭಾವನೆ ಏನೇ ಇರಲಿ. ನೀವೊಂದು ಅಪೂರ್ವ ಸಂದರ್ಭವನ್ನು ಕಳೆದುಕೊಂಡಿರಿ."

"ತಾವು ಹಾಗೆಂದು ಅಪ್ಪಣೆ ಕೊಡಿಸಿದ ಮೇಲೆ ಒಪ್ಪಿಕೊಳ್ಳಲೇಬೇಕು. ಏನೆಂದು ತಿಳಿಸಬಹುದಲ್ಲ."

"ಪೂಜೆ ಮುಗಿಯಲಿ."

"ಅಪ್ಪಣೆ. ಗೊಮ್ಮಟಸ್ತುತಿ...."

ಶಾನ್ತಲದೇವಿ ಹಾಡಿದಳು. ಜಕ್ಕಣಾಚಾರ್ಯನ ಕಿವಿ ನಿಮಿರಿತು. ಹಾಡನ್ನು ಶ್ರದ್ಧಾಭಕ್ತಿಗಳಿಂದ ಆಲಿಸಿದ. ಮುಗಿದ ಮೇಲೆ, "ಅಂದು ಇದನ್ನೇ ಪಟ್ಟಮಹಾದೇವಿಯವರು ವೇಲಾಪುರಿಯ ದೇವಮಂದಿರದ ಹೊರವಲಯದಲ್ಲಿ ಹಾಡಿದಿರಲ್ಲವೆ ?" ಎಂದು ಕೇಳಿದ.

"ಹೌದು."

"ಏನು ? ಕೇಶವಮಂದಿರದಲ್ಲಿ ಗೊಮ್ಮಟಸ್ತುತಿಯೆ ?" ಅತ್ಯಾಶ್ಚರ್ಯದಿಂದ ಹಿರಿಯ ಅರ್ಚಕರು ಕೇಳಿದರು.

"ಹೌದು. ಅಂದು ಹಾಡಿದ ರಾಗ ಮಾಲವ ಪಂಚಮ. ಈಗ ಹಾಡಿದ ರಾಗ ಶುದ್ಧ ವಸಂತ" ಎಂದ ಸ್ಥಪತಿ.

"ನಿಜ. ಅಂದು ಪ್ರಚೋದಿಸಬೇಕಾಗಿತ್ತು. ಇಂದು ಸುಪ್ರೀತನನ್ನಾಗಿ ಮಾಡಬೇಕಾಗಿತ್ತು. ಸ್ಥಪತಿಗಳು ನಾಟ್ಯಶಾಸ್ತ್ರ ಪ್ರವೀಣರೆಂಬುದನ್ನು ನಾನು ಗ್ರಹಿಸಿದ್ದೆ. ಈಗ ನೀನು ಸಂಗೀತ ಶಾಸ್ತ್ರದಲ್ಲೂ ಪಾರಂಗತರೆಂಬುದು ಗೊತ್ತಾಯಿತು." ಎಂದಳು ಪಟ್ಟಮಹಾದೇವಿ.

"ನನ್ನ ಪ್ರಾವೀಣ್ಯತೆಯ ಮಾತು ಇರಲಿ... ರಾಗಗಳ ಬದಲಾವಣೆಯ ಕಾರಣ ನನಗೆ ಸ್ಪಷ್ಟವಾಗಿ ಅರ್ಥವಾಗಲಿಲ್ಲ" ಎಂದ ಸ್ಥಪತಿ.

"ಅದೇ ಪಟ್ಟಮಹಾದೇವಿಯವರ ರೀತಿ. ನಾನು ಇದು ಬಹುಶಃ ಐದನೆಯ ಸಲ ಕೇಳುತ್ತಿರುವುದು. ಇನ್ನೂ ಹೆಚ್ಚು ಸಲ ಕೇಳಿದ್ದರೂ ಕೇಳಿರಬಹುದು. ಆದರೆ ಒಂದೊಂದು ಸಲವೂ ಅದರ ವಿನ್ಯಾಸವೇ ಬೇರೆ ಎನ್ನಿಸುತ್ತದೆ" ಎಂದು ಅರ್ಚಕ.

"ಸಂಗೀತ ಸರಸ್ವತಿಯೇ ಮೂರ್ತೀಭವಿಸಿ ಧರೆಗೆ ಬಂದಂತೆ ಪಟ್ಟಮಹಾದೇವಿಯವರು. ಕಗ್ಗಲ್ಲಿನಲ್ಲಿ ಸ್ವರ ಹೊಮ್ಮುವಂತೆ ಪ್ರಚೋದಿಸಿದವರು" ಎಂದ ಸ್ಥಪತಿ.

"ಅವರ ಮಾತನ್ನು ಕೇಳಬೇಡಿ. ಅವರು ಅತ್ಯಂತ ಶ್ರೇಷ್ಠ ಶಿಲ್ಪಿಗಳು. ವೇಲಾಪುರಿಯ ದೇವಮಂದಿರದ ಸ್ಥಪತಿಗಳು. ಜಕಣಾಚಾರ್ಯರು.ಕಗ್ಗಲ್ಲಿಗೆ ಜೀವತುಂಬುವ ಅವರ ಕೈಯಿನ ಕಲೆಯ ಮುಂದೆ ಸ್ವರ ಯಾವ ಲೆಕ್ಕ ?" ಎಂದಳು ಶಾನ್ತಲದೇವಿ.

"ಹೊಸಬರು ಕೆಲವರಿದ್ದಾರೆ. ಯಾರೆಂದು ಕೇಳೋಣವೆಂದಿದ್ದೆ. ತುಸು ಸಂಕೋಚವಾಯಿತು."

"ಈಗ ಸಂಕೋಚಿಸಲು ಕಾರಣವಿಲ್ಲ"

"ಈಗ ಅಂದರೆ ?"

"ಒಂದು ಕಾಲದಲ್ಲಿ ಅವರ ಪರಿಚಯ ಮಾಡಿಕೊಳ್ಳುವುದು ಎಂದರೆ ಸಂಕೋಚವಲ್ಲ, ಭಯವೇ ಆಗುತ್ತಿತ್ತು."

"ಅಂದರೆ ಈಗ ಪಟ್ಟಮಹಾದೇವಿಯವರು ಅವರನ್ನು ಸಾಧು ಮಾಡಿದ್ದಾರೆ ಎಂದಾಯಿತು"

ಎಂದ ಅರ್ಚಕ, "ಸ್ಥಪತಿಗಳೆ, ಈ ಪಟ್ಟಮಹಾದೇವಿಯವರ ಸಂಪರ್ಕ ಬರುವುದು ಒಂದು ಪೂರ್ವಜನ್ಮದ ಪುಣ್ಯ. ಈ ಪೊಯ್ಸಳನಾಡು ನಿಜವಾಗಿ ಏನು ಧನ್ಯವೋ" ಎಂದ.

"ತಮ್ಮ ಮಾತು ಅಕ್ಷರಶಃ ಸತ್ಯ. ನನ್ನ ಪೂರ್ವಜನ್ಮದ ಸುಕೃತದಿಂದಲೇ. ಈ ಮಹಾನುಭಾವೆಯ ಸಂಪರ್ಕ ಬಂತು. ಬರಡಾದ ನನ್ನ ಬಾಳು, ಈಗ ಹೊಸ ಚಿಗುರಿನಿಂದ ಬೆಳಗಿತು. ಪೂರ್ವಜನ್ಮದ ಪಾಪ ವಿಶೇಷದಿಂದ ಪತ್ನೀ ಪುತ್ರರು ನನ್ನಿಂದ ದೂರವಾಗಿದ್ದರು. ಅಲ್ಲಲ್ಲ ನಾನೇ ಅವರಿಂದ ದೂರವಾಗಿದ್ದೆ. ಈ ಸಂಪರ್ಕ ವಿಶೇಷದಿಂದ ಅವರು ಪುನಃ ನನಗೆ ಲಭ್ಯವಾದರು. ಅವರು ಅಪ್ಪಣೆ ಕೊಡಿಸಿದಂತೆ ತಾವು ಅಂದು ಅಲ್ಲಿರಬೇಕಾಗಿತ್ತು. ಮಹಾದ್ಭುತ ಪವಾಡವೇ ನಡೆದು ಹೋಯಿತು" ಎಂದು ಸ್ಥಪತಿ ಹೇಳಿದ.

"ಹೌದೆ ? ನನಗೂ ತಿಳಯಲು ಆಸೆ" ಎಂದು ಅರ್ಚಕ.

ಕೇಶವದೇವರ ಪಾದರಕ್ಷೆಯನ್ನು ಸಿದ್ಧಪಡಿಸಿದ ಚಮ್ಮಾರರೊಂದಿಗೆ ಪ್ರವೇಶ ದೊರಕಲು ಉಂಟಾಗಿದ್ದ ತೊಡಕನ್ನು ಮೊದಲುಗೊಂಡು ಎಲ್ಲ ಹೇಳಿ, "ಆಗ ಪಟ್ಟ ಮಹಾದೇವಿಯವರು ಈಗ ಹಾಡಿದ ಗೊಮ್ಮಟಸ್ತುತಿಯನ್ನು ಹಾಡಿದರು. ನಾನಾಗಲೇ ಹೇಳಿದಂತೆ ಅದು ಯಾರನ್ನೋ ಪ್ರಚೋದಿಸುವಂತೆ ಇತ್ತು. ಮೊಂಡತನದಿಂದ ಅಡ್ಡಗಟ್ಟಿದ ಜನ ಕವಲಾಗಿ ದಾರಿ ಮಾಡಿಕೊಟ್ಟಿತು. ಪಟ್ಟಮಹಾದೇವಿಯವರೇ ಆ ಪಾದರಕ್ಷೆಗಳನ್ನು ತಮ್ಮ ಶಿರಸ್ಸಿನ ಮೇಲೆ ಧರಿಸಿ ಒಳಗೊಯ್ದರು. ಇಬ್ಬರು ಚಮ್ಮಾರರೂ ಪ್ರವೇಶಿಸಿದರು. ಅಡ್ಡಗಟ್ಟಿ ನಿಂತಿದ್ದ ನಾಮಧಾರಿಗಳು ಏನನ್ನೋ ಬೆಪ್ಪಾಗಿ ನೋಡುತ್ತಿದ್ದಂತೆ ನಮಗೆ ಭಾಸವಾಯಿತು. ಚಮ್ಮಾರರು ಒಳಕ್ಕೆ ಹೋದ ಮೇಲೂ ಸಹ ದಾರಿ ಬಿಟ್ಟಿದ್ದು ದೇವಮಂದಿರದಿಂದ ಬಹುದೂರದವರಿಗೆ ಅವರಿಗೆ ದೃಷ್ಟಿ ಹೋಯಿತು. ಯಾರೋ ಹೋಗುವುದನ್ನು ನೋಡುತ್ತಿದ್ದಾರೆ ಎಂಬಂತೆ ನನಗನ್ನಿಸಿತು. ಪಟ್ಟಮಹಾದೇವಿಯವರ ಪ್ರಚೋದನೆಗೆ ನೆರವಾಗಿ ಈ ಗೊಮ್ಮಟಸ್ವಾಮಿಯೇ ಅಲ್ಲಿ ಪ್ರತ್ಯಕ್ಷವಾಗಿ ದಾರಿ ಮಾಡಿಕೊಟ್ಟಿರಬೇಕು" ಎಂದು ಸ್ಥಪತಿ ಹೇಳಿದ.

"ಅಂದರೆ ನೀವು ಯಾರನ್ನೂ ನೋಡಲಿಲ್ಲವೆ ?" ಅರ್ಚಕ ಮತ್ತೆ ಪ್ರಶ್ನಿಸಿದ.

"ಇಲ್ಲ."

"ನಾನು ನೋಡಿದೆ" ಎಂದ ರೇವಿಮಯ್ಯ.

ಎಲ್ಲರೂ ಅವನತ್ತ ನೋಡಿದರು. ಅವನು ಕಣ್ಣುಚ್ಚಿ ಕೈ ಮುಗಿದು ನಿಂತಿದ್ದ.

"ಅಮ್ಮಾಜಿ, ಅದೊಂದು ದಿವಸ ಬಹಳ ಹಿಂದೆ ನೀನು ಚಿಕ್ಕಪ್ಪಾಜಿ ಕಟವಪ್ರದ ಮೇಲೆ ಇದ್ದಾಗ ನಾನು ಅಲ್ಲಿಂದ ಈ ಗೊಮ್ಮಟಸ್ವಾಮಿಯನ್ನು ಕಂಡೆನಲ್ಲ ಅದೇ ರೀತಿ ಕಂಡೆ. ಆಗ ನಿಂತಲ್ಲೇ ಸ್ವಾಮಿ ನಿಮ್ಮಿಬ್ಬರಿಗೂ ಆಶೀರ್ವಾದ ಮಾಡಿದ, ಶಂಖ, ಚಕ್ರ, ಗದಾ, ಪದ್ಮ ಕಿರೀಟ, ಕುಂಡಲಧಾರಿಯಾಗಿ. ಈಗ ಅದೇ ರೂಪವೇಷದಲ್ಲಿ ಮುಗುಳು ನಗುತ್ತಾ ನಡೆದು ಬಂದ ಸ್ವಾಮಿಯನ್ನು ಕಂಡು ನಾಮಧಾರಿಗಳು ಬೆರಗಾಗಿ ದಾರಿ ಬಿಟ್ಟರು. ಆದರೆ ಸ್ವಾಮಿ ಹಿಂತಿರುಗಿದಾಗ, ಅಲ್ಲಿನಂತೆಯೇ ತನ್ನ ನಿಜರೂಪದಲ್ಲಿ ನಗ್ನನಾಗಿ ಹಿಂತಿರುಗಿದ. ಅಮ್ಮಾಜಿ ನೀನು ಒಳಗೆ ಸಂಗೀತ ಸೇವೆಗೆ ಹಾಡಿದ ಹಾಡನ್ನೂ ನಮ್ಮ ಗೊಮ್ಮಟಸ್ವಾಮಿ ಸಾರ್ಥಕ ಪಡಿಸಿದ. ಅವನು ಅನಂತರೂಪಿ ಎಂಬುದನ್ನು ತೋರಿಸಿಕೊಟ್ಟ" ಎಂದು ರೇವಿಮಯ್ಯ.

ಅವನ ಮಾತನ್ನು ಕೇಳಿದ ಜಕಣಾಚಾರಿ, "ಅಮ್ಮಾಜಿ ಯಾರು ? ಚಿಕ್ಕಪ್ಪಾಜಿ ಯಾರು ?" ಎಂದು ಕೇಳಿದ.

ಕಣ್ಣುಬಿಟ್ಟ ರೇವಿಮಯ್ಯ ಸ್ಥಪತಿಯ ಪ್ರಶ್ನೆ ಕೇಳಿ ಕಕ್ಕುವಿಕ್ಕಾದ.

"ನಮ್ಮ ರೇವಿಮಯ್ಯ ತುಂಬಾ ಭಾವುಕ. ಅವನು ಈಗ ಇವತ್ತಿನ ರೇವಿಮಯ್ಯನಲ್ಲ. ನಾನು ಪುಟ್ಟ ಹುಡುಗಿಯಾಗಿದ್ದಾಗ ನನ್ನನ್ನು ಎತ್ತಿಕೊಂಡು ಗಿರಿಗಟ್ಟೆ ಆಡುತ್ತಿದ್ದ. ಆಗ ನನ್ನನ್ನು ಅಮ್ಮಾಜಿ ಎಂದು ಕರೆಯುತ್ತಿದ್ದ ಆಗ ಸನ್ನಿಧಾನ ಎಲ್ಲರಿಗೂ ಚಿಕ್ಕಪ್ಪಾಜಿ ಆಗಿದ್ದರು. ಆ ಗತಕಾಲಕ್ಕೆ ಹೋಗಿಬಿಟ್ಟಿದ್ದಾನೆ. ಅವನದೇ ಒಂದು ಕಥೆ'' ಎಂದಳು ಶಾನ್ತಲದೇವಿ.

ರೇವಿಮಯ್ಯ ಕಣ್ಣಲ್ಲಿ ಪಳಕ್ಕನೆ ನೀರು ಬಂತು.

"ಅಯ್ಯೋ, ಆ ಕಾಲವೆ ಚೆಂದವಾಗಿತ್ತು. ನಮಗೂ ಗೊತ್ತು, ಚಿಕ್ಕಪ್ಪಾಜಿ ಆ ಚಿಕ್ಕ ಬೆಟ್ಟದಿಂದ ಗೊಮ್ಮಟನನ್ನು ನೋಡುತ್ತ ನಿಂತ ದೃಶ್ಯ'' ಎಂದಳು ಪದ್ಮಲದೇವಿ.

"ಅದು ಹೇಗೆ ಮರೆಯಲು ಸಾಧ್ಯ ? ನಾನು, ಈ ನಮ್ಮಕ್ಕ ಹೆಸರು ಕೆತ್ತುವುದರಲ್ಲಿ ಮಗ್ನರಾಗಿದ್ದೆವು. ನಮ್ಮ ಕಡೆಗೆ ಯಾರ ಗಮನವೂ ಇರಲಿಲ್ಲ ಆಮೇಲೆ ನಾವಿಬ್ಬರೇ ಬೆಟ್ಟದಲ್ಲಿ ಉಳಿದುಕೊಂಡೆವು ಎಂದು ತಿಳಿದಾಗ ನಮ್ಮ ಎದೆ ಹೊಡೆದುಕೊಂಡುದನ್ನು ನೆನೆಸಿಕೊಂಡರೆ ಈಗಲೂ ಮೈ ಜುಂ ಎನ್ನುತ್ತದೆ. ಪುಣ್ಯಕ್ಕೆ ಈ ರೇವಿಮಯ್ಯ, ಚಿಕ್ಕಪ್ಪಾಜಿ ಇಬ್ಬರೂ ಮೇಲೆ ಇದ್ದುದರಿಂದ ಜೀವ ಬಂದ ಹಾಗೆ ಆಯಿತು'' ಎಂದಳು ಚಾಮಲದೇವಿ.

"ಆಗ ಈ ಅರ್ಚಕರೇ ಹೇಳಿದ್ದರು ನಮ್ಮ ಪಟ್ಟಮಹಾದೇವಿ ಎಷ್ಟು ಚೆನ್ನಾಗಿ ಹಾಡುತ್ತಾರೆ ಎಂದು'' ಎಂದಳು ಪದ್ಮಲದೇವಿ.

"ತಮ್ಮನ್ನೂ ಪ್ರಾರ್ಥಿಸಿದೆ. ಆದರೆ ತಾವು ನನ್ನ ಪ್ರಾರ್ಥನೆಗೆ ಮನ್ನಣೆ ಕೊಡಲಿಲ್ಲ.''

ಅದೇ ಮಾತಿನ ಗುಂಗಿನಲ್ಲಿ ಏನೇನೋ ಹಳೆಯದನ್ನೆಲ್ಲಾ ನೆನಪು ಮಾಡಿಕೊಂಡರು. ಆ ಮಾತುಗಳು ಅಲ್ಲೊಂದು ಇಲ್ಲೊಂದು ಎಳೆ ಸಿಕ್ಕಿದಂತೆ ಅನ್ನಿಸಿ, "ನನಗೆ ರೇವಿಮಯ್ಯನಿಂದ ಇಡೀ ಕಥೆಯನ್ನು ಕೇಳಬೇಕೆನ್ನಿಸಿದೆ. ಒಂದು ವ್ಯಕ್ತಿ ಒಂದು ಶಕ್ತಿಯಾಗಬೇಕಾದರೆ ಏನೆಲ್ಲ ಅನುಭವವಾಗಬೇಕೆಂದು ಅದರಿಂದ ತಿಳಿಯಬಹುದು ಎನ್ನಿಸುತ್ತದೆ'' ಎಂದ ಸ್ಥಪತಿ ಜಕಣಾಚಾರ್ಯ.

"ನಾನೇನೋ ಎಲ್ಲವನ್ನೂ ಹೇಳುತ್ತೇನೆ. ಆದರೆ ನೀವೂ ಹೃದಯ ತೆರೆದು ನಿಮ್ಮ ಕಥೆ ಹೇಳಬೇಕು'' ಎಂದರೆ ರೇವಿಮಯ್ಯ.

"ನಾನೊಬ್ಬ ಪುಟ್ಟ ರೂವಾರಿ. ನನ್ನ ಕಥೆಯಿಂದ ಯಾರಿಗೆ ಏನು ಪ್ರಯೋಜನ ? ಅದೂ ಅಲ್ಲದೆ ಅದೆಲ್ಲವನ್ನೂ ನಾನು ಪಟ್ಟಮಹಾದೇವಿಯವರಲ್ಲಿ ನಿವೇದಿಸಿದ್ದೇನೆ. ನನ್ನ ಹೃದಯದ ಹೊರೆ ಇಳಿಸಿಕೊಂಡಿದ್ದೇನೆ. ಒಂದು ಸಂಯಮದ ಬಾಳಿಗೂ ಮತ್ತೊಂದು ಆತುರದ ಬಾಳಿಗೂ ಏನು ಸಂಬಂಧ ?'' ಎಂದ ಸ್ಥಪತಿ.

"ಎಲ್ಲರ ಬಾಳಿನಲ್ಲೂ ಒಂದಲ್ಲ ಒಂದು ಮಾನವೀಯ ಮೌಲ್ಯ ಅಡಗಿರುತ್ತದೆ. ಯಾವುದಕ್ಕೂ ಏನೂ ಸಂಬಂಧವಿಲ್ಲದ ವ್ಯಕ್ತಿಯಾಗಿದ್ದ ಬೂತುಗನ ಕತೆ ಸಹ ನಮಗೆ ಅಪರೂಪದ ಮೌಲ್ಯ ದೊರಕಿಸಿ ಕೊಟ್ಟಿತು ಎನ್ನುವಾಗ, ನೀವು ಶಿಲ್ಪದಲ್ಲಿ ನೂತನ ಯುಗ ಪ್ರವರ್ತಕರಾದ ಮಹಾ ರೂವಾರಿಗಳು. ನಿಮ್ಮ ಕಥೆ ಲೋಕಕ್ಕೆಲ್ಲಾ ತಿಳಿಯಬೇಕು. ಹೇಳಿ'' ಎಂದಳು ಶಾನ್ತಲದೇವಿ.

"ಈಗ ಇಲ್ಲಿಯೇ ಕುಳಿತರೆ ಆರೋಗಣೆಗೆ ವೇಳೆಯಾಗುತ್ತದೆ'' ಎಂದು ಅರ್ಚಕ ಸೂಚಿಸಿದ.

ಎಲ್ಲರೂ ತಲೆಯೆತ್ತಿ ನೋಡಿದರು. ಆಗ ಅವರಿಗೆ ಸೂರ್ಯ ನಡುನೆತ್ತಿಗೇರಿದ್ದಾನೆ ಎಂಬುದು

ಗೋಚರವಾಯಿತು. ಆವರೆಗೆ ಅವರು ಆಕಾಶದ ಬುಡದಲ್ಲೇ ಇದ್ದರೂ ಸೂರ್ಯನ ತಾಪವಾಗಲಿ, ಸಮಯ ಕಳೆದುದಾಗಲಿ ಮನಸ್ಸಿಗೆ ಬರಲೇ ಇಲಲ.

"ಹಾಗಾದರೆ ?'' ಎಂದಳು ಪದ್ಮಲದೇವಿ.

"ಮಧ್ಯಾಹ್ನವಾದ ಮೇಲೆ ಚಿಕ್ಕಬೆಟ್ಟಕ್ಕೆ ಹೋಗೋಣ. ಪೂರ್ಣಿಮೆಯ ಸನ್ನಿಯದ ದಿನ. ಬೆಳುದಿಂಗಳು ಇರುತ್ತದೆ. ಹೆಚ್ಚುಕಡಿಮೆ ಕುಳಿತರೂ ಚಿಂತೆಯಿಲ್ಲ ನಿಧಾನವಾಗಿ ಹಿಂತಿರುಗಬಹುದು'' ಎಂದಳು ಶಾನ್ತಲದೇವಿ.

"ಸಂಜೆಯ ಆರೋಗಣೆಗೆ ?'' ಎಂದ ಅರ್ಚಕ.

"ಮುಗಿಸಿಕೊಂಡು ಬೆಟ್ಟವೇರೋಣ. ಇಲ್ಲಿ ಸಂಜೆ ಉಪವಾಸವಿದ್ದರೂ ಏನೂ ತೊಂದರೆಯಿಲ್ಲ'' ಎಂದಳು ಶಾನ್ತಲದೇವಿ.

ಎಲ್ಲರೂ ಇಳಿದು ಬಿಡಾರಕ್ಕೆ ಬಂದರು. ಮಹಾವೀರ ಜಯಂತಿಯ ಮಹಾ ಭೋಜನವೊಂದು ಸಿದ್ಧವಾಗಿತ್ತು. ಅದರ ನಂತರ ವಿಶ್ರಾಂತಿ ಪಡೆದು ಸೂರ್ಯ ಸ್ವಲ್ಪ ಇಳಿಮುಖವಾದ ಕೂಡಲೇ ಎಲ್ಲರೂ ಕಟವಪ್ರವನ್ನೇರಿದರು. ವೃದ್ಧ ಅರ್ಚಕನೂ ಜೊತೆಗೂಡಿ ಬಂದಿದ್ದ. ಅಲ್ಲಿಯ ಚಂದ್ರಗುಪ್ತ ಬಸದಿ, ಚಾವುಂಡರಾಯ ಬಸದಿಗಳಿಗೆ ಭೇಟಿಯಿತ್ತು ನಂತರ ದೂರದ ಗೊಮ್ಮಟಸ್ವಾಮಿಗಿದಿರಾಗಿ ಎಲ್ಲರೂ ಮಂಡಿಸಿದರು. ಅದೇ ಈ ಹಿಂದಿನ ತಾಣ. ರೇವಿಮಯ್ಯನಿಗೆ ಗೊಮ್ಮಟ ಕಿರೀಟಧಾರಣೆ ಮಾಡಿದಂತೆ ಮೊದಲಿಗೆ ಕಂಡ ತಾಣ.

ರೇವಿಮಯ್ಯ, "ನಾನಿಲ್ಲಿಂದಲೇ ನಮ್ಮ ಬಾಹುಬಲಿಸ್ವಾಮಿ ಅಲಂಕೃತನಾಗಿದ್ದುದನ್ನು ಕಂಡುದು'' ಎಂದು ಆರಂಭಿಸಿ ತಾನು ಮೊದಲು ಶಾನ್ತಲದೇವಿಯನ್ನು ಕಂಡ ದಿನದಿಂದ ಅಂದಿನವರೆಗೆ ಏನೆಲ್ಲ ನಡೆದಿದೆ ಎಂಬುದನ್ನು ವಿವರಿಸಿದ, ಅವನ ಮಾತಿನಲ್ಲಿ ಚಾಮವ್ವೆ. ದಣ್ಣಾಯಕಿತಿಯ ವಿಷಯ ಬಂದಾಗಲೆಲ್ಲ ಸಂಕೋಚ ತಲೆದೋರುತ್ತಿತ್ತು. ಅವಳು ಏನೆಲ್ಲ ಮಾಡಿದಳು ಎಂಬುದನ್ನು ಹೇಳುವಾಗ ಅವನು ಇಷ್ಟ ಪಟ್ಟಿದ್ದರೆ ಪರಮ ನೀಚ ಪ್ರವೃತ್ತಿ ಅವಳದು ಎಂದು ಹೇಳಬಹುದಿತ್ತು. ಇಡೀ ಬಾಳನ್ನೇ ಸಂಯಮದಿಂದ ಕಳೆದ ಅವನ ಮಾತಿನಲ್ಲಿ ಅತಿ ಹೀನಾಯವಾಗಲಿ, ಅತಿ ಉತ್ಪ್ರೇಕ್ಷೆಯಾಗಲಿ ಇರಲಿಲ್ಲ. ಎಲ್ಲವನ್ನೂ ಹೇಳಿ ಮುಗಿಸಿ, "ನಮ್ಮ ಪಟ್ಟಮಹಾದೇವಿಯವರು ನನ್ನ ಹೃದಯದ ಅಮ್ಮಾಜಿ ಸರಿ. ಒಂದು ತಪ್ಪನ್ನು ಮಾಡಿದ್ದಾರೆ. ನನಗೆ ಅದನ್ನು ಹೇಳಲು ಸ್ವಾತಂತ್ರವಿಲ್ಲ. ಆದರೆ ನಾನು ಅದನ್ನು ಈವರೆಗೂ ಅದುಮಿ ಹಿಡಿದು ಕೊಂಡಿದ್ದೆ. ಇನ್ನು ಸಾಧ್ಯವಿಲ್ಲ. ಹೇಳುತ್ತೇನೆ. ರಾಣಿ ರಾಜಲದೇವಿಯವರೂ ನನ್ನನ್ನು ಕ್ಷಮಿಸುವರೆಂದು ನಂಬಿದ್ದೇನೆ. ಈ ಬಾಗಿಲು ಕಾಯುವವನಿಗೇಕೆ ಈ ಹಿರಿಯಮಾತು ಎನಿಸಿದರೆ, ಒಂದು ಸಮಯ ನನ್ನ ಮಾತು ತಪ್ಪು ಎನಿಸಿದರೆ ನನ್ನನ್ನು ಕ್ಷಮಿಸುವರೆಂದು ನಂಬಿದ್ದೇನೆ. ಈ ಮೂವರೂ ಹಿರಿಯರಾಣಿಯರು ಇಂದು ಇಲ್ಲಿ ಉಪಸ್ಥಿತರಿರುವುದು ಸಹ ಬಹಳ ಸಹಾಯಕ ನನಗೆ. ನಾನು ಈವರೆಗೆ ಹೇಳಿದ ಕತೆಯಲ್ಲಿ ಅವರ ಕತೆಯೂ ಅಡಕವಾಗಿದೆ. ಒಂದೇ ತಾಯಿ ತಂದೆಗಳ ರಕ್ತ ಹಂಚಿಕೊಂಡು ಹುಟ್ಟಿದ ಸೋದರಿಯರೇ ಒಂದು ಮನಸ್ಸಿನಿಂದ ಬಾಳಲಿಲ್ಲ. ಸನ್ನಿವೇಶಗಳು ಅವರನ್ನು ಬಾಳಗೊಡಲಿಲ್ಲ. ಯಾರ ಗರ್ಭಸಂಜಾತನಿಗೆ ಮುಂದಿನ ಪಟ್ಟ ಎಂಬ, ಗೊತ್ತು ಗುರಿಯಿಲ್ಲದೆ ವಿಚಾರದ ಗುಂಗಿನಲ್ಲೇ ಅಡ್ಡದಾರಿಯಲ್ಲಿ ಅಡಿ ಇಡುವಂತಾಗಿ ಇಡೀ ಬಾಳನ್ನು ನಷ್ಟಮಾಡಿಕೊಂಡಾಯಿತು. ಅವರು ತಮ್ಮ ಅನುಭವದ ಹಿನ್ನೆಲೆಯಲ್ಲಿ ಸನ್ನಿಧಾನ ಶ್ರೀರಾಮನಂತೆ ಏಕಪತ್ನೀ ವ್ರತಸ್ತರಾಗಿರಬೇಕೆಂದು ರಾಣಿ ಪದ್ಮಲದೇವಿಯವರು ಮನಸಾ ಆಶಿಸಿದರು. ತಮ್ಮ ಬಾಳು ನಷ್ಟವಾದ ಹಾಗೆ, ನಮ್ಮ ಅಮ್ಮಾಜಿಯ,

ಚಿಕ್ಕಪ್ಪಾಜಿಯ ಬಾಳು ಗೊಂದಲಮಯವಾಗಬಾರದು, ನಷ್ಟವಾಗಬಾರದು ಎಂದು ವಿವೇಚಿಸಿದರು. ಆದರೆ ನಮ್ಮ ಅಮ್ಮಾಜಿ ಅವರನ್ನು ತಿದ್ದಲು ಹೊರಟ ಈ ಅಮ್ಮಾಜಿ–ತಾವೇ ಸವತಿಯರನ್ನು ಸ್ವಾಗತಿಸಿದ್ದಾರೆ. ಈವರೆಗೆ, ರಾಣಿ ಬಮ್ಮಲದೇವಿಯವರಾಗಲಿ, ರಾಣಿ ರಾಜಲದೇವಿಯವರಾಗಲಿ ಸವತಿಯರ ಹಾಗೆ ವರ್ತಿಸಿಲ್ಲವೆಂಬುದು ನಿಜ. ಎಲ್ಲ ಕಾಲಕ್ಕೂ ಹಾಗೆಯೇ ಇರಬಹುದೆಂದು ಹೇಳುವುದು ಹೇಗೆ ? ಈವರೆಗಿನ ಅನುಭವದಲ್ಲಿ ಒಂದು ವೇಳೆ ಅವರಿಬ್ಬರೂ ಈಗಿನ ಹಾಗೆಯೇ ಇರಬಹುದೆಂದು ಭಾವಿಸಿದರೂ ಈಗ ಹೊಸದಾಗಿ ಬಂದಿರುವ ರಾಣಿ ಹಾಗೆ ಇದ್ದಾರೆಂದು ನಾನು ನಂಬಲಾರೆ. ಒಂದು ವೇಳೆ ಆ ರಾಣಿ ಇರಬಹುದಾದರೂ ಅವರ ಅಪ್ಪ ಅವರನ್ನು ಇರಗೊಡಲಾರ. ಆತ ಪ್ರತಿಯೊಂದರಲ್ಲಿ ನಾಮವೇ ಮುಖ್ಯವೆಂಬ ಕೂಪ ಮಂಡೂಕದಮನಷ್ಯ. ನಾಳೆ ಸಿಂಹಾಸನಕ್ಕೆ ಸಹ ನಾಮಧಾರಿಯೇ ಅಧಿಕಾರಿಯಾಗಬೇಕೆಂದು ಗುಂಪು ಕಟ್ಟಬಹುದು– ಮೊನ್ನೆ ಚಮ್ಮಾರರಿಗೆ ಪ್ರವೇಶ ನಿಷೇಧಿಸಲು ಗುಂಪು ಕಟ್ಟಿದಂತೆ. ಅದರಿಂದ ನಮ್ಮ ಅಮ್ಮಾಜಿ ನಿಜವಾಗಿ ತಪ್ಪು ಮಾಡಿದ್ದಾರೆ. ಅವರು ನಿರ್ಲಿಪ್ತರಾಗಿ ಇರಬಹುದು. ಈ ಮಕ್ಕಳು ಇದ್ದಾರೆ. ಬಲ್ಲಾಳದೇವರು, ಚಿಕ್ಕಬಿಟ್ಟಿದೇವರು, ವಿನಿಯಾದಿತ್ಯದೇವರು, ಹರಿಯಲದೇವಿಯವರು. ಇವರ ಭವಿಷ್ಯ ಭದ್ರವಾಗಬೇಡವೆ ? ಮತೀಯ ಘರ್ಷಣೆ ಒಮ್ಮೆ ಆರಂಭವಾದರೆ ಅದು ಬೆನ್ನುಹುಣಿ ಇದ್ದ ಹಾಗೆ. ವಾಸಿಯಾಗವುದೇ ಇಲ್ಲ. ಪಟ್ಟಮಹಾದೇವಿಯಾಗಿ ಸವತಿಗಂಧವಾರಣೆ ಎಂಬ ಬಿರುದನ್ನೇನೋ ಅಮ್ಮಾಜಿ ಪಡೆದುಕೊಂಡಿದ್ದಾರೆ. ಆದರೆ ಸದಾ ಶಾಂತಿ ಬಯಸುವ ಇವರು, ನಾಳೆ ಸಿಂಹಾಸನ ನನ್ನ ಮಕ್ಕಳಿಗೆ ದೊರಕದಿದ್ದರೇನು ನಷ್ಟವಿಲ್ಲ ಎಂದರೂ ಆಶ್ಚರ್ಯವಿಲ್ಲ. ಹಿರಿಯ ಹೆಗ್ಗಡೆಗಳು ಇದ್ದಾರೆ. ಹೆಗ್ಗಡತಿಯವರು ಇದ್ದಾರೆ. ಹಿರಿಯ ರಾಣಿಯರು ನೀವಿದ್ದೀರಿ. ದಯವಿಟ್ಟು ಈ ಅಮ್ಮಾಜಿಯಿಂದ ಮುಂದೆ ಈ ಬಗೆಯ ತಪ್ಪಾಗದಂತೆ, ಈ ಮಕ್ಕಳಿಗೆ ಅನ್ಯಾಯವಾಗದಂತೆ ಮಾತು ತೆಗೆದುಕೊಳ್ಳಿ'' ಎಂದು ಉದ್ವೇಗದಿಂದ ಹೇಳಿದ.

ಶಾನ್ತಲದೇವಿ ನಕ್ಕಳು.

"ಏಕೆ ಅಮ್ಮಾಜಿ. ನನ್ನ ಮಾತು ಹಾಗಾದರೆ ನಗಚಾಟಲೆ''

"ರೇವಿಮಯ್ಯ, ನೀನು ನಿನ್ನ ಸ್ವಂತ ದೃಷ್ಟಿಯಿಂದ ಆಲೋಚಿಸುತ್ತೀಯೆ. ನಿನಗೆ ಈ ಪ್ರಪಂಚ ಎಂದರೆ ನಾನು, ನನ್ನ ಮಕ್ಕಳು ಎನ್ನಿಸಿದೆ. ಅದರಿಂದ ಒಂದು ಸ್ವಲ್ಪ ಅನುಮಾನ ಬಂದರೂ ನಮಗೇನೋ ಮಹಾತೊಂದರೆಯಾಗುತ್ತದೆ ಎಂದು ನೀನು ಹೆದರತೊಡಗಿದ್ದಿಯೆ. ಅದರಿಂದಲೇ ನಿನ್ನ ಮಾತು ವಿಸ್ತಾರವಾದ ದೃಷ್ಟಿಯಲ್ಲಿ ನಗಚಾಟಲೆ ಆಗುತ್ತದೆ. ಇಲ್ಲಿ ನನ್ನ ಮಾತಪಿತೃಗಳು ಇದ್ದಾರೆ. ಅವರಾಗಲಿ, ನಾನಾಗಲಿ ಎಂದೂ ಅರಮನೆಯ ಸಂಬಂಧ ಹೊಂದುವವೆಂದು ಕಲ್ಪಿಸಲಿಲ್ಲ; ಆಶಿಸಲಿಲ್ಲ. ಆದರೆ, ನಿನ್ನ ಹರಕೆಯೋ, ಈ ಗೊಮ್ಮಟಸ್ವಾಮಿಯ ಕರುಣೆಯೋ, ನಮ್ಮ ತಂದೆ ಪೂಜಿಸುವ ಧರ್ಮೇಶ್ವರ ವರಪ್ರಸಾದವೋ ನನಗೆ, ನಿರೀಕ್ಷಿಸದೆ ಇದ್ದ ಎಲ್ಲ ಸ್ಥಾನಮಾನ ಗೌರವಗಳು ದೊರೆತವು. ಅದಕ್ಕಾಗಿ ನಾನು ಅಟ್ಟಹಾಸ ಪಡಬಾರದು. ಅದು ನನ್ನ ಜನ್ಮಸಿದ್ಧ ಹಕ್ಕು ಎಂದು ಹಟ ತೊಡಬಾರದು. ಆಲಭ್ಯವಾದುದು ನನಗೇ ಲಭ್ಯವಾಗಿರುವಾಗ, ನನ್ನ ಮಕ್ಕಳಿಗೆ ಲಭ್ಯವಾಗಬೇಕಾದುದು ಲಭ್ಯವಾಗುವುದಿಲ್ಲ ಎಂದು ಸಂಶಯ ಪಡುವ ನಿನ್ನ ಮನಸ್ಸಿಗೆ ಏನೋ ಕುಕಲ್ಪನೆ ಆಗಿದೆ. ಅದನ್ನೆಲ್ಲ ಬಿಟ್ಟುಬಿಡು. ಸನ್ನಿಧಾನ ಎಂದೂ ತಮ್ಮ ಸಂತಾನಕ್ಕೆ ದ್ರೋಹ ಬಗೆಯುವುದಿಲ್ಲ. ಅದರಿಂದ ಈ ವಿಷಯದಲ್ಲಿ ನೀನು ಚಿಂತಿಸಬೇಡ. ನ್ಯಾಯ ಪಕ್ಷ ಹಿಡಿಯುವ ನಿನ್ನಂತಹವರನ್ನು ಪಡೆದ ಈ ಪೊಯ್ಸಳ ರಾಜ್ಯದಲ್ಲಿ ಅನ್ಯಾಯವಾಗುವುದಿಲ್ಲ'' ಎಂದಳು ಶಾನ್ತಲದೇವಿ.

"ಕೈ ಬೆರಳುಗಳೆಲ್ಲ ಒಂದೇ ಸಮವಿಲ್ಲ ಅಮ್ಮಾಜಿ.''

"ಅದಕ್ಕೇನು ಮಾಡಬೇಕು ಎಂದು ನಿನ್ನ ಸಲಹೆ ?''

"ಸವತಿಯರಿಂದ ತೊಂದರೆಯಾಗದಂತೆ ಏನಾದರೂ ಮಾಡಬೇಕು.''

ಪದ್ಮಲದೇವಿ, ಚಾಮಲದೇವಿ, ಬೊಪ್ಪದೇವಿಯರು ಘೊಳ್ಳೆಂದು ನಕ್ಕರು. "ಒಳ್ಳೆ ರೇವಿಮಯ್ಯ, ನೀನು ತುಂಬಾ ಜಾಣನೆಂದೇ ನಾವೆಲ್ಲಾ ಈವರೆಗೆ ತಿಳಿದಿದ್ದೆವು. ಮಾಡಿದ್ದೆಲ್ಲ ಕಥೆ ಹೇಳಿ, ನಮಗೆ ಅದರಿಂದ ದೊರೆತ ಫಲವನ್ನು ಕಂಡು, ನಿನ್ನ ಬಾಯಿಂದ ಈ ಬಗೆಯ ಮಾತು ಬಂದರೆ ಏನು ಹೇಳುವುದು ? ಮುಂದೆ ಏನೋ ಆಗುವುದೆಂದು ಇಲ್ಲದ್ದೆಲ್ಲ ಊಹಿಸಿಕೊಂಡು ಏನೇನೋ ಮಾಡಹೋಗುವುದು ಮೂರ್ಖತನದ ಪರಮಾವಧಿ'' ಎಂದಳು ಪದ್ಮಲದೇವಿ.

"ಏನೋ ನನಗನ್ನಿಸಿದ್ದನ್ನು ಹೇಳಿಬಿಟ್ಟಿದ್ದೇನೆ. ಇದರ ಮೇಲೆ ಪಟ್ಟಮಹಾದೇವಿಯವರ ಇಷ್ಟ''

"ನಿನ್ನ ಮನಸ್ಸಿಗೂ ನೋವಾಗುವುದು ಬೇಡ. ಕೆಲವೊಮ್ಮೆ ನಿನಗೆ ಹೊಳೆವುದೆಲ್ಲ ಅಂತಃಪ್ರೇರಿತ. ಅದರಿಂದ ನಿನಗೆ ನಾನು ಒಂದು ಮಾತನ್ನು ಕೊಡುತ್ತೇನೆ ರೇವಿಮಯ್ಯ. ನನಗೆ, ನನ್ನ ಸಂತಾನಕ್ಕೆ ಕೆಡುಕನ್ನು ಯಾರಾದರೂ ಬಯಸುತ್ತಾರೆ ಎಂದು ಮನಸ್ಸಿಗೆ ಎಂದಾದರೂ ಸುಳುವು, ನಿನಗೆ ಈಗ ಹೊಳೆದಂತ ಹೊಳೆದರೆ, ಈಗ ಅಂತಹವರ ಮನಸ್ಸಿಗೆ ಶಾಂತಿ ಸಿಕ್ಕಲಿ, ಅವರು ಸನ್ಮಾರ್ಗಿಗಳಾಗಲಿ ಎಂದು ಈ ಕಟವಪ್ರದ ಮೇಲೆ ಬಂದು ಶಾಂತಿನಾಥನ ಬಸದಿ ಮಾಡಿಸುತ್ತೇನೆ. ಸರಿ ತಾನೆ ?''

ಅವನಿಗೆ ಪೂರ್ಣ ಸಮಾಧಾನವೆನಿಸಲ್ಲಿ, ಸುಮ್ಮನೆ ತಲೆ ಹಾಕಿದ, ಇಷ್ಟಾದರೂ ನನ್ನ ಮಾತಿಗೆ ಬೆಲೆ ಕೊಟ್ಟರಲ್ಲ ಎಂದು.

ಸ್ವಲ್ಪ ಹೊತ್ತು ಯಾರೂ ಮಾತನಾಡಲಿಲ್ಲ.

ಆಮೇಲೆ ಚಾಮಲದೇವಿ, "ಸ್ಥಪತಿಗಳು ಈಗ ಆರಂಭಿಸಬೇಕಲ್ಲ'' ಎಂದಳು.

ಅವನು, "ವಿಷಯ ಹೇಳುವುದಕ್ಕೆ ಮುಂಚೆ ನಾನು ಒಂದು ಮಾತನ್ನು ಸ್ಪಷ್ಟಮಾಡಬೇಕಾಗುತ್ತದೆ. ಯಾವುದೋ ಒಂದು ಸಂದರ್ಭದಲ್ಲಿ ನಾನು ಆತುರ ಪಟ್ಟೆ ತಪ್ಪು ಹೆಜ್ಜೆ ಇಟ್ಟೆ ಅದರ ಕಾರಣ ಏನೆಂಬುದು ನನ್ನ ಕುಮಾರನಿಗಾಗಲಿ, ನನ್ನ ಪತ್ನಿಗಾಗಲಿ ಗೊತ್ತಿಲ್ಲ. ನನಗೆ ಹುಚ್ಚು ಹಿಡಿದು, ಹೇಳದೆ ಕೇಳದೆ ಹೊರಟು ಹೋಗಿರಬಹುದೆಂದು ಅವರುಗಳು ಭಾವಿಸಿರಬಹುದು. ಇನ್ನಿದುವರೆಗೆ ಸಹ ಅವರಿಗೆ ಕಾರಣ ಗೊತ್ತಿಲ್ಲ. ಈ ಸಮಾಗಮವಾಯಿತಲ್ಲ, ನಾನು ಅತ್ಯಂತ ಯೋಗ್ಯಸ್ಥಾನದಲ್ಲಿ ಒಳ್ಳೆಯ ಕೆಲಸದಲ್ಲಿ ತೊಡಗಿದ್ದೀನಲ್ಲ, ಎಂಬ ತೃಪ್ತಿ ಸಮಾಧಾನಗಳು ಅವರನ್ನು ಹರ್ಷಿತರನ್ನಾಗಿ ಮಾಡಿದೆ. ಮತ್ತು ಹಳೆಯ ಯಾವುದನ್ನೂ ನೆನಸುವುದು ಬೇಡ. ಅದು ಕೆಟ್ಟ ಕನಸಿನಂತೆ ಮಾಯವಾಗಿದೆ ಎಂದು ಭಾವಿಸೋಣವೆಂದು ಹೇಳುತ್ತಾರೆ. ಒಂದು ರೀತಿಯಿಲ್ಲ ಅದು ಸರಿ. ನನಗೆ ಈ ಪಟ್ಟಮಹಾದೇವಿಯವರ ಸಂಪರ್ಕ ಬರದೆ ಇದ್ದಿದ್ದರೆ ನಾನು ಅದೇ ಸರಿ ಎಂದು ನನ್ನ ತಪ್ಪನ್ನು ಹಾಗೆಯೇ ಗುಟ್ಟಾಗಿ ಮುಚ್ಚಿಟ್ಟು ಬಿಡುತ್ತಿದ್ದೆ. ಅದು ಒಂದು ರೀತಿಯಲ್ಲಿ ನನ್ನನ್ನು ನಂಬಿರುವ ಈ ಪ್ರತ್ನೀ ಪುತ್ರರಿಗೆ ಮೋಸಗೈದಂತೆ ಆಗುತ್ತದೆ. ಅದರ ಬದಲು ತಪ್ಪೊಪ್ಪಿಕೊಳ್ಳುವ ಧೈರ್ಯವೇ ಎಲ್ಲಕ್ಕಿಂತ ಹಿರಿದಾದ ಪ್ರಾಯಶ್ಚಿತ್ತ ಎಂಬ ತತ್ವವನ್ನು ನಾನು ಪಟ್ಟಮಹಾದೇವಿಯವರಿಂದ ಅರಿತಿದ್ದೇನೆ. ಅದರಿಂದ ಈಗ ನಾನು ಹೇಳುವ ವಿಷಯಗಳು ನನ್ನ ಪತ್ನೀ ಪುತ್ರರಿಗೆ ತಾಪದಾಯಕವಾಗುಬಹುದು. ಅದನ್ನು ಅವರು ಸಹಿಸುತ್ತಾರೆಂದೂ ನನ್ನನ್ನು ಕ್ಷಮಿಸುತ್ತಾರೆಂದೂ ಭಾವಿಸಿದ್ದೇನೆ'' ಎಂದು ಮಾತನ್ನು ನಿಲ್ಲಿಸಿ ಅವರುಗಳ ಕಡೆ ನೋಡಿದ.

"ಅವರಿಬ್ಬರಿಗೂ ಎಲ್ಲ ವಿಚಾರ ಗೊತ್ತಿದೆ. ನನಗೆ ತಿಳಿದ ಎಲ್ಲ ವಿಷಯವನ್ನೂ ಅವರಿಗೆ

ತಿಳಿಸಿದ್ದೇನೆ. ನೀವೆಂದಂತೆ ಕೇಳಿದಾಗ ಅವರಿಗೆ ಅದು ತಾಪದಾಯಕವೆನಿಸಿತು. ಆದರೂ ಈ ಸಮಾಗಮದ ಸಂತೋಷದಲ್ಲಿ ಆ ತಾಪವನ್ನು ಕಡೆಗಣಿಸಿದ್ದಾರೆ. ಅದರಿಂದ ಈಗ ನೀವು ಹೊಸದಾಗಿ ಏನೂ ತಾಪವನ್ನು ಕೊಟ್ಟಂತಾಗುವುದಿಲ್ಲ. ತನ್ನ ಸರ್ವಸ್ವವನ್ನೂ ತ್ಯಾಗಮಾಡಿ ನಗ್ನವಾಗಿ ನೆಮ್ಮದಿಯ ಮುಗುಳ್ನಗು ಸೂಚಿಸುತ್ತಾ ನಿಂತಿರುವ ಈ ಗೊಮ್ಮಟಸ್ವಾಮಿಯ ಇದಿರಿನಲ್ಲಿ, ಈ ಹಿರಿಯರುಗಳ ಸಮ್ಮುಖದಲ್ಲಿ ನೀವೆ ಒಮ್ಮೆ ಕಥೆ ಹೇಳಿಬಿಡಿ. ಆಗ ನಿಮ್ಮ ಮನಸ್ಸಿನಲ್ಲಿಯೂ ಸಹ ಯಾವ ಅಳುಕೂ ಉಳಿಯುವುದಿಲ್ಲ'' ಎಂದಳು ಶಾನ್ತಲದೇವಿ.

ಜಕಣಾಚಾರ್ಯನು ತನ್ನ ಕಥೆಯನ್ನು ಹೇಳಿ ಅದು ಮುಗಿದ ಮೇಲೆ, "ಜ್ಯೋತಿಷ್ಯದಲ್ಲಿ ನಾನು ಮಾಡಿದ ತಪ್ಪನ್ನು ನಗುಮುಖದಿಂದ ಪಟ್ಟಮಹಾದೇವಿಯವರು ತಿಳಿಸಿದರು. ನನ್ನನ್ನು ತಿರಸ್ಕರಿಸದೆ, ನನ್ನ ನಡವಳಿಕೆಗೆ ಸಹಾನುಭೂತಿ ತೋರಿಸುವುದರ ಜೊತೆಗೆ ನಾನು ಮಾಡಿದ ತಪ್ಪಿನ ಘೋರ ಪರಿಣಾಮ ನಿರಪರಾಧಗಳ ಮೇಲೆ ಹೇಗೆ ಆಗಿರುತ್ತದೆ ಎಂಬುದನ್ನು ನನ್ನ ಮನಸ್ಸಿಗೆ ತಟ್ಟುವಂತೆ ಮಾಡಿ, ನನ್ನನ್ನು ತಿದ್ದಿದರು. ಅಷ್ಟೇ ಅಲ್ಲ. ನನ್ನನ್ನು ಮಾನವನ್ನಾಗಿ ಮಾಡಿದರು. ನನ್ನ ಇಡೀ ಕುಟುಂಬದಲ್ಲಿ ಹಬ್ಬಿ ನೆಲೆಸಬಹುದಾಗಿದ್ದ ಕಹಿಯನ್ನು ಶಾಶ್ವತವಾಗಿ ದೂರ ಮಾಡಿದರು. ನನ್ನ ದಾಂಪತ್ಯ ಜೀವನದ ಪುನರ್ಜನ್ಮವು ಈ ನನ್ನ ಹೆಮ್ಮೆಯ ಪುತ್ರನ ಉಡುಗೊರೆಯ ಜೊತೆಯಲ್ಲಿಯಾಗಿದೆ. ನಾವು ಮೂವರೂ ಪಟ್ಟಮಹಾದೇವಿಯವರಿಗೆ ಆಜನ್ಮ ಋಣಿಗಳು. ಮಾನವರಲ್ಲಿ ದ್ವೇಷಾಸೂಯೆಯನ್ನು ಹೆಚ್ಚಿಸಿ, ಕಿಚ್ಚನ್ನು ಹಬ್ಬಿಸಿ, ಸ್ವಾರ್ಥ ಸಾಧಿಸಿ, ಆನಂದ ಪಡುವ ಮಾನವ ರೀತಿಗೆ ವಿರುದ್ಧವಾಗಿ, ಕ್ಷಮೆ ಪ್ರೇಮಗಳ ಮೂಲಕ ಬಾಳನ್ನು ಭವ್ಯ ಮಾಡಿಕೊಳ್ಳಲು ಸಾಧನವಾದ ತ್ಯಾಗ ಬುದ್ಧಿಯನ್ನು ರೂಪಿಸುವ, ಆಚರಿಸುವ, ನಮ್ಮ ಪಟ್ಟಮಹಾದೇವಿಯವರು ಎಲ್ಲಕ್ಕೂ ಹೆಚ್ಚು ಮೌಲ್ಯವನ್ನು ಮಾನವೀಯತೆಗೆ ಕೊಡುತ್ತಾರೆಂಬುದು ನಾನು ಕಂಡು ಕೊಂಡು ವಿಷಯ. ನಮ್ಮದು ಬಿಡಿ. ಎಲ್ಲವೂ ನನ್ನ ಅವಿವೇಕ ಆತುರಗಳಿಂದ ಆದುದು. ಚಟ್ಟಲದೇವಿ, ಮಾಯಣರ ಬಾಳು ಹಸನಾದುದನ್ನು ನೆನಸಿಕೊಂಡರೆ ಪರಮಾಶ್ಚರ್ಯವಾಗುತ್ತದೆ. **ಮುರಿಯುವುದಲ್ಲ ಮಾನವರ ಕೆಲಸ, ಕಟ್ಟುವುದು.** ಪಟ್ಟಮಹಾದೇವಿಯವರೆಂದಂತೆ ಎಲ್ಲವನ್ನೂ ಈ ಭವ್ಯ ಗೊಮ್ಮಟಸ್ವಾಮಿಯ ಸಾಕ್ಷಿಯಾಗಿ ತೆರೆದ ಮನದಿಂದ ಹೇಳಿದ್ದೇನೆ. ನಿಮ್ಮಗಳೆದುರಿಗೆ ಹೇಳಿಬಿಟ್ಟಿರುವುದರಿಂದ ನನ್ನಲ್ಲಿ ತಪ್ಪು ಮಾಡಿದೆನೆಂಬ ಅಳುಕೂ ಉಳಿಯುವುದಿಲ್ಲವೆಂದು ಭಾವಿಸಿದ್ದೇನೆ. ಈ ಗಳಿಗೆಯವರೆಗೆ ನನ್ನ ಪತ್ನೀ ಪುತ್ರರು ಈ ಸಮಾಗಮದ ನಂತರ ಎಲ್ಲ ತಿಳಿದಿದ್ದರೂ ಒಗ್ಗಿಸಿಕೊಂಡು ನನಗೆ ಸುಖ ನೀಡಿದ್ದಾರೆ. ಆದರೆ ನಾನೇ ಒಂದು ಬಗೆಯ ಕೃತಕ ವರ್ತನೆಯನ್ನು ರೂಪಿಸಿಕೊಂಡಿದ್ದೆ. ಏಕೆಂದರೆ ಏತಕ್ಕೆ ಮನೆಯನ್ನು ತೊರೆದು ಹೊದೆನೆಂದು ಕೇಳಿದರೆ ಸಮಾಧಾನ ತರುವ ಕಾರಣವೊಂದು ನನ್ನಿಂದ ಹೇಳಲು ಸಾಧ್ಯವಾಗಿರಲಿಲ್ಲ. ಅವರೆಂದಾದರೂ ಕೇಳಿಬಿಟ್ಟರೆ ಏನು ಹೇಳಲಿ ಎಂಬ ಅಳುಕೂ ಇತ್ತೂ. ಈಗ ನಿಶ್ಚಿಂತೆಯಾಯಿತು; ನಿರಾಳವಾಯಿತು. ಇನ್ನು ಮುಂದೆ ನನ್ನ, ಹಾಗೂ ನನ್ನ ಪುತ್ರನ ಸೇವೆ ಈ ಪಟ್ಟಮಹಾದೇವಿಯವರಿಗೆ, ಅವರು ಬೆಳಗಿದ ಈ ಪೊಯ್ಸಳ ವಂಶಕ್ಕೆ ಮೀಸಲು'' ಎಂದು ಹೇಳಿದ

ರೇವಿಮಯ್ಯನ ಕತೆ, ಜಕಣಾಚಾರ್ಯ ಕಥೆ ಕೇಳುವುದರಲ್ಲಿ ಯಾರಿಗೂ ಸಮಯದ ಅರಿವೇ ಆಗಿರಲಿಲ್ಲ. ಪದ್ಮಲದೇವಿ ಆಕಾಶ ನೋಡಿ, "ನೋಡಿ, ಚಂದ್ರ ಎಲ್ಲಿಗೆ ಬಂದಿದ್ದಾನೆ. ಪೂರ್ಣಿಮೆಗಿನ್ನೆರಡು ದಿನವಿದೆ. ಅಷ್ಟಸಷ್ಟು ಅವನು ಅಪೂರ್ಣನೆ. ಹಾಗೆಯೇ ಪಟ್ಟಮಹಾದೇವಿಯ ಸಂಪರ್ಕ ಬಂದವರೆಲ್ಲ ಪರಿಪೂರ್ಣತೆಯನ್ನು ಪಡೆದು ಬಾಳನ್ನು ಆನಂದದಾಯಕ ಮಾಡಿಕೊಂಡರೂ ನಾವು ಮಾತ್ರ ನಮ್ಮ ಅವಿವೇಕನತದಿಂದ ಅಪೂರ್ಣ ಬಾಳಿಗೇ ನಮ್ಮನ್ನು ಗಂಟು ಹಾಕಿಕೊಂಡೆವು. ನಮ್ಮ ವಿಷಯದಲ್ಲಿ ಪಟ್ಟಮಹಾದೇವಿ ಸಹ ಕೃತಕೃತ್ಯರಾಗಲಿಲ್ಲ. ಅವರು ಕೃತಕೃತ್ಯರಾಗದಿರುವುದಕ್ಕೆ ನಾವು ಕಾರಣರಾದ್ದರಿಂದ

ಆ ಅಪೂರ್ಣತೆ ನಮ್ಮ ಕೊಡುಗೆ. ಆದರೂ ಅವರ ಕ್ಷಮಾಶೀಲ ಗುಣ ನಮ್ಮನ್ನು ಹತ್ತಿರಕ್ಕೆ ತಂದಿದೆ. ನಮ್ಮ ಕಥೆಯನ್ನು ಕೇಳಲು ನಮಗೆಷ್ಟು ಉತ್ಸಾಹ ಬಂದಿತೋ ಅಷ್ಟೇ ಉತ್ಸಾಹ ಸ್ಥಪತಿಗಳ ಕತೆ ಕೇಳುವುದರಲ್ಲಿಯೂ ನಿಮಿರಿ ನಿಂತಿತ್ತು. ಸಮಯ ಕಳೆದುದೇ ತಿಳಿಯಲಿಲ್ಲ. ಇನ್ನು ಬಿಡಾರಕ್ಕೆ ಹೊರಡಬಹುದಲ್ಲವೆ ?'' ಎಂದಳು.

ಎಲ್ಲರೂ ಕಟವಪ್ರ ಇಳಿದು ಬಿಡಾರಕ್ಕೆ ಬಂದರು.

* * *

ಶಿಲ್ಪಕಲಾ ಶಾಲೆಯನ್ನು ಆರಂಭ ಮಾಡಲಾಯಿತು. ದೇವಮಂದಿರದ ಕೆಲಸಕ್ಕೆ ಬಂದಿದ್ದ ಅನೇಕ ರೂವಾರಿಗಳೆಲ್ಲ ಯುಕ್ತ ಸಂಭಾವನೆ ಪಡೆದುಕೊಂಡು ಅವರ ಸ್ವಂತಗ್ರಾಮಗಳಿಗೆ ಹೊರಟು ಹೋಗಿದ್ದರು. ಈ ಸಲ ಬೆಳುಗೊಳಕ್ಕೆ ಹೋಗಿದ್ದಾಗ ಕವಿ ಬೊಕಿಮಯ್ಯ ಮತ್ತು ರೂವಾರಿ ಗಂಗಾಚಾರ್ಯನನ್ನು ವೇಲಾಪುರಿಗೆ ಬರುವಂತೆ ಶಾನ್ತಲದೇವಿ ಸೂಚಿಸಿದ್ದಳು. ಅವರಿಗೆ ಪ್ರತಿಷ್ಠಾಪನೋತ್ಸವದ ಸಮಯದಲ್ಲಿ ನಡೆದ ಮತಪ್ರದರ್ಶನದ ವಿಷಯ ತಿಳಿದಿತ್ತು. ಅದರಿಂದ ತಾವು ದೂರವಿರುವುದೇ ವಾಸಿ ಎಂದು ನವುರಾಗಿ ತಪ್ಪಿಸಿಕೊಂಡಿದ್ದರು. ವಾಸ್ತವವಾಗಿ ತನ್ನ ಮಕ್ಕಳಿಗೆ ಬೊಕಿಮಯ್ಯನವರನ್ನು ಗುರು ಮಾಡಬೇಕೆಂಬುದು ಅವಳ ಇಚ್ಛೆಯಾಗಿತ್ತು. "ಬಾಹುಬಲಿಯ ಸಾನ್ನಿಧ್ಯ ಬಿಟ್ಟುಬರುವುದು ಈಗ ಕಷ್ಟ'' ಎಂದು ಮೆದುವಾಗಿ ಕವಿ ಹೇಳಿದ್ದ. ಅವರ ಮನಃಶಾಂತಿಗೆ ಇಲ್ಲಿ ಅನುಕೂಲವಿದ್ದರೆ ತಾನೇಕೆ ಅದನ್ನು ತಪ್ಪಿಸಬೇಕೆಂದು ಶಾನ್ತಲದೇವಿ ಸುಮ್ಮನಾಗಿದ್ದಳು. ದಾಸೋಜ, ಚಾವುಣರನ್ನು ಮಾತ್ರ ಅಲ್ಲಿಯೇ ಇರಿಸಿಕೊಳ್ಳಲಾಯಿತು. ಉಳಿದುಕೊಂಡಿದ್ದ ಚಿಕ್ಕಪುಟ್ಟ ಕೆಲಸಗಳನ್ನು ಇವರುಗಳೇ ಮುಗಿಸಿದರು. ಆಲೋಚಿಸಿದಂತೆ ದೇವಮಂದಿರದ ಆವಾರದಲ್ಲಿ ಅದರ ದಕ್ಷಿಣಕ್ಕೆ ಒಂದು ಕಿರುದೇವಮಂದಿರ ನಿರ್ಮಾಣವಾಯಿತು.

ಅದರ ಪ್ರತಿಷ್ಠಾಪನೋತ್ಸವವನ್ನು ಅನುವಾದ ಮುಹೂರ್ತದಲ್ಲಿ ಮಾಡಿ ಮುಗಿಸಿ ಎಂಬುದಾಗಿ ಮಹಾರಾಜನ ಒಪ್ಪಿಗೆಯಿದ್ದುದರಿಂದ ಆಗಮಿಕರ ಸಲಹೆಯಂತೆ ಜಕಣಾಚಾರ್ಯರು ಇಟ್ಟುಕೊಟ್ಟ ಮುಹೂರ್ತಕ್ಕೆ ಪ್ರತಿಷ್ಠಾಪನೋತ್ಸವ ನಡೆಯಿತು. ಪ್ರತಿಷ್ಠಾಪನೋತ್ಸವದಲ್ಲಿ ಡಾಕರಸನ ಮಕ್ಕಳು ಮರಿಯಾನೆ, ಭರತರು ಇದ್ದರು. ಭರತ ಸಹಜ ಕುತೂಹಲದಿಂದ "ಒಂದೇ ಕಡೆ ಏಕೆ ಎರಡು ಚೆನ್ನಕೇಶವ?'' ಎಂದು ಕೇಳಿದ: ಅದಕ್ಕೆ ಸ್ಥಪತಿಯೇ ಕಥೆ ಹೇಳಿದ. "ಇದರ ಹೊಟ್ಟೆಯಲ್ಲಿ ಒಂದು ಕಪ್ಪೆ ಇತ್ತು. ಅದರಿಂದ ಬೇರೆ ವಿಗ್ರಹ ಮತ್ತೆ ಕಡೆದು ಪ್ರತಿಷ್ಠಾಪಿಸಲಾಯಿತು'' ಎಂದು.

"ಹಾಗಾದರೆ ಇದು ಕಪ್ಪೆ ಚೆನ್ನಕೇಶವ ಎಂದಾಯಿತು'' ಎಂದು ಭರತ ಹೇಳಿದ.

ಡಣ್ಣಾಯಕಿತಿ ಅವನ ಬಾಯಿ ಮೇಲೆ ಕೈಯಿಟ್ಟು "ಏನು ಮಗು ಪಟ್ಟಮಹಾದೇವಿಯವರ ಮುಂದೆ ಹೀಗೆಲ್ಲಾ ಮಾತನಾಡುತ್ತಾರೆಯೆ, ದೇವರ ವಿಷಯದಲ್ಲಿ ?'' ಎಂದು ಗದರಿದಳು.

"ತಪ್ಪಿನ ಮಾತೇನಲ್ಲ. ನಾವು ಮಂಡೂಕ ಗರ್ಭ ಧರಿಸಿದ ಚೆನ್ನಕೇಶವಸ್ವಾಮಿ ಎಂದಿದ್ದೆವು ಆ ಬಾಲಕ ಅದನ್ನು ಅಚ್ಚ ಕನ್ನಡದಲ್ಲಿ ಸುಲಭದಲ್ಲಿ 'ಕಪ್ಪೆ ಚೆನ್ನಕೇಶವ' ಎಂದ. ನನಗೆ ಆ ಹೆಸರೇ ಬಹಳ ಸೂಕ್ತ ಎನಿಸುತ್ತದೆ. ಪಟ್ಟಮಹಾದೇವಿಯವರು ಅಸ್ತು ಎಂದರೆ ಇದನ್ನು ಹಾಗೆಂದೇ ಕರೆಯಬಹುದು'' ಎಂದು ಹೇಳಿದ ಸ್ಥಪತಿ ಜಕಣಾಚಾರಿ.

"ಆ ಹೆಸರು ಇದ್ದರೆ ಈ ವಿಗ್ರಹದ ಇತಿಹಾಸ, ಈ ನಾಡಿನ ಶ್ರೇಷ್ಠ ರೂವಾರಿ ತಂದೆ–ಮಕ್ಕಳ ಇತಿಹಾಸ, ಯುಗಯುಗಾಂತರವಾದರೂ ಉಳಿಯುತ್ತದೆ. ನಾವುಗಳೆಲ್ಲ ನಮಗೆ ಇಚ್ಛೆ ಬಂದ ಕೃತಿಗಳ ಕೆಳಗೆಲ್ಲ ನಮ್ಮ ನಮ್ಮ ಊರು, ಕೇರಿ, ಬಿರುದು ಬಾವಿಲಿ, ಹೆಸರು, ಮನೆತನ ಎಲ್ಲ ಕೆತ್ತಿಬಿಟ್ಟಿದ್ದೇವೆ. ನಮ್ಮ

ಹೆಸರು ಉಳಿಯಲೀಂತ ಆದರೆ ನಾವೆಲ್ಲರೂ ಸ್ವಯಂ ಪಟ್ಟಮಹಾದೇವಿಯವರೂ ಸಹ ಒತ್ತಾಯ ಮಾಡಿದರೂ ತಮ್ಮ ಅಂಕಿತವನ್ನು ಸ್ಥಪತಿಗಳು ಎಲ್ಲೂ ರೂಪಿಸಲಿಲ್ಲ. ಕೃತಿಕಾರನಿಗಿಂತ ಕೃತಿ ಮುಖ್ಯ ಎಂದು ಹೇಳಿಬಿಟ್ಟಿದ್ದರು. ಈ ಹೆಸರು ಸ್ವಲ್ಪ ವಿಚಿತ್ರವೆನಿಸಿದರೂ ಇವರ ನೆನಪು ಸದಾ ಹಸಿರಾಗಿರುವಂತೆ, ಜನಜನಿತವಾಗಿರುವಂತೆ ಉಳಿಸುತ್ತದೆ. ಅದರಿಂದ ಪಟ್ಟಮಹಾದೇವಿಯವರು ಅದಕ್ಕೆ ಒಪ್ಪಿಗೆ ನೀಡಬೇಕು'' ಎಂದು ದಾಸೋಜ ಹೇಳಿದ.

''ಏನೂ ತಪ್ಪಿಲ್ಲ. ಈ ಭೂಮಿಯಲ್ಲಿ ಸೃಷ್ಟಿಯ ಕೆಲಸ ಹೇಗಾಯಿತು ಎನ್ನುವುದಕ್ಕೆ ದಶಾವತಾರವನ್ನು ನಮ್ಮ ಹಿರಿಯರು ಕಲ್ಪಿಸಿಲ್ಲವೆ. ಮೊದಲನೆಯ ಜೀವರಾಶಿ ಹುಟ್ಟಿದ್ದು ಜಲದಲ್ಲಿ. ಅದಕ್ಕೆ ಭೂಭಾಗದ ಮೇಲೆ ಬದುಕುವ ಶಕ್ತಿ ಇರಲಿಲ್ಲ. ಇದೇ ಮತ್ಸಾವ್ಯತಾರ, ಎರಡನೆಯದು ಕೂರ್ಮಾವತಾರ ಅದು ನೀರಿನಲ್ಲಿ ಭೂಮಿಯ ಮೇಲೆ ಎರಡೂ ಕಡೆ ಬದುಕಬಲ್ಲ ಜೀವರಾಶಿಯ ಪ್ರತೀಕ. ಜೀವದ ಎರಡನೆಯ ಹಂತ ಮಂಡೂಕವೂ ಅಷ್ಟೆ ಎರಡೂ ಕಡೆ, ಅಂದರೆ ಭೂಮಿಯ ಮೇಲೆ ನೀರಿನ ಒಳಗೆ ಬದುಕಬಲ್ಲದು. ಅದರಿಂದ ಈ ಸ್ವಾಮಿ, ಕಪ್ಪೆ ಚೆನ್ನಕೇಶವನಾಗುವುದರಲ್ಲಿ ತಪ್ಪೇನಿದೆ ? ಇದೊಂದು ಜೀವರಾಶಿಯ ಪ್ರತೀಕ. ಆಗಮಿಕರು ಒಪ್ಪಿದರೆ ನಮಗೂ ಸಮ್ಮತವೆ'' ಎಂದಳು ಶಾನ್ತಲದೇವಿ.

''ಆ ಪರಮಾತ್ಮನ ಅಂಶಗಳೇ ಆತ್ಮ ಪಡೆದ ಜೀವರಾಶಿ. ಎಂದಾಗ ಸನ್ನಿಧಾನ ಹೇಳಿದ ಮಾತು ಸರ್ವ ಸಮ್ಮತ. ಮೊದಲು ಜಲ, ನಂತರ ಜಲ–ಭೂಮಿ, ನಂತರ ಬರೀ ಭೂಮಿ ಮಾತ್ರದಲ್ಲಿ ಜೀವಂತವಾಗಿಬಲ್ಲ ಜೀವರಾಶಿ ಆಮೇಲೆ ಅರ್ಧ ಮನುಷ್ಯ, ಅರ್ಧ ಪ್ರಾಣಿ. ಆಮೇಲೆ ಮಾನವ ಹೀಗೆ ಜೀವರಾಶಿಯ ಹುಟ್ಟಿಗನುಸಾರವಾಗಿಯೇ ಪರಮಾತ್ಮನ ಅವತಾರವನ್ನು ನಮ್ಮ ಹಿಂದಿನವರು ಕಲ್ಪಿಸಿದರೆನ್ನುವ ಮಾತು, ಅಮೋಘವಾದ ಮಾತು, ಅದರಿಂದ ಹಾಗೆಂದೇ ಆಭಿಧಾನವಿಡೋಣ. ಈ ಬಾಲಕನ ಬಾಯಲ್ಲಿ ಬಂದ ಮಾತು ಅಂತಃಪ್ರೇರಣೆಯಿಂದ ಬಂದ ಮಾತೇ ಇರಬೇಕು'' ಎಂದು ಆಗಮಿಕರು ಹೇಳಿದರು.

* * *

ಅಂದು ಕೆಲವು ಮುಖ್ಯರಿಗೆ ಮಾತ್ರ ಅಮರನೆಯಲ್ಲಿ ಈ ಪ್ರತಿಷ್ಠಾಪನೋತ್ಸವದ ಸಲುವಾಗಿ ಒಂದು ಭೋಜನಕೂಟವೇರ್ಪಾಟಾಗಿತ್ತು. ಆ ಸಂದರ್ಭದಲ್ಲಿ ಡಣ್ಣಾಯಕರು ಏಚಿಯಕ್ಕ, ಶಾನ್ತಲದೇವಿ, ಪದ್ಮಲದೇವಿ ಪಕ್ಕಪಕ್ಕದಲ್ಲಿಯೇ ಕುಳಿತಿದ್ದರು. ಮಾತು ಲೋಕಕಾಭಿರಾಮವಾಗಿ ಸಾಗಿತ್ತು.

''ನಮ್ಮ ಸ್ಥಪತಿಗಳಿಗೊಬ್ಬ ಮದುವೆಗೆ ಎದವಿದ ಮಗನಿದ್ದಾನೆ'' ಎಂದಳು ಶಾನ್ತಲದೇವಿ.

''ಹಾಗೆ ಅರಮನೆಬಿಟ್ಟು ಹೊರಗೆ ಯೋಚಿಸುವುದಾದರೆ ಸಾವಿರಾರು ಗಂಡು ಹೆಣ್ಣುಗಳು ಇವೆ. ಅವನ್ನೆಲ್ಲ ಯೋಚಿಸುವುದು ನಮ್ಮ ಕೆಲಸವಲ್ಲ'' ಎಂದಳು ಪದ್ಮಲದೇವಿ.

''ನಮ್ಮ ಕೆಲಸವಲ್ಲವೆಂದು ಭಾವಿಸುವ ಎಷ್ಟೋ ಕೆಲಸಗಳು ಪರಿಸ್ಥಿತಿಯ ಕಾರಣವಾಗಿ ನಮ್ಮದೇ ಕೆಲಸವಾಗಿ ಬಿಡುತ್ತವೆ. ನಿಮಗೆ ಗೊತ್ತಿರಲಾರದು. ರೇವಿಮಯ್ಯನಿಗೆ ನಮಗೆ ಏನು ಸಂಬಂಧ ? ನನ್ನ ಮತ್ತು ಸನ್ನಿಧಾನದ ಲಗ್ನ ಆದರೆ ಎಷ್ಟು ಚೆನ್ನ ಎಂದು ಎಲ್ಲರಿಗಿಂತ ಮುಂಚೆ ಅವನ ಮನಸ್ಸಿನಲ್ಲಿ ಹೊಕ್ಕಿತು. ಎಂದಾಗ, ಎಲ್ಲವೂ ನಮ್ಮ ಕೆಲಸವೇ. ನಮ್ಮ ಸ್ಥಪತಿ ಕುಮಾರನ ಲಗ್ನವನ್ನು ಬೇಗ ಮಾಡಿಸಬೇಕು. ಅದರಿಂದ ಅವನಿಗೆ ತಕ್ಕ ಕನ್ಯೆ ಒಂದನ್ನು ಯೋಚಿಸಿ'' ಎಂದಳು ಶಾನ್ತಲದೇವಿ.

ಅಂತೂ ಭರತ–ಹರಿಯಲದೇವಿಯರ ಸಂಬಂಧವಾಗಿ ಹುಟ್ಟಿದ ಮದುವೆಯ ಮಾತು ಡಂಕಣನಿಗೆ ಹೆಣ್ಣು ಹುಡುಕುವ ಆಲೋಚನೆಯತ್ತ ಸರಿದು ವಿರಮಿಸಿತು. ಒಂದು ಶಾಂತವಾದ ರೀತಿಯಲ್ಲಿ ವೇಲಾಪುರಿಯ ಜೀವನ ನಡೆಯತೊಡಗಿತು.

~ ~ ~ ~



# ಜಕಣಾಚಾರ್ಯ

ಮೂಲ : ಸಿ. ಕೆ. ನಾಗರಾಜರಾವ್

ಸಂಗ್ರಹ : ಸರಿತಾ ಜ್ಞಾನಾನಂದ

ಕನ್ನಡ ಕಾದಂಬರಿ ಲೋಕದಲ್ಲಿ 'ಪಟ್ಟಮಹಾದೇವಿ ಶಾನ್ತಲದೇವಿ' ಕಾದಂಬರಿಗೆ ಬಹು ವಿಶಿಷ್ಟವಾದ ಸ್ಥಾನವಿದೆ. ಈ ಬೃಹತ್ ಕಾದಂಬರಿಯು ಮೊದಲಬಾರಿಗೆ ಮೂರ್ತೀದೇವಿ ಪ್ರಶಸ್ತಿಯನ್ನು ಗಳಿಸಿಕೊಂಡು ಅಖಿಲ ಭಾರತದ ಶ್ರೇಷ್ಟ ಕೃತಿಗಳ ಸಾಲಿಗೆ ಸೇರಿದೆ. ಈ ಕಾದಂಬರಿಯ ಹಿಂದೀ ಅವತರಣಿಕೆಯು ಜನಪ್ರಿಯವಾಗಿರುವುದು ಇದು ಕನ್ನಡ ಸಾಹಿತ್ಯಕ್ಕೇ ಹೆಮ್ಮೆಯ ಸಾಧನೆ ಎನಿಸಿದೆ. ಇದಕ್ಕಿಂತಲೂ ಹಿರಿದಾದ ಸಂಗತಿ ಎಂದರೆ ಕರ್ನಾಟಕದ ಇತಿಹಾಸವನ್ನು ಆಧರಿಸಿ, ಲೇಖಕರು ಸ್ವಂತ ಸಂಶೋಧನೆಗಳನ್ನು ಮೈಗೂಡಿಸಿಕೊಂಡು, ಇತಿಹಾಸಕ್ಕೆ ಅಪಚಾರ ಮಾಡದಂತೆ ಸತ್ಯನಿಷ್ಠವೂ, ವಸ್ತುನಿಷ್ಠವೂ ಆಗಿ ರೂಪುಗೊಂಡಿರುವ ಕಾದಂಬರಿ ಇದು ಎಂಬುದು ಬಹು ದೊಡ್ಡ ಸಾಧನೆ.

ಎರಡು ಸಾವಿರಕ್ಕೂ ಹೆಚ್ಚು ಪುಟಗಳ ವ್ಯಾಪ್ತಿಯಲ್ಲಿ ಕರ್ನಾಟಕ ಶಿಲ್ಪದ ಅತ್ಯಂತ ವೈಭವಪೂರ್ಣ ಕಾಲಕ್ಕೆ ಸಂಬಂಧಿಸಿರುವ ಈ ಕಾದಂಬರಿಯ ವ್ಯಾಪ್ತಿಯು ಬಹುವಾಗಿರುವಂತೆಯೇ ಇಲ್ಲಿಯ ಪಾತ್ರಗಳೂ ಅನೇಕವಾಗಿವೆ. ಈ ಬೃಹತ್ ಕಾದಂಬರಿಯಲ್ಲಿ ಕರ್ನಾಟಕದ 'ಅಮರ ಶಿಲ್ಪಿ' ಎಂದು ಇಂದಿಗೂ ಜನಮನದ ಮೇಲೆ ಅಚ್ಚೊತ್ತಿ ಉಳಿದುಬಂದಿರುವ ಜಕಣಾಚಾರ್ಯರ ಪಾತ್ರ ಚಿತ್ರಣಕ್ಕೆ ಸಂಬಂಧಿಸಿರುವ ಸಾಮಗ್ರಿಯನ್ನೆಲ್ಲಾ ಅದೊಂದು ಸ್ವತಂತ್ರ ಕಾದಂಬರಿಯಾಗುವಂತೆ ಸಂಗ್ರಹಿಸಿರುವವರು ಕನ್ನಡದ ಖ್ಯಾತ ಲೇಖಕಿ ಶ್ರೀಮತಿ ಸರಿತಾ ಜ್ಞಾನಾನಂದ ಅವರು. ಮೂಲಲೇಖಕರೇ ಈ ಕೆಲಸವು 'ಅಚ್ಚುಕಟ್ಟಾಗಿದೆ' ಎಂದು ಮೆಚ್ಚಿದ್ದಾರೆ. ಈ ಕೃತಿಯ ವಿಶೇಷ ಸಾಧನೆ ಇದು.

ವಿಶಿಷ್ಟವಾದ ಈ ಪ್ರಕಟಣೆಯನ್ನು ಸಾಹಿತ್ಯಪ್ರಿಯರು, ಕಲಾಪ್ರಿಯರು ಸ್ವಾಗತಿಸುತ್ತಾರೆಂದು ನಂಬಿದ್ದೇವೆ.

—ಸಂಪಾದಕರು